ದ್ದೇವಾ ಅಸುರಾನಜನಯನ್ ಯದ್ವೈಶ್ವಾನರಂ ದ್ವಾದಶಕಪಾಲಂ
ನಿರ್ವಪತಿ ದೇವಾನಾಮೇವಾಽಽಯತನೇ ಯತತೇ ಜಯತಿ ತಗ್ಂ
ಸಂಗ್ರಾಮಮೇತಸ್ಮಿನ್ವಾ ಏತೌ ಮೃಜಾತೇ [(೧)ಮೃಜಾತೇ]ಯೋ ವಿದ್ವಿಷಾಣ
ಯೋರನ್ನಮತ್ತಿ ವೈಶ್ವಾನರಂ ದ್ವಾದಶ ಕಪಾಲಂ ನಿರ್ವಪೇದ್ವಿದ್ವಿಷಾಣಯೋ
ರನ್ನಂ ಜಗ್ಧ್ವಾ ಸಂವತ್ಸರೋ ವಾ ಅಗ್ನಿರ್ವೈಶ್ವಾನರಃ ಸಂವತ್ಸರಸ್ವದಿತಮೇವಾತ್ತಿ
ನಾಸ್ಮಿನ್ಜಾತೇ ಸಂವತ್ಸರಾಯ ವಾ ಏತೌ ಸಮಮಾತೇ ಯೌ ಸಮಮಾತೇ
ತಯೋರ್ಯಃ ಪೂರ್ವೋಽಭಿದ್ರುಹ್ಯತಿ ತಂ ವರುಣೋ ಗೃಹ್ಣಾತಿ
ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇತ್ಸಮಮಾನಯೋಃ
ಪೂರ್ವೋಽಭಿದ್ರುಹ್ಯ ಸಂವತ್ಸರೋ ವಾ ಅಗ್ನಿರ್ವೈಶ್ವಾನರಃ ಸಂವತ್ಸರ
ಮೇವಾಽಽಪ್ತ್ವಾ ನಿರ್ವರುಣಂ [೨] ಪರಸ್ತಾದಭಿದ್ರುಹ್ಯತಿ ನೈನಂ ವರುಣೋ
ಗೃಹ್ಣಾತ್ಯಾವ್ಯಂ ವಾ ಏಷ ಪ್ರತಿಗೃಹ್ಣಾತಿ ಯೋಽವಿಂ ಪ್ರತಿಗೃಹ್ಣಾತಿ
ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇದವಿಂ ಪ್ರತಿಗೃಹ್ಯ ಸಂವತ್ಸರೋ
ವಾ ಅಗ್ನಿರ್ವೈಶ್ವಾನರಃ ಸಂವತ್ಸರಸ್ವದಿತಾಮೇವ ಪ್ರತಿಗೃಹ್ಣಾತಿ ನಾವ್ಯಂ
ಪ್ರತಿಗೃಹ್ಣಾತ್ಯಾತ್ಮನೋ ವಾ ಏಷ ಮಾತ್ರಾಮಾಪ್ನೋತಿ ಯ ಉಭಯಾದತ್ಪ್ರತಿ

ಗೃಹ್ಣಾತ್ಯಶ್ವಂ ವಾ ಪುರುಷಂ ವಾ ವೈಶ್ವಾನರಂ ದ್ವಾದಶಕಪಾಲಂ

ನಿರ್ವಪೇದುಭಯಾ [ದತ್ (೩) ಪ್ರತಿಗೃಹ್ಯ] ದತ್ಪ್ರತಿಗೃಹ್ಯ ಸಂವತ್ಸರೋ

ವಾ ಅಗ್ನಿರ್ವೈಶ್ವಾನರಸ್ಸಂವತ್ಸರ ಸ್ವದಿತಮೇವ ಪ್ರತಿಗೃಹ್ಣಾತಿನಾಽಽತ್ಮನೋ

ಮಾತ್ರಾಮಾಪ್ನೋತಿ ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇತ್ಸನಿ

ಮೇಷ್ಯನ್ಥ್ಸಂವತ್ಸರೋ ವಾ ಅಗ್ನಿರ್ವೈಶ್ವಾನರೋ ಯದಾ ಖಲು ವೈ

ಸಂವತ್ಸರಂ ಜನತಾಯಾಂ ಚರತ್ಯಥ ಸ ಧನಾರ್ಘೋ ಭವತಿ

ಯದ್ವೈಶ್ವಾನರಂ ದ್ವಾದಶಕಪಾಲಂ ನಿರ್ವಪತಿ ಸಂವತ್ಸರಸಾತಾಮೇವ

ಸನಿಮಭಿಪ್ರಚ್ಯವತೇ ದಾನಕಾಮಾ ಅಸ್ಮೈ ಪ್ರಜಾ ಭವಂತಿ ಯೋ ವೈ

ಸಂವತ್ಸರಂ [೪] ಪ್ರಯುಜ್ಯ ನ ವಿಮುಂಚತ್ಯಪ್ರತಿಷ್ಠಾನೋ ವೈ ಸ

ಭವತ್ಯೇತಮೇವ ವೈಶ್ವಾನರಂ ಪುನರಾಗತ್ಯ ನಿರ್ವಪೇದ್ಯಮೇವ

ಪ್ರಯುಂಕ್ತೇ ತಂ ಭಾಗಧೇಯೇನ ವಿಮುಂಚತಿ ಪ್ರತಿಷ್ಠಿತ್ಯೈ ಯಯಾ

ರಜ್ವೋತ್ತಮಾಂ ಗಾಮಾಜೇತ್ತಾಂ ಭ್ರಾತೃವ್ಯಾಯ ಪ್ರಹಿಣುಯಾನ್ನಿರ್

ಋತಿಮೇವಾಸ್ಮೈ ಪ್ರಹಿಣೋತಿ ॥ ॥೩೪ –6॥

**[ವ್ಯಜಾತೇ ನಿರ್ವರುಣಂ ವಪೇದುಭಯಾದದ್ಯೋ ವೈ**

**ಸಂವತ್ಸರಗ್ಂ ಷಟ್ತ್ರಿಗ್ಂಶಚ್ಚ ॥]**

ಐಂದ್ರಂ ಚರುಂ ನಿರ್ವಪೇತ್ಪಶುಕಾಮ ಐಂದ್ರಾ ವೈ ಪಶವ ಇಂದ್ರ

ಮೇವ ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮೈ ಪಶೂನ್ಪ್ರಯಚ್ಛತಿ

ಪಶುಮಾನೇವ ಭವತಿ ಚರುರ್ಭವತಿ ಸ್ವಾದೇವಾಸ್ಮೈ ಯೋನೇಃ

ಪಶೂನ್ಪ್ರಜನಯತೀಂದ್ರಾಯೇಂದ್ರಿಯಾವತೇ ಪುರೋಡಾಶಮೇಕಾದಶ

ಕಪಾಲಂ ನಿರ್ವಪೇತ್ಪಶುಕಾಮ ಇಂದ್ರಿಯಂ ವೈ ಪಶವ ಇಂದ್ರಮೇವೇಂದ್ರಿ

ಯಾವಂತಗ್ಗ್‌ಂ ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮಾ

[....ಸಃ (೧)] ಇಂದ್ರಿಯಂ ಪಶೂನ್ಪ್ರಯಚ್ಛತಿ ಪಶುಮಾನೇವ

ಭವತೀಂದ್ರಾಯ ಘರ್ಮವತೇ ಪುರೋಡಾಶಮೇಕಾದಶಕಪಾಲಂ

ನಿರ್ವಪೇದ್ಬ್ರಹ್ಮವರ್ಚಸ ಕಾಮೋ ಬ್ರಹ್ಮವರ್ಚಸಂ ವೈ ಘರ್ಮ

ಇಂದ್ರಮೇವ ಘರ್ಮವಂತಗ್ಗ್‌ಂ ಸ್ವೇನ ಭಾಗಧೇಯೇನೋಪಧಾವತಿ

ಸ ಏವಾಸ್ಮಿನ್ಬ್ರಹ್ಮವರ್ಚಸಂ ದಧಾತಿ ಬ್ರಹ್ಮವರ್ಚಸ್ಯೇವ ಭವತೀಂದ್ರಾ

ಯಾರ್ಕವತೇ ಪುರೋಡಾಶಮೇಕಾದಶಕಪಾಲಂ ನಿರ್ವಪೇದನ್ನ

ಕಾಮೋಽರ್ಕೋ ವೈ ದೇವಾನಾಮನ್ನಮಿಂದ್ರಮೇವಾರ್ಕವಂತಗ್ಗ್‌ಂ

ಸ್ವೇನ ಭಾಗಧೇಯೇನೋಪ [....ಧೇಯೇನ (೨) ಉಪಧಾವತಿ]

ಧಾವತಿ ಸ ಏವಾಸ್ಮಾ ಅನ್ನಂ ಪ್ರಯಚ್ಛತ್ಯನ್ನಾದ ಏವ ಭವತೀಂದ್ರಾಯ

ಘರ್ಮವತೇ ಪುರೋಡಾಶಮೇಕಾದಶಕಪಾಲಂ ನಿರ್ವಪೇದಿಂದ್ರಾ

ಯೇಂದ್ರಿಯಾವತ ಇಂದ್ರಾಯಾರ್ಕವತೇ ಭೂತಿಕಾಮೋ ಯದಿಂದ್ರಾಯ

ಘರ್ಮವತೇ ನಿರ್ವಪತಿ ಶಿರ ಏವಾಸ್ಯ ತೇನ ಕರೋತಿ ಯದಿಂದ್ರಾ

ಯೇಂದ್ರಿ ಯಾವತ ಆತ್ಮಾನಮೇವಾಸ್ಯ ತೇನ ಕರೋತಿ ಯದಿಂದ್ರಾ

ಯಾರ್ಕವತೇ ಭೂತ ಏವಾನ್ನಾದ್ಯೇ ಪ್ರತಿತಿಷ್ಠತಿ ಭವತ್ಯೇವೇಂದ್ರಾ

ಯಾಗ್ಂಹೋಮುಚೇ [....ಭವತ್ಯೇವೇಂದ್ರಾಯ (೩) ಅಗ್ಂ

ಹೋಮುಚೇ] ಪುರೋಡಾಶಮೇಕಾದಶಕಪಾಲಂ ನಿರ್ವಪೇದ್ಯಃ

ಪಾಪ್ಮನಾ ಗೃಹೀತಃ ಸ್ಯಾತ್ಪಾಪ್ಮಾ ವಾ ಅಗ್ಂಹ ಇಂದ್ರಮೇ ವಾಗ್ಂ

ಹೋಮುಚಗ್ಗ್ಂ ಸ್ವೇನ ಭಾಗಧೇಯೇನೋಪಧಾವತಿ ಸ ಏವೈನಂ

ಪಾಪ್ಮನೋಽಗ್ಂಹಸೋ ಮುಂಚತೀಂದ್ರಾಯ ವೈಮೃಧಾಯ

ಪುರೋಡಾಶಮೇಕಾದಶಕಪಾಲಂ ನಿರ್ವಪೇದ್ಯಂ ಮೃಧೋಽಭಿ

ಪ್ರವೇಪೇರನ್ರಾಷ್ಟ್ರಾಣಿ ವಾಽಭಿ ಸಮಿಯುರಿಂದ್ರಮೇವ ವೈಮೃಧಗ್ಗ್ಂ

ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮಾನ್ಮೃಧೋಽಪ-

[...ವೃಧಃ (೪) ಅಪಹಂತೀಂದ್ರಾಯ] ಹಂತೀಂದ್ರಾಯತ್ರಾತ್ರೇ ಪುರೋಡಾಶಮೇಕಾದಶಕಪಾಲಂ ನಿರ್ವಪೇದ್ಬದ್ಧೋ ವಾ ಪರಿಯತ್ತೋ ವೇಂದ್ರಮೇವ ತ್ರಾತಾರಗ್ಂ ಸ್ವೇನ ಭಾಗಧೇಯೇನೋಪ ಧಾವತಿ ಸ ಏವೈನಂ ತ್ರಾಯತ ಇಂದ್ರಾಯಾರ್ಕಾಶ್ವಮೇಧವತೇ ಪುರೋಡಾಶಮೇಕಾದಶಕಪಾಲಂ ನಿರ್ವಪೇದ್ಯಂ ಮಹಾಯಜ್ಞೋನೋಪನಮೇದೇತೇ ವೈ ಮಹಾಯಜ್ಞಸ್ಯಾಂತ್ಯೇ ತನೂ ಯದರ್ಕಾಶ್ವ ಮೇಧಾವಿಂದ್ರಮೇವಾರ್ಕಾಶ್ವ ಮೇಧವಂತಗ್ಂ ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮಾ ಅಂತತೋ ಮಹಾಯಜ್ಞಂ ಚ್ಯಾವಯತ್ಯುಪೈನಂ ಮಹಾಯಜ್ಞೋ ನಮತಿ ॥೩೯–7॥

**[ಇಂದ್ರಿಯಾವಂತಗ್ಂ ಸ್ವೇನ ಭಾಗಧೇಯೇನೋಪಧಾವತಿ ಸೋಽರ್ಕವಂತಗ್ಂ ಸ್ವೇನ ಭಾಗಧೇಯೇನೈವೇಂದ್ರಾಯಾಸ್ಮಾನ್ವೃಧೋಽಸ್ಮೈ ಸಪ್ತ ಚ ।]**

ಇಂದ್ರಾಯಾನ್ವೃಜವೇ ಪುರೋಡಾಶಮೇಕಾದಶಕಪಾಲಂ ನಿರ್ವಪೇದ್ಗ್ರಾಮಕಾಮ ಇಂದ್ರಮೇವಾನ್ವೃಜುಗ್ಂ ಸ್ವೇನ ಭಾಗಧೇಯೇನೋಪ ಧಾವತಿ ಸ ಏವಾಸ್ಮೈ ಸಜಾತಾನನುಕಾನ್ಕರೋತಿ ಗ್ರಾಮ್ಯೇವ ಭವತೀಂದ್ರಾಣ್ಯೈ

ಚರುಂ ನಿರ್ವಪೇದ್ಯಸ್ಯ ಸೇನಾಽಸಗ್ಂ ಶಿತೇವ ಸ್ಯಾದಿಂದ್ರಾಣೀ ವೈ

ಸೇನಾಯೈ ದೇವತೇಂದ್ರಾಣೀಮೇವ ಸ್ವೇನ ಭಾಗಧೇಯೇನೋಪ

ಧಾವತಿ ಸೈವಾಸ್ಯ ಸೇನಾಗ್ಂ ಸಗ್ಂಶ್ಯತಿ ಬಲ್ಬಜಾನಪೀಧ್ಮೇ [...ನಪಿ

(೧) ಇಧ್ಮೇ] ಸಂನಹ್ಯೇದ್ಗೌರ್ಯತ್ರಾಧಿಷ್ಕನ್ನಾ ನ್ಯಮೇಹತ್ತತೋ ಬಲ್ಬಜಾ

ಉದತಿಷ್ಠನ್ಗವಾಮೇವೈನಂ ನ್ಯಾಯಮಪಿನೀಯ ಗಾ ವೇದಯತೀಂದ್ರಾಯ

ಮನ್ಯುಮತೇ ಮನಸ್ವತೇ ಪುರೋಡಾಶಮೇಕಾದಶಕಪಾಲಂ

ನಿರ್ವಪೇತ್ಸಂಗ್ರಾಮೇ ಸಂಯತ್ತ ಇಂದ್ರಿಯೇಣ ವೈ ಮನ್ಯುನಾ ಮನಸಾ

ಸಂಗ್ರಾಮಂ ಜಯತೀಂದ್ರಮೇವ ಮನ್ಯುಮಂತಂ ಮನಸ್ವಂತಗ್ಂ

ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮಿನ್ನಿಂದ್ರಿಯಂ ಮನ್ಯುಂ

ಮನೋ ದಧಾತಿ ಜಯತಿ ತಗ್ಂ [ತಮ್ (೨) ಸಂಗ್ರಾಮಮೇತಾಮೇವ]

ಸಂಗ್ರಾಮಮೇತಾಮೇವ ನಿರ್ವಪೇದ್ಯೋ ಹತಮನಾಃ ಸ್ವಯಂಪಾಪ

ಇವ ಸ್ಯಾದೇತಾನಿ ಹಿ ವಾ ಏತಸ್ಮಾದಪಕ್ರಾಂತಾನ್ಯಥೈಷ ಹತಮನಾಃ

ಸ್ವಯಂಪಾಪ ಇಂದ್ರಮೇವ ಮನ್ಯುಮಂತಂ ಮನಸ್ವಂತಗ್ಂ ಸ್ವೇನ

ಭಾಗಧೇಯೇನೋಪಧಾವತಿ ಸ ಏವಾಸ್ಮಿನ್ನಿಂದ್ರಿಯಂ ಮನ್ಯುಂ ಮನೋ

ದಧಾತಿ ನ ಹತಮನಾಃ ಸ್ವಯಂಪಾಪೋ ಭವತೀಂದ್ರಾಯ ದಾತ್ರೇ ಪುರೋಡಾಶಮೇಕಾದಶಕಪಾಲಂ ನಿರ್ವಪೇದ್ಯಃ ಕಾಮಯೇತ ದಾನಕಾಮಾ ಮೇ ಪ್ರಜಾಃ ಸ್ಯುರಿತೀಂದ್ರಮೇವ [ಸ್ಯುಃ (೩) ಇತೀಂದ್ರಮೇವ] ದಾತಾರಗ್ಗ್‌ಂ ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮೈ ದಾನಕಾಮಾಃ ಪ್ರಜಾಃ ಕರೋತಿ ದಾನಕಾಮಾ ಅಸ್ಮೈ ಪ್ರಜಾ ಭವಂತೀಂದ್ರಾಯ ಪ್ರದಾತ್ರೇ ಪುರೋಡಾಶಮೇಕಾದಶಕಪಾಲಂ ನಿರ್ವಪೇದ್ಯಸ್ಮೈ ಪ್ರತ್ತಮಿವ ಸನ್ನಪ್ರದೀಯೇತೇಂದ್ರಮೇವ ಪ್ರದಾತಾರಗ್ಗ್‌ಂ ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮೈ ಪ್ರದಾಪಯತೀಂದ್ರಾಯ ಸುತ್ರಾವ್ಣೇ ಪುರೋಡಾಶಮೇಕಾದಶಕಪಾಲಂ ನಿರ್ವಪೇದಪರುದ್ಧೋ ವಾಽಽಪರುಧ್ಯಮಾನೋ [ವಾ (೪) ಅಪರುಧ್ಯಮಾನೋ] ವೇಂದ್ರಮೇವ ಸುತ್ರಾಮಾಣಗ್ಗ್‌ಂ ಸ್ವೇನ ಭಾಗಧೇಯೇನೋಪಧಾವತಿ ಸ ಏವೈನಂ ತ್ರಾಯತೇಽನಪರುಧ್ಯೋ ಭವತೀಂದ್ರೋ ವೈ ಸದೃಙ್ದೇವತಾಭಿರಾಸೀತ್ಸ ನ ವ್ಯಾವೃತಮಗಚ್ಛತ್ಸ ಪ್ರಜಾಪತಿಮುಪಾಧಾವತ್ತಸ್ಮಾ ಏತಮೈಂದ್ರಮೇಕಾದಶಕಪಾಲಂ ನಿರವಪತ್ತೇನೈವಾಸ್ಮಿನ್ನಿಂದ್ರಿಯ

ಮದಧಾಚ್ಛಕ್ವರೀ ಯಾಜ್ಯಾನುವಾಕ್ಯೇ ಅಕರೋದ್ವಜ್ರೋ ವೈ ಶಕ್ವರೀ ಸ

ಏನಂ ವಜ್ರೋ ಭೂತ್ವಾ [ಐಂಧ (ಙ)] ಐಂಧ ಸೋಽಭವತ್ಸೋಽಬಿಭೇ

ದ್ಭೂತಃ ಪ್ರ ಮಾ ಧಕ್ಷ್ಯತೀತಿ ಸ ಪ್ರಜಾಪತಿಂ ಪುನರುಪಾಧಾವತ್ಸ

ಪ್ರಜಾಪತಿಃ ಶಕ್ವರ್ಯಾ ಅಧಿ ರೇವತೀಂ ನಿರಮಿಮೀತ ಶಾಂತ್ಯಾ

ಅಪ್ರದಾಹಾಯ ಯೋಽಲಗ್ಂ ಶ್ರಿಯೈ ಸನ್ತ್ಸದೃಙ್ಕ್ಸಮಾನೈಸ್ಸ್ಯಾತ್ತಸ್ಮಾ

ಏತಮೈಂದ್ರಮೇಕಾದಶ ಕಪಾಲಂ ನಿರ್ವಪೇದಿಂದ್ರಮೇವ ಸ್ವೇನ ಭಾಗ

ಧೇಯೇನೋಪಧಾವತಿ ಸ ಏವಾಸ್ಮಿನ್ನಿಂದ್ರಿಯ ದಧಾತಿ ರೇವತೀ

ಪುರೋನುವಾಕ್ಯಾ ಭವತಿ ಶಾಂತ್ಯಾ ಅಪ್ರದಾಹಾಯ ಶಕ್ವರೀ ಯಾಜ್ಯಾ

ವಜ್ರೋ ವೈ ಶಕ್ವರೀ ಸ ಏನಂ ವಜ್ರೋ ಭೂತ್ವಾ ಇಂಧೇ ಭವತ್ಯೇವ

||೪೫–8||

**[ಅಪಿ ತಗ್ಂ ಸ್ಯುರ್ವೈಂಧ ಭವತಿ ಚತುರ್ದಶ ಚ ।]**

ಆಗ್ನಾವೈಷ್ಣವಮೇಕಾದಶಕಪಾಲಂ ನಿರ್ವಪೇದಭಿಚರನ್ತ್ಸರಸ್ವತ್ಯಾಜ್ಯ

ಭಾಗಾ ಸ್ಯಾದ್ಬಾರ್ಹಸ್ಪತ್ಯಶ್ಚರುರ್ಯದಾಗ್ನಾವೈಷ್ಣವ ಏಕಾದಶಕಪಾಲೋ

ಭವತ್ಯಗ್ನಿಃ ಸರ್ವಾ ದೇವತಾ ವಿಷ್ಣುರ್ಯಜ್ಞೋ ದೇವತಾಭಿಶ್ಚೈವೈನಂ

ಯಜ್ಞೇನ ಚಾಭಿ ಚರತಿ ಸರಸ್ವತ್ಯಾಜ್ಯಭಾಗಾ ಭವತಿ ವಾಗ್ವೈ ಸರಸ್ವತೀ
ವಾಚೈವೈನಮಭಿಚರತಿ ಬಾರ್ಹಸ್ಪತ್ಯಶ್ಚರುರ್ಭವತಿ ಬ್ರಹ್ಮವೈ ದೇವಾನಾಂ
ಬೃಹಸ್ಪತಿರ್ಬ್ರಹ್ಮಣೈವೈನಮಭಿಚರತಿ [ಚರತಿ (೧)] ಪ್ರತಿ ವೈ ಪರಸ್ತಾದಭಿ
ಚರಂತಮಭಿಚರಂತಿ ದ್ವೇದ್ವೇ ಪುರೋನುವಾಕ್ಯೇ ಕುರ್ಯಾದತಿ
ಪ್ರಯುಕ್ತ್ಯಾ ಏತಯೈವ ಯಜೇತಾಭಿಚರ್ಯಮಾಣೋ ದೇವತಾಭಿರೇವ
ದೇವತಾಃ ಪ್ರತಿಚರತಿ ಯಜ್ಞೇನ ಯಜ್ಞಂ ವಾಚಾ ವಾಚಂ ಬ್ರಹ್ಮಣಾ ಬ್ರಹ್ಮ
ಸ ದೇವತಾಶ್ಚೈವ ಯಜ್ಞಂ ಚ ಮಧ್ಯತೋ ವ್ಯವಸರ್ಪತಿ ತಸ್ಯ ನ ಕುತಶ್ಚ
ನೋಪಾವ್ಯಾಧೋ ಭವತಿ ನೈನಮಭಿಚರನ್ತ್ಸ್ತೃಣುತ ಆಗ್ನಾವೈಷ್ಣವ
ಮೇಕಾದಶಕಪಾಲಂ ನಿರ್ವಪೇದ್ಯಂ ಯಜ್ಞೋ [ಯಜ್ಞೋ ನ (೨) ಉಪನಮೇ
ದಗ್ನಿಃ] ನೋಪನಮೇದಗ್ನಿಃಸರ್ವಾ – ದೇವತಾ ವಿಷ್ಣುರ್ಯಜ್ಞೋಽಗ್ನಿಂ
ಚೈವ ವಿಷ್ಣುಂ ಚ ಸ್ವೇನ ಭಾಗಧೇಯೇನೋಪಧಾವತಿ ತಾವೇವಾಸ್ಮೈ
ಯಜ್ಞಂ ಪ್ರಯಚ್ಛತ ಉಪೈನಂ ಯಜ್ಞೋ ನಮತ್ಯಾಗ್ನಾವೈಷ್ಣವಂ ಘೃತೇ
ಚರುಂ ನಿರ್ವಪೇಚ್ಚಕ್ಷುಷ್ಕಾಮೋಽಗ್ನೇರ್ವೈ ಚಕ್ಷುಷಾ ಮನುಷ್ಯಾ
ವಿಪಶ್ಯಂತಿ ಯಜ್ಞಸ್ಯ ದೇವಾ ಅಗ್ನಿಂ ಚೈವ ವಿಷ್ಣುಂ ಚ ಸ್ವೇನ ಭಾಗಧೇಯೇ

ನೋಪಧಾವತಿ [ತಾವೇವ (೩) ಅಸ್ಮಿಞ್ಚಕ್ಷುರ್ಧತ್ತಃ] ತಾವೇವಾಸ್ಮಿಞ್ಚಕ್ಷು
ರ್ಧತ್ತಶ್ಚಕ್ಷುಷ್ಮಾನೇವ ಭವತಿ ಧೇನ್ವೈ ವಾ ಏತದ್ರೇತೋ ಯದಾಜ್ಯಮನಡು
ಹಸ್ತಂಡುಲಾ ಮಿಥುನಾದೇವಾಸ್ಮೈ ಚಕ್ಷುಃ ಪ್ರಜನಯತಿ ಘೃತೇ ಭವತಿ
ತೇಜೋ ವೈ ಘೃತಂ ತೇಜಶ್ಚಕ್ಷುಸ್ತೇಜಸೈವಾಸ್ಮೈ ತೇಜಶ್ಚಕ್ಷುರವರುಂಧ
ಇಂದ್ರಿಯಂ ವೈ ವೀರ್ಯಂ ವೃಂಕ್ತೇ ಭ್ರಾತೃವ್ಯೋ ಯಜಮಾನೋಽಯಜ
ಮಾನಸ್ಯಾಧ್ವರಕಲ್ಪಾಂ ಪ್ರತಿ ನಿರ್ವಪೇದ್ಭ್ರಾತೃವ್ಯೇ ಯಜಮಾನೇನಾ
ಸ್ಯೇಂದ್ರಿಯಂ (೪) ವೀರ್ಯಂ ವೃಂಕ್ತೇ ಪುರಾ ವಾಚಃ ಪ್ರವದಿತೋರ್ನಿರ್ವ
ಪೇದ್ಯಾವತ್ಯೇವ ವಾಕ್ತಾಮಪ್ರೋದಿತಾಂ ಭ್ರಾತೃವ್ಯಸ್ಯ ವೃಂಕ್ತೇ ತಾಮಸ್ಯ
ವಾಚಂ ಪ್ರವದಂತೀಮನ್ಯಾ ವಾಚೋಽನು ಪ್ರವದಂತೀ ತಾ ಇಂದ್ರಿಯಂ
ವೀರ್ಯಂ ಯಜಮಾನೇ ದಧತ್ಯಾಗ್ನಾವೈಷ್ಣವಮಷ್ಟಾಕಪಾಲಂ ನಿರ್ವಪೇ
ತ್ಪ್ರಾತಃಸವನಸ್ಯಾಕಾಲೇ ಸರಸ್ವತ್ಯಾಜ್ಯಭಾಗಾ ಸ್ಯಾದ್ಬಾರ್ಹಸ್ಪತ್ಯಶ್ಚರುರ್ಯ–
ದಷ್ಟಾ ಕಪಾಲೋ ಭವತ್ಯಷ್ಟಾಕ್ಷರಾ ಗಾಯತ್ರೀ ಗಾಯತ್ರಂ ಪ್ರಾತಃಸವನಂ
ಪ್ರಾತಃಸವನಮೇವ [ತೇನಾಪ್ನೋತಿ (೫) ಆಗ್ನಾವೈಷ್ಣವ...] ತೇನಾಪ್ನೋ
ತ್ಯಾಗ್ನಾವೈಷ್ಣವಮೇಕಾದಶಕಪಾಲಂ ನಿರ್ವಪೇನ್ಮಾಧ್ಯಂದಿನಸ್ಯ ಸವನಸ್ಯಾ

ಕಾಲೇ ಸರಸ್ವತ್ಯಾಜ್ಯಭಾಗಾ ಸ್ಯಾದ್ಬಾರ್ಹಸ್ಪತ್ಯಶ್ಚರುರ್ಯದೇಕಾದಶ

ಕಪಾಲೋ ಭವತ್ಯೇಕಾದಶಾಕ್ಷರಾ ತ್ರಿಷ್ಟುಪ್ತ್ರೈಷ್ಟುಭಂ ಮಾಧ್ಯಂದಿನಗ್ಂ

ಸವನಂ ಮಾಧ್ಯಂದಿನಮೇವ ಸವನಂ ತೇನಾಪ್ನೋತ್ಯಾಗ್ನಾವೈಷ್ಣವಂ

ದ್ವಾದಶಕಪಾಲಂ ನಿರ್ವಪೇತ್ತೃತೀಯಸವನಸ್ಯಾಕಾಲೇ ಸರಸ್ವತ್ಯಾಜ್ಯ

ಭಾಗಾ ಸ್ಯಾದ್ಬಾರ್ಹಸ್ಪತ್ಯಶ್ಚರುರ್ಯದ್ದ್ವಾದಶ ಕಪಾಲೋ ಭವತಿ

ದ್ವಾದಶಾಕ್ಷರಾ ಜಗತೀ ಜಾಗತಂ ತೃತೀಯಸವನಂ ತೃತೀಯಸವನಮೇವ

ತೇನಾಪ್ನೋತಿ ದೇವತಾಭಿರೇವ ದೇವತಾಃ [ದೇವತಾಃ (೬) ಪ್ರತಿಚರತಿ]

ಪ್ರತಿಚರತಿ ಯಜ್ಞೇನ ಯಜ್ಞಂ ವಾಚಾ ವಾಚಂ ಬ್ರಹ್ಮಣಾ ಬ್ರಹ್ಮಕಪಾಲೈ

ರೇವ ಛಂದಾಗ್ಂಸ್ಯಾಪ್ನೋತಿ ಪುರೋಡಾಶೈಸ್ಸವನಾನಿ ಮೈತ್ರಾವರುಣ

ಮೇಕಕಪಾಲಂ ನಿರ್ವಪೇದ್ವಶಾಯೈ ಕಾಲೇ ಯೈವಾಸೌ ಭ್ರಾತೃವ್ಯಸ್ಯ

ವಶಾನೂಬಂಧ್ಯಾ ಸೋ ಏವೈಷೈತಸ್ಯೈಕಕಪಾಲೋ ಭವತಿ ನ ಹಿ ಕಪಾಲೈಃ

ಪಶುಮರ್ಹತ್ಯಾಪ್ತ್ಯೈ ||೫೨-೭||

**[ಬ್ರಹ್ಮಣ್ವನ್ತಮಭಿಚರತಿ ಯಜ್ಞೋ ನ ತಾವೇವಾಸ್ಯೇಂದ್ರಿಯಮಾಪ್ನೋತಿ**

**ದೇವತಾಸ್ಸಪ್ತತ್ರಿಗ್ಂಶಚ್ಚ ।]**

ಅಸಾವಾದಿತ್ಯೋ ನ ವ್ಯರೋಚತ ತಸ್ಮೈ ದೇವಾಃ ಪ್ರಾಯಶ್ಚಿತ್ತಿಮೈಚ್ಛನ್ತಸ್ಮಾ

ಏತಗ್ಂ ಸೋಮಾರೌದ್ರಂ ಚರುಂ ನಿರವಪನ್ತೇನೈವಾಸ್ಮಿನ್ರುಚಮದ

ಧುರ್ಯೋ ಬ್ರಹ್ಮವರ್ಚಸಕಾಮಃ ಸ್ಯಾತ್ತಸ್ಮಾ ಏತಗ್ಂ ಸೋಮಾರೌದ್ರಂ

ಚರುಂ ನಿರ್ವಪೇತ್ಸೋಮಂ ಚೈವ ರುದ್ರಂ ಚ ಸ್ವೇನ ಭಾಗಧೇಯೇ

ನೋಪಧಾವತಿ ತಾವೇವಾಸ್ಮಿನ್ಬ್ರಹ್ಮವರ್ಚಸಂ ಧತ್ತೋ ಬ್ರಹ್ಮವರ್ಚಸ್ಯೇವ

ಭವತಿ ತಿಷ್ಯಾಪೂರ್ಣಮಾಸೇ ನಿರ್ವಪೇದ್ರುದ್ರೋ [ನಿರ್ವಪೇದ್ರುದ್ರಃ

(೧) ವೈ] ವೈ ತಿಷ್ಯಸ್ಸೋಮಃ ಪೂರ್ಣಮಾಸಃ ಸಾಕ್ಷಾದೇವ ಬ್ರಹ್ಮವರ್ಚಸ

ಮವರುಂಧೇ ಪರಿಶ್ರಿತೇ ಯಾಜಯತಿ ಬ್ರಹ್ಮವರ್ಚಸಸ್ಯ ಪರಿಗೃಹೀತ್ಯೈ

ಶ್ವೇತಾಯೈ ಶ್ವೇತವತ್ಸಾಯೈ ದುಗ್ಧಂ ಮಥಿತಮಾಜ್ಯಂ ಭವತ್ಯಾಜ್ಯಂ

ಪ್ರೋಕ್ಷಣಮಾಜ್ಯೇನ ಮಾರ್ಜಯಂತೇ ಯಾವದೇವ ಬ್ರಹ್ಮವರ್ಚಸಂ

ತತ್ಸರ್ವಂ ಕರೋತ್ಯತಿ ಬ್ರಹ್ಮವರ್ಚಸಂ ಕ್ರಿಯತ ಇತ್ಯಾಹುರೀಶ್ವರೋ

ದುಶ್ಚರ್ಮಾ ಭವಿತೋರಿತಿ ಮಾನವೀ ಋಚೌ ಧಾಯ್ಯೇ ಕುರ್ಯಾದ್ಯದ್ವೈ

ಕಿಂಚ ಮನುರವದತ್ತದ್ಭೇಷಜಂ [ಭೇಷಜಮ್ (೨) ಭೇಷಜಮೇವಾಸ್ಮೈ]

ಭೇಷಜಮೇವಾಸ್ಮೈ ಕರೋತಿ ಯದಿ ಬಿಭೀಯಾದ್ದುಶ್ಚರ್ಮಾ ಭವಿಷ್ಯಾಮೀತಿ

ಸೋಮಾಪೌಷ್ಣಂ ಚರುಂ ನಿರ್ವಪೇತ್ಸೌಮ್ಯೌ ವೈ ದೇವತಯಾ ಪುರುಷಃ

ಪೌಷ್ಣಾಃ ಪಶವಸ್ಸ್ವಯೈವಾಸ್ಮೈ ದೇವತಯಾ ಪಶುಭಿಸ್ತ್ವಚಂ ಕರೋತಿ ನ

ದುಶ್ಚರ್ಮಾ ಭವತಿ ಸೋಮಾರೌದ್ರಂ ಚರುಂ ನಿರ್ವಪೇತ್ಪ್ರಜಾಕಾಮ

ಸ್ಸೋಮೋ ವೈ ರೇತೋಧಾ ಅಗ್ನಿಃ ಪ್ರಜಾನಾಂ ಪ್ರಜನಯಿತಾ ಸೋಮ

ಏವಾಸ್ಮೈ ರೇತೋ ದಧಾತ್ಯಗ್ನಿಃ ಪ್ರಜಾಂ ಪ್ರಜನಯತಿ ವಿಂದತೇ

ಪ್ರಜಾಗ್ಂ [ವಿಂದತೇ (೩) ಪ್ರಜಾಗ್ಂ] ಸೋಮಾರೌದ್ರಂ ಚರುಂ

ನಿರ್ವಪೇದಭಿಚರನ್ತ್ಸೌಮ್ಯೌ ವೈ ದೇವತಯಾ ಪುರುಷ ಏಷ ರುದ್ರೋ

ಯದಗ್ನಿಃ ಸ್ವಾಯಾ ಏವೈನಂ ದೇವತಾಯೈ ನಿಷ್ಕ್ರೀಯ ರುದ್ರಾಯಾಪಿ

ದಧಾತಿ ತಾಜಗಾರ್ತಿಮಾರ್ಛತಿ ಸೋಮಾರೌದ್ರಂ ಚರುಂ ನಿರ್ವಪೇಜ್ಜ್ಯೋ

ಗಾಮಯಾವೀ ಸೋಮಂ ವಾ ಏತಸ್ಯ ರಸೋ ಗಚ್ಛತ್ಯಗ್ನಿಗ್ಂ ಶರೀರಂ

ಯಸ್ಯ ಜ್ಯೋಗಾಮಯತಿ ಸೋಮಾದೇವಾಸ್ಯ ರಸಂ ನಿಷ್ಕ್ರೀಣಾತ್ಯಗ್ನೇಃ

ಶರೀರಮುತ ಯದೀತಾಸುರ್ಭವತಿ [ಯದಿ (೪) ಇತಾಸುರ್ಭವತಿ]

ಜೀವತ್ಯೇವ ಸೋಮಾರುದ್ರಯೋರ್ವಾ ಏತಂ ಗ್ರಸಿತಗ್ಂ ಹೋತಾ

ನಿಷ್ಪಿದತಿ ಸ ಈಶ್ವರ ಆರ್ತಿಮಾರ್ತೋಃರನಡ್ವಾನ್ ಹೋತ್ರಾದೇಯೋ

ವಹ್ನಿರ್ವಾ ಅನಡ್ವಾನ್ ವಹ್ನಿರ್ ಹೋತಾ ವಹ್ನಿನೈವ ವಹ್ನಿಮಾತ್ಮಾನಗ್ಂ

ಸ್ಪೃಣೋತಿ ಸೋವಾರೌದ್ರಂ ಚರುಂ ನಿರ್ವಪೇದ್ಯಃ ಕಾಮಯೇತ

ಸ್ವೇಽಸ್ಮಾ ಆಯತನೇ ಭ್ರಾತೃವ್ಯಂ ಜನಯೇಯಮಿತಿ ವೇದಿಂ ಪರಿಗೃಹ್ಯಾರ್ಧ

ಮುದ್ಧನ್ಯಾದರ್ಧಂ ನಾರ್ಧಂ ಬರ್ಹಿಷಃ ಸ್ತೃಣೀಯಾ ದರ್ಧಂ ನಾರ್ಧ

ಮಿಧ್ಮಸ್ಯಾಭ್ಯಾದಧ್ಯಾದರ್ಧಂ ನ ಸ್ವ ಏವಾಸ್ಮಾ ಆಯತನೇ ಭ್ರಾತೃವ್ಯಂ

ಜನಯತಿ ॥೫೭–10॥

**[ರುದ್ರೋ ಭೇಷಜಂ ಏಂದತೇ ಯದಿ ಸ್ತೃಣೀಯಾದರ್ಧಂ ದ್ವಾದಶ ಚ]**

ಐಂದ್ರಮೇಕಾದಶಕಪಾಲಂ ನಿರ್ವಪೇನ್ಮಾರುತಗ್ಂ ಸಪ್ತಕಪಾಲಂ

ಗ್ರಾಮಕಾಮ ಇಂದ್ರಂ ಚೈವ ಮರುತಶ್ಚ ಸ್ವೇನ ಭಾಗಧೇಯೇನೋಪ

ಧಾವತಿ ತ ಏವಾಸ್ಮೈ ಸಜಾತಾನ್ಪ್ರಯಚ್ಛಂತಿ ಗ್ರಾಮ್ಯೇವ ಭವತ್ಯಾಹವ

ನೀಯ ಐಂದ್ರಮಧಿಶ್ರಯತಿ ಗಾರ್ಹಪತ್ಯೇ ಮಾರುತಂ ಪಾಪವಸ್ಯಸಸ್ಯ

ವಿಧೃತ್ಯೈ ಸಪ್ತಕಪಾಲೋ ಮಾರುತೋ ಭವತಿ ಸಪ್ತಗಣಾ ವೈ ಮರುತೋ

ಗಣಶ ಏವಾಸ್ಮೈ ಸಜಾತಾನವರುಂಧೇಽನೂಚ್ಯಮಾನ ಆಸಾದಯತಿ

ವಿಶಮೇವಾಸ್ಮಾ [ವಿಶಮೇವ (೧) ಅಸ್ಮಾ] ಅನುವರ್ತ್ಮಾನಂ ಕರೋತ್ಯೇತಾ

ಮೇವ ನಿರ್ವಪೇದ್ಯಃ ಕಾಮಯೇತ ಕ್ಷತ್ರಾಯ ಚ ವಿಶೇ ಚ ಸಮದಂ

ದಧ್ಯಾಮಿತ್ಯೈಂದ್ರಸ್ಯಾವದ್ಯನ್ಬ್ರೂಯಾದಿಂದ್ರಾಯಾನು ಬ್ರೂಹೀತ್ಯಾ

ಶ್ರಾವ್ಯ ಬ್ರೂಯಾನ್ಮರುತೋ ಯಜೇತಿ ಮಾರುತಸ್ಯಾ ವದ್ಯನ್ಬ್ರೂಯಾ

ನ್ಮರುದ್ಭ್ಯೋಽನುಬ್ರೂಹೀತ್ಯಾಶ್ರಾವ್ಯ ಬ್ರೂಯಾದಿಂದ್ರಂ ಯಜೇತಿ ಸ್ವ

ಏವೈಭ್ಯೋ ಭಾಗಧೇಯೇ ಸಮದಂ ದಧಾತಿ ವಿತೃಗ್ಂ ಹಾಣಾಸ್ತಿಷ್ಠಂತ್ಯೇತಾ

ಮೇವ [೨] ನಿರ್ವಪೇದ್ಯಃ ಕಾಮಯೇತ ಕಲ್ಪೇರನ್ನಿತಿ ಯಥಾದೇವತ

ಮವದಾಯ ಯಥಾದೇವತಂ ಯಜೇದ್ಭಾಗಧೇಯೇ ನೈವೈನಾನ್

ಯಥಾಯಥಂ ಕಲ್ಪಯತಿ ಕಲ್ಪಂತ ಏವೈಂದ್ರಮೇಕಾದಶಕಪಾಲಂ

ನಿರ್ವಪೇದ್ವೈಶ್ವದೇವಂ ದ್ವಾದಶಕಪಾಲಂ ಗ್ರಾಮಕಾಮ ಇಂದ್ರಂ ಚೈವ

ವಿಶ್ವಾಗ್ಂಶ್ಚ ದೇವಾನ್ಥ್ಸ್ವೇನ ಭಾಗಧೇಯೇನೋಪಧಾವತಿ ತ

ಏವಾಸ್ಮೈ ಸಜಾತಾನ್ಪ್ರಯಚ್ಛಂತಿ ಗ್ರಾಮ್ಯೇವ ಭವತ್ಯೈಂದ್ರ ಸ್ಯಾವದಾಯ

ವೈಶ್ವದೇವಸ್ಯಾವದ್ಯೇದಥೈಂದ್ರಸ್ಯೋ [..... ಥೈಂದ್ರಸ್ಯ (೩)ಉಪರಿಷ್ಟಾ

ದಿಂದ್ರಿಯೇಣೈವಾಸ್ಮಾ] ಪರಿಷ್ಟಾದಿಂದ್ರಿಯೇಣೈವಾಸ್ಮಾ ಉಭಯತ

ಸ್ಸಜಾತಾನ್ಪರಿಗೃಹ್ಣಾತ್ಯುಪಾಧಾಯ್ಯಪೂರ್ವಯಂವಾಸೋ ದಕ್ಷಿಣಾ

ಸಜಾತಾನಾಮುಪಹಿತ್ಯೈ ಪೃಶ್ನಿಯೈ ದುಗ್ಧೇ ಪ್ರೈಯಂಗವಂ ಚರುಂ
ನಿರ್ವಪೇನ್ಮರುದ್ಭ್ಯೋ ಗ್ರಾಮಕಾಮಃ ಪೃಶ್ನಿಯೈ ವೈ ಪಯಸೋ
ಮರುತೋ ಜಾತಾಃ ಪೃಶ್ನಿಯೈ ಪ್ರಿಯಂಗವೋ ಮಾರುತಾಃ ಖಲು ವೈ
ದೇವತಯಾ ಸಜಾತಾ ಮರುತ ಏವ ಸ್ವೇನ ಭಾಗಧೇಯೇನೋಪ
ಧಾವತಿ ತ ಏವಾಸ್ಮೈ ಸಜಾತಾನ್ಪ್ರಯಚ್ಛಂತಿ ಗ್ರಾಮ್ಯೇವ ಭವತಿ ಪ್ರಿಯವತೀ
ಯಾಜ್ಯಾನುವಾಕ್ಯೇ [ಯಾಜ್ಯಾನುವಾಕ್ಯೇ (೪) ಭವತಃ] ಭವತಃ ಪ್ರಿಯಮೇ
ವೈನಗ್ಂ ಸಮಾನಾನಾಂ ಕರೋತಿ ದ್ವಿಪದಾ ಪುರೋನುವಾಕ್ಯಾ ಭವತಿ
ದ್ವಿಪದ ಏವಾವರುಂಧೇ ಚತುಷ್ಪದಾಯಾಜ್ಯಾ ಚತುಷ್ಪದ ಏವ
ಪಶೂನವರುಂಧೇ ದೇವಾಸುರಾಸ್ಸಂಯತ್ತಾ ಆಸನ್ತೇ ದೇವಾ ಮಿಥೋ
ವಿಪ್ರಿಯಾ ಆಸನ್ತೇ ಽನ್ಯೋಽನ್ಯಸ್ಮೈ ಜ್ಯೈಷ್ಠ್ಯಾ ಯಾತಿಷ್ಠಮಾನಾಶ್ಚತುರ್ಧಾ
ವ್ಯಕ್ರಾಮನ್ನಗ್ನಿರ್ವಸುಭಿ ಸ್ಸೋಮೋ ರುದ್ರೈರಿಂದ್ರೋ ಮರುದ್ಭಿರ್ವರುಣ
ಆದಿತ್ಯೈಸ್ಸ ಇಂದ್ರಃ ಪ್ರಜಾಪತಿಮುಪಾಧಾವತ್ತಮೇತಯಾ [ತಮ್ (೫)
ಏತಯಾ] ಸಂಜ್ಞಾನ್ಯಾ ಽಯಾಜಯದಗ್ನಯೇ ವಸುಮತೇ ಪುರೋಡಾಶಮಷ್ಟಾ
ಕಪಾಲಂ ನಿರವಪತ್ಸೋಮಾಯ ರುದ್ರವತೇ ಚರುಮಿಂದ್ರಾಯ

ಮರುತ್ವತೇ ಪುರೋಡಾಶಮೇಕಾದಶ ಕಪಾಲಂ ವರುಣಾಯಾऽऽದಿತ್ಯ

ವತೇ ಚರುಂ ತತೋ ವಾ ಇಂದ್ರಂ ದೇವಾ ಜ್ಯೈಷ್ಠ್ಯಾಯಾಭಿ ಸಮಜಾನತ

ಯಸ್ಸಮಾನೈರ್ಮಿಥೋ ವಿಪ್ರಿಯಸ್ಸ್ಯಾತ್ತಮೇತಯಾ ಸಂಜ್ಞಾನ್ಯಾ

ಯಾಜಯೇದಗ್ನಯೇ ವಸುಮತೇ ಪುರೋಡಾಶಮಷ್ಟಾಕಪಾಲಂ

ನಿರ್ವಪೇತ್ಸೋಮಾಯ ರುದ್ರವತೇ ಚರುಮಿಂದ್ರಾಯ ಮರುತ್ವತೇ

ಪುರೋಡಾಶಮೇಕಾದಶಕಪಾಲಂ ವರುಣಾಯಾऽऽದಿತ್ಯವತೇ

ಚರುಮಿಂದ್ರಮೇವೈನಂ ಭೂತಂ ಜ್ಯೈಷ್ಠ್ಯಾಯ ಸಮಾನಾ ಅಭಿ ಸಂಜಾನತೇ

ವಸಿಷ್ಠಸ್ಸಮಾನಾನಾಂ ಭವತಿ ||೬೩–11||

**[ಏಕಮೇವ ತಿಷ್ಠಂತ್ಯೇತಾಮೇವಾಥೈಂದ್ರಸ್ಯ ಯಾಜ್ಯಾನುವಾಕ್ಯೇ ತಂ ವರುಣಾಯ ಚತುರ್ದಶ ಚ ||]**

ಹಿರಣ್ಯಗರ್ಭ ಆಪೋ ಹ ಯತ್ಪ್ರಜಾಪತೇ । ಸ ವೇದ ಪುತ್ರಃ ಪಿತರಗ್ಂ

ಸ ಮಾತರಗ್ಂ ಸ ಸೂನುರ್ಭುವತ್ಸ ಭುವತ್ಪುನರ್ಮಘಃ । ಸ ದ್ಯಾ

ಮೌರ್ಣೋದಂತರಿಕ್ಷಗ್ಂ ಸ ಸುವಃ ಸ ವಿಶ್ವಾ ಭುವೋ ಅಭವತ್ಸ

ಆऽಭವತ್ || ಉದು ತ್ಯಂ ಚಿತ್ರಮ್ || ಸ ಪ್ರತ್ನವನ್ನವೀಯಸಾऽಗ್ನೇ

ದ್ಯುವರ್ನ್ಮೇನ ಸಂಯತಾ । ಬೃಹತ್ತತಂಥ ಭಾನುನಾ ॥ ನಿ ಕಾವ್ಯಾ ವೇಧ

ಸಶ್ಶಶ್ವತಸ್ಕರ್ ಹಸ್ತೇ ದಧಾನೋ [ದಧಾನಃ (೧) ನರ್ಯಾ] ನರ್ಯಾ ಪುರೂಣಿ ।

ಅಗ್ನಿರ್ಭುವದ್ರಯಿಪತೀ ರಯೀಣಾಗ್ಂ ಸತ್ರಾ ಚಕ್ರಾಣೋ ಅಮೃತಾನಿ

ವಿಶ್ವಾ ॥ ಹಿರಣ್ಯಪಾಣಿಮೂತಯೇ ಸವಿತಾರಮುಪಹ್ವಯೇ । ಸ ಚೇತ್ತಾ

ದೇವತಾ ಪದಮ್ ॥ ವಾಮಮದ್ಯ ಸವಿತರ್ವಾಮಮು ಶ್ವೋ ದಿವೇ

ದಿವೇ ವಾಮಮಸ್ಮಭ್ಯಗ್ಂ ಸಾವೀಃ । ವಾಮಸ್ಯ ಹಿ ಕ್ಷಯಸ್ಯ ದೇವ

ಭೂರೇರಯಾ ಧಿಯಾ ವಾಮಭಾಜಃ ಸ್ಯಾಮ । ಬಡಿತ್ಥಾ ಪರ್ವತಾನಾಂ

ಖಿದ್ರಂ ಬಿಭರ್ಷಿ ಪೃಥಿವಿ । ಪ್ರಯಾ ಭೂಮಿ ಪ್ರವತ್ವತಿ ಮಹ್ನಾ

ಜಿನೋಷಿ [ಜಿನೋಷಿ (೨) ಮಹಿನಿ] ಮಹಿನಿ ॥ ಸ್ತೋಮಾಸಸ್ತ್ವಾ

ವಿಚಾರಿಣಿ ಪ್ರತಿಷ್ಟೋಭಂತ್ಯಕ್ತುಭಿಃ । ಪ್ರ ಯಾ ವಾಜಂ ನ ಹೇಷಂತಂ

ಪೇರುಮಸ್ಯಸ್ಯರ್ಜುನಿ ॥ ಋದೂದರೇಣ ಸಖ್ಯಾ ಸಚೇಯ ಯೋ ಮಾ

ನ ರಿಷ್ಯೇದ್ಧರ್ಯಶ್ವ ಪೀತಃ । ಅಯಂ ಯಸ್ಸೋಮೋನ್ಯಧಾಯ್ಯಸ್ಮೇ ತಸ್ಮಾ

ಇಂದ್ರಂ ಪ್ರತಿರಮೇಮ್ಯಚ್ಛ ॥ ಆಪಾಂತಮನ್ಯುಸ್ತೃಪಲ ಪ್ರಭರ್ಮಾ

ಧುನಿಃ ಶಿಮೀವಾಞ್ಛರುಮಾಗ್ಂ ಋಜೀಷೀ । ಸೋಮೋ ವಿಶ್ವಾನ್ಯತಸಾ

ವನಾನಿ ನಾರ್ವಾಗಿಂದ್ರಂ ಪ್ರತಿಮಾನಾನಿ ದೇಭುಃ ॥ ಪ್ರ [(೩)

ಸುವಾನಃ] ಸುವಾನಸ್ಸೋಮ ಋತಯುಶ್ಚಿಕೇತೇಂದ್ರಾಯ ಬ್ರಹ್ಮ ಜಮದ

ಗ್ನಿರರ್ಚನ್ ॥ ವೃಷಾ ಯಂತಾಽಸಿ ಶವಸಸ್ತುರಸ್ಯಾಂತರ್ಯಚ್ಛ ಗೃಣತೇ

ಧರ್ತ್ರಂ ದೃಗ್ಂಹ ॥ ಸಬಾಧಸ್ತೇ ಮದಂ ಚ ಶುಷ್ಮಯಂ ಚ ಬ್ರಹ್ಮನರೋ

ಬ್ರಹ್ಮಕೃತಸ್ಸಪರ್ಯನ್ । ಅರ್ಕೋ ವಾ ಯತ್ತುರತೇ ಸೋಮಚಕ್ಷಾ

ಸ್ತತ್ರೇದಿಂದ್ರೋ ದಧತೇ ಪೃತ್ಸು ತುರ್ಯಾಮ್ ॥ ವಷಟ್ತೇ ವಿಷ್ಣವಾಸ

ಆಕೃಣೋಮಿ ತನ್ಮೇ ಜುಷಸ್ವ ಶಿಪಿವಿಷ್ಟ ಹವ್ಯಮ್ । ವರ್ಧಂತು ತ್ವಾ

ಸುಷ್ಟುತಯೋ ಗಿರೋ ಮೇ ಯೂಯಂ ಪಾತ ಸ್ವಸ್ತಿಭಿ ಸ್ಸದಾ ನಃ ॥

ಪ್ರ ತತ್ತೇ ಅದ್ಯ ಶಿಪಿವಿಷ್ಟ ನಾಮಾರ್ಯಶ್ಶಗ್ಂಸಾಮಿ ವಯುನಾನಿ

ವಿದ್ವಾನ್ । ತಂ ತ್ವಾ ಗೃಣಾಮಿ ತವಸಮತವೀಯಾನ್ಕ್ಷಯಂತಮಸ್ಯ

ರಜಸಃ ಪರಾಕೇ ॥ ಕಿಮಿತ್ತೇ ವಿಷ್ಣೋ ಪರಿಚಕ್ಷ್ಯಂ ಭೂತ್ಪ್ರಯದ್ವವಕ್ಷೇ

ಶಿಪಿವಿಷ್ಟೋ ಅಸ್ಮಿ । ಮಾ ವರ್ಪೋ ಅಸ್ಮದಪಗೂಹ ಏತದ್ಯದನ್ಯರೂಪಃ

ಸಮಿಥೇ ಬಭೂಥ [(೫)] ॥ ಅಗ್ನೇ ದಾ ದಾಶುಷೇ ರಯಿಂ ವೀರವಂತಂ

ಪರೀಣಸಮ್ । ಶಿಶೀಹಿ ನಃ ಸೂನುಮತಃ ॥ ದಾ ನೋ ಅಗ್ನೇ ಶತಿನೋ

ದಾಃ ಸಹಸ್ರಿಣೋ ದುರೋ ನ ವಾಜಗ್ಗ್ಂ ಶ್ರುತ್ಯಾ ಅಪಾವೃಧಿ । ಪ್ರಾಚೀ ದ್ಯಾವಾಪೃಥಿವೀ ಬ್ರಹ್ಮಣಾ ಕೃಧಿ ಸುವರ್ಣ ಶುಕ್ರಮುಷಸೋ ವಿದಿದ್ಯುತುಃ ॥ ಅಗ್ನಿರ್ದಾ ದ್ರವಿಣಂ ವೀರಪೇಶಾ ಅಗ್ನಿರ್ ಋಷಿಂ ಯಃ ಸಹಸ್ರಾ ಸನೋತಿ । ಅಗ್ನಿರ್ದಿವಿ ಹವ್ಯಮಾತತನಾಗ್ನೇರ್ಧಾಮಾನಿ ವಿಭೃತಾ ಪುರುತ್ರಾ ॥ [ಮಾ (೬) ನೋ ಮರ್ಧೀರಾ...] ಮಾ ನೋ ಮರ್ಧೀರಾ ತೂ ಭರ ॥ ಘೃತಂ ನ ಪೂತಂ ತನೂರರೇಪಾಶ್ಶುಚಿ ಹಿರಣ್ಯಮ್ । ತತ್ತೇ ರುಕ್ಮೋ ನ ರೋಚತ ಸ್ವಧಾವಃ ॥ ಉಭೇ ಸುಶ್ಚಂದ್ರ ಸರ್ಪಿಷೋ ದರ್ವೀ ಶ್ರೀಣೀಷ ಆಸನಿ ॥ ಉತೋ ನ ಉತ್ಪುಪೂರ್ಯಾ ಉಕ್ಥೇಷು ಶವಸಸ್ಪತ ಇಷಗ್ಗ್ಂ ಸ್ತೋತೃಭ್ಯ ಆ ಭರ ॥ ವಾಯೋ ಶತಗ್ಂ ಹರೀಣಾಂ ಯುವಸ್ವ ಪೋಷ್ಯಾಣಾಮ್ । ಉತ ವಾ ತೇ ಸಹಸ್ರಿಣೋ ರಥ ಆಯಾತು ಪಾಜಸಾ ॥ ಪ್ರಯಾಭಿ [ಯಾಭಿಃ (೭) ಯಾಸಿ] ರ್ಯಾಸಿ ದಾಶ್ವಾಗ್ಂ ಸಮ ಚ್ಛಾನಿ ಯುದ್ಭಿರ್ವಾಯವಿಷ್ಟಯೇ ದುರೋಣೇ । ನಿ ನೋ ರಯಿಗ್ಂ ಸುಭೋಜಸಂ ಯುವೇಹನಿ ವೀರವದ್ಗವ್ಯಮಶ್ವಿಯಂ ಚ ರಾಧಃ ॥ ರೇವತೀರ್ನಸ್ಸಧಮಾದ ಇಂದ್ರೇ ಸಂತು ತುವಿವಾಜಾಃ । ಕ್ಷುಮಂತೋ

ಯಾಭಿರ್ಮದೇಮ ॥ ರೇವಾಗ್ಂ ಇದ್ರೇವತಸ್ಸ್ತೋತಾ ಸ್ಯಾತ್ತ್ವಾವತೋ

ಮಘೋನಃ । ಪ್ರೇದು ಹರಿವಃ ಶ್ರುತಸ್ಯ ॥೭೧–12॥

[ದಧಾನೋ ಜಿನೋಷಿ ದೇಭುಃ ಪ್ರಹವ್ಯಂ ಬಭೂಥ

ವಾ ಯಾಭಿ ಶ್ಚತ್ವಾರಿಗ್ಂಶಚ್ಚ ।]

ಪ್ರಜಾಪತಿಸ್ತಾಃ ಸೃಷ್ಟ್ವಾ ಅಗ್ನಯೇ ಪಥಿಕೃತೇಽಗ್ನಯೇ ಕಾಮಾಯಾಗ್ನಯೇಽನ್ನವತೇ ವೈಶ್ವಾನರವಾದಿತ್ಯಂ ಚರುವೈಂದ್ರಂ ಚರುಮಿಂದ್ರಾಯಾನ್ವೃಜವ ಆಗ್ನಾ ವೈಷ್ಣವವಾಸೌ ಸೋವಾರೌದ್ರವೈಂದ್ರಮೇಕಾದಶಕಪಾಲಗ್ಂ ಹಿರಣ್ಯಗರ್ಭೋ ದ್ವಾದಶ ॥12॥

ಪ್ರಜಾಪತಿರಗ್ನಯೇ ಕಾಮಾಯಾಭಿ ಸಂಭವತೋ ಯೋ ವಿದ್ವಿಷಾಣಯೋರಿಧ್ಮೇ ಸನ್ನಹ್ಯೇದಾಗ್ನಾವೈಷ್ಣವ ಮುಪರಿಷ್ಟಾದ್ಯಾಸಿ ದಾಶ್ವಾಗ್ಂ ಸಮೇಕಸಪ್ತತಿಃ ॥71॥

ಪ್ರಜಾಪತಿಃ ಪ್ರೇದು ಹರಿವಃ ಶ್ರುತಸ್ಯ ॥

ಹರಿಃ ಓಂ ॥

ಶ್ರೀಕೃಷ್ಣಾರ್ಪಣಮಸ್ತು ॥

ಇತಿ ದ್ವಿತೀಯಕಾಂಡೇ ದ್ವಿತೀಯಃ ಪ್ರಶ್ನಃ ॥

# ತೈತ್ತಿರೀಯ ಸಂಹಿತಾ

## ದ್ವಿತೀಯಕಾಂಡಃ

## ಪ್ರಥಮಃ ಪ್ರಶ್ನಃ

॥ ಶ್ರೀ ಶಾರದಾಗುರುಗಣಪತಿಭ್ಯೋ ನಮಃ ॥

ಶ್ರೀ ಗುರುಭ್ಯೋ ನಮಃ ಹರಿಃ ಓಮ್

ವಾಯವ್ಯಗ್ಂ ಶ್ವೇತಮಾಲಭೇತ ಭೂತಿಕಾಮೋ

---

ವೈ ॥ ವಾಯವ್ಯಮ್ । ಶ್ವೇತಮ್ । ಏತಿ । ಲಭೇತ । ಭೂತಿಕಾಮ ಇತಿ ಭೂತಿ–ಕಾಮಃ ।

---

**ವಾಯವ್ಯಪಶುಯಾಗ; ವಿಧಿ – ಅರ್ಥವಾದ**

| ಬ್ರಾಹ್ಮಣಭಾಗ | ವಿವರಣೆ |
|---|---|
| ವಾಯವ್ಯಮ್ ಶ್ವೇತಮ್ ಆಲಭೇತ ಭೂತಿಕಾಮಃ | ಐಶ್ವರ್ಯವನ್ನು ಬಯಸುವವನು ವಾಯು ದೇವತಾಕವಾದ ಬಿಳಿಯ ಬಣ್ಣದ ಪಶುವೇ ದ್ರವ್ಯವಾಗಿರುವ ಯಾಗವನ್ನು ಮಾಡಬೇಕು. [ವಿಧಿ] |

---

**ದ್ವಿತೀಯಕಾಂಡದಲ್ಲಿನ ಭಾಷ್ಯಕಾರರ ಉಪೋದ್ಘಾತ**

**ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।**
**ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಮ್ ॥**

ಪ್ರಥಮಕಾಂಡದಲ್ಲಿ ಮುಖ್ಯವಾಗಿ ಪ್ರಕೃತಿಯಾಗಗಳನ್ನು ಹೇಳಲಾಗಿದೆ. ಈ ಎರಡನೆಯ ಕಾಂಡದಲ್ಲಿ ಮುಖ್ಯವಾಗಿ ವಿಕೃತಿಯಾಗಗಳನ್ನು ಹೇಳಲಾಗಿದೆ.

**[ಕಾಂಡದ ಆರಂಭವಾದುದರಿಂದ ಪುನಃಸ್ಮರಣೆಗಾಗಿ ಹಿಂದೆ ವಿಸ್ತೃತವಾಗಿ ವಿವರಿಸಿರುವ ವಿಷಯುಗಳನ್ನು ಪುನಃ ಸಂಗ್ರಹಿಸಿ ನೀಡಲಾಗುವುದು. ಬಳಿಕ ಈ ಕಾಂಡದಲ್ಲಿನ ವಿಶೇಷವನ್ನು ತಿಳಿಸಲಾಗುವುದು]**

* ಧರ್ಮದ ವಿಷಯದಲ್ಲಿ ವೇದವೇ ಪ್ರಮಾಣ.
* ಮಂತ್ರ–ಬ್ರಾಹ್ಮಣಗಳಿಗೆ ವೇದವೆಂದು ಹೆಸರು.
* ಯಾಜ್ಞಿಕರು ಯಾವುದನ್ನು ಮಂತ್ರವೆಂದು ಹೇಳುತ್ತಾರೆಯೋ ಅದೇ ಮಂತ್ರ.
* ಪಾದಬದ್ಧವಾದ ಮಂತ್ರಗಳು ಋಕ್ಕುಗಳೆನಿಸಿಕೊಳ್ಳುತ್ತವೆ.
* ಗಾನಯುಕ್ತವಾದ ಮಂತ್ರಗಳು ಸಾಮಗಳು.
* ಪಾದ–ಅಕ್ಷರಾದಿನಿಯಮವಿಲ್ಲದ ಮಂತ್ರಗಳು ಯಜುಸ್ಸುಗಳು.
* ಮಂತ್ರಭಿನ್ನವಾದ ವೇದಭಾಗವು **'ಬ್ರಾಹ್ಮಣ'** ಎನಿಸಿಕೊಳ್ಳುತ್ತದೆ. ಇದು **'ವಿಧಿ', 'ಅರ್ಥವಾದ'** ಎಂದು ಎರಡು ಬಗೆಯಾಗಿದೆ. ಹೀಗೆ ಮಾಡಬೇಕು ಎಂದು ಬೋಧಿಸುವ ವಿಧಿವಾಕ್ಯವೂ, ಹೀಗೆ ಮಾಡಬಾರದು ಎಂದು ನಿಷೇಧಿಸುವ ವಾಕ್ಯವೂ **'ವಿಧಿ'** ಎನ್ನಿಸಿಕೊಳ್ಳುತ್ತದೆ.
* **'ಉಪವ್ಯಯತೇ'** ಮುಂತಾಗಿ ಲೋಕದಲ್ಲಿಲ್ಲದ ಅಪೂರ್ವಾರ್ಥವನ್ನು ಬೋಧಿಸುವ ವಾಕ್ಯಗಳೂ ವಿಧಿಗಳೇ.
* **'ಯತ್'** ಮುಂತಾದ ಕೆಲವು ನಿರ್ದಿಷ್ಟ ಶಬ್ದಗಳಿಂದ ಯುಕ್ತವಾದ, **'ತೇನ ಹ್ಯನ್ನಂ ಕ್ರಿಯತೇ' 'ಯ ಏವಂ ವಿದ್ವಾನ್ ಪೌರ್ಣಮಾಸೀಂ ಯಜತೇ'** ಇತ್ಯಾದಿಗಳು ವಿಧಿಗಳಲ್ಲ.
* ಕೆಲವೆಡೆ ಮಾತ್ರ **'ಹಿ' 'ಯತ್'** ಮುಂತಾದ ಶಬ್ದಗಳಿರುವ **'ಉಪರಿ ಹಿ ದೇವೇಭ್ಯೋ ಧಾರಯತಿ' ಯದಾಗ್ನೇಯೋಽಷ್ಟಾಕಪಾಲಃ''** ಮುಂತಾದವುಗಳು ವಿಧಿಗಳೇ.
* ಮಂತ್ರಗಳಲ್ಲಿರುವ **'ಯಾಭಿರ್ಯಜತೇ'** ಮುಂತಾದವುಗಳು ವಿಧಿಗಳಲ್ಲ.
* **'ಊರ್ಜೋಽವರುದ್ಧ್ಯೈ'** ಇತ್ಯಾದಿಗಳು ಫಲವಿಧಾಯಕಗಳಲ್ಲ. ಇವೂ **'ವಾಯುರ್ವೈ ಕ್ಷೇಪಿಷ್ಠಾ ದೇವತಾ'** ಮೊದಲಾದ ಪ್ರಶಂಸಾರ್ಥಕವಾದ ವಾಕ್ಯಗಳೂ ಅರ್ಥವಾದಗಳು.

## ಪ್ರಕೃತಿ – ವಿಕೃತಿ ವಿಚಾರ

ವೇದದ ಪೂರ್ವಕಾಂಡದಲ್ಲಿ ಹೇಳುವ ಕರ್ಮಗಳು ಮುಖ್ಯವಾಗಿ **'ಪ್ರಕೃತಿ' 'ವಿಕೃತಿ'** ಎಂದು ಎರಡು ಬಗೆಯಾಗಿವೆ. ಯಾವ ಕರ್ಮಗಳಲ್ಲಿ ವಿಶೇಷಾಂಗಗಳನ್ನು ಮಾತ್ರ ಹೇಳಿ, ಉಳಿದ ಅಂಶಗಳನ್ನು **'ಪ್ರಕೃತಿವತ್ ವಿಕೃತಿಃ ಕರ್ತವ್ಯಾ'** ಎಂಬ

ಅತಿದೇಶದಿಂದ ಪ್ರಕೃತಿಯಿಂದ ಬರಮಾಡಿಕೊಳ್ಳಬೇಕಾಗುತ್ತದೆಯೋ ಅದು ವಿಕೃತಿ ; ಎಲ್ಲಿ ಬೇಕಾದ ಧರ್ಮಗಳೆಲ್ಲವನ್ನೂ ಹೇಳಿರುತ್ತಾರೆಯೋ ಅದು ಪ್ರಕೃತಿ. ಮಾಸಾಗ್ನಿಹೋತ್ರ, ವಾಯವ್ಯಪಶು, ಪ್ರಾಜಾಪತ್ಯೇಷ್ಟಿ, ವಿಶ್ವಜಿದ್ಯಾಗ ಮೊದಲಾದವುಗಳು ವಿಕೃತಿಗಳು. ಅಗ್ನಿಹೋತ್ರ, ದರ್ಶ–ಪೂರ್ಣಮಾಸ, ಅಗ್ನಿಷ್ಟೋಮಗಳು ಪ್ರಕೃತಿಗಳು.

ಅಗ್ನಿಹೋತ್ರವು ಪ್ರತಿನಿತ್ಯವೂ ಪ್ರಾತಃಕಾಲ, ಸಾಯಂಕಾಲಗಳಲ್ಲಿ ಕ್ಷೀರಾದಿದ್ರವ್ಯಗಳಿಂದ ಮಾಡುವ ಹೋಮ. **'ಕೌಂಡಪಾಯಿನಾಮಯನ'**ದಲ್ಲಿ ವಿಹಿತವಾಗಿರುವ ಮಾಸಾಗ್ನಿಹೋತ್ರವು ಅಗ್ನಿಹೋತ್ರದ ವಿಕೃತಿ.

ಪೌರ್ಣಮಾಸೀ, ಅಮಾವಾಸ್ಯೆಯ ಕಾಲದಲ್ಲಿ ಪುರೋಡಾಶ ಮೊದಲಾದ ದ್ರವ್ಯಗಳಿಂದ ಮಾಡುವ ದರ್ಶ–ಪೂರ್ಣಮಾಸಗಳೆಂಬ ಯಾಗಗಳು ಇಷ್ಟಿಗಳು. ಇವು ಪ್ರಕೃತಿ. **'ಐಂದ್ರಾಗ್ನಮೇಕಾದಶಕಪಾಲಂ ನಿರ್ವಪೇತ್ಪ್ರಜಾಕಾಮಃ'** ಮೊದಲಾಗಿ ವಿಹಿತವಾಗಿರುವ ಇಷ್ಟಿಗಳು ವಿಕೃತಿಗಳು.

**'ವಸಂತೇ ವಸಂತೇ ಜ್ಯೋತಿಷಾ ಯಜೇತ'** ಎಂದು ವಿಹಿತವಾಗಿರುವ ಅಗ್ನಿಷ್ಟೋಮ ಸೋಮಯಾಗವು ವಿಶ್ವಜಿದಾದಿ ಏಕಾಹಗಳಿಗೂ, ಸಂವತ್ಸರ ಸತ್ರಾದಿಗಳಿಗೂ ಪ್ರಕೃತಿ. ವಿಶ್ವಜಿದಾದಿಗಳು ವಿಕೃತಿಗಳು. ಅಗ್ನೀಷೋಮೀಯ ಪಶುಯಾಗವು ಸವನೀಯಾದಿಪಶುಯಾಗಗಳಿಗೆ ಪ್ರಕೃತಿಯಾಗಿದೆ. ಅದು ಇಷ್ಟಿಯ ಅಂಗಗಳಾದ ಪ್ರಯಾಜಾದಿಗಳನ್ನಪೇಕ್ಷಿಸುವುದರಿಂದ ವಿಕೃತಿಯೂ ಆಗಿದೆ. ಗೃಹಮೇಧಿಯೇಷ್ಟಿ, ಉಪಸತ್ತು ಮೊದಲಾದವುಗಳು ಬೇರೆ ಯಾವುದಕ್ಕೂ ಪ್ರಕೃತಿಗಳಲ್ಲ; ಬೇರೆ ಯಾವುದರ ವಿಕೃತಿಯೂ ಅಲ್ಲ. ಇವುಗಳನ್ನು **'ಅಪೂರ್ವಕರ್ಮಗಳು'** ಎಂದು ಹೇಳುತ್ತಾರೆ.

ಹೀಗೆ ಕರ್ಮಗಳು 1) **ಪ್ರಕೃತಿ** 2) **ವಿಕೃತಿ** 3) **ಉಭಯಾತ್ಮಕ** 4) **ಅನುಭಯಾತ್ಮಕ**ಗಳೆಂದು ನಾಲ್ಕು ಬಗೆಯಾಗಿವೆ.

**ಪ್ರಥಮಕಾಂಡದೊಡನೆ ಸಂಗತಿ**

ಈ ಸಂಹಿತೆಯ ಪ್ರಥಮಕಾಂಡದಲ್ಲಿ ಮೊದಲಿನ ನಾಲ್ಕು ಪ್ರಪಾಠಕಗಳಲ್ಲಿ ಮೂಲಪ್ರಕೃತಿಗಳಾದ ದರ್ಶ–ಪೂರ್ಣಮಾಸೇಷ್ಟಿಗಳು, ಸೋಮಯಾಗಗಳು ಹೇಳಲ್ಪಟ್ಟಿವೆ. ಸೋಮಯಾಗದ ಅಂಗವಾದ ಮತ್ತು ಪ್ರಕೃತಿ–ವಿಕೃತ್ಯುಭಯಾತ್ಮಕವಾದ ಅಗ್ನೀಷೋಮೀಯಪಶುಯಾಗವೂ ಹೇಳಲ್ಪಟ್ಟಿದೆ. ಹೀಗೆ ಪ್ರಧಾನವಾಗಿ ಪ್ರಕೃತಿಯಾಗಗಳನ್ನು ಹೇಳಿ, ವಿಕೃತಿಜ್ಞಾನಕ್ಕಾಗಿ ವಾಜಪೇಯಾದಿ ವಿಕೃತಿಯಾಗಗಳನ್ನೂ, ಪುನರಾಧೇಯಾದಿಗಳನ್ನೂ ಹೇಳಲಾಗಿದೆ.

ಈ ಎರಡನೆಯ ಕಾಂಡದಲ್ಲಿ ವಿಕೃತಿಗಳಾದ ಕಾಮ್ಯಪಶುಬಂಧಗಳೂ, ಕಾಮ್ಯೇಷ್ಟಿಗಳೂ ಪ್ರಧಾನವಾಗಿ ಹೇಳಲ್ಪಟ್ಟಿವೆ. ಐದು ಮತ್ತು ಆರನೆಯ ಪ್ರಪಾಠಕಗಳಲ್ಲಿ

ದರ್ಶ–ಪೂರ್ಣಮಾಸೇಷ್ಟಿಯ ಬ್ರಾಹ್ಮಣವು ಹೇಳಲ್ಪಟ್ಟಿದ್ದರೂ **'ವಿಕೃತಿಪ್ರಧಾನಕಾಂಡ'** ವೆಂದು ಹೇಳಬಹುದು.

ಪ್ರಥಮಕಾಂಡದ ಕ್ರಮವನ್ನನುಸರಿಸಿ ವಿಕೃತಿಗಳಲ್ಲಿಯೂ ಕಾಮ್ಯೇಷ್ಟಿಗಳನ್ನೇ ಮೊದಲು ಹೇಳಬೇಕಾಗಿದ್ದರೂ, ಕಾಮ್ಯಪಶುಬಂಧದ ವಿಷಯದಲ್ಲಿ ಹೇಳಬೇಕಾದ ವಿಷಯಗಳು ಅಲ್ಪವಾಗಿರುವುದರಿಂದ **'ಸೂಚೀಕಟಾಹನ್ಯಾಯ'***ವನ್ನು ಅನುಸರಿಸಿ ಮೊದಲು ಅವುಗಳನ್ನು ಹೇಳಲಾಗಿದೆ. ಮಧ್ಯದಲ್ಲಿ ನೈಮಿತ್ತಿಕಯಾಗಗಳು ಇದ್ದರೂ, ಕಾಮ್ಯ ಯಾಗಗಳೇ ಅಧಿಕವಾಗಿವೆ. ಆದುದರಿಂದ ಮೊದಲನೆಯ ಪ್ರಶ್ನೆಯನ್ನು **'ಕಾಮ್ಯ ಪಶುಯಾಗಪ್ರಶ್ನೆ'** ಎಂದು ಹೇಳುತ್ತಾರೆ.

ಈ ಯಾಗಗಳಿಗೆ ತೈತ್ತಿರೀಯಬ್ರಾಹ್ಮಣದ ಎರಡನೆಯ ಅಷ್ಟಕದ ಎಂಟನೆಯ ಪ್ರಶ್ನೆಯಲ್ಲಿರುವ 'ಪೀವೋಽನ್ನಾಗ್ಂ ರಯಿವೃಧಃ' ಮೊದಲಾದ ಆರಾರು ಮಂತ್ರಗಳು ವಪಾಯಾಗದ ಮತ್ತು ಪಶು–ಪುರೋಡಾಶಯಾಗದ ಯಾಜ್ಯಾ–ಪುರೋನುವಾಕ್ಯ ಗಳಾಗಿವೆ.

ಇಲ್ಲಿ ಪಠಿತವಾಗಿರುವ ಯಾಗಗಳು ಸ್ವತಂತ್ರಗಳು. ಆದುದರಿಂದ ಇವುಗಳಲ್ಲಿ ನಿಯತವಾದ ಪಾಠಕ್ರಮವಿಲ್ಲ.

ಯಾಗಗಳು **ನಿತ್ಯ – ನೈಮಿತ್ತಿಕ – ಕಾಮ್ಯ**ಗಳೆಂಬುದಾಗಿ ಇರುವ ವಿಭಾಗವು ಒಂದು ರೀತಿಯದು.

**ಪ್ರಕೃತಿ – ವಿಕೃತಿ – ಉಭಯಾತ್ಮಕ – ಅನುಭಯಾತ್ಮಕ**ವೆಂಬುದಾಗಿ ಇರುವ ವಿಭಾಗವು ಇನ್ನೊಂದು ರೀತಿಯದು.

**[ಮೇಲಿನ ಹಲವು ವಿಚಾರಗಳು ಹಿಂದಿನ ಸಂಪುಟಗಳಲ್ಲಿ ಅಡಕವಾಗಿವೆ. ಇಲ್ಲಿಗೆ ಸಂಬಂಧಿಸಿದ ಕೆಲವು ವಿಚಾರಗಳನ್ನು ಮತ್ತೆ ಸಂಗ್ರಹಿಸಿ ನೀಡಲಾಗಿದೆ.**

**ಮೊದಲನೆಯ ಕಾಂಡದ ವಿಷಯಗಳನ್ನು ಚೆನ್ನಾಗಿ ತಿಳಿದರೆ ಉಳಿದ ಕಾಂಡಗಳ ವಿಷಯಗಳನ್ನು ತಿಳಿಯಲು ಅನುಕೂಲವಾಗುತ್ತದೆ.]**

ಹೀಗೆ ಭಾಷ್ಯಕಾರರು ದ್ವಿತೀಯಕಾಂಡದ ಭಾಷ್ಯಕ್ಕೆ ಉಪೋದ್ಘಾತವನ್ನು ಬರೆದಿರುತ್ತಾರೆ.

* * *

---

* ಸೂಜಿಯನ್ನೂ, ಹಂಡೆಯೊಂದನ್ನೂ ಒಮ್ಮೆಲೇ ತಯಾರಿಸುವ ಸಂದರ್ಭದಲ್ಲಿ ಚಿಕ್ಕದಾದುದ ರಿಂದ ಸೂಜಿಯನ್ನೇ ಮೊದಲು ತಯಾರಿಸುತ್ತಾರಷ್ಟೆ.

## ವಾಯುರ್ವೈ ಕ್ಷೇಪಿಷ್ಠಾ ದೇವತಾ
## ವಾಯುಮೇವ ಸ್ವೇನ ಭಾಗಧೇಯೇನೋಪಧಾವತಿ

---

ವಾಯುಃ । ವೈ । ಕ್ಷೇಪಿಷ್ಠಾ । ದೇವತಾ । ವಾಯುಮ್ । ಏವ । ಸ್ವೇನ । ಭಾಗಧೇಯೇ–
ನೇತಿ ಭಾಗ – ಧೇಯೇನ । ಉಪೇತಿ । ಧಾವತಿ ।

---

ಕಾಮ್ಯಪಶುಯಾಗಗಳಲ್ಲಿ ಮೊದಲು ಐಶ್ವರ್ಯವನ್ನು ಬಯಸುವವನು ಮಾಡುವ ವಾಯವ್ಯಪಶುಯಾಗವು ವಿಹಿತವಾಗಿದೆ. ಅದರ ಅರ್ಥವಾದವೂ ಇದೆ.

**ಈ ಪ್ರಕರಣದಲ್ಲಿ 'ಆಲಭೇತ' ಎಂಬ ಪದದಿಂದ ಕೂಡಿರುವ ವಿಧಿವಾಕ್ಯಗಳು ಇವೆ. ಆಲಂಭನವೆಂದರೆ ಸ್ಪರ್ಶ. ದರ್ಭೆ ಮತ್ತು ಫಣಿಯಾಲದ ಅಥವಾ ಬಸರೀ ಮರದ ಶಾಖೆಗಳಿಂದ ಪಶುವನ್ನು ಸ್ಪರ್ಶಿಸಬೇಕು ಎಂದು ಅರ್ಥವಾಗುತ್ತದೆ. ಆದರೆ ಇಲ್ಲಿ 'ವಾಯವ್ಯ' ಎಂಬ ಶಬ್ದವಿರುವುದರಿಂದ, ಅದರಲ್ಲಿ 'ವಾಯುಃ ದೇವತಾ ಅಸ್ಯ' ಎಂಬ ಅರ್ಥದಲ್ಲಿ ಬಂದಿರುವ ತದ್ಧಿತಪ್ರತ್ಯಯವಿರುವುದರಿಂದ, ಆ ಪ್ರತ್ಯಯವು ದ್ರವ್ಯದೇವತಾ ಸಂಬಂಧವನ್ನು ತಿಳಿಸುತ್ತದೆ. ಆ ಸಂಬಂಧವು ಯಾಗರೂಪವೇ ಆಗಬೇಕು. 'ಆಲಭೇತ' ಎಂಬುದಕ್ಕೆ ಕೇವಲ ಸ್ಪರ್ಶಮಾತ್ರ ಅರ್ಥವಲ್ಲ. ಹೀಗಾಗಿ 'ವಾಯು ದೇವತಾಕವಾದ ಶ್ವೇತಪಶುದ್ರವ್ಯಕವಾದ ಯಾಗವನ್ನು ಮಾಡಬೇಕು' ಎಂದು ವಿಧಿವಾಕ್ಯಕ್ಕೆ ಅರ್ಥವನ್ನು ಮಾಡಬೇಕು.**

ಇದನ್ನು ಹಿಂದೆ ಹೇಳಲಾಗಿದೆ. ಮುಂದೆಯೂ ಹೀಗೆಯೇ ಅರ್ಥವನ್ನು ತಿಳಿಯಬೇಕು. ಈ ವಾಕ್ಯಗಳಲ್ಲಿ ವಿಧಿಯನ್ನು ಬಿಟ್ಟು ಉಳಿದ ಭಾಗವು ಪ್ರರೋಚನಾರ್ಥವಾದ ಅರ್ಥವಾದ.

---

| | |
|---|---|
| ವಾಯುಃ ವೈ ಕ್ಷೇಪಿಷ್ಠಾ ದೇವತಾ | ವಾಯುದೇವನೇ ಅತಿಶೀಘ್ರವಾಗಿ ಹೋಗುವ ದೇವತೆಯಾಗಿದ್ದಾನೆ. [ಆದುದರಿಂದ ಶೀಘ್ರವಾಗಿ ಫಲವನ್ನು ಕೊಡಬಲ್ಲನು.] |
| ವಾಯುಮ್ ಏವ ಸ್ವೇನ ಭಾಗಧೇಯೇನ ಉಪ ಧಾವತಿ | [ಯಜಮಾನನು ಈ ಯಾಗದಿಂದ] ವಾಯುವಿಗೆ ಸೇರಬೇಕಾದ ಭಾಗವನ್ನು ಕೊಟ್ಟು, ಉಪಚರಿಸಿದಂತೆ ಆಗುತ್ತದೆ. |

ಸ ಏವೈನಂ ಭೂತಿಂ ಗಮಯತಿ

ಭವತ್ಯೇವಾತಿಕ್ಷಿಪ್ರಾ ದೇವತೇತ್ಯಾಹುಸ್ಸೈನಮೀಶ್ವರಾ

ಪ್ರದಹ ಇತ್ಯೇತಮೇವ ಸಂತಂ ವಾಯವೇ ನಿಯುತ್ವತ

ಆಲಭೇತ

---

ಸಃ । ಏವ । ಏನಮ್ । ಭೂತಿಮ್ । ಗಮಯತಿ । ಭವತಿ । ಏವ । ಅತಿಕ್ಷಿಪ್ರೇತ್ಯತಿ–ಕ್ಷಿಪ್ರಾ । ದೇವತಾ । ಇತಿ । ಆಹುಃ । ಸಾ । ಏನಮ್ । ಈಶ್ವರಾ । ಪ್ರದಹ ಇತಿ ಪ್ರ–ದಹಃ । ಇತಿ । ಏತಮ್ । ಏವ । ಸಂತಮ್ । ವಾಯವೇ । ನಿಯುತ್ವತ ಇತಿ ನಿ–ಯುತ್ವತೇ । ಏತಿ । ಲಭೇತ ।

---

| | |
|---|---|
| ಸಃ ಏವ ಏನಮ್ ಭೂತಿಮ್ ಗಮಯತಿ | ಆ ವಾಯುವು ಶೀಘ್ರವಾಗಿ ಈ ಯಜಮಾನನಿಗೆ ಐಶ್ವರ್ಯವನ್ನು ಕೊಟ್ಟೇ ಕೊಡುತ್ತಾನೆ. |
| ಭವತಿ ಏವ | ಯಜಮಾನನು ಧನವಂತನಾಗಿಯೇ ಆಗುತ್ತಾನೆ. [ಅರ್ಥವಾದ] |

**ಧನಕಾಮನಿಗೆ ವಿಹಿತವಾದ ಇನ್ನೊಂದು ಯಾಗ ಹಾಗೂ ಅರ್ಥವಾದ**

| | |
|---|---|
| ಅತಿಕ್ಷಿಪ್ರಾ ದೇವತಾ ಇತಿ ಆಹುಃ | [ತಿಳಿದವರು] ವಾಯುವು ಅತಿ ಶೀಘ್ರವಾಗಿ ಹೋಗುವ ದೇವತೆಯೆಂದು ಹೇಳುತ್ತಾರೆ. |
| ಸಾ ಏನಮ್ ಈಶ್ವರಾ ಪ್ರದಹಃ ಇತಿ | ಆ ದೇವತೆಯು [ಅಗ್ನಿಗೆ ಸಹಾಯಕನಾಗಿ] ಯಜಮಾನನನ್ನು ಸುಟ್ಟು ಹಾಕಲು / ನಾಶ ಪಡಿಸಲು ಸಮರ್ಥವಾಗುತ್ತದೆ ಎಂದೂ [ಹೇಳುತ್ತಾರೆ] |
| ಏತಮ್ ಏವ ಸಂತಮ್ ವಾಯವೇ ನಿಯುತ್ವತೇ ಆಲಭೇತ | ಹೀಗೆ ಬಿಳಿಯ ಬಣ್ಣದ ಪಶುವನ್ನೇ ಆ *ನಿಯುತ್ವಂತನಾದ ವಾಯುವಿಗೆ ಪಶುವನ್ನಾಗಿ ಸಮರ್ಪಿಸಬೇಕು. |

---

* **'ನಿಯುತ್'** ಎಂಬ ಹೆಸರುಳ್ಳ ಕುದುರೆಗಳ ರಥದಲ್ಲಿ ಸಂಚರಿಸುವವನು.

ನಿಯುದ್ವಾ ಅಸ್ಯ ಧೃತಿರ್ಧೃತ ಏವ ಭೂತಿಮುಪೈತ್ಯ

ಪ್ರದಾಹಾಯ ಭವತ್ಯೇವ [೧]

---

ನಿಯುದಿತಿ ನಿ–ಯುತ್ । ವೈ । ಅಸ್ಯ । ಧೃತಿಃ । ಧೃತಃ । ಏವ । ಭೂತಿಮ್ । ಉಪೇತಿ । ಏತಿ ।

ಅಪ್ರದಾಹಾಯೇತ್ಯಪ್ರ–ದಾಹಾಯ । ಭವತಿ । ಏವ ।

---

| | |
|---|---|
| ನಿಯುತ್ ವೈ ಅಸ್ಯ ಧೃತಿಃ | ಈ ವಾಯುವಿಗೆ ನಿಯುತ್ತುಗಳೇ ವಾಹನಗಳಾಗಿವೆ. |
| ಧೃತಃ ಏವ ಭೂತಿಮ್ ಉಪೈತಿ | ಯಜಮಾನನು ನಷ್ಟವಿಲ್ಲದವನಾಗಿಯೇ [ಸಂತುಷ್ಟನಾದ ವಾಯುವಿನ ಅನುಗ್ರಹದಿಂದ ] ಐಶ್ವರ್ಯವನ್ನು ಪಡೆದೇ ಪಡೆಯುತ್ತಾನೆ. |
| ಅಪ್ರದಾಹಾಯ ಭವತಿ ಏವ | ನಷ್ಟವಿಲ್ಲದಿರುವಿಕೆಯನ್ನು ಪಡೆದು ಧನವಂತನಾಗುತ್ತಾನೆ. |

---

**ತಾತ್ಪರ್ಯ :** ಧನವನ್ನು ಬಯಸುವವನು ವಾಯುದೇವತಾಕವಾದ, ಶ್ವೇತಪಶುದ್ರವ್ಯಕವಾದ ಪಶುಯಾಗವನ್ನು ಮಾಡಬೇಕು. ಶ್ವೇತಪಶುವು ವಾಯುವಿಗೆ ಪ್ರಿಯವಾದುದು.

ಈ ಯಾಗದಿಂದ ವಾಯುವಿಗೆ ತನ್ನದಾದ ಆ ದ್ರವ್ಯವನ್ನು ಕೊಟ್ಟು ಉಪಚರಿಸಿದಂತೆ ಆಗುತ್ತದೆ. ಸುಪ್ರೀತನಾದ, ಶೀಘ್ರಗಾಮಿಯಾದ ವಾಯುವು ಬೇಗನೆ ಐಶ್ವರ್ಯವನ್ನು ಯಜಮಾನನಿಗೆ ಕೊಟ್ಟೇ ಕೊಡುತ್ತಾನೆ. ಯಜಮಾನನು ಧನವಂತನಾಗಿಯೇ ಆಗುತ್ತಾನೆ.

ಅತಿಕ್ಷಿಪ್ರಗಾಮಿಯಾದ, ಅಗ್ನಿಸಖನಾದ ವಾಯುವು ಅಗ್ನಿಗೆ ಸಹಾಯ ಮಾಡಿ ಯಜಮಾನನನ್ನೂ, ಅವನ ಗೃಹಾದಿಗಳನ್ನೂ ಸುಟ್ಟು ನಾಶಪಡಿಸಲು ಸಮರ್ಥನೆಂದು ಬಲ್ಲವರು ಹೇಳುತ್ತಾರೆ. ಹೀಗಾಗಿ 'ನಿಯುತ್' ಎಂಬ ಕುದುರೆಗಳುಳ್ಳ ನಿಯುತ್ವಂತನಾದ ವಾಯುವಿಗೆ ಬಿಳಿಯ ಬಣ್ಣದ ಪಶುವನ್ನು ಯಾಗ ಮಾಡಬೇಕು. ಕುದುರೆಗಳೇ ವಾಯುವಿನ ವಾಹನಗಳು. ತನ್ನ ಭಾಗವನ್ನು ಹೊಂದಿ ಸಂತುಷ್ಟನಾದ ವಾಯುವು

ವಾಯವೇ ನಿಯುತ್ವತ ಆಲಭೇತ ಗ್ರಾಮಕಾಮೋ

ವಾಯುರ್ವಾ ಇಮಾಃ ಪ್ರಜಾ ನಸ್ಯೋತಾ ನೇನೀಯತೇ

ವಾಯುಮೇವ ನಿಯುತ್ವಂತಗ್ಂ ಸ್ವೇನ

ಭಾಗಧೇಯೇನೋಪಧಾವತಿ

---

ವಾಯವೇ । ನಿಯುತ್ವತ ಇತಿ ನಿ–ಯುತ್ವತೇ । ಏತಿ । ಲಭೇತ । ಗ್ರಾಮಕಾಮ ಇತಿ ಗ್ರಾಮ–ಕಾಮಃ । ವಾಯುಃ । ವೈ । ಇಮಾಃ । ಪ್ರಜಾ ಇತಿ ಪ್ರ–ಜಾಃ । ನಸ್ಯೋತಾ ಇತಿ ನಸಿ–ಓತಾಃ । ನೇನೀಯತೇ । ವಾಯುಮ್ । ಏವ । ನಿಯುತ್ವಂತಮಿತಿ ನಿ–ಯುತ್ವಂತಮ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

**ಇನ್ನೊಂದು ಫಲಕ್ಕಾಗಿಯೇ ಹಿಂದಿನ ಯಾಗದ ವಿಧಿ**

| | |
|---|---|
| ವಾಯವೇ ನಿಯುತ್ವತೇ ಆಲಭೇತ ಗ್ರಾಮಕಾಮಃ | ಗ್ರಾಮಸ್ವಾಮಿಯಾಗಬೇಕೆಂದು ಇಚ್ಛಿಸುವವನು ನಿಯುತ್ವಂತನಾದ ವಾಯುವನ್ನು ಉದ್ದೇಶಿಸಿ [ಶ್ವೇತಪಶುಯಾಗವನ್ನು] ಮಾಡಬೇಕು. |
| ವಾಯುಃ ವೈ ಇಮಾಃ ಪ್ರಜಾಃ ನಸ್ಯೋತಾಃ ನೇನೀಯತೇ | ವಾಯುವೇ ಈ ಪ್ರಜೆಗಳನ್ನು–ಮೂಗುದಾರ ಹಾಕಿ ಪಶುಗಳನ್ನು ಅಧೀನಪಡಿಸಿಕೊಳ್ಳುವಂತೆ–ಅಧೀನರಾಗಿ ನಡೆದುಕೊಳ್ಳುವಂತೆ ಮಾಡುತ್ತಾನೆ. |
| ವಾಯುಮ್ ಏವ ನಿಯುತ್ವಂತಮ್ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ನಿಯುತ್ವಂತನಾದ ವಾಯುವಿಗೆ ಅವನ ಭಾಗವನ್ನು ಕೊಟ್ಟು ಉಪಚರಿಸಿದವನಾಗುತ್ತಾನೆ. |

---

ನಷ್ಟವಿಲ್ಲದ ಧನವನ್ನೂ ಕೊಡುತ್ತಾನೆ. ದಾಹಾದಿಗಳಿಂದ ನಾಶವಾಗದಂತೆಯೂ ಅನುಗ್ರಹಿಸುತ್ತಾನೆ..

ಸ ಏವಾಸ್ಮೈ ಪ್ರಜಾ ನಸ್ಯೋತಾ ನಿಯಚ್ಛತಿ ಗ್ರಾಮ್ಯೇವ

ಭವತಿ ನಿಯುತ್ವತೇ ಭವತಿ ಧ್ರುವಾ ಏವಾಸ್ಮಾ

ಅನಪಗಾಃ ಕರೋತಿ ವಾಯವೇ ನಿಯುತ್ವತ ಆಲಭೇತ

ಪ್ರಜಾಕಾಮಃ

---

ಸಃ । ಏವ । ಅಸ್ಮೈ । ಪ್ರಜಾ ಇತಿ ಪ್ರ–ಜಾಃ । ನಸ್ಯೋತಾ ಇತಿ ನಸಿ–ಓತಾಃ । ನೀತಿ । ಯಚ್ಛತಿ । ಗ್ರಾಮೀ । ಏವ । ಭವತಿ । ನಿಯುತ್ವತ ಇತಿ ನಿ–ಯುತ್ವತೇ । ಭವತಿ । ಧ್ರುವಾಃ । ಏವ । ಅಸ್ಮೈ । ಅನಪಗಾ ಇತ್ಯನಪ–ಗಾಃ । ಕರೋತಿ । ವಾಯವೇ । ನಿಯುತ್ವತ ಇತಿ ನಿ–ಯುತ್ವತೇ । ಏತಿ । ಲಭೇತ । ಪ್ರಜಾಕಾಮ ಇತಿ ಪ್ರಜಾ–ಕಾಮಃ ।

---

| | |
|---|---|
| ಸಃ ಏವ ಅಸ್ಮೈ ಪ್ರಜಾಃ ನಸ್ಯೋತಾಃ ನಿಯಚ್ಛತಿ | ಆ ವಾಯುವೇ ಯಜಮಾನನಿಗೆ ಗ್ರಾಮದ ಪ್ರಜೆಗಳು–ಮೂಗುದಾರ ಹಾಕಿದ ಪಶುಗಳಂತೆ–ಅಧೀನರಾಗಿ ನಡೆದುಕೊಳ್ಳುವಂತೆ ಮಾಡುತ್ತಾನೆ. |
| ಗ್ರಾಮೀ ಏವ ಭವತಿ | ಯಜಮಾನನು ಗ್ರಾಮಸ್ವಾಮಿಯೇ ಆಗುತ್ತಾನೆ. |
| ನಿಯುತ್ವತೇ ಭವತಿ [ಇತಿ ಯತ್] | ನಿಯುತ್ವಂತನಿಗೆ ಯಾಗ ಮಾಡುವುದು ಎಂಬುದು ಯಾವುದುಂಟೋ [ಅದರಿಂದ] |
| ಧ್ರುವಾಃ ಏವ ಅಸ್ಮೈ ಅನಪಗಾಃ ಕರೋತಿ | [ಸುಪ್ರೀತನಾದ ವಾಯುವು] ಪ್ರಜೆಗಳು ಯಾವಾಗಲೂ ಈ ಯಜಮಾನನಲ್ಲಿ ಪ್ರೀತಿಯುಳ್ಳವರಾಗಿರುವಂತೆ ಮಾಡುತ್ತಾನೆ. |

**ಇನ್ನೊಂದು ಫಲಕ್ಕಾಗಿ ಹಿಂದಿನ ಯಾಗದ ವಿಧಿ**

| | |
|---|---|
| ವಾಯವೇ ನಿಯುತ್ವತೇ ಆಲಭೇತ ಪ್ರಜಾಕಾಮಃ | ಪ್ರಜಾಕಾಮನಾದವನು ನಿಯುತ್ವಂತನಾದ ವಾಯುದೇವತೆಗಾಗಿ ಶ್ವೇತಪಶುಯಾಗವನ್ನು ಮಾಡಬೇಕು. |

---

ಗ್ರಾಮದ ಒಡೆಯನಾಗಬೇಕೆಂದು ಬಯಸುವವನು ನಿಯುತ್ವಂತನಾದ ವಾಯುದೇವತೆಗೆ ಶ್ವೇತಪಶುಯಾಗವನ್ನು ಮಾಡಬೇಕು.

ಪ್ರಾಣೋ ವೈ ವಾಯುರಪಾನೋ ನಿಯುತ್ಪ್ರಾಣಾಪಾನೌ

ಖಲು ವಾ ಏತಸ್ಯ ಪ್ರಜಾಯಾ [..ಪ್ರಜಾಯಾಃ (೨)

ಅಪಕ್ರಾಮತೋ] ಅಪಕ್ರಾಮತೋ ಯೋಽಲಂ

ಪ್ರಜಾಯೈ ಸನ್ಪ್ರಜಾಂ ನ ವಿಂದತೇ

---

ಪ್ರಾಣ ಇತಿ ಪ್ರ–ಅನಃ । ವೈ । ವಾಯುಃ । ಅಪಾನ ಇತ್ಯಪ–ಅನಃ । ನಿಯುದಿತಿ ನಿ–ಯುತ್ । ಪ್ರಾಣಾಪಾನಾವಿತಿ ಪ್ರಾಣ–ಅಪಾನೌ । ಖಲು । ವೈ । ಏತಸ್ಯ । ಪ್ರಜಾಯಾ ಇತಿ ಪ್ರ–ಜಾಯಾಃ (೨)। ಅಪೇತಿ । ಕ್ರಾಮತಃ । ಯಃ । ಅಲವ್ । ಪ್ರಜಾಯಾ ಇತಿ ಪ್ರ–ಜಾಯೈ । ಸನ್ । ಪ್ರಜಾಮಿತಿ ಪ್ರ–ಜಾಮ್ । ನ । ವಿಂದತೇ ।

---

| | |
|---|---|
| ಪ್ರಾಣಃ ವೈ ವಾಯುಃ | ಮುಖದಿಂದ ಹೊರಕ್ಕೆ ಸಂಚರಿಸುವ ವಾಯುವೇ ಪ್ರಾಣವು. |
| ಅಪಾನಃ ನಿಯುತ್ | [ಉದರಭಾಗದಲ್ಲಿ ಒಳಗೆ ಸಂಚರಿಸುವ] ಅಪಾನಸಂಜ್ಞಕವಾದ ವಾಯು ನಿಯುತ್ತು. |
| ಯಃ ಪ್ರಜಾಯೈ ಅಲವ್ ಸನ್ ಪ್ರಜಾಮ್ ನ ವಿಂದತೇ | ಯಾವನು ಪ್ರಜೆಯನ್ನು ಪಡೆಯಲು ಸಮರ್ಥನಾಗಿದ್ದರೂ ಪ್ರಜೆಯನ್ನು ಹೊಂದುವುದಿಲ್ಲವೋ |

---

ಪಶುಗಳ ಒಡೆಯನು ಮೂಗುದಾರವನ್ನು ಹಾಕಿ ಪಶುಗಳನ್ನು ಹತೋಟಿಯಲ್ಲಿ ಇಟ್ಟು ಕೊಳ್ಳುವಂತೆ ವಾಯುವು ತನ್ನ ಭಾಗವನ್ನು ಹೊಂದಿ ಸುಪ್ರೀತನಾಗಿ ಗ್ರಾಮದ ಪ್ರಜೆಗಳನ್ನು ಯಜಮಾನನ ಸ್ವಾಧೀನದಲ್ಲಿರುವಂತೆ ಮಾಡುತ್ತಾನೆ. ಯಜಮಾನನು ಗ್ರಾಮದ ಅಧಿಪತಿಯಾಗುತ್ತಾನೆ. ನಿಯುತ್ವಂತನಾದ ವಾಯುವಿಗೆ ಶ್ವೇತಪಶುಯಾಗವನ್ನು ಮಾಡುವುದರಿಂದ ಪ್ರಜೆಗಳು ಯಾವಾಗಲೂ ಯಜಮಾನನಲ್ಲಿ ಪ್ರೀತಿಯುಳ್ಳವರಾಗಿ ನಡೆದುಕೊಳ್ಳುವಂತೆ ಆಗುತ್ತದೆ. ಅವರು ಯಜಮಾನನಿಂದ ಯಾವಾಗಲೂ ದೂರವಾಗುವುದಿಲ್ಲ.

ವಾಯುಮೇವ ನಿಯುತ್ವಂತಗ್‌ಂ ಸ್ವೇನ ಭಾಗಧೇಯೇನೋಪ

ಧಾವತಿ ಸ ಏವಾಸ್ಮೈ ಪ್ರಾಣಾಪಾನಾಭ್ಯಾಂ

ಪ್ರಜಾಂ ಪ್ರಜನಯತಿ ವಿಂದತೇ ಪ್ರಜಾಂ

---

ವಾಯುಮ್ । ಏವ । ನಿಯುತ್ವಂತಮಿತಿ ನಿ–ಯುತ್ವಂತಮ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮೈ । ಪ್ರಾಣಾಪಾನಾಭ್ಯಾಮಿತಿ ಪ್ರಾಣ–ಅಪಾನಾಭ್ಯಾಮ್ । ಪ್ರಜಾಮಿತಿ ಪ್ರ–ಜಾಮ್ । ಪ್ರೇತಿ । ಜನಯತಿ । ವಿಂದತೇ । ಪ್ರಜಾಮಿತಿ ಪ್ರ–ಜಾಮ್ ।

---

| | |
|---|---|
| ಪ್ರಾಣಾಪಾನೌ ಖಲು ವೈ ಏತಸ್ಯ ಪ್ರಜಾಯಾಃ ಅಪಕ್ರಾಮತಃ | ಆತನ ಪ್ರಜೆಯಿಂದ ಪ್ರಾಣಾಪಾನಗಳು ದೂರದೂರವಾಗಿರುತ್ತವೆ. |
| ವಾಯುಮ್ ಏವ ನಿಯುತ್ವಂತಮ್ ಸ್ವೇನ ಭಾಗಧೇಯೇನ ಉಪಧಾವತಿ | [ಈ ಯಾಗದಿಂದ] ಯಜಮಾನನು ವಾಯುವಿಗೆ ಆತನ ಭಾಗವನ್ನು ಕೊಟ್ಟು ಸೇವಿಸಿದವನಾಗುತ್ತಾನೆ. |
| ಸಃ ಏವ ಅಸ್ಮೈ ಪ್ರಾಣಾಪಾನಾಭ್ಯಾಮ್ ಪ್ರಜಾಮ್ ಪ್ರಜನಯತಿ | [ಇದರಿಂದ ಸುಪ್ರೀತನಾದ] ವಾಯುವು ಪ್ರಾಣಾಪಾನಗಳು ಕೂಡಿಕೊಳ್ಳುವಂತೆ ಮಾಡಿ ಪ್ರಜೆಯು ಹುಟ್ಟುವಂತೆ ಮಾಡುತ್ತಾನೆ. |
| ವಿಂದತೇ ಪ್ರಜಾಮ್ | ಇದರಿಂದ ಯಜಮಾನನು ಸಂತತಿಯನ್ನು ಪಡೆಯುತ್ತಾನೆ. |

---

ಮಕ್ಕಳನ್ನು ಪಡೆಯಬೇಕೆನ್ನುವವನು ನಿಯುತ್ವಂತನಾದ ವಾಯುವಿಗಾಗಿ ಶ್ವೇತ ಪಶುಯಾಗವನ್ನು ಮಾಡಬೇಕು.

ಮುಖದಿಂದ ಹೊರಗೆ ಬಂದು ಹೋಗುವ ವಾಯುವೇ ಪ್ರಾಣವು. ಒಳಗಡೆ

ವಾಯವೇ ನಿಯುತ್ವತ ಆಲಭೇತ ಜ್ಯೋಗಾಮಯಾವೀ

ಪ್ರಾಣೋ ವೈ ವಾಯುರಪಾನೋ ನಿಯುತ್ಪ್ರಾಣಾಪಾನೌ

ಖಲು ವಾ ಏತಸ್ಮಾದಪಕ್ರಾಮತೋ

---

ವಾಯವೇ । ನಿಯುತ್ವತ ಇತಿ ನಿ-ಯುತ್ವತೇ । ಏತಿ । ಲಭೇತ । ಜ್ಯೋಗಾಮಯಾವೀತಿ

ಜ್ಯೋಕ್-ಆಮಯಾವೀ । ಪ್ರಾಣ ಇತಿ ಪ್ರ-ಅನಃ । ವೈ । ವಾಯುಃ । ಅಪಾನ ಇತ್ಯಪ-

ಅನಃ । ನಿಯುದಿತಿ ನಿ-ಯುತ್ । ಪ್ರಾಣಾಪಾನಾವಿತಿ ಪ್ರಾಣ-ಅಪಾನೌ । ಖಲು । ವೈ ।

ಏತಸ್ಮಾತ್ । ಅಪೇತಿ । ಕ್ರಾಮತಃ ।

---

**ಇನ್ನೊಂದು ಫಲಕ್ಕಾಗಿ ಹಿಂದಿನ ಯಾಗದ ವಿಧಿ**

| | |
|---|---|
| ವಾಯವೇ ನಿಯುತ್ವತೇ ಆಲಭೇತ ಜ್ಯೋಗಾಮಯಾವೀ | ದೀರ್ಘರೋಗಿಯಾದವನು ನಿಯುದ್ಗುಣ - ಯುಕ್ತನಾದ ವಾಯುದೇವತೆಗೆ [ಶ್ವೇತ ಪಶುಯಾಗವನ್ನು] ಮಾಡಬೇಕು. |
| ಪ್ರಾಣಃ ವೈ ವಾಯುಃ | ಮುಖದಿಂದ ಹೊರಗೆ ಸಂಚರಿಸುವ ವಾಯು ಪ್ರಾಣವು. |
| ಅಪಾನಃ ನಿಯುತ್ | ಅಪಾನವು [ದೇಹದ ಒಳಗೆ ಉದರದಿಂದ ಕೆಳಗೆ ಸಂಚರಿಸುವ ವಾಯುವು] ನಿಯುತ್ತು. |
| ಏತಸ್ಮಾತ್ ವೈ ಪ್ರಾಣಾಪಾನೌ ಅಪಕ್ರಾಮತಃ ಖಲು | ದೀರ್ಘರೋಗಿಯನ್ನು ಪ್ರಾಣಾಪಾನಗಳು ಬಿಟ್ಟು ದೂರಾಗುತ್ತವೆ. [ಆತನು ಮರಣವನ್ನು ಹೊಂದುವಂತೆ ಆಗುತ್ತದೆ.] |

---

ಕೆಳಭಾಗದಲ್ಲಿ ಸಂಚರಿಸುವ ವಾಯುವೇ ಅಪಾನವು. ಇದು **'ನಿಯುತ್'** ಎಂದೂ ಹೇಳಲ್ಪಡುತ್ತದೆ. ಇಂತಹ ವಾಯುವಿನ ಅನುಗ್ರಹದಿಂದ ಪುರುಷನ ರೇತಸ್ಸು

ಯಸ್ಯ ಜ್ಯೋಗಾಮಯತಿ ವಾಯುಮೇವ

ನಿಯುತ್ವಂತಗ್ಗ್ಂ ಸ್ವೇನ ಭಾಗಧೇಯೇನೋಪ

[..ಭಾಗಧೇಯೇನೋಪ (೩) ಧಾವತಿ] ಧಾವತಿ ಸ

ಏವಾಸ್ಮಿನ್ಪ್ರಾಣಾಪಾನೌ ದಧಾತ್ಯುತ ಯದೀತಾಸುರ್ಭವತಿ

ಜೀವತ್ಯೇವ

---

ಯಸ್ಯ । ಜ್ಯೋಕ್ । ಆಮಯತಿ । ವಾಯುಮ್ । ಏವ । ನಿಯುತ್ವಂತಮಿತಿ ನಿ–ಯುತ್ವಂತಮ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । [೩] ಧಾವತಿ । ಸಃ । ಏವ । ಅಸ್ಮಿನ್ । ಪ್ರಾಣಾಪಾನಾವಿತಿ ಪ್ರಾಣ–ಅಪಾನೌ । ದಧಾತಿ । ಉತ । ಯದಿ । ಇತಾಸುರಿತೀತ–ಅಸುಃ । ಭವತಿ । ಜೀವತಿ । ಏವ ।

---

| | |
|---|---|
| ಯಸ್ಯ ಜ್ಯೋಕ್ ಆಮಯತಿ | ಯಾವನು ದೀರ್ಘರೋಗಿಯೋ [ಅವನು ಯಾಗವನ್ನು ಮಾಡುವುದರಿಂದ ] |
| ವಾಯುಮ್ ಏವ ನಿಯುತ್ವಂತಮ್ ಸ್ವೇನ ಭಾಗಧೇಯೇನ ಉಪಧಾವತಿ | ಪ್ರಾಣಾಪಾನರೂಪನಾದ ವಾಯುವನ್ನು ತನ್ನ ಭಾಗದಿಂದ ಉಪಚರಿಸಿದಂತೆ ಆಗುತ್ತದೆ. |
| ಸಃ ಏವ ಅಸ್ಮಿನ್ ಪ್ರಾಣಾಪಾನೌ ದಧಾತಿ | ಆ ವಾಯುವು ಸುಪ್ರೀತನಾಗಿ ಪ್ರಾಣಾಪಾನ ಗಳು ಸ್ಥಿರವಾಗಿ ದೇಹದಲ್ಲಿರುವಂತೆ ಮಾಡು ತ್ತಾನೆ. |
| ಉತ ಯದಿ ಇತಾಸುಃ ಭವತಿ ಜೀವತಿ ಏವ | ಒಂದು ವೇಳೆ ಯಜಮಾನನು ಪ್ರಾಣ ಹೋಗುವ ಸ್ಥಿತಿಯಲ್ಲಿದ್ದರೂ [ಸ್ಥಿರ ಪ್ರಾಣಾಪಾನಗಳಿಂದ ] ಬದುಕಿಯೇ ಬದುಕುತ್ತಾನೆ. |

ಪ್ರಜಾಪತಿರ್ವಾ ಇದಮೇಕ ಆಸೀತ್ಸೋಽಕಾಮಯತ

ಪ್ರಜಾಃ ಪಶೂನ್‌ಥ್ಸೃಜೇಯೇತಿ ಸ ಆತ್ಮನೋ

---

**ಪ್ರಜಾಪತಿರಿತಿ ಪ್ರಜಾ–ಪತಿಃ** । ವೈ । ಇದಮ್ । ಏಕಃ । ಆಸೀತ್ । ಸಃ । ಅಕಾಮಯತ ।

ಪ್ರಜಾ ಇತಿ ಪ್ರ–ಜಾಃ । ಪಶೂನ್ । ಸೃಜೇಯ । ಇತಿ । ಸಃ । ಆತ್ಮನಃ ।

---

## ಪ್ರಜಾಪತಿದೇವತಾಕವಾದ ಯಾಗದ ಉಪಾಖ್ಯಾನ

| | |
|---|---|
| **ಇದಮ್ ಪ್ರಜಾಪತಿಃ ವೈ ಏಕಃ ಆಸೀತ್** | ಈ ಕಾಣುತ್ತಿರುವ ಸ್ಥಾವರಜಂಗಮರೂಪವಾದ ಜಗತ್ತು ಎಲ್ಲವೂ ಮೊದಲು ಒಬ್ಬ ಪ್ರಜಾಪತಿಯೇ ಆಗಿದ್ದಿತು. |
| **ಸಃ ಪ್ರಜಾಃ ಪಶೂನ್ ಸೃಜೇಯ ಇತಿ ಅಕಾಮಯತ** | ಆ ಪ್ರಜಾಪತಿಯು ಪ್ರಜೆಗಳನ್ನೂ, ಪಶುಗಳನ್ನೂ ಸೃಷ್ಟಿಸುವೆನೆಂದು ಬಯಸಿದನು. |
| **ಸಃ ಆತ್ಮನಃ** | ಅವನು ತನ್ನ |

---

ಗರ್ಭಕೋಶದಲ್ಲಿ ಪ್ರಜಾರೂಪವಾಗಿ ಪರಿಣಮಿಸುತ್ತದೆ. ಮಕ್ಕಳನ್ನು ಪಡೆಯಲು ಸಮರ್ಥನಾಗಿದ್ದರೂ ಯಾವನು ಪ್ರಜಾಹೀನನಾಗಿರುತ್ತಾನೆಯೋ ಆ ಯಜಮಾನನ ಪ್ರಜೆಯಿಂದ ಪ್ರಾಣಾಪಾನಗಳು ಬೇರೆಬೇರೆಯಾಗಿರುತ್ತವೆ. ಇದರಿಂದ ಪ್ರಜೋತ್ಪತ್ತಿ ಯಾಗುವುದಿಲ್ಲ. ನಿಯುತ್ವಂತನಾದ ವಾಯುವಿಗೆ ಪಶುಯಾಗವನ್ನು ಮಾಡುವುದರಿಂದ ವಾಯುವು ತನ್ನ ಭಾಗವನ್ನು ಪಡೆದು ಸುಪ್ರೀತನಾಗುವಂತೆ ಯಜಮಾನನು ಮಾಡುತ್ತಾನೆ. ವಾಯುವು ಸುಪ್ರೀತನಾಗಿ ಪ್ರಾಣಾಪಾನಗಳು ಹೊಂದಿಕೊಳ್ಳುವಂತೆ ಮಾಡಿ ಸಂತಾನವನ್ನು ಕೊಡುತ್ತಾನೆ.

**'ನ ಹ ವಾ ಋತೇ ಪ್ರಾಣಾದ್ರೇತಃ ಸಿಚ್ಯತೇ'** [ಐತರೇಯ ಆರಣ್ಯಕ 3–2–2] ಎಂಬ ಶ್ರುತಿಯೂ ಇದನ್ನೇ ಹೇಳುತ್ತದೆ. ವಾಯುವಿನ ಅನುಗ್ರಹದಿಂದ ಯಜಮಾನನು ಪ್ರಜೆಯನ್ನು ಪಡೆಯುತ್ತಾನೆ.

ದೀರ್ಘಕಾಲ ರೋಗಗ್ರಸ್ತನಾದವನು ರೋಗಪರಿಹಾರವಾಗಿ ಚೆನ್ನಾಗಿ ಬದುಕುವಂತಾಗಲು ನಿಯುತ್ವಂತನಾದ ವಾಯುವಿಗೆ ಶ್ವೇತಪಶುಯಾಗವನ್ನು ಮಾಡಬೇಕು.

# ವಪಾಮುದಕ್ಖಿದತ್ತಾಮುಗ್ನೌ ಪ್ರಾಗೃಹ್ಣಾತ್ತತೋಽ-
# ಜಸ್ತೂಪರಸ್ಸಮಭವತ್ತಗ್ಗ್ಂ ಸ್ವಾಯ್ಯೈ ದೇವತಾಯಾ
# ಆಽಲಭತ

---

ವಪಾಮ್ । ಉದಿತಿ । ಅಕ್ಖಿದತ್ । ತಾಮ್ । ಅಗ್ನೌ । ಪ್ರೇತಿ । ಅಗೃಹ್ಣಾತ್ । ತತಃ । ಅಜಃ ।
ತೂಪರಃ । ಸಮಿತಿ । ಅಭವತ್ । ತವ್ । ಸ್ವಾಯ್ಯೈ । ದೇವತಾಯ್ಯೈ । ಏತಿ । ಅಲಭತ ।

---

| | |
|---|---|
| ವಪಾವ್ ಉದಕ್ಖಿದತ್ | ವಪೆಯನ್ನು [ತೆಳುವಾದ ಬಟ್ಟೆಯಂತಿರುವುದು] ಕಿತ್ತು ಮೇಲಕ್ಕೆ ತೆಗೆದನು. |
| ತಾವ್ ಅಗ್ನೌ ಪ್ರಾಗೃಹ್ಣಾತ್ | ಆ ವಪೆಯನ್ನು ಅಗ್ನಿಯಲ್ಲಿ ಹಾಕಿದನು. |
| ತತಃ ಅಜಃ ತೂಪರಃ ಸಮಭವತ್ | ಅದರಿಂದ ಕೊಂಬುಗಳಿಲ್ಲದ ಆಡು ಹುಟ್ಟಿತು. |
| ತವ್ ಸ್ವಾಯ್ಯೈ ದೇವತಾಯ್ಯೈ ಆಲಭತ | ಆ ಅಜವನ್ನು ತನ್ನ ದೇವತೆ [ಪ್ರಜಾಪತಿ] ಗಾಗಿಯೇ ಯಾಗ ಮಾಡಿದನು. |

---

ದೀರ್ಘರೋಗಿಯ ಪ್ರಾಣಾಪಾನಗಳು ಅವನನ್ನು ಬಿಟ್ಟುಹೋಗುವಂತೆ ಆಗಿರುತ್ತದೆ. ಈ ಯಾಗದಿಂದ ವಾಯುವನ್ನು ಪ್ರೀತಿಗೊಳಿಸುವುದರಿಂದ ವಾಯುವು ತನ್ನ ಭಾಗದ ಸ್ವೀಕಾರದಿಂದ ತೃಪ್ತನಾಗುತ್ತಾನೆ. ಯಜಮಾನನಲ್ಲಿ ಪ್ರಾಣಾಪಾನಗಳು ದೃಢವಾಗಿ ನೆಲಸಿರುವಂತೆ ಮಾಡುತ್ತಾನೆ. ವಾಯುವಿನ ಅನುಗ್ರಹದಿಂದ ಸಾಯುವ ಸ್ಥಿತಿಯಲ್ಲಿ ಇರುವ ಯಜಮಾನನೂ–ಪ್ರಾಣಾಪಾನಗಳು ಸ್ಥಿರವಾಗಿ ನೆಲಸುವುದರಿಂದ–ಬದುಕಿಯೇ ಬದುಕುತ್ತಾನೆ.

ಸೃಷ್ಟಿಗೆ ಮೊದಲು ಪ್ರಜಾಪತಿಯೊಬ್ಬನೇ ಇದ್ದನು. ಸ್ಥಾವರಜಂಗಮಾತ್ಮಕವಾದ ಈ ಜಗತ್ತು ಇರಲಿಲ್ಲ. ಪ್ರಜಾಪತಿಗೆ ಪ್ರಜೆಗಳನ್ನೂ, ಪಶುಗಳನ್ನೂ ಸೃಷ್ಟಿಸಬೇಕೆಂಬ ಕಾಮನೆಯುಂಟಾಯಿತು. ಅನಂತರ ಆ ಪ್ರಜಾಪತಿಯು ತನ್ನ ವಪೆಯನ್ನು ತೆಗೆದು ಅಗ್ನಿಯಲ್ಲಿ ಹಾಕಿದನು. ಇಚ್ಛಾಮಾತ್ರದಿಂದ ಸೃಷ್ಟಿ ಮಾಡಬಲ್ಲ ಪ್ರಜಾಪತಿಯು ವಪೆಯನ್ನು ಅಗ್ನಿಯಲ್ಲಿ ಹಾಕಿದ ಮಾತ್ರದಿಂದಲೇ ಕೊಂಬುಗಳಿಲ್ಲದ ಆಡು ಹುಟ್ಟಿತು.

ತತೋ ವೈ ಸ ಪ್ರಜಾಃ ಪಶೂನಸೃಜತ ಯಃ ಪ್ರಜಾಕಾಮಃ

(೪) ಪಶುಕಾಮಃ ಸ್ಯಾತ್ಸ ಏತಂ ಪ್ರಾಜಾಪತ್ಯಮಜಂ

ತೂಪರಮಾಲಭೇತ ಪ್ರಜಾಪತಿಮೇವ ಸ್ವೇನ

ಭಾಗಧೇಯೇನೋಪಧಾವತಿ

---

ತತಃ । ವೈ । ಸಃ । ಪ್ರಜಾ ಇತಿ ಪ್ರ–ಜಾಃ । ಪಶೂನ್ । ಅಸೃಜತ । ಯಃ । ಪ್ರಜಾಕಾಮ ಇತಿ ಪ್ರಜಾ–ಕಾಮಃ [೪] । ಪಶುಕಾಮ ಇತಿ ಪಶು–ಕಾಮಃ । ಸ್ಯಾತ್ । ಸಃ । ಏತಮ್ । ಪ್ರಾಜಾಪತ್ಯಮಿತಿ ಪ್ರಾಜಾ–ಪತ್ಯಮ್ । ಅಜಮ್ । ತೂಪರಮ್ । ಏತಿ । ಲಭೇತ । ಪ್ರಜಾಪತಿಮಿತಿ ಪ್ರಜಾ–ಪತಿಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

| | |
|---|---|
| ತತಃ ವೈ ಸಃ ಪ್ರಜಾಃ ಪಶೂನ್ ಅಸೃಜತ | [ಆ ಯಾಗದ ಫಲವಾಗಿ] ಆತನು ಪ್ರಜೆಗಳನ್ನೂ, ಪಶುಗಳನ್ನೂ ಸೃಷ್ಟಿಸಿದನು. |

**ಪ್ರಾಜಾಪತ್ಯಯಾಗದ ವಿಧಿ; ಪ್ರಶಂಸೆ**

| | |
|---|---|
| ಯಃ ಪ್ರಜಾಕಾಮಃ ಪಶುಕಾಮಃ ಸ್ಯಾತ್ | ಯಾವ ಯಜಮಾನನು ಪ್ರಜೆಗಳನ್ನೂ, ಪಶುಗಳನ್ನೂ ಬಯಸುವನೋ |
| ಸಃ ಏತಮ್ ಪ್ರಾಜಾಪತ್ಯಮ್ ಅಜಮ್ ತೂಪರಮ್ ಆಲಭೇತ | ಅವನು ಪ್ರಜಾಪತಿದೇವತಾಕವಾದ ಈ ಕೊಂಬಿಲ್ಲದ ಅಜ ಪಶುವಿನ ಯಾಗವನ್ನು ಮಾಡಬೇಕು. |
| ಪ್ರಜಾಪತಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಆಗ] ಸಲ್ಲಬೇಕಾದ ತನ್ನ [ದೇವತೆಯ] ಭಾಗವನ್ನು ಕೊಟ್ಟು, ಪ್ರಜಾಪತಿದೇವತೆಯನ್ನು ಸೇವಿಸಿದವನಾಗುತ್ತಾನೆ. |

ಸ ಏವಾಸ್ಮೈ ಪ್ರಜಾಂ ಪಶೂನ್ಪ್ರಜನಯತಿ

ಯಚ್ಛ್ಮಶ್ರುಣಸ್ತತ್ಪುರುಷಾಣಾಗ್ಂ ರೂಪಂ

ಯತ್ತೂಪರಸ್ತದಶ್ವಾನಾಂ ಯದನ್ಯತೋದನ್ತದ್ಗವಾಂ

---

ಸಃ । ಏವ । ಅಸ್ಮೈ । ಪ್ರಜಾಮಿತಿ ಪ್ರ–ಜಾಮ್ । ಪಶೂನ್ । ಪ್ರೇತಿ । ಜನಯತಿ ।
ಯತ್ । ಶ್ಮಶ್ರುಣಃ । ತತ್ । ಪುರುಷಾಣಾಮ್ । ರೂಪಮ್ । ಯತ್ । ತೂಪರಃ । ತತ್ ।
ಅಶ್ವಾನಾಮ್ । ಯತ್ । ಅನ್ಯತೋದನ್ನಿತ್ಯನ್ಯತಃ –ದನ್ । ತತ್ । ಗವಾಮ್ ।

---

| | |
|---|---|
| ಸಃ ಏವ ಅಸ್ಮೈ ಪ್ರಜಾಮ್ ಪಶೂನ್ ಪ್ರಜನಯತಿ | ಆ ಪ್ರಜಾಪತಿದೇವನು ಪ್ರಸನ್ನನಾಗಿ ಈ ಯಜಮಾನನಿಗೆ ಪ್ರಜೆಗಳನ್ನೂ, ಪಶುಗಳನ್ನೂ ಉಂಟುಮಾಡುತ್ತಾನೆ. |

**ಪ್ರಜಾ–ಪಶುಸಂಪತ್ತಿಯ ವರ್ಣನೆ; ಅರ್ಥವಾದ**

| | |
|---|---|
| ಯತ್ ಶ್ಮಶ್ರುಣಃ | ಈ ಅಜವು ಮೀಸೆಯಂತಿರುವ ಲೋಮಗಳಿಂದ ಕೂಡಿದೆಯೆಂಬುದು ಯಾವುದುಂಟೋ |
| ತತ್ ಪುರುಷಾಣಾಮ್ ರೂಪಮ್ | ಅದು ಪುರುಷರ ಸ್ವರೂಪವಾಗಿದೆ. |
| ಯತ್ ತೂಪರಃ ತತ್ ಅಶ್ವಾನಾಮ್ | ಶೃಂಗವಿಹೀನವಾಗಿರುವುದೆಂಬುದು ಕುದುರೆಗಳ ಸ್ವರೂಪ. |
| ಯತ್ ಅನ್ಯತೋದನ್ ತತ್ ಗವಾಮ್ | ಕೆಳಗಿನ ಹಲ್ಲುಗಳನ್ನು ಮಾತ್ರ ಹೊಂದಿದೆಯೆಂಬುದು ಹಸುಗಳ ರೂಪ. |

---

ಪ್ರಜಾಪತಿದೇವತೆಯನ್ನು ಉದ್ದೇಶಿಸಿ ಆ ಆಡನ್ನು ಯಾಗ ಮಾಡಿದನು [ಹವಿಸ್ಸನ್ನಾಗಿ ಅರ್ಪಿಸಿದನು]. ಅದರ ಪ್ರಭಾವದಿಂದ ಪ್ರಜೆಗಳನ್ನೂ, ಪಶುಗಳನ್ನೂ ಸೃಷ್ಟಿಸಿದನು.

ಯದವ್ಯಾ ಇವ ಶಫಾಸ್ತದವೀನಾಂ

ಯದಜಸ್ತದಜಾನಾಮೇತಾವಂತೋ ವೈ ಗ್ರಾಮ್ಯಾಃ

---

ಯತ್ । ಅವ್ಯಾಃ । ಇವ । ಶಫಾಃ । ತತ್ । ಅವೀನಾಮ್ । ಯತ್ । ಅಜಃ । ತತ್ । ಅಜಾನಾಮ್ । ಏತಾವಂತಃ । ವೈ । ಗ್ರಾಮ್ಯಾಃ ।

---

| | |
|---|---|
| **ಯತ್ ಅವ್ಯಾಃ ಇವ ಶಫಾಃ ತತ್ ಅವೀನಾಮ್** | ಕುರಿಗಳ ಗೊರಸಿನಂತಿರುವ ಗೊರಸನ್ನು ಹೊಂದಿರುವುದು ಕುರಿಗಳ ರೂಪವಾಗಿದೆ. |
| **ಯತ್ ಅಜಃ ತತ್ ಅಜಾನಾಮ್** | ಆಡುಗಳ ಜಾತಿಯಾಗಿದೆ ಎಂಬುದು ಯಾವುದುಂಟೋ ಅದು ಆಡುಗಳ ಸ್ವರೂಪವಾಗಿದೆ. |
| **ಏತಾವಂತಃ ವೈ ಗ್ರಾಮ್ಯಾಃ ಪಶವಃ** | ಈ ಗ್ರಾಮ್ಯಪಶುಗಳು ಇಷ್ಟೇ.* |

---

[ಪರಮಾತ್ಮನು ಅಘಟಿತಘಟನಾಸಮರ್ಥನು. ಅವನ ಲೀಲೆಯನ್ನು ಕುರಿತು **'ಲೋಕವತ್ತು ಲೀಲಾಕೈವಲ್ಯಮ್'** ಎಂದು ಬ್ರಹ್ಮಸೂತ್ರದಲ್ಲಿ ಹೇಳಿರುತ್ತಾರೆ. **(ಬ್ರ.ಸೂ.2.1.33)**]

ಯಾವ ಯಜಮಾನನು ಪ್ರಜೆಗಳನ್ನೂ, ಗವಾದಿಪಶುಗಳನ್ನೂ ಅಪೇಕ್ಷಿಸುತ್ತಾನೆಯೋ ಆತನು ಪ್ರಜಾಪತಿದೇವನಿಗಾಗಿ ಕೊಂಬಿಲ್ಲದ ಅಜಪಶುವಿನ ಯಾಗ ಮಾಡಬೇಕು. ಇದರಿಂದ ಪ್ರಜಾಪತಿಯು ತನ್ನ ಭಾಗವನ್ನು ಹೊಂದಿ ಸುಪ್ರೀತನಾಗುತ್ತಾನೆ. ಆತನ ಅನುಗ್ರಹದಿಂದ ಯಜಮಾನನು ಪ್ರಜಾಸಮೃದ್ಧಿಯನ್ನೂ ಪಶುಸಂಪತ್ತನ್ನೂ ಹೊಂದುತ್ತಾನೆ.

---

* ಪುರುಷ, ಅಶ್ವ, ಹಸು, ಕುರಿ, ಆಡು, ಕತ್ತೆ ಹಾಗೂ ಒಂಟೆ – ಈ ಏಳನ್ನು 'ಸಪ್ತ ಗ್ರಾಮ್ಯಾಃ ಪಶವಃ' ಎಂದು ಶ್ರುತಿಯು ಹೇಳುತ್ತದೆ. ಇಲ್ಲಿ ಕತ್ತೆ ಹಾಗೂ ಒಂಟೆಯನ್ನು ಅಷ್ಟು ಮುಖ್ಯವಲ್ಲವೆಂದು ಭಾವಿಸಿ ಐದೇ ಗ್ರಾಮ್ಯಪಶುಗಳು ಎಂದು ಹೇಳಲಾಗಿದೆ.

ಪಶವ (..ಸ್ತಾನ್ (೫) ರೂಪೇಣೈವಾವರುಂಧೇ) ಸ್ತಾನ್ರೂಪೇಣೈ

ವಾವರುಂಧೇ ಸೋಮಾಪೌಷ್ಣಂ ತ್ರೈತಮಾಲಭೇತ ಪಶುಕಾಮೋ

ದ್ವೌ ವಾ ಅಜಾಯ್ಯೈ ಸ್ತನೌ ನಾನೈವ ದ್ವಾವಭಿಜಾಯೇತೇ

ಊರ್ಜಂ ಪುಷ್ಟಿಂ ತೃತೀಯಃ

---

ಪಶವಃ । ತಾನ್ । [೫] ರೂಪೇಣ । ಏವ । ಅವೇತಿ । ರುಂಧೇ । **ಸೋಮಾಪೌಷ್ಣಮಿತಿ ಸೋಮಾ-ಪೌಷ್ಣಮ್** । ತ್ರೈತಮ್ । ಏತಿ । ಲಭೇತ । ಪಶುಕಾಮ ಇತಿ ಪಶು-ಕಾಮಃ । ದ್ವೌ । ವೈ । ಅಜಾಯ್ಯೈ । ಸ್ತನೌ । ನಾನಾ । ಏವ । ದ್ವೌ । ಅಭೀತಿ । ಜಾಯೇತೇ ಇತಿ । ಊರ್ಜಮ್ । ಪುಷ್ಟಿಮ್ । ತೃತೀಯಃ ।

---

| | |
|---|---|
| ತಾನ್ ರೂಪೇಣ ಏವ ಅವರುಂಧೇ | [ಅವು ಐದು] ಅವುಗಳನ್ನು [ಆಡಿನ] ರೂಪ ದಿಂದಲೇ ಯಜಮಾನನು ಪಡೆಯುತ್ತಾನೆ. |

**ಪಶುಕಾಮನಿಗೆ ವಿಹಿತವಾದ ಸೋಮಾಪೌಷ್ಣಯಾಗ**

| | |
|---|---|
| ಪಶುಕಾಮಃ ಸೋಮಾಪೌಷ್ಣಮ್ ತ್ರೈತಮ್ ಆಲಭೇತ | ಪಶುಕಾಮನಾದವನು ಒಟ್ಟಿಗೇ ಹುಟ್ಟಿದ ಮೂರು ಆಡಿನ ಮರಿಗಳಲ್ಲಿ ಒಂದನ್ನು ಸೋಮಾಪೂಷ ದೇವತೆಗಳಿಗೆ ಯಾಗ ಮಾಡಬೇಕು. |
| ದ್ವೌ ವೈ ಅಜಾಯ್ಯೈ ಸ್ತನೌ | ಹೆಣ್ಣಾಡಿಗೆ ಎರಡು ಮೊಲೆಗಳಿವೆ. |
| ನಾನಾ ಏವ ದ್ವೌ ಅಭಿಜಾಯೇತೇ | ಅವುಗಳನ್ನು ಪ್ರತ್ಯೇಕವಾಗಿ ಕುಡಿಯಲು ಎರಡು ಕರುಗಳು ಹುಟ್ಟುತ್ತವೆ. |
| ಊರ್ಜಂ ಪುಷ್ಟಿಂ ತೃತೀಯಃ | ಮೂರನೆಯದು ತಾಯಿಯ ರಸರೂಪಸಾರ ವನ್ನೂ , ಪುಷ್ಟಿಯನ್ನೂ ಕುಡಿಯಲು ಹುಟ್ಟುತ್ತದೆ. |

---

ಈ ಆಡು ಮಾನವಸಹಿತವಾದ ಎಲ್ಲ ಗ್ರಾಮ್ಯಪಶುಗಳ ರೂಪವನ್ನೂ ಹೊಂದಿದೆ. ಮೀಸೆಯಂತಿರುವ ಲೋಮಗಳಿಂದ ಪುರುಷರೂಪವನ್ನು ಹೊಂದಿದೆ. ಕೊಂಬು ಇಲ್ಲದಿರುವುದರಿಂದ ಕುದುರೆಗಳ ರೂಪವನ್ನು ಪಡೆದಿದೆ. ಒಂದೇ ಕಡೆ ಹಲ್ಲುಗಳಿರುವುದರಿಂದ ಗೋವುಗಳ ರೂಪವನ್ನು ಹೊಂದಿದೆ. ಕುರಿಗಳಂತೆ ಗೊರಸನ್ನು ಹೊಂದಿರುವುದರಿಂದ ಕುರಿಗಳ ರೂಪವನ್ನೂ ಪಡೆದಿದೆ.

ಸೋಮಾಪೂಷಣಾವೇವ ಸ್ವೇನ ಭಾಗಧೇಯೇನೋಪ

ಧಾವತಿ ತಾವೇವಾಸ್ಮೈ ಪಶೂನ್ಪ್ರಜನಯತಸ್ಸೋಮೋ ವೈ

ರೇತೋಧಾಃ ಪೂಷಾ ಪಶೂನಾಂ ಪ್ರಜನಯಿತಾ

---

ಸೋಮಾಪೂಷಣಾವಿತಿ ಸೋಮಾ-ಪೂಷಣೌ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ತೌ । ಏವ । ಅಸ್ಮೈ । ಪಶೂನ್ । ಪ್ರೇತಿ । ಜನಯತಃ । ಸೋಮಃ । ವೈ । ರೇತೋಧಾ ಇತಿ ರೇತಃ-ಧಾಃ । ಪೂಷಾ । ಪಶೂನಾಮ್। ಪ್ರಜನಯಿತೇತಿ ಪ್ರ-ಜನಯಿತಾ ।

---

| | |
|---|---|
| ಸೋಮಾಪೂಷಣೌ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಈ ಯಾಗದಿಂದ] ಯಜಮಾನನು ಸೋಮಾಪೂಷದೇವತೆಗಳ ಭಾಗವನ್ನು ಸಮರ್ಪಿಸಿ ಆರಾಧಿಸಿದವನಾಗುತ್ತಾನೆ. |
| ತೌ ಏವ ಅಸ್ಮೈ ಪಶೂನ್ ಪ್ರಜನಯತಃ | ಸೋಮಾಪೂಷದೇವತೆಗಳಿಬ್ಬರೂ ಈ ಯಜಮಾನನಿಗೆ ಪಶುಸಂಪತ್ತನ್ನು ಅನುಗ್ರಹಿಸುತ್ತಾರೆ. |
| ಸೋಮಃ ವೈ ರೇತೋಧಾಃ | ಸೋಮದೇವನು ಗರ್ಭಾಶಯದಲ್ಲಿ ರೇತಸ್ಸು ನಿಲ್ಲುವಂತೆ ಮಾಡುವವನು. |
| ಪೂಷಾ ಪಶೂನಾಮ್ ಪ್ರಜನಯಿತಾ | ಪೂಷನು ಪಶುಗಳನ್ನು ಪೋಷಿಸಿ, ಚೆನ್ನಾಗಿ ಜನಿಸುವಂತೆ ಮಾಡುವವನು. |

---

ಸ್ವತಃ ಆಡೇ ಆಗಿರುವುದರಿಂದ ಆಡುಗಳ ರೂಪವನ್ನೂ ಪಡೆದಿದೆ. [ಕತ್ತೆ, ಒಂಟೆಗಳು ಮುಖ್ಯವಲ್ಲದುದರಿಂದ] ಈ ಐದೇ ಗ್ರಾಮ್ಯಪಶುಗಳು. ಯಜಮಾನನು ಇವುಗಳನ್ನು ಅಜಾರೂಪದಿಂದಲೇ ಪಡೆದು ಪ್ರಜಾವಂತನೂ, ಪಶುಮಂತನೂ ಆಗುತ್ತಾನೆ.

ಒಟ್ಟಿಗೆ ಹುಟ್ಟಿದ ಮೂರು ಮರಿಗಳಲ್ಲಿ ಒಂದೊಂದೂ ತ್ರೈತವೆನ್ನಿಸಿಕೊಳ್ಳುತ್ತದೆ.

ಸೋಮ ಏವಾಸ್ಮೈ ರೇತೋ ದಧಾತಿ ಪೂಷಾ

ಪಶೂನ್ಪ್ರಜನಯತ್ಯೌದುಂಬರೋ ಯೂಪೋ

ಭವತ್ಯೂರ್ಗ್ವಾ ಉದುಂಬರ

---

ಸೋಮಃ । ಏವ । ಅಸ್ಮೈ । ರೇತಃ । ದಧಾತಿ । ಪೂಷಾ । ಪಶೂನ್ । ಪ್ರೇತಿ । ಜನಯತಿ ।

ಔದುಂಬರಃ । ಯೂಪಃ । ಭವತಿ । ಊರ್ಕ್ । ವೈ । ಉದುಂಬರಃ ।

---

| | |
|---|---|
| ಸೋಮಃ ಏವ ಅಸ್ಮೈ ರೇತಃ ದಧಾತಿ ಪೂಷಾ ಪಶೂನ್ ಪ್ರಜನಯತಿ | ಸೋಮದೇವನು ಗರ್ಭಾಶಯದಲ್ಲಿ ರೇತಸ್ಸು ನಿಲ್ಲುವಂತೆ ಮಾಡುತ್ತಾನೆ. ಪೂಷದೇವನು ಪಶುಗಳನ್ನು ಚೆನ್ನಾಗಿ ಹುಟ್ಟುವಂತೆ ಮಾಡುತ್ತಾನೆ. |

**ಯೂಪವಿಶೇಷವಿಧಿ**

| | |
|---|---|
| ಔದುಂಬರಃ ಯೂಪಃ ಭವತಿ | [ಈ ಯಾಗದಲ್ಲಿ] ಔದುಂಬರ [ಅತ್ತಿ]ದ ಯೂಪವನ್ನು ಮಾಡಬೇಕು. |
| ಊರ್ಕ್ ವೈ ಉದುಂಬರಃ | ಉದುಂಬರವು ಬಲರೂಪವಾಗಿದೆ. |

---

ಪಶುಕಾಮನಾದವನು ಇಂತಹ ತ್ರೈತಗಳಲ್ಲಿ ಒಂದನ್ನು ಸೋಮಾಪೂಷದೇವತೆಗಳಿಗಾಗಿ ಯಾಗ ಮಾಡಬೇಕು. ಆಡಿಗೆ ಎರಡು ಮೊಲೆಗಳಿವೆ. ಇವುಗಳನ್ನು ಪ್ರತ್ಯೇಕವಾಗಿ ಕುಡಿಯಲು ಎರಡು ಮರಿಗಳು ಜನಿಸುತ್ತವೆ. ಮೂರನೆಯದಾದರೋ ತಾಯಿಯಲ್ಲಿ ಅಧಿಕವಾಗಿರುವ ಸಾರವನ್ನೂ, ಪುಷ್ಟಿಯನ್ನೂ ಕುಡಿಯಲು ಹುಟ್ಟುತ್ತದೆ.

ತನಗೆ ಪಶುಗಳು ಬೇಕೆನ್ನುವ ಯಜಮಾನನು ಈ ತ್ರೈತಯಾಗದಿಂದ ಸೋಮಾಪೂಷದೇವತೆಗಳಿಗೆ ಅವರ ಭಾಗವನ್ನು ಸಮರ್ಪಿಸುವನು. ಅವರನ್ನು ಸಂತೋಷ ಗೊಳಿಸುವನು. ಅವರಿಬ್ಬರೂ ಯಜಮಾನನಿಗೆ ಪಶುಗಳನ್ನು ಅನುಗ್ರಹಿಸುವರು. ಸೋಮದೇವನು ರೇತಸ್ಸು ಗರ್ಭಾಶಯದಲ್ಲಿ ನಿಲ್ಲುವಂತೆ ಮಾಡುವನು. ಭೂರೂಪನಾದ ಪೂಷದೇವನು ಓಷಧಿಗಳಿಂದ ಪಶುಗಳು ಪುಷ್ಟವಾಗಿ ಹುಟ್ಟುವಂತೆ ಮಾಡುವನು. ಇದರಿಂದ ಯಜಮಾನನು ಪಶುಸಂಪನ್ನನಾಗುವನು.

ಊರ್ಕ್ಪಶವ ಊರ್ಜೈವಾಸ್ಮಾ ಊರ್ಜಂ

ಪಶೂನವರುಂಧೇ ||೬–1||

[ಅಪ್ರದಾಹಾಯ ಭವತ್ಯೇವ ಪ್ರಜಾಯಾ ಆವಾಯತಿ ವಾಯುವೇವ ನಿಯುತ್ವಂತಗ್ಗ್ಂ ಸ್ವೇನ ಭಾಗಧೇಯೇನೋಪ ಪ್ರಜಾಕಾವಾಸ್ತಾನ್, ಯೂಪಸ್ತ್ರಯೋದಶ ಚ |]

---

ಊರ್ಕ್ | ಪಶವಃ | ಊರ್ಜಾ | ಏವ | ಅಸ್ಮೈ | ಊರ್ಜವ್ | ಪಶೂನ್ | ಅವೇತಿ | ರುಂಧೇ ||1||

---

| | |
|---|---|
| ಊರ್ಕ್ ಪಶವಃ | ಕ್ಷೀರಾದಿಗಳನ್ನು ಕೊಡುವ ಪಶುವೂ ಬಲರೂಪವಾಗಿದೆ. |
| ಊರ್ಜಾ ಏವ ಅಸ್ಮೈ | ಹೀಗೆ ರಸರೂಪವಾದ ಉದುಂಬರ ದಿಂದಲೇ ಈ ಯಜಮಾನನಿಗೆ |
| ಊರ್ಜವ್ ಪಶೂನ್ ಅವರುಂಧೇ | [ಅಧ್ವರ್ಯುವು] ರಸರೂಪವಾದ ಪಶು ಗಳನ್ನು ಪ್ರಾಪ್ತವಾಗುವಂತೆ ಮಾಡುತ್ತಾನೆ. |

---

ಪ್ರಕೃತಿಯಾಗವಾದ ಅಗ್ನಿಷೋಮೀಯಯಾಗದಲ್ಲಿ ಪಶುವನ್ನು ಕಟ್ಟಲು ಖಾದಿರ [ಕಗ್ಗಲಿ ]ಯೂಪವನ್ನು ಹೇಳಿರುತ್ತಾರೆ. ಈ ಸೋಮಪೂಷಯಾಗದಲ್ಲಿ ಖಾದಿರಯೂಪದ ಬದಲು ಔದುಂಬರದ ಯೂಪವನ್ನು ಮಾಡಬೇಕು. **[ವಿಧಿ]**. ಹಲವು ಹಣ್ಣುಗಳನ್ನು ನೀಡುವ ಔದುಂಬರವು ರಸ [ಬಲ]ರೂಪವಾಗಿದೆ. ಕ್ಷೀರಾದಿಗಳಿಂದ ಬಲವನ್ನು ವೃದ್ಧಿಗೊಳಿಸುವ ಪಶುಗಳೂ ಊರ್ಕ್ರೂಪವಾಗಿವೆ. ಈ ಔದುಂಬರಯೂಪವನ್ನು ಮಾಡುವುದರಿಂದ, ರಸರೂಪವಾದ ಉದುಂಬರದಿಂದಲೇ ರಸರೂಪವಾದ ಪಶುಗಳನ್ನು ಯಜಮಾನನು ಪಡೆದಂತಾಗುತ್ತದೆ.

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

**ಇಲ್ಲಿ ಹೇಳಿರುವ ವಿಚಾರಗಳು ಮುಂದಿನ ಯಾಗಗಳಿಗೂ ಅನ್ವಯಿಸುತ್ತವೆ. ಆದುದರಿಂದ ಇಲ್ಲಿಯೇ ವಿಶೇಷವಿಚಾರ ಮಾಡಿ ಅವುಗಳನ್ನು ಸಂಗ್ರಹಿಸಿ ಕೊಡಲಾಗಿದೆ.**

**೧. ಅಗ್ನಿಹೋತ್ರ, ದರ್ಶ-ಪೂರ್ಣಮಾಸೇಷ್ಟಿ, ಅಗ್ನಿಷ್ಟೋಮಗಳು ಮೂಲ ಪ್ರಕೃತಿಗಳೇ? [ಜೈ.ಸೂ.8.1]**

ಅಗ್ನಿಹೋತ್ರ, ದರ್ಶ-ಪೂರ್ಣಮಾಸೇಷ್ಟಿಗಳು, ಅಗ್ನಿಷ್ಟೋಮ ಇವು ಮೂಲಪ್ರಕೃತಿಗಳೆಂದು ಹೇಳಲ್ಪಟ್ಟಿವೆ. ಆದರೆ ಇವು ಅಲೌಕಿಕಗಳಾಗಿರುವುದರಿಂದಲೂ, ಇಷ್ಟರಿಂದಲೇ ಉಪಕಾರವಾಗುವುದೆಂಬ ನಿಶ್ಚಯವಿಲ್ಲದಿರುವುದರಿಂದಲೂ ಇವು ಮೂಲಪ್ರಕೃತಿಗಳಾಗಲಾರವು. ಇದು ಇಲ್ಲಿನ **ಪೂರ್ವಪಕ್ಷ.**

ಇವು ಅತ್ಯಂತ ಅಲೌಕಿಕಗಳಲ್ಲ. ಲೋಕದಲ್ಲಿ ಊಟಕ್ಕೆ ಅನ್ನವು ಸಾಧನ. ಅದಕ್ಕೆ ತೊವ್ವೆ , ಸಾರು, ಹುಳಿ ಮೊದಲಾದವುಗಳು ಸನ್ನಿಪತ್ಯೋಪಕಾರಕಗಳು ಅಂದರೆ ಸಾಧನದೊಡನೆಯೇ ಇದ್ದು ಉಪಕಾರಕಗಳು. ಊಟಕ್ಕೆ ದೀಪ, ಪೀಠ ಮುಂತಾದವುಗಳು ದೂರದಿಂದ ಉಪಕಾರಕಗಳು ಅಥವಾ ಆರಾದುಪಕಾರಕಗಳು. ಹಾಗೆಯೇ ಇಷ್ಟಿ ಮುಂತಾದವುಗಳಲ್ಲಿ ಯಾಗವು ಕರಣ. ನಿರ್ವಾಪ, ಅವಘಾತಾದಿಗಳು ಸನ್ನಿಪತ್ಯೋಪ ಕಾರಕಗಳು. ಪ್ರಯಾಜಾದಿಗಳು ಆರಾದುಪಕಾರಕಗಳು. ಇವುಗಳ ಪರಿಮಿತಿಯು – ಲೌಕಿಕದಲ್ಲಿ ಪ್ರತ್ಯಕ್ಷವಾಗಿ ನಿಶ್ಚಯಿಸಲ್ಪಡುವಂತೆ – ಶ್ರುತಿಯಿಂದ ನಿಶ್ಚಯಿಸಲ್ಪಡುತ್ತದೆ. ಹೀಗಾಗಿ ಈ ಅಗ್ನಿಹೋತ್ರಾದಿಗಳು ಮೂಲಪ್ರಕೃತಿಗಳು. ಇದು ಇಲ್ಲಿನ **ಸಿದ್ಧಾಂತ.**

**೨. '....ಮಾಸಮಗ್ನಿಹೋತ್ರಂ ಜುಹೋತಿ' ಎಂಬುದು ಯಾವ ವಿಧಿ? [ಜೈ.ಸೂ.2.3]**

ಕುಂಡಪಾಯಿನಾಮಯನದಲ್ಲಿ **'ಉಪಸದ್ಭಿಶ್ಚರಿತ್ವಾ ಮಾಸಮಗ್ನಿಹೋತ್ರಂ ಜುಹೋತಿ'** ಎಂಬ ವಾಕ್ಯವಿದೆ. ಇದು ಗುಣವಿಧಿಯೇ? ಕರ್ಮಾಂತರವಿಧಿಯೇ? ಎಂದು ಇಲ್ಲಿನ **ಸಂಶಯ.**

ನಿತ್ಯವಾಗಿ ಪ್ರಾಪ್ತವಾಗಿರುವ ಅಗ್ನಿಹೋತ್ರಕ್ಕೆ ಮಾಸರೂಪಕಾಲವನ್ನು ಇದು ವಿಧಿಸುತ್ತದೆ. ಹೀಗಾಗಿ ಇದು **'ಮಾಸರೂಪಕಾಲವಿಧಿ'**. ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ **ಸಿದ್ಧಾಂತ** ಹೀಗಿದೆ :

**ಪ್ರಾಪ್ತೇ ಕರ್ಮಣಿ ನಾನೇಕೋ ವಿಧಾತುಂ ಶಕ್ಯತೇ ಗುಣಃ ।**
**ಅಪ್ರಾಪ್ತೇ ತು ವಿಧೀಯಂತೇ ಬಹವೋಽಪ್ಯೇಕಯತ್ನತಃ ॥**

ಎಂಬ ವಾಕ್ಯದಂತೆ ಅಯನಪ್ರಕರಣದಲ್ಲಿ ಇರುವ ಮಾಸಾಗ್ನಿಹೋತ್ರದಲ್ಲಿ ಉಪಸದಾನಂತರ್ಯವನ್ನೂ, ಮಾಸರೂಪಕಾಲವನ್ನೂ ವಿಧಿಸಬೇಕು. ಅಲ್ಲದೆ ಬೇರೆ ಪ್ರಕರಣದಲ್ಲಿರುವ ಅಗ್ನಿಹೋತ್ರಹೋಮವನ್ನು ಅಯನಾಂಗವಾಗಿ ವಿಧಾನ ಮಾಡಬೇಕು. ಹೀಗೆ ಅನೇಕ ಗುಣಗಳನ್ನು ವಿಧಾನ ಮಾಡಿದರೆ ವಾಕ್ಯಭೇದದೋಷವು ಬರುತ್ತದೆ. ಕುಂಡಪಾಯಿನಾಮಯನವು ಪ್ರಕರಣಾಂತರವಾಗಿರುವುದರಿಂದ ಅನೇಕ ಗುಣವಿಶಿಷ್ಟವಾದ **'ಮಾಸಾಗ್ನಿಹೋತ್ರ'** ಸಂಜ್ಞಕವಾದ ಕರ್ಮಾಂತರವೇ ಇಲ್ಲಿ ವಿಹಿತವಾಗಿದ. ಇದು ಇಲ್ಲಿನ **ಸಿದ್ಧಾಂತ.**

**೩. ಸೌರ್ಯಚರುಯಾಗದಲ್ಲಿ ಅವಘಾತಾದಿಗಳಿವೆಯೇ? [ಜೈ.ಸೂ.7.4]**

**'ಸೌರ್ಯಂ ಚರುಂ ನಿರ್ವಪೇತ್'** ಎಂದು ವಿಹಿತವಾಗಿರುವ ಚರುಯಾಗದಲ್ಲಿ ಅವಘಾತಾದಿಗಳು ಅತಿದೇಶದಿಂದ ಪ್ರಾಪ್ತವಾಗುವವೇ? ಇಲ್ಲವೇ? ಇದು **ಸಂಶಯ.**

ಶ್ರುತಿ, ಲಿಂಗ ಮುಂತಾದ ಯಾವ ಪ್ರಮಾಣಗಳೂ ಇಲ್ಲದಿರುವುದರಿಂದ ಅವು ಪ್ರಾಪ್ತವಾಗುವುದಿಲ್ಲ. ಇದು **ಪೂರ್ವಪಕ್ಷ.**

ಕಥಣವಾದ ಯಾಗವು ತನ್ನ ಸಾಫಲ್ಯಕ್ಕಾಗಿ ಲೌಕಿಕ–ವೈದಿಕಕಾರ್ಯಗಳಂತೆ **ಇತಿ ಕರ್ತವ್ಯತೆ** [ಹೀಗೆ ಮಾಡಬೇಕು.]ಯನ್ನು ಅಪೇಕ್ಷಿಸುತ್ತದೆ. ಆದುದರಿಂದ ಸೌರ್ಯಚರುಯಾಗವು ಅವಘಾತಾದಿಗಳನ್ನು ಅಪೇಕ್ಷಿಸುವುದರಿಂದ ಅವು ಪ್ರಾಪ್ತವಾಗುತ್ತವೆ. ಇದು ಸಿದ್ಧಾಂತ.

**೪. ಸೌರ್ಯಚರ್ವಾದಿಗಳಲ್ಲಿನ ಅಂಗಕಲಾಪಗಳು ಲೌಕಿಕವೇ? ವೈದಿಕವೇ? [ಜೈ.ಸೂ.7.4]**

**'ಸೌರ್ಯಂ ಚರುಂ ನಿರ್ವಪೇತ್'** ಎಂದು ವಿಹಿತವಾಗಿರುವ ಸೌರ್ಯಚರುವಿನಲ್ಲಿನ ಅಂಗಕಲಾಪವನ್ನು ಇಲ್ಲಿ ಹೇಳದೆ ಇರುವುದರಿಂದ ಲೌಕಿಕವೇ ಇಲ್ಲಿ ಪ್ರಾಪ್ತವಾಗುತ್ತದೆ. ಇದು ಇಲ್ಲಿನ **ಪೂರ್ವಪಕ್ಷ.**

ವೈದಿಕಕರ್ಮಕ್ಕೆ ಸಂಬಂಧಿಸಿದ ಅಂಗಕಲಾಪವು ವೈದಿಕವನ್ನೇ ಬುದ್ಧಿಸ್ಥವನ್ನಾಗಿ ಮಾಡುತ್ತದೆ. ಅಲ್ಲದೆ **'ಪ್ರಯಾಜೇ ಪ್ರಯಾಜೇ ಕೃಷ್ಣಲಂ ಜುಹೋತಿ'** ಎಂದು ಸೌರ್ಯಚರುಯಾಗವಿಶೇಷದಲ್ಲಿ ವೈದಿಕವಾದ ಪ್ರಯಾಜವನ್ನು ಅನುವಾದ ಮಾಡಿ ಕೃಷ್ಣಲಹೋಮವನ್ನು ವಿಧಾನ ಮಾಡಿದುದು ವೈದಿಕಾಂಗಪ್ರಾಪ್ತಿಗೆ ಲಿಂಗವಾಗಿದೆ. ಇದು ಇಲ್ಲಿನ **ಸಿದ್ಧಾಂತ.**

**೫. ಸೌರ್ಯಚರುಯಾಗಾದಿಗಳಲ್ಲಿ ಅತಿದೇಶವಿಚಾರವನ್ನು ಮಾಡಬೇಕೆ ? [ಜೈ.ಸೂ.7.1]**

ದರ್ಶ–ಪೂರ್ಣಮಾಸಪ್ರಕರಣದಲ್ಲಿ ಪ್ರಯಾಜಗಳು ಉಪದಿಷ್ಟವಾಗಿವೆ. ಜ್ಯೋತಿಷ್ಟೋಮಪ್ರಕರಣದಲ್ಲಿ ದೀಕ್ಷಣೀಯಾದಿಗಳು ಇವೆ. ಇವು ಎಲ್ಲ ಯಾಗಗಳಿಗೂ

ಸಂಬಂಧಿಸಿದಂತೆ ಸಾಧಾರಣವಾಗಿ ಉಪದಿಷ್ಟವಾಗಿರುವುದರಿಂದ ಸೌರ್ಯಚರು ಯಾಗಾದಿಗಳಲ್ಲಿ ಅತಿದೇಶವಿಚಾರವನ್ನು ಮಾಡಬೇಕೆ ? ಇಲ್ಲವೇ? ಎಂಬುದು **ಸಂಶಯ.**

ಇಲ್ಲಿಯ **ಪೂರ್ವಪಕ್ಷವು** ಹೀಗಿದೆ : **'ದರ್ಶಪೂರ್ಣಮಾಸಾಭ್ಯಾಂ ಯಜೇತ' 'ಸೋಮೇನ ಯಜೇತ'** ಎಂದು **'ಯಜಿ'** ಧಾತುವನ್ನು ಸಾಧಾರಣವಾಗಿ ಉಪಯೋಗಿಸಿರುವುದರಿಂದ ಇಲ್ಲಿ ಉಪದಿಷ್ಟವಾಗಿರುವ ಅಂಗಗಳು ಎಲ್ಲ ಯಾಗಗಳಿಗೂ ಅನ್ವಯಿಸುವುದರಿಂದ ಸೌರ್ಯಾದಿಯಾಗಗಳಲ್ಲಿ ಅತಿದೇಶವಿಚಾರವನ್ನು ಮಾಡುವುದು ಅವಶ್ಯಕವಿಲ್ಲ.

ಯಾಗಜನ್ಯವಾದ ಅಪೂರ್ವದಿಂದ ಫಲಪ್ರಾಪ್ತಿಯು ಉಂಟಾಗುತ್ತದೆ. ಆದುದರಿಂದ ಅಪೂರ್ವವೇ ಮುಖ್ಯ. ಯಾಗವು ಕರಣ ಮಾತ್ರ. ಪ್ರಯಾಜಾದಿ ಗಳಿಂದಲೂ ಅಂಗಾಪೂರ್ವವು ಉಂಟಾಗುತ್ತದೆ. ಈ ಅಂಗಾಪೂರ್ವವೂ ಕೂಡ ಪರಂಪರೆಯಿಂದ ಫಲಸಾಧಕ. ಶ್ರುತಿಯಲ್ಲಿ ಅಂಗವಿಶಿಷ್ಟವಾದ ಯಾಗವು ವಿಹಿತ ವಾಗುತ್ತದೆ. ಅನಂತರ ಪರಸ್ಪರಾನ್ವಯವುಂಟಾಗುತ್ತದೆ ಮತ್ತು ಆಯಾ ಪ್ರಕರಣದಲ್ಲಿ ಹೇಳಿರುವ ಧರ್ಮಗಳು ಆಯಾ ಯಾಗಗಳಿಗೇ ಅನ್ವಯವಾಗುತ್ತವೆ. ಇಲ್ಲವಾದರೆ ಆ ಪ್ರಕರಣದಲ್ಲಿ ಹೇಳಿದುದೇ ವ್ಯರ್ಥವಾಗುತ್ತದೆ.

ಹೀಗಾಗಿ ಪ್ರಯಾಜಾದಿಗಳು, ದೀಕ್ಷಣೀಯಾದಿಗಳು ಯಾವ ಪ್ರಕರಣದಲ್ಲಿ ಹೇಳಲ್ಪಟ್ಟಿವೆಯೋ ಅಲ್ಲಿನ ಯಾಗಗಳಿಗೇ ಅನ್ವಯಿಸುತ್ತವೆ. ಸೌರ್ಯಾದಿ ಇತರ ಯಾಗಗಳ ಅಂಗಾಪೇಕ್ಷೆಯನ್ನು ಪೂರ್ಣ ಮಾಡುವುದಕ್ಕಾಗಿ **'ಪ್ರಕೃತಿವದ್ವಿಕೃತಿಃ ಕರ್ತವ್ಯಾ'** ಎಂಬ ಅತಿದೇಶವಚನದಂತೆ ಅತಿದೇಶವಿಚಾರವನ್ನು ಮಾಡಿ ಇತಿಕರ್ತವ್ಯತಾಕಾಂಕ್ಷೆಯನ್ನು ಪೂರ್ಣ ಮಾಡಿಕೊಳ್ಳಬೇಕು. ಇದು ಇಲ್ಲಿನ **ಸಿದ್ಧಾಂತ.**

### ೬. 'ಸಮಾನಮಿತರಚ್ಛ್ಯೇನೇನ' ಎಂಬುದು ಅನುವಾದವೇ? ಅತಿದೇಶಕವೇ? [ಜೈ.ಸೂ.7.1]

ಇಷುಯಾಗ, ಶ್ಯೇನಯಾಗಗಳು ಏಕಾಹಸಾಧ್ಯವಾದ ಸೋಮಯಾಗಗಳು. **'ಪ್ರಕೃತಿವತ್ ವಿಕೃತಿಃ ಕರ್ತವ್ಯಾ'** ಎಂಬ ಅತಿದೇಶದಂತೆ ಎರಡಕ್ಕೂ ಅಗ್ನಿಷ್ಟೋಮ ಧರ್ಮವು ಪ್ರಾಪ್ತವಾಗುತ್ತದೆ. ಇಷುಯಾಗದ ಪ್ರಕರಣದಲ್ಲಿ **'ಸಮಾನಮಿತ-ರಚ್ಛ್ಯೇನೇನ'** ಎಂಬ ವಾಕ್ಯವಿದೆ. **(ಷಡ್ವಿಂಶಬ್ರಾಹ್ಮಣ 4–3–7)** ಈ ವಾಕ್ಯವು ಅನುವಾದಕವೇ? ಅತಿದೇಶವೇ? ಎಂಬುದು **ಸಂಶಯ.**

ಈ ವಾಕ್ಯದಲ್ಲಿ 'ಇತರತ್' ಎಂಬ ಪದವಿದೆ. 'ಇತರತ್' ಎಂದರೆ ಬೇರೆಯದು ಎಂದು ಅರ್ಥ. ಯಾವುದಕ್ಕಿಂತ ಬೇರೆಯದು? ಎಂಬುದು ಸ್ಪಷ್ಟವಾಗಿಲ್ಲವಾದುದರಿಂದ ಈ ವಾಕ್ಯವು 'ಇಷುಯಾಗವು ಶ್ಯೇನಯಾಗದಂತೆ' ಎಂಬುದಾಗಿ ಅನುವಾದ ಮಾತ್ರ ಎಂಬುದು ಇಲ್ಲಿನ **ಪೂರ್ವಪಕ್ಷ.**

'ದೇವದತ್ತನು ಓದುತ್ತಾನೆ, ಇತರರಲ್ಲ' ಎಂಬ ವಾಕ್ಯದಿಂದ ದೇವದತ್ತನಿಗಿಂತ ಬೇರೆಯವರಾದ ಯಜ್ಞದತ್ತಾದಿಗಳು ಓದುವುದಿಲ್ಲ ಎಂದು ತಿಳಿಯುತ್ತದೆ. 'ಇತರ' ಎಂಬ ಶಬ್ದಕ್ಕೆ 'ದೇವದತ್ತಭಿನ್ನ, ದೇವದತ್ತಸದೃಶ' ಎಂಬುದೇ ಅರ್ಥವಾಗುತ್ತದೆಯಲ್ಲದೆ, ಘಟಪಟಾದಿಗಳು ಓದುವುದಿಲ್ಲ ಎಂದು ಅರ್ಥವಾಗುವುದಿಲ್ಲ. ಅಂತೆಯೇ **'ಸಮಾನಮಿತರಚ್ಛ್ಯೇನೇನ'** ಎಂಬ ವಾಕ್ಯದಿಂದ ಇಷುಯಾಗದಲ್ಲಿ ಉಳಿದುದೆಲ್ಲವೂ ಶ್ಯೇನದಂತೆ ಎಂದರೆ ಶ್ಯೇನಯಾಗದಲ್ಲಿ ಉಪದಿಷ್ಟವಾಗಿರುವ **'ಲೋಹಿತೋಷ್ಣೀಷಾಃ ಋತ್ವಿಜಃ ಪ್ರಚರಂತಿ'** [ಋತ್ವಿಜರು ಕೆಂಬಣ್ಣದ ರುಮಾಲನ್ನು ಧರಿಸಿ ಅನುಷ್ಠಿಸುತ್ತಾರೆ] ಮುಂತಾದ ವಿಶೇಷಧರ್ಮಗಳು ವಚನಾತಿದೇಶದಿಂದ ಪ್ರಾಪ್ತವಾಗುತ್ತವೆ. ಹೀಗಾಗಿ **'ಸಮಾನಮಿತರಚ್ಛ್ಯೇನೇನ'** ಎಂಬ ವಾಕ್ಯವು ಆತಿದೇಶಿಕ. ಇದು **'ವಚನಾತಿದೇಶ'** ವೆನಿಸುತ್ತದೆ. ಇದು ಇಲ್ಲಿನ **ಸಿದ್ಧಾಂತ.**

***'ನಾಮ್ನಾ ಧರ್ಮಾತಿದೇಶ'ದ ವಿಚಾರ [ಜೈ.ಸೂ.7.3]**

ಮಾಸಾಗ್ನಿಹೋತ್ರ, ನಿತ್ಯಾಗ್ನಿಹೋತ್ರ ಎರಡರಲ್ಲಿಯೂ ಅಗ್ನಿಯಲ್ಲಿ ಹೋಮವಿದೆ. **'ಮಾಸಮಗ್ನಿಹೋತ್ರಂ ಜುಹ್ವತಿ' [ತಾಂಡ್ಯಬ್ರಾಹ್ಮಣ 25.4.1]** ಎಂಬ ವಚನದಿಂದ ಮಾಸಾಗ್ನಿಹೋತ್ರವು ವಿಹಿತವಾಗಿದೆ. ಇಲ್ಲಿರುವ ಅಗ್ನಿಹೋತ್ರ ಎಂಬ ಶಬ್ದವು ನಿತ್ಯಾಗ್ನಿಹೋತ್ರದಲ್ಲಿನ ಧರ್ಮವನ್ನು ಈ ಮಾಸಾಗ್ನಿಹೋತ್ರದಲ್ಲಿ ಅತಿದೇಶ ಮಾಡಲು ಶಕ್ತವಲ್ಲ. ಇದು ಇಲ್ಲಿನ **ಪೂರ್ವಪಕ್ಷ.**

ಅಗ್ನಿಹೋತ್ರಶಬ್ದವು ನಿತ್ಯಾಗ್ನಿಹೋತ್ರದಲ್ಲಿಯೇ ಮುಖ್ಯ. ಎರಡರಲ್ಲಿಯೂ ಮುಖ್ಯವಲ್ಲ. ಆದುದರಿಂದ ಗೌಣವಾಗಿ ಮಾಸಾಗ್ನಿಹೋತ್ರದಲ್ಲಿ **'ಮಾಸಾಗ್ನಿಹೋತ್ರಂ ನಿತ್ಯಾಗ್ನಿಹೋತ್ರವತ್ ಕರ್ತವ್ಯಮ್'** ಎಂದು ನಾಮಾತಿದೇಶದಿಂದ ನಿತ್ಯಾಗ್ನಿಹೋತ್ರದ ಧರ್ಮಗಳು ಮಾಸಾಗ್ನಿಹೋತ್ರದಲ್ಲಿ ಪ್ರಾಪ್ತವಾಗುತ್ತವೆ.

**೭. ಅತಿದೇಶವು ಯಾವುದರಿಂದ ? [ಜೈ.ಸೂ.8.1]**

**'ಸೌರ್ಯಂ ಚರುಂ ನಿರ್ವಪೇತ್'** ಎಂದು ವಿಹಿತವಾಗಿರುವ ಸೌರ್ಯಾದಿಯಾಗ ದಲ್ಲಿ ಇಂತಹ ಪ್ರಕೃತಿಯಿಂದಲೇ ಧರ್ಮಾತಿದೇಶವನ್ನು ಮಾಡಬೇಕು ಎಂಬುದಾಗಿ ನಿಯಾಮಕವಾಕ್ಯವಿಲ್ಲದುದರಿಂದ ಯಾವ ಪ್ರಕೃತಿಯಿಂದಲಾದರೂ ಧರ್ಮಗಳ ಅತಿದೇಶವನ್ನು ಮಾಡಿಕೊಳ್ಳಬಹುದು. ಇದು ಇಲ್ಲಿನ **ಪೂರ್ವಪಕ್ಷ.**

ಶಾಸ್ತ್ರಾರ್ಥವ್ಯವಸ್ಥೆಯೇ ನಿಯಾಮಕವಾದುದರಿಂದ ನಿಯತವಾದ ಒಂದು ಪ್ರಕೃತಿಯಿಂದಲೇ ಧರ್ಮಾತಿದೇಶವನ್ನು ಮಾಡಬೇಕು. ಅತಿದೇಶವಿಶೇಷವನ್ನು ಕುರಿತು ವಿಚಾರ ಮಾಡಬೇಕು.

ಆ ವಿಶೇಷವಿಚಾರವು ಹೀಗಿರುತ್ತದೆ ; 'ಅಗ್ನಿಃ ದೇವತಾ ಅಸ್ಯ ಆಗ್ನೇಯಃ' ಎಂಬಂತೆ 'ಸೂರ್ಯಃ ದೇವತಾ ಅಸ್ಯ ಸೌರ್ಯಃ' ಎಂಬ ತದ್ಧಿತಾಂತಶಬ್ದಸಾಮ್ಯವೂ, ಏಕದೇವತಾಕತ್ವ,

ನಿರ್ವಾಪ ಮುಂತಾದ ಸಾಮ್ಯಗಳಿರುವುದರಿಂದ ಲಿಂಗಾನುಮಾನದಿಂದ ಕಲ್ಪಿತವಾದ **''ಸೌರ್ಯಃ ಆಗ್ನೇಯವತ್ ಕರ್ತವ್ಯಃ''** ಎಂಬ ವಚನದಿಂದ ಸೌರ್ಯಚರುಯಾಗದಲ್ಲಿ ಆಗ್ನೇಯಧರ್ಮಗಳು ಪ್ರಾಪ್ತವಾಗುತ್ತವೆ. ಅವ್ಯವಸ್ಥೆಯು ಇರುವುದಿಲ್ಲ. ಇದು ಇಲ್ಲಿನ **ಸಿದ್ಧಾಂತ.**

**೮. ಇಷ್ಟಿಯಲ್ಲಿ ಸೌಮಿಕಧರ್ಮಗಳಿವೆಯೇ? [ಜೈ.ಸೂ.8.1]**

**'ಐಂದ್ರಾಗ್ನಮೇಕಾದಶಕಪಾಲಂ ನಿರ್ವಪೇತ್ವಜಾಕಾಮಃ'** ಎಂದು ವಿಹಿತವಾಗಿರುವ ಇಷ್ಟಿಯಲ್ಲಿ ಐಷ್ಟಿಕಧರ್ಮದ ಅತಿದೇಶವೇ? ಸೌಮಿಕಧರ್ಮದ ಅತಿದೇಶವೇ? ಇದು ಇಲ್ಲಿನ **ಸಂಶಯ.**

ಐಷ್ಟಿಕ, ಸೌಮಿಕ ಎರಡರಲ್ಲಿಯೂ ಅಂಗಗಳಿರುವುದರಿಂದ ಯಾವುದರಿಂದ ಲಾದರೂ ಧರ್ಮಾತಿದೇಶವನ್ನು ಮಾಡಬಹುದು. ಇದು ಇಲ್ಲಿನ **ಪೂರ್ವಪಕ್ಷ.**

ಕಪಾಲ, ನಿರ್ವಾಪ ಮುಂತಾದ ಸಾಮ್ಯಗಳಿರುವುದರಿಂದ ಐಷ್ಟಿಕಧರ್ಮಾತಿ – ದೇಶವೇ ಆಗಬೇಕು. ಇದು ಇಲ್ಲಿನ **ಸಿದ್ಧಾಂತ.**

**೯. ಅಗ್ನೀಷೋಮೀಯಪಶುಯಾಗವು ಐಷ್ಟಿಕವಿಕೃತಿಯೇ? [ಜೈ.ಸೂ.8.1]**

ಅಗ್ನೀಷೋಮೀಯಪಶುಯಾಗವನ್ನು ಐಷ್ಟಿಕವಿಕೃತಿಯೆಂದು ಪರಿಗಣಿಸಿ, ಐಷ್ಟಿಕ ಧರ್ಮಗಳ ಅತಿದೇಶವಿದೆಯೇ? ಇದು **ಸಂಶಯ.**

ಇಷ್ಟಿಯಲ್ಲಿ ಕಪಾಲಗಳಿವೆ. ನಿರ್ವಾಪವಿದೆ. ಪಶುಯಾಗದಲ್ಲಿ ನಿರ್ವಾಪವಿಲ್ಲ. ಹೀಗಾಗಿ ಸಾಮ್ಯವಿಲ್ಲದ ಕಾರಣ ಐಷ್ಟಿಕಧರ್ಮಾತಿದೇಶವು ಬರುವುದಿಲ್ಲ. ಇದು ಇಲ್ಲಿನ **ಪೂರ್ವಪಕ್ಷ.**

**'ಅಗ್ನೀಷೋಮೀಯಂ ಪಶುಮಾಲಭೇತ'** ಎಂಬಲ್ಲಿ 'ಅಗ್ನೀಷೋಮೌ ದೇವತಾ ಅಸ್ಯ ಪಶೋಃ ಅಗ್ನೀಷೋಮೀಯಃ' ಎಂದು ಪಶುಯಾಗದಲ್ಲಿದೇವತಾಸಂಬಂಧವು ಸ್ಪಷ್ಟ ವಾಗಿದೆ. ಸೋಮಯಾಗವನ್ನು ವಿಧಾನ ಮಾಡುವ **'ಸೋಮೇನ ಯಜೇತ'** ಎಂಬಲ್ಲಿ ಯಾಗವು ಮಾತ್ರ ವಿಹಿತವಾಗಿದೆ. ದೇವತಾಸಂಬಂಧವನ್ನು ಹೇಳಿಲ್ಲ. ಐಷ್ಟಿಕವಾದ ಆಗ್ನೇಯದಲ್ಲಿ 'ಆಗ್ನೇಯಮಷ್ಟಾಕಪಾಲಮ್' ಎಂದು ಹೇಳಿದೆ. 'ಅಗ್ನಿಃ ದೇವತಾ ಅಸ್ಯ' ಎಂದು ದೇವತಾಸಂಬಂಧವು ಸ್ಪಷ್ಟವಾಗಿದೆ. ಅಲ್ಲದೆ 'ಸ್ರುಚ್ಯಮಾಘಾರಮಾಘಾರ್ಯ ಪಶುಂ ಸಮನಕ್ತಿ' ಎಂಬುದಾಗಿಯೂ, 'ಏಕಾದಶ ಪ್ರಯಾಜಾನ್ ಯಜತಿ' ಎಂಬ ಪಶುಯಾಗ ದಲ್ಲಿನ ವಚನಗಳು ಪಶುಯಾಗವು ಐಷ್ಟಿಕವಿಕೃತಿ ಎಂಬುದಕ್ಕೆ ಸೂಚಕಗಳಾಗಿವೆ. ಆದುದರಿಂದ ಪಶುಯಾಗದಲ್ಲಿ ಐಷ್ಟಿಕಧರ್ಮಗಳ ಅತಿದೇಶವಿರುತ್ತದೆ. ಇದು ಇಲ್ಲಿನ **ಸಿದ್ಧಾಂತ.**

**೧೦. ಸವನೀಯಪಶುಯಾಗವು ಯಾವುದರ ವಿಕೃತಿ ? [ಜೈ.ಸೂ.8.1]**

ಅಗ್ನೀಷೋಮೀಯಪಶುಯಾಗವು ಇಷ್ಟಿಯ ವಿಕೃತಿಯಾದರೂ ಸವನೀಯ ಪಶುಯಾಗಕ್ಕೆ ಅದು ಅವಾಂತರಪ್ರಕೃತಿಯಾಗುತ್ತದೆಯೇ? ಇದು ಇಲ್ಲಿನ **ಸಂಶಯ.**

ತಾನೇ ಇಷ್ಟಿಯ ವಿಕೃತಿಯಾದುದರಿಂದ ಅಗ್ನೀಷೋಮೀಯಪಶುಯಾಗವು ಸವನೀಯಾದಿಪಶುಯಾಗಗಳಿಗೆ ಅವಾಂತರಪ್ರಕೃತಿಯಾಗಲಾರದು. ಇದು ಇಲ್ಲಿನ **ಪೂರ್ವಪಕ್ಷ.**

ಈ ಪಶುಯಾಗಗಳಲ್ಲಿ **'ಆಲಭೇತ'** ಎಂಬುದರ ಸಮಾನವಾಗಿರುವಿಕೆ, ಸವನೀಯಪಶುಯಾಗದಲ್ಲಿ ವಪಾಪ್ರಚಾರವೂ ಸಹ ಪಶುಯಾಗದ ವಿಕೃತಿಯಾಗಿದೆ ಯೆಂಬುದಕ್ಕೆ ಲಿಂಗವಾಗಿದೆ. ಆದುದರಿಂದ ಇಷ್ಟಿಯ ವಿಕೃತಿಯಾದ ಅಗ್ನೀಷೋಮೀಯ ಪಶುಯಾಗವು ಸವನೀಯಪಶುಯಾಗಕ್ಕೆ ಅವಾಂತರಪ್ರಕೃತಿಯೂ ಆಗುತ್ತದೆ. ಇದು ಇಲ್ಲಿನ **ಸಿದ್ಧಾಂತ.**

**೧೧. 'ವಾಯವ್ಯಂ ಶ್ವೇತಮಾಲಭೇತ' 'ಸೌರ್ಯಂ ಚರುಂ ನಿರ್ವಪೇತ್' ಎಂಬುದು ಯಾವ ವಿಧಿ? [ಜೈ.ಸೂ. 2.3..]**

**'ವಾಯವ್ಯಂ ಶ್ವೇತಮಾಲಭೇತ' 'ಸೌರ್ಯಂ ಚರುಂ ನಿರ್ವಪೇತ್'** ಎಂಬುವು ವಿಧಿವಾಕ್ಯಗಳು. ಇವು ಯಾವ ವಿಧಿಗಳು? ಎಂಬುದು **ಸಂಶಯ.**

ದರ್ಶ–ಪೂರ್ಣಮಾಸಪ್ರಕರಣದಲ್ಲಿ 'ಈಷಾಮಾಲಭೇತ' 'ಚತುರೋ ಮುಷ್ಟೀನ್ ನಿರ್ವಪತಿ' ಎಂಬ ವಾಕ್ಯಗಳಿವೆ. ಆ ವಾಕ್ಯಗಳಿಂದ ಆಲಂಭ [ಸ್ಪರ್ಶ]ವೂ, ನಿರ್ವಾಪವೂ ವಿಹಿತವಾಗಿರುವುದರಿಂದ 'ವಾಯವ್ಯಂ ಶ್ವೇತಮಾಲಭೇತ' 'ಸೌರ್ಯಂ ಚರುಂ ನಿರ್ವಪೇತ್' ಎಂಬ ವಾಕ್ಯಗಳಿಂದ ಗುಣಮಾತ್ರ ವಿಹಿತವಾಗಿದೆ. **'ಈಷಾಮಾಲಭೇತ'** ಅಂದರೆ ಬಿಳುಪಾಗಿರುವ ಈಷಾ [ಗಾಡಿಯ ಮಧ್ಯದಲ್ಲಿರುವ ದೀರ್ಘವಾದ ಮರದ ತುಂಡು]ವನ್ನು ಸ್ಪರ್ಶಿಸಬೇಕು ಎಂದು ಅರ್ಥ. ಹೀಗಾಗಿ 'ವಾಯವ್ಯಂ ಶ್ವೇತಮಾಲಭೇತ' ಮತ್ತು 'ಸೌರ್ಯಂ ಚರುಂ ನಿರ್ವಪೇತ್' ಎಂಬುದು ಗುಣವಿಧಿ ಎಂಬುದು ಇಲ್ಲಿನ ಒಂದನೆಯ **ಪೂರ್ವಪಕ್ಷ.**

ಅಥವಾ ಫಲಕ್ಕಾಗಿ ವಿಹಿತವಾಗಿರುವ ಅಲ್ಲಿರುವ ಅಂಗಮಾತ್ರವಿಶಿಷ್ಟವಾದ ಆಲಂಭ – ನಿರ್ವಾಪವಿಧಿಯೆಂಬುದು ಎರಡನೆಯ **ಪೂರ್ವಪಕ್ಷ.**

**'ದೇವತೋದ್ದೇಶೇನ ದ್ರವ್ಯತ್ಯಾಗಃ ಯಾಗಃ'** ಎಂಬುದು ಯಾಗದ ವಿವರಣೆ. 'ವಾಯವ್ಯಂ ಶ್ವೇತಮಾಲಭೇತ' 'ಸೌರ್ಯಂ ಚರುಂ ನಿರ್ವಪೇತ್' ಎಂಬಲ್ಲಿ ದ್ರವ್ಯ–ದೇವತಾಸಂಬಂಧವು ಉಕ್ತವಾಗಿದೆ. ಅದು ಯಾಗದಿಂದಲೇ ಆಗಬೇಕು. ಹೀಗಾಗಿ 'ಯಜೇತ' ಎಂದು ಇಲ್ಲದಿದ್ದರೂ ವಿಧಿಯನ್ನು ಕಲ್ಪಿಸಬೇಕು. ವಾಯವ್ಯ ಪಶುಯಾಗದಲ್ಲಿ ಕಲ್ಪಿತವಾದ ವಿಧಿವಾಕ್ಯವು ಹೀಗಿರುತ್ತದೆ. **'ವಾಯುದೇವತಾಕೇನ ಶ್ವೇತಗುಣವಿಶಿಷ್ಟ ಪಶುದ್ರವ್ಯೇಣ ಭೂತಿಕಾಮೋ ಯಜೇತ'.** ಸೌರ್ಯಚರುಯಾಗದಲ್ಲಿ ಆ ವಿಧಿ ವಾಕ್ಯವು ಹೀಗಿರುತ್ತದೆ; **'ಸೂರ್ಯದೇವತಾಕೇನ ಚರುದ್ರವ್ಯಕೇಣ ಯಾಗೇನ ಬ್ರಹ್ಮವರ್ಚಸಕಾಮೋ ಯಜೇತ'.**

**'ಆಲಭೇತ' 'ನಿರ್ವಪೇತ್'** ಎಂದು ಹೇಳಿರುವ ಆಲಂಭ, ನಿರ್ವಾಪಗಳು ಆರ್ಥಿಕವಾದ ಆಲಂಭ, ನಿರ್ವಾಪಗಳ ಅನುವಾದಕಗಳು.

ಹೀಗಾಗಿ 'ವಾಯವ್ಯಂ ಶ್ವೇತಮಾಲಭೇತ' 'ಸೌರ್ಯಂ ಚರುಂ ನಿರ್ವಪೇತ್' ಇವು ಯಾಗವಿಧಿಗಳೇ ಆಗಿವೆಯೆಂಬುದು ಇಲ್ಲಿನ **ಸಿದ್ಧಾಂತ.**

**೧೨. 'ಶ್ವೇತಮಾಲಭೇತ' ಎಂಬಲ್ಲಿ ಪಶು ಯಾವುದು?**

'ವಾಯವ್ಯಂ ಶ್ವೇತಮಾಲಭೇತ' ಎಂಬಲ್ಲಿ 'ಶ್ವೇತಮ್' ಎಂದರೆ ಬಿಳುಪಾಗಿರುವ ಎಂದರ್ಥ. ಬಿಳುಪಾದ ಯಾವ ಪಶುವಿನ ಆಲಂಭನವು ಇಲ್ಲಿ ವಿಹಿತವಾಗಿದೆ ? ಎಂಬುದು ಇಲ್ಲಿನ **ಸಂಶಯ.**

**'ಶ್ವೇತಮ್'** ಎಂದು ಗುಣಮಾತ್ರವನ್ನು ಹೇಳಿರುವುದರಿಂದ ಯಾವ ಪಶುವಾದರೂ ಆಗಬಹುದೆಂದು ಇಲ್ಲಿನ **ಪೂರ್ವಪಕ್ಷ.**

ಪ್ರಕೃತಿಯಾದ ಅಗ್ನೀಷೋಮೀಯಪಶುಯಾಗದಲ್ಲಿ ಛಾಗವನ್ನು ಹೇಳಿರುವುದರಿಂದ, ವಿಕೃತಿಯಾಗವಾದ ಇಲ್ಲಿ ಅದಕ್ಕೆ ಯಾವ ಬಾಧಕವೂ ಇಲ್ಲದಿರುವುದರಿಂದ ಪಶುವು ಛಾಗ [ಹೋತ]ವೇ ಆಗಬೇಕೆಂದು ಇಲ್ಲಿನ **ಸಿದ್ಧಾಂತ.**

**೧೩. ಸೋಮಾಪೂಷಪಶುಯಾಗದಲ್ಲಿ ಯೂಪ ಯಾವುದು?**

ಸೋಮಾಪೂಷಪಶುಯಾಗದಲ್ಲಿ **'ಔದುಂಬರೋ ಯೂಪೋ ಭವತಿ'** ಎಂಬ ವಿಧಿಯಿದೆ. ಪ್ರಕೃತಿಯಾಗದಂತೆ ಖಾದಿರಯೂಪವೇ? ಅಥವಾ ಔದುಂಬರಯೂಪವೇ? ಎಂಬುದು ಇಲ್ಲಿನ **ಸಂಶಯ.**

ಈ ಯಾಗದಲ್ಲಿ **'ಔದುಂಬರೋ ಯೂಪೋ ಭವತಿ'** ಎಂಬ ವಿಶೇಷವಿಧಿಯಿದೆ. ಈ ಪಶುಯಾಗಕ್ಕೆ ಪ್ರಕೃತಿಯಾಗವು ಅಗ್ನೀಷೋಮೀಯಪಶುಯಾಗ. ಪ್ರಕೃತಿಯಾಗದಲ್ಲಿ **'ಖಾದಿರೋ ಯೂಪೋ ಭವತಿ'** ಎಂಬುದಾಗಿ ಖಾದಿರವು ಯೂಪ. 'ಪ್ರಕೃತಿವತ್ ವಿಕೃತಿಃ' ಎಂಬ ಅತಿದೇಶದಂತೆ ಖಾದಿರವು ಪ್ರಾಪ್ತವಾಗುತ್ತದೆ. ವಿಶೇಷವಾಗಿ ಹೇಳಿರುವ ಔದುಂಬರವೂ ಇದೆ. ಹೀಗಾಗಿ ಎರಡಕ್ಕೂ ಸಮುಚ್ಚಯವಿದೆಯೆಂದು ಇಲ್ಲಿನ **ಪೂರ್ವಪಕ್ಷ.**

ಅನ್ಯನಿರಪೇಕ್ಷವಾಗಿ ಔದುಂಬರವನ್ನು ಈ ಪಶುಯಾಗಕ್ಕೆ ಹೇಳಿರುವುದರಿಂದ ಅತಿದೇಶದಿಂದ ಬರುವ ಖಾದಿರಬಾಧವನ್ನು ಹೇಳಬೇಕು. ಹೀಗಾಗಿ ಸೋಮಾಪೂಷ ಪಶುಯಾಗದಲ್ಲಿ ಔದುಂಬರಯೂಪವೇ ಎಂಬುದು **ಸಿದ್ಧಾಂತ.**

* * *

## ॥ ದ್ವಿತೀಯೋಽನುವಾಕಃ ॥

ಪ್ರಜಾಪತಿಃ ಪ್ರಜಾ ಅಸೃಜತ ತಾ ಅಸ್ಮಾತ್ಸೃಷ್ಟಾಃ

ಪರಾಚೀರಾಯನ್ತಾ ವರುಣಮಗಚ್ಛನ್ತಾ ಅನ್ವೈತ್ತಾಃ

ಪುನರಯಾಚತ

---

**ಪ್ರಜಾಪತಿರಿತಿ ಪ್ರಜಾ–ಪತಿಃ** । ಪ್ರಜಾ ಇತಿ ಪ್ರ–ಜಾಃ । ಅಸೃಜತ । ತಾಃ । ಅಸ್ಮಾತ್ । ಸೃಷ್ಟಾಃ । ಪರಾಚೀಃ । ಆಯನ್ನ್ । ತಾಃ । ವರುಣಮ್ । ಅಗಚ್ಛನ್ನ್ । ತಾಃ । ಅನ್ವಿತಿ । ಐತ್ । ತಾಃ । ಪುನಃ । ಅಯಾಚತ ।

---

ಪ್ರಥಮಾನುವಾಕದಲ್ಲಿ

**ಭೂತಿಕಾಮೋ ಗ್ರಾಮಕಾಮಃ ಪ್ರಜಾರ್ಥೀ ದೀರ್ಘರೋಗವಾನ್ ।**
**ಪ್ರಜಾಪಶ್ವರ್ಥಿನೌ ತೇಷಾಂ ಶ್ವೇತಾದ್ಯಾಃ ಪಶವಃ ಸ್ಮೃತಾಃ ॥**

ಈ ಪಶುಯಾಗಗಳು ಹೇಳಲ್ಪಟ್ಟಿವೆ. ಈ ಎರಡನೆಯ ಅನುವಾಕದಲ್ಲಿ ವರುಣ ಗೃಹೀತಾದಿಗಳು ಮಾಡಬೇಕಾದ ಪಶುಯಾಗಾದಿಗಳು ಹೇಳಲ್ಪಟ್ಟಿವೆ. ವರುಣಗೃಹೀತ – ಯಾಗವು ಮೊದಲು ವಿಹಿತವಾಗಿದೆ.

---

### ವರುಣಗೃಹೀತಯಾಗವಿಧಿ; ಅದರ ಉಪಾಖ್ಯಾನ

| | |
|---|---|
| ಪ್ರಜಾಪತಿಃ ಪ್ರಜಾಃ ಅಸೃಜತ | ಪ್ರಜಾಪತಿಬ್ರಹ್ಮನು ಪ್ರಜೆಗಳನ್ನು [ಸ್ಥಾವರ ಜಂಗಮಾದಿಗಳನ್ನು] ಸೃಷ್ಟಿಸಿದನು. |
| ತಾಃ ಅಸ್ಮಾತ್ ಸೃಷ್ಟಾಃ ಪರಾಚೀಃ ಆಯನ್ | ಪ್ರಜಾಪತಿಯಿಂದ ಸೃಷ್ಟರಾದ ಆ ಪ್ರಜೆಗಳು ಅವನಲ್ಲಿ ಅನುರಾಗರಹಿತರಾಗಿ ಹೊರಟು ಹೋದರು. |
| ತಾಃ ವರುಣಮ್ ಅಗಚ್ಛನ್ | ಅವರು ವರುಣನನ್ನು ಆಶ್ರಯಿಸಿದರು. |
| ತಾಃ ಅನ್ವೈತ್ ತಾಃ ಪುನಃ ಅಯಾಚತ | ಪ್ರಜಾಪತಿಯು ಪ್ರಜೆಗಳನ್ನು ಹಿಂಬಾಲಿಸಿದನು. ಆ ಪ್ರಜೆಗಳನ್ನು ತನಗೆ ಮತ್ತೆ ಕೊಡಬೇಕೆಂದು [ವರುಣನನ್ನು] ಪ್ರಾರ್ಥಿಸಿದನು. |

ತಾ ಅಸ್ಮೈ ನ ಪುನರದದಾತ್ಸೋಽಬ್ರವೀದ್ವರಂ ವೃಣೀಷ್ವಾಥ ಮೇ ಪುನರ್ದೇಹೀತಿ ತಾಸಾಂ ವರಮಾಽಲಭತ ಸ ಕೃಷ್ಣ ಏಕಶಿತಿಪಾದಭವದ್ಯೋ ವರುಣಗೃಹೀತಃ ಸ್ಯಾತ್ಸ ಏತಂ ವಾರುಣಂ ಕೃಷ್ಣಮೇಕಶಿತಿಪಾದಮಾಲಭೇತ

---

ತಾಃ । ಅಸ್ಮೈ । ನ । ಪುನಃ । ಅದದಾತ್ । ಸಃ । ಅಬ್ರವೀತ್ । ವರಮ್ । ವೃಣೀಷ್ವ । ಅಥ । ಮೇ । ಪುನಃ । ದೇಹಿ । ಇತಿ । ತಾಸಾಮ್ । ವರಮ್ । ಐತಿ । ಅಲಭತ । ಸಃ । ಕೃಷ್ಣಃ । ಏಕಶಿತಿಪಾದಿತ್ಯೇಕ – ಶಿತಿಪಾತ್ । ಅಭವತ್ । ಯಃ । ವರುಣಗೃಹೀತ ಇತಿ ವರುಣ– ಗೃಹೀತಃ । ಸ್ಯಾತ್ । ಸಃ । ಏತಮ್ । ವಾರುಣಮ್ । ಕೃಷ್ಣಮ್ । ಏಕಶಿತಿಪಾದಮಿತ್ಯೇಕ – ಶಿತಿಪಾದಮ್ । ಐತಿ । ಲಭೇತ ।

---

| | |
|---|---|
| ತಾಃ ಅಸ್ಮೈ ನ ಪುನಃ ಅದದಾತ್ | [ಆದರೆ ಆ ವರುಣನು] ಈ ಪ್ರಜಾಪತಿಗೆ ಪ್ರಜೆಗಳನ್ನು ತಿರುಗಿ ಕೊಡಲಿಲ್ಲ. |
| ಸಃ ವರಮ್ ವೃಣೀಷ್ವ, ಅಥ ಮೇ ಪುನಃ ದೇಹಿ ಇತಿ ಅಬ್ರವೀತ್ | ಆ ಪ್ರಜಾಪತಿಯು 'ಒಂದು ಶ್ರೇಷ್ಠವಾದುದನ್ನು ನೀನು ಆರಿಸಿಕೋ, ಅನಂತರ ಉಳಿದುದನ್ನು ನನಗೆ ಕೊಡು' ಎಂದು ವರುಣನಿಗೆ ಹೇಳಿದನು. |
| ತಾಸಾಮ್ ವರಮ್ ಆಲಭತ | ಅವುಗಳಲ್ಲಿ ಶ್ರೇಷ್ಠವಾದ ಒಂದು ಪಶುವನ್ನು ವರುಣನು ಸ್ಪರ್ಶಿಸಿದನು. |
| ಸಃ ಕೃಷ್ಣಃ ಏಕಶಿತಿಪಾತ್ ಅಭವತ್ | ಅದು ಕಪ್ಪಾಗಿರುವ ಆದರೆ ಬಿಳಿಯ ಬಣ್ಣದ ಒಂದು ಪಾದವುಳ್ಳ ಪಶುವಾಯಿತು. |
| ಯಃ ವರುಣಗೃಹೀತಃ ಸ್ಯಾತ್ ಸಃ ಏತಮ್ ವಾರುಣಮ್ ಕೃಷ್ಣಮ್ ಏಕಶಿತಿಪಾದಮ್ ಆಲಭೇತ | ಯಾವನು ವರುಣನಿಂದ ಗೃಹೀತನಾಗಿರುತ್ತಾನೆಯೋ [ಜಲೋದರರೋಗಪೀಡಿತನೋ] ಅವನು [ರೋಗಪರಿಹಾರಕ್ಕಾಗಿ] ವರುಣದೇವನಿಗಾಗಿ ಈ ಬಿಳಿಯ ಕಾಲಿನ ಕಪ್ಪು ಬಣ್ಣದ ಪಶುವಿನಿಂದ ಯಾಗವನ್ನು ಮಾಡಬೇಕು. **[ವಿಧಿ]** |

ವರುಣಮ್ (೧) ಏವ ಸ್ವೇನ ಭಾಗಧೇಯೇನೋಪಧಾವತಿ ಸ

ಏವೈನಂ ವರುಣಪಾಶಾನ್ಮುಂಚತಿ ಕೃಷ್ಣ ಏಕಶಿತಿಪಾದ್ಭವತಿ

ವಾರುಣೋ ಹ್ಯೇಷ ದೇವತಯಾ ಸಮೃದ್ಧ್ಯೈ

---

ವರುಣಮ್ । (೧) । ಏವ । ಸ್ವೇನ । ಭಾಗಧೇಯೇನೇತಿ ಭಾಗ – ಧೇಯೇನ । ಉಪೇತಿ । ಧಾವತಿ । ಸಃ । ಏವ । ಏನಮ್ । ವರುಣಪಾಶಾದಿತಿ ವರುಣ – ಪಾಶಾತ್ । ಮುಂಚತಿ । **ಕೃಷ್ಣಃ** । ಏಕಶಿತಿಪಾದಿತ್ಯೇಕ–ಶಿತಿಪಾತ್ । ಭವತಿ । ವಾರುಣಃ । ಹಿ । ಏಷಃ । ದೇವತಯಾ । ಸಮೃದ್ಧ್ಯಾ ಇತಿ ಸಮ್–ಋದ್ಧ್ಯೈ ।

---

| | |
|---|---|
| ವರುಣಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಇದರಿಂದ ಯಜಮಾನನು] ವರುಣನ ಭಾಗವನ್ನಿತ್ತು ಅವನನ್ನು ತೃಪ್ತಿಪಡಿಸಿದವನಾಗುತ್ತಾನೆ. |
| ಸಃ ಏವ ಏನಮ್ ವರುಣಪಾಶಾತ್ ಮುಂಚತಿ | ಆ ವರುಣನು ಪ್ರೀತನಾಗಿ ಯಜಮಾನನನ್ನು ತನ್ನ ಪಾಶದಿಂದ ಬಿಡುಗಡೆ ಮಾಡುತ್ತಾನೆ. |

**ವಾರುಣಯಾಗದ ಪ್ರಶಂಸೆ**

| | |
|---|---|
| ಕೃಷ್ಣಃ ಏಕಶಿತಿಪಾತ್ ಭವತಿ | ಒಂದು ಕಾಲಿನಲ್ಲಿ ಬೆಳ್ಳಗಿರುವ ಕಪ್ಪು ಬಣ್ಣದ ಪಶುವು ಯಾಗಪಶುವಾಗಿದೆ. |
| ವಾರುಣಃ ಹಿ ಏಷಃ ದೇವತಯಾ ಸಮೃದ್ಧ್ಯೈ | ಇದು ವರುಣದೇವತಾಕವಾದುದರಿಂದ ಫಲಸಮೃದ್ಧಿಗೆ ಕಾರಣವಾಗುತ್ತದೆ. |

---

**ತಾತ್ಪರ್ಯ : ವರುಣಗೃಹೀತನು ರೋಗಪರಿಹಾರಾರ್ಥವಾಗಿ ಈ ಪಶುಯಾಗವನ್ನು ಮಾಡಬೇಕು. ಇದರ ಉಪಾಖ್ಯಾನವನ್ನು ಶ್ರುತಿಯು ಹೀಗೆ ಹೇಳುತ್ತದೆ.**

ಪ್ರಜಾಪತಿಬ್ರಹ್ಮನು ಪ್ರಜೆಗಳನ್ನು ಸೃಷ್ಟಿಸಿದನು. ಆ ಪ್ರಜೆಗಳು ಬ್ರಹ್ಮನಲ್ಲಿ ಅನುರಾಗವಿಲ್ಲದವರಾಗಿ ಅವನ ಬಳಿಯಿಂದ ದೂರ ಸರಿದು, ವರುಣನನ್ನು ಆಶ್ರಯಿಸಿದರು. ಪ್ರಜಾಪತಿಯು ಪ್ರಜೆಗಳನ್ನು ಹಿಂಬಾಲಿಸಿದನು. ಪ್ರಜೆಗಳನ್ನು ಮತ್ತೆ ತನಗೆ ಕೊಡಬೇಕೆಂದು ವರುಣನನ್ನು ಕೇಳಿದನು. ಆದರೆ ವರುಣನು ಅದಕ್ಕೆ ಒಪ್ಪಲಿಲ್ಲ. ಬಳಿಕ ಪ್ರಜಾಪತಿಯು – ಪ್ರಜೆಗಳಲ್ಲಿ ಶ್ರೇಷ್ಠವಾದ ಒಂದನ್ನು ಆರಿಸಿಕೊಂಡು

ಸುವರ್ಭಾನುರಾಸುರಸ್ಸೂರ್ಯಂ ತಮಸಾऽವಿಧ್ಯತ್ತಸ್ಮೈ

ದೇವಾಃ ಪ್ರಾಯಶ್ಚಿತ್ತಿಮೈಚ್ಛನ್ತಸ್ಯ ಯತ್ಪ್ರಥಮಂ

ತಮೋऽಪಾಘ್ನನ್ತ್ಸಾ

---

**ಸುವರ್ಭಾನುರಿತಿ ಸುವಃ – ಭಾನುಃ** । ಆಸುರಃ । ಸೂರ್ಯಮ್ । ತಮಸಾ । ಅವಿಧ್ಯತ್ । ತಸ್ಮೈ । ದೇವಾಃ । ಪ್ರಾಯಶ್ಚಿತ್ತಿಮ್ । ಐಚ್ಛನ್ನ್ । ತಸ್ಯ । ಯತ್ । ಪ್ರಥಮಮ್ । ತಮಃ । ಅಪಾಘ್ನನ್ನಿತ್ಯಪ – ಅಘ್ನನ್ನ್ । ಸಾ ।

---

**ಇಚ್ಛಿಸಿದ ಫಲಕ್ಕಾಗಿ ಆದಿತ್ಯಯಾಗದ ವಿಧಿ; ಉಪಾಖ್ಯಾನ**

| | |
|---|---|
| ಸುವರ್ಭಾನುಃ ಆಸುರಃ ಸೂರ್ಯಮ್ ತಮಸಾ ಅವಿಧ್ಯತ್ | ಸುವರ್ಭಾನುವೆಂಬ ಅಸುರನು ತಮೋರೂಪದಿಂದ ಸೂರ್ಯನನ್ನು ಮುಚ್ಚಿದನು. |
| ತಸ್ಮೈ ದೇವಾಃ ಪ್ರಾಯಶ್ಚಿತ್ತಿಮ್ ಐಚ್ಛನ್ನ್ | ದೇವತೆಗಳು ಅವನ ಪೀಡೆಗೆ ಪರಿಹಾರವನ್ನು ಬಯಸಿದರು. |
| ತಸ್ಯ ಯತ್ ಪ್ರಥಮಮ್ ತಮಃ ಅಪಾಘ್ನನ್ | ಅವನು ಉಂಟುಮಾಡಿದ ಕತ್ತಲೆಯ ಯಾವ ಮೊದಲನೆಯ ಭಾಗವನ್ನು ಹೋಗಲಾಡಿಸಿದರೋ |

---

ಉಳಿದವುಗಳನ್ನು ತನಗೆ ಕೊಡಬೇಕೆಂದು – ವರುಣನನ್ನು ಕೇಳಿದನು. ಇದಕ್ಕೆ ವರುಣನು ಒಪ್ಪಿ, ಶ್ರೇಷ್ಠವಾದ ಒಂದನ್ನು ಆರಿಸಿ, ಇದು 'ನನಗೆ ಇರಲಿ' – ಎಂದು ಸ್ಪರ್ಶಿಸಿದನು. ಅದು ಒಂದು ಕಾಲಿನಲ್ಲಿ ಮಾತ್ರ ಬಿಳುಪಿರುವ ಕಪ್ಪುಬಣ್ಣದ ಪಶುವಾಯಿತು. ಜಲೋದರ ರೋಗ (ತಿಳಿಯದ ರೋಗದಿಂದ) ದಿಂದ ಪೀಡಿತನಾದವನು ಈ ಏಕಶಿತಿಪಾದವುಳ್ಳ ಕೃಷ್ಣಪಶುವನ್ನು ವರುಣನಿಗಾಗಿ ಯಾಗ ಮಾಡಬೇಕು. ಇದು ವರುಣನ ಭಾಗವಾದುದರಿಂದ ಆತನು ಸುಪ್ರೀತನಾಗಿ ಯಜಮಾನನ ರೋಗರೂಪವಾದ ವರುಣಪಾಶದಿಂದ ಅವನನ್ನು ಬಿಡಿಸುತ್ತಾನೆ. ಕೃಷ್ಣವಾದ ಏಕಶ್ವೇತಪಾದವುಳ್ಳ ಪಶುವು ವರುಣನು

ಕೃಷ್ಣಾವಿರಭವದ್ಯದ್ದ್ವಿತೀಯಗ್ಂ ಸಾ ಫಲ್ಗುನೀ

ಯತ್ತೃತೀಯಗ್ಂ ಸಾ ಬಲಕ್ಷೀ ಯದಧ್ಯಸ್ಥಾದಪಾಕೃಂತನ್ಥ್ಸಾಽ

ವಿರ್ವಶಾ (೨) ಸಮಭವತ್ತೇ ದೇವಾ ಅಬ್ರುವನ್ದೇವಪಶುರ್ವಾ

ಅಯಗ್ಂ ಸಮಭೂತ್ಕಸ್ಮಾ ಇಮಮಾಲಫ್ಸ್ಯಾಮಹ ಇತ್ಯಥ ವೈ

---

ಕೃಷ್ಣಾ । ಅವಿಃ । ಅಭವತ್ । ಯತ್ । ದ್ವಿತೀಯಮ್ । ಸಾ । ಫಲ್ಗುನೀ । ಯತ್ । ತೃತೀಯಮ್ । ಸಾ । ಬಲಕ್ಷೀ । ಯತ್ । ಅಧ್ಯಸ್ಥಾದಿತ್ಯಧಿ – ಅಸ್ಥಾತ್ । ಅಪಾಕೃಂತನ್ನಿತ್ಯಪ – ಅಕೃಂತನ್ । ಸಾ ।(೨)। ಅವಿಃ । ವಶಾ । ಸಮಿತಿ । ಅಭವತ್ । ತೇ । ದೇವಾಃ । ಅಬ್ರುವನ್ । ದೇವಪಶುರಿತಿ ದೇವ – ಪಶುಃ । ವೈ । ಅಯಮ್ । ಸಮಿತಿ । ಅಭೂತ್ । ಕಸ್ಮೈ । ಇಮಮ್ । ಏತಿ । ಲಫ್ಸ್ಯಾಮಹೇ । ಇತಿ । ಅಥ । ವೈ ।

---

| | |
|---|---|
| ಸಾ ಕೃಷ್ಣಾ ಅವಿಃ ಅಭವತ್ | ಅದು ಕಪ್ಪು ಬಣ್ಣದ ಕುರಿಯಾಯಿತು. |
| ಯತ್ ದ್ವಿತೀಯಮ್ [ತಮಃ ಅಪಾಘ್ನನ್] | [ಅನಂತರ] ಕತ್ತಲೆಯ ಯಾವ ಎರಡನೆಯ ಭಾಗವನ್ನು [ದೇವತೆಗಳು] ಹೋಗಲಾಡಿಸಿದರೋ |
| ಸಾ ಫಲ್ಗುನೀ | ಅದು ಕೆಂಪು ಬಣ್ಣದ ಕುರಿಯಾಯಿತು. |
| ಯತ್ ತೃತೀಯಮ್ | ಕತ್ತಲೆಯ ಯಾವ ಮೂರನೆಯ ಭಾಗವುಂಟೋ |
| ಸಾ ಬಲಕ್ಷೀ | ಅದು ಬಿಳಿಯ ಬಣ್ಣದ ಕುರಿಯಾಯಿತು. |
| ಯತ್ ಅಧ್ಯಸ್ಥಾತ್ ಅಪಾಕೃಂತನ್ | ಯಾವುದನ್ನು ಮೂಳೆಯ ಮೇಲಿನ ಪ್ರಕಾಶದಿಂದ ಹೋಗಲಾಡಿಸಿದರೋ, |
| ಸಾ ಅವಿಃ ವಶಾ ಸಮಭವತ್ | ಅದು ಬಂಜೆಯಾದ ಕುರಿಯಾಗಿ ಉತ್ಪನ್ನವಾಯಿತು. |
| ತೇ ದೇವಾಃ ಅಯಮ್ ದೇವಪಶುಃ ವೈ ಸಮಭೂತ್ ಕಸ್ಮೈ ಇಮಮ್ ಆಲಪ್ಸ್ಯಾಮ ಹೇ ಇತಿ ಅಬ್ರುವನ್ | ಆ ದೇವತೆಗಳು 'ಇದು ದೇವಪಶುವಾಯಿತು ಯಾವ ಶ್ರೇಷ್ಠಕಾಮನೆಗಾಗಿ ಇದನ್ನು ಆಲಂಭ ಮಾಡೋಣ [ಯಾಗ ಮಾಡೋಣ]?' ಎಂದು ತಮ್ಮತಮ್ಮಲ್ಲಿ ಹೇಳಿಕೊಂಡರು. |

ತರ್ಹ್ಯಲ್ಪಾ ಪೃಥಿವ್ಯಾಸೀದಜಾತಾ ಓಷಧಯಸ್ತಾಮವಿಂ

ವಶಾಮಾದಿತ್ಯೇಭ್ಯಃ ಕಾಮಾಯಾऽಲಭಂತ ತತೋ ವಾ

ಅಪ್ರಥತ

ತರ್ಹಿ । ಅಲ್ಪಾ । ಪೃಥಿವೀ । ಆಸೀತ್ । ಅಜಾತಾಃ । ಓಷಧಯಃ । ತಾಮ್ । ಅವಿಮ್ ।

ವಶಾಮ್ । ಆದಿತ್ಯೇಭ್ಯಃ । ಕಾಮಾಯ । ಏತಿ । ಅಲಭಂತ । ತತಃ । ವೈ । ಅಪ್ರಥತ ।

| | |
|---|---|
| ಅಥ ವೈ ತರ್ಹಿ | ಆ ಮಾತನಾಡಿಕೊಂಡ ಅನಂತರ – |
| ಅಲ್ಪಾ ಪೃಥಿವೀ ಆಸೀತ್ | ಭೂಮಿಯು ಅಲ್ಪವಾದ ವಿಸ್ತಾರವುಳ್ಳದ್ದಾಗಿತ್ತು. |
| ಅಜಾತಾಃ ಓಷಧಯಃ | ಸಸ್ಯಗಳು ಹುಟ್ಟಿ ಬೆಳೆಯುತ್ತಿರಲಿಲ್ಲ. |
| ತಾಮ್ ಅವಿಮ್ ವಶಾಮ್ *ಆದಿತ್ಯೇಭ್ಯಃ *ಕಾಮಾಯ ಆಲಭಂತ | – ಆ ಬಂಜೆಯಾದ ಕುರಿಯನ್ನು ಇಚ್ಛೆಯನ್ನು ಪೂರೈಸುವ *ಕಾಮನಿಗಾಗಿಯೂ, *ಆದಿತ್ಯರಿಗಾಗಿಯೂ ಯಾಗ ಮಾಡಿದರು. [ಕಾಮ ಸಂಪಾದಕರಾದ ಆದಿತ್ಯರಿಗಾಗಿ] |
| ತತಃ ವೈ ಪೃಥಿವೀ ಅಪ್ರಥತ | ಅನಂತರ ಭೂಮಿಯು ವಿಸ್ತಾರ ಹೊಂದಿತು. |

ಆರಿಸಿದ ಪಶುವಾದುದರಿಂದ ವರುಣನು ಸುಪ್ರೀತನಾಗಿ ರೋಗಪರಿಹಾರವನ್ನು ಮಾಡುತ್ತಾನೆ.

**'ಸುವರ್ಭಾನು'** [ಸ್ವರ್ಗದ ಪ್ರಭೆಯನ್ನು ಹೋಗಲಾಡಿಸುವವನು] ಎಂಬ ಅಸುರನು ಕಪ್ಪು ಮಣ್ಣಿನ ಭೂಮಿಯ ಕಪ್ಪು ವರ್ಣವನ್ನು ಧರಿಸಿ ಸೂರ್ಯನನ್ನು ಮುಚ್ಚಿ, ಲೋಕವೆಲ್ಲವೂ ಕತ್ತಲೆಯಲ್ಲಿ ಮುಳುಗುವಂತೆ ಮಾಡಿದನು. ಆಗ ದೇವತೆಗಳು ಕತ್ತಲೆಯ ಪರಿಹಾರವನ್ನು ಬಯಸಿದರು. ಅವರು ಮಣಿ ಮೊದಲಾದ ಪ್ರಕಾಶಕವಸ್ತುಗಳಿಂದ ಹೋಗಲಾಡಿಸಿದ ಕತ್ತಲೆಯ ಮೊದಲನೆಯ ಭಾಗವು ಕಪ್ಪು ಬಣ್ಣದ ಕುರಿಯಾಯಿತು.

* ಇಲ್ಲಿ ಕಾಮಶಬ್ದವು ಕಾಮಸಂಪಾದಕರಾದ ಆದಿತ್ಯರಿಗೆ ಅನ್ವಯಿಸುತ್ತದೆ. ಅದು **'ಕಾಮಾಯ'** ಎಂಬುದು ಏಕವಚನದಲ್ಲಿದೆ. ಆದರೂ ಶ್ರುತಿಯಲ್ಲಿ ಬಹುವಚನದ ಅರ್ಥವನ್ನೀಯುತ್ತದೆ.

ಕಾಮದೇವನು ಪ್ರತ್ಯೇಕ ದೇವನೆಂದೂ ಹೇಳಬಹುದು. ಸ್ವರ್ಗದ್ವಾರೇಷ್ಟಿಗಳಲ್ಲಿ ಕಾಮನು ಪ್ರತ್ಯೇಕದೇವತೆಯಾಗಿ ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾನೆ. ಆದಿತ್ಯರೊಡನೆ ಕಾಮದೇವನನ್ನು ನಿರ್ದೇಶಿಸಿರುವ ಮಂತ್ರವು 'ಆದಿತ್ಯಾನ್ಕಾಮಮವಸೇ ಹುವೇಮ' ಎಂಬಲ್ಲಿ ಇದೆ. ಆದಿತ್ಯರಿಗೆ ವಿಶೇಷಣದೊಡನೆ ನಿರ್ದೇಶವು 'ಆದಿತ್ಯೇಭ್ಯೋ ಭುವದ್ವದ್ಭ್ಯಃ' ಎಂಬಲ್ಲಿ ಬಹುವಚನದಲ್ಲಿಯೇ ಇದೆ. ಹೀಗಾಗಿ ಎರಡೂ ರೀತಿ ವಿವರಿಸಬಹುದು.

ಪೃಥಿವ್ಯಜಾಯಂತೌಷಧಯೋ ಯಃ ಕಾಮಯೇತ

ಪ್ರಥೇಯ ಪಶುಭಿಃ ಪ್ರ ಪ್ರಜಯಾ ಜಾಯೇಯೇತಿ ಸ

ಏತಾಮವಿಂ ವಶಾಮಾದಿತ್ಯೇಭ್ಯಃ[ಕಾಮಾಯಾ(೩)ಆಲಭೇತಾ]

---

ಪೃಥಿವೀ । ಅಜಾಯಂತ । ಓಷಧಯಃ । ಯಃ । ಕಾಮಯೇತ । ಪ್ರಥೇಯ । ಪಶುಭಿರಿತಿ

ಪಶು-ಭಿಃ । ಪ್ರೇತಿ । ಪ್ರಜಯೇತಿ ಪ್ರ-ಜಯಾ । ಜಾಯೇಯ । ಇತಿ । ಸಃ । ಏತಾಮ್ ।

ಅವಿಮ್ । ವಶಾಮ್ । ಆದಿತ್ಯೇಭ್ಯಃ ।

---

| | |
|---|---|
| ಓಷಧಯಃ ಅಜಾಯಂತ | ಸಸ್ಯಗಳು ಹುಟ್ಟಿ ಬೆಳೆದವು. |
| ಯಃ ಪಶುಭಿಃ ಪ್ರಥೇಯ<br>ಪ್ರಜಯಾ ಪ್ರಜಾಯೇಯ<br>ಇತಿ ಕಾಮಯೇತ | ಯಾವ ಯಜಮಾನನು ತಾನು ಪಶುಸಮೃದ್ಧಿಯನ್ನು ಹೊಂದುವೆನೆಂದೂ, ಪ್ರಜಾಸಂಪತ್ತಿಯನ್ನು ಹೊಂದುವೆನೆಂದೂ ಬಯಸುತ್ತಾನೆಯೋ |
| ಸಃ ಏತಾಮ್ ಅವಿಮ್ ವಶಾಮ್<br>ಆದಿತ್ಯೇಭ್ಯಃ ಕಾಮಾಯ ಆಲಭೇತ | ಅವನು ಈ ಬಂಜೆಯಾದ ಕುರಿಯನ್ನು ಸಮರ್ಥನಾದ ಕಾಮನಿಗೂ, ಆದಿತ್ಯರಿಗೂ ಯಾಗ ಮಾಡಬೇಕು. **[ವಿಧಿ]** |

---

ಎರಡನೆಯ ಭಾಗವು ಕೆಂಪು ಬಣ್ಣದ ಕುರಿಯಾಯಿತು. ಮೂರನೆಯ ಭಾಗವು ಬಿಳಿಯ ಬಣ್ಣದ ಕುರಿಯಾಯಿತು. ದೇಹದ ಅಸ್ಥಿಗಳ ಪ್ರಕಾಶದಿಂದ ಹೋಗಲಾಡಿಸಿದ ಕತ್ತಲೆಯ ಭಾಗವು ಬಂಜೆಯಾದ ಕುರಿಯಾಯಿತು.

ಅನಂತರ ದೇವತೆಗಳು ತಮ್ಮತಮ್ಮಲ್ಲಿಯೇ 'ದೇವಪಶುವಾದ ಈ ಬಂಜೆ ಕುರಿಯನ್ನು ಯಾವ ಕಾಮನೆಗಾಗಿ ಯಾವ ದೇವನಿಗಾಗಿ ಯಾಗ ಮಾಡಬೇಕು?' ಎಂದು ವಿಚಾರ ಮಾಡಿಕೊಂಡರು. ಆ ಸಮಯದಲ್ಲಿ ಭೂಮಿಯು ಅಲ್ಪ ವಿಸ್ತಾರವುಳ್ಳದ್ದಾಗಿತ್ತು, ಅಲ್ಲಿ ಓಷಧಿಗಳು ಹುಟ್ಟಿ ಬೆಳೆಯುತ್ತಿರಲಿಲ್ಲ. ಇದನ್ನು ಗಮನಿಸಿದ ದೇವತೆಗಳು ಈ ದೋಷದ್ವಯವನ್ನು ಹೋಗಲಾಡಿಸಬೇಕೆಂಬ ಕಾಮನೆಯಿಂದ ಕಾಮಸಂಪಾದಕರಾದ ಆದಿತ್ಯದೇವತೆಗಳನ್ನು [ಕಾಮದೇವನನ್ನು ] ಉದ್ದೇಶಿಸಿ ಆ ಬಂಜೆ ಕುರಿಯನ್ನು ಯಾಗ ಮಾಡಿದರು. ಅನಂತರ ಭೂಮಿಯು ವಿಸ್ತೀರ್ಣವಾಯಿತು. ಸಸ್ಯಗಳು ಹುಟ್ಟಿ ಚೆನ್ನಾಗಿ ಬೆಳೆದವು. ಆದುದರಿಂದ ಯಾವ ಯಜಮಾನನು ಪಶುಸಂಪತ್ತಿಯನ್ನು ಪಡೆಯುವೆನೆಂದೂ, ಪ್ರಜೆಗಳಿಂದ-ಪುತ್ರಪೌತ್ರಾದಿಗಳಿಂದ ಪರಿಪೂರ್ಣನಾಗುವೆನೆಂದು

ಕಾಮಾಯಾಲಭೇತಾದಿತ್ಯಾನೇವ ಕಾಮಗ್ಂ ಸ್ವೇನ

ಭಾಗಧೇಯೇನೋಪಧಾವತಿ ತ ಏವೈನಂ ಪ್ರಥಯಂತಿ

ಪಶುಭಿಃ ಪ್ರ ಪ್ರಜಯಾ ಜನಯಂತ್ಯ

---

ಕಾಮಾಯ । [೩] । ಏತಿ । ಲಭೇತ । ಆದಿತ್ಯಾನ್ । ಏವ । ಕಾಮಮ್ । ಸ್ವೇನ ।

ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ತೇ । ಏವ । ಏನಮ್ ।

ಪ್ರಥಯಂತಿ । ಪಶುಭಿರಿತಿ ಪಶು-ಭಿಃ । ಪ್ರೇತಿ । ಪ್ರಜಯೇತಿ ಪ್ರ-ಜಯಾ । ಜನಯಂತಿ ।

---

| | |
|---|---|
| ಆದಿತ್ಯಾನ್ ಏವ ಕಾಮಮ್ ಸ್ವೇನ ಭಾಗಧೇಯೇನ ಉಪಧಾವತಿ | [ಹೀಗೆ ಮಾಡುವುದರಿಂದ ಆ ಯಜಮಾನನು] ಕಾಮನಿಗೂ, ಆದಿತ್ಯರಿಗೂ ಅವರ ಭಾಗವನ್ನು ಸಮರ್ಪಿಸಿ, ಸೇವಿಸಿದವನಾಗುತ್ತಾನೆ. |
| ತೇ ಏವ ಏನಂ ಪಶುಭಿಃ ಪ್ರಥಯಂತಿ | ಅವರೇ ಯಜಮಾನನಿಗೆ ಪಶುಸಮೃದ್ಧಿಯನ್ನುಂಟುಮಾಡುತ್ತಾರೆ. |
| ಪ್ರಜಯಾ ಪ್ರ ಜನಯಂತಿ | ಶ್ರೇಷ್ಠರಾದ ಪ್ರಜೆಗಳು ಹುಟ್ಟುವಂತೆ ಮಾಡುತ್ತಾರೆ. |

---

ಬಯಸುವನೋ, ಆತನು ಈ ವಂಧ್ಯಪಶುವನ್ನು ಕಾಮಸಂಪಾದಕರಾದ ಆದಿತ್ಯರಿಗೆ / ಕಾಮದೇವತೆಗಾಗಿ ಮತ್ತು ಆದಿತ್ಯರಿಗಾಗಿ ಯಾಗ ಮಾಡಬೇಕು. ಈ ಯಾಗದ ಪ್ರಭಾವದಿಂದ ಆ ಯಜಮಾನನು ತಮ್ಮ ಭಾಗವನ್ನು ಪಡೆದು ತೃಪ್ತರಾದ ದೇವತೆಗಳ ಅನುಗ್ರಹದಿಂದ ಪಶುಸಂಪತ್ತನ್ನೂ, ಪುತ್ರಾದಿಸಂಪತ್ತನ್ನೂ ಪಡೆಯುತ್ತಾನೆ.

–ಸಾವಾದಿತ್ಯೋ ನ ವ್ಯರೋಚತ ತಸ್ಮೈ ದೇವಾಃ

ಪ್ರಾಯಶ್ಚಿತ್ತಿಮೈಚ್ಛನ್ನಸ್ಮಾ ಏತಾ ಮಲ್ಹಾ ಆऽಲಭಂತಾऽऽ

ಗ್ನೇಯೀಂ ಕೃಷ್ಣಗ್ರೀವೀಗ್ಂ ಸಗ್ಂಹಿತಾಮೈಂದ್ರೀಗ್ಂ

---

**ಅಸೌ** । ಆದಿತ್ಯಃ । ನ । ವೀತಿ । ಅರೋಚತ । ತಸ್ಮೈ । ದೇವಾಃ । ಪ್ರಾಯಶ್ಚಿತ್ತಿಮ್ । ಐಚ್ಛನ್ನ್ । ತಸ್ಮೈ । ಏತಾಃ । ಮಲ್ಹಾಃ । ಏತಿ । ಆಲಭಂತ । ಆಗ್ನೇಯೀಮ್ । ಕೃಷ್ಣಗ್ರೀವೀಮಿತಿ ಕೃಷ್ಣ–ಗ್ರೀವೀಮ್ । ಸಗ್ಂಹಿತಾಮಿತಿ ಸಮ್–ಹಿತಾಮ್ । ಐಂದ್ರೀಮ್ ।

---

**ಬ್ರಹ್ಮವರ್ಚಸವನ್ನು ಬಯಸುವವನಿಗೆ ವಿಹಿತವಾದ ಯಾಗ; ಉಪಾಖ್ಯಾನ – ಪ್ರಶಂಸೆ**

| | |
|---|---|
| ಅಸೌ ಆದಿತ್ಯಃ ನ ವ್ಯರೋಚತ | [ಒಮ್ಮೆ] ಈ ಸೂರ್ಯನು ಚೆನ್ನಾಗಿ ಪ್ರಕಾಶಿಸ ಲಿಲ್ಲ. |
| ತಸ್ಮೈ ದೇವಾಃ ಪ್ರಾಯಶ್ಚಿತ್ತಿಮ್ ಐಚ್ಛನ್ | ದೇವತೆಗಳು ಸೂರ್ಯನ ತೇಜೋಮಾಲಿನ್ಯಕ್ಕೆ ಪರಿಹಾರವನ್ನು ಇಚ್ಛಿಸಿದರು. |
| ತಸ್ಮೈ ಏತಾಃ ಮಲ್ಹಾಃ ಆಲಭಂತ | ಆ ಪರಿಹಾರಕ್ಕಾಗಿ ಮಲ್ಹೆಗಳನ್ನು [ಕುತ್ತಿಗೆಯಲ್ಲಿ ಮೊಲೆಗಳಿರುವ] ಆಡುಗಳನ್ನು ಯಾಗ ಮಾಡಿದರು. |
| ಆಗ್ನೇಯೀಮ್ ಕೃಷ್ಣಗ್ರೀವೀಮ್ | ಅಗ್ನಿದೇವತಾಕವಾದ ಕುತ್ತಿಗೆಯಲ್ಲಿ ಕಪ್ಪು ಬಣ್ಣದ್ದಾಗಿ, ಉಳಿದ ಕಡೆಯಲ್ಲಿ ಬೇರೆಯ ಬಣ್ಣವುಳ್ಳ ಆಡನ್ನೂ, |
| ಸಗ್ಂಹಿತಾಮ್ ಐಂದ್ರೀಮ್ | ಇಂದ್ರದೇವನಿಗಾಗಿ ವಿವಿಧ ಬಣ್ಣಗಳುಳ್ಳ ಆಡನ್ನೂ, |

---

ಒಂದು ಕಾಲದಲ್ಲಿ ಸೂರ್ಯನು ಮಂದಪ್ರಕಾಶನಾದನು. ದೇವತೆಗಳು ಅದಕ್ಕೆ ಪರಿಹಾರವನ್ನು ಆಲೋಚಿಸಿದರು. ಅವರು ಕುತ್ತಿಗೆಯಲ್ಲಿ ಕಪ್ಪುಬಣ್ಣವಿರುವ ಆಡನ್ನು ಅಗ್ನಿದೇವನಿಗೂ, ಮಿಶ್ರವರ್ಣಯುಕ್ತವಾದ ಆಡನ್ನು ಇಂದ್ರನಿಗೂ, ಬಿಳಿಯ ಬಣ್ಣದ ಆಡನ್ನು ಬೃಹಸ್ಪತಿಗೂ ಯಾಗ ಮಾಡಿದರು. ಈ ಆಡುಗಳು ಕುತ್ತಿಗೆಯಲ್ಲಿ

ಶ್ವೇತಾಂ ಬಾರ್ಹಸ್ಪತ್ಯಾಂ ತಾಭಿರೇವಾಸ್ಮಿನ್ರುಚಮದ–

ಧುರ್ಯೋ ಬ್ರಹ್ಮವರ್ಚಸಕಾಮಃ ಸ್ಯಾತ್ತಸ್ಮಾ ಏತಾ

ಮಲ್ಹಾ [ಆಲಭೇತ (೪) ಆಗ್ನೇಯೀಂ] ಆಲಭೇತಾ–

---

ಶ್ವೇತಾಮ್ । ಬಾರ್ಹಸ್ಪತ್ಯಾಮ್ । ತಾಭಿಃ । ಏವ । ಅಸ್ಮಿನ್ । ರುಚಮ್ । ಅದಧುಃ । ಯಃ । ಬ್ರಹ್ಮವರ್ಚಸಕಾಮ ಇತಿ ಬ್ರಹ್ಮವರ್ಚಸ – ಕಾಮಃ । ಸ್ಯಾತ್ । ತಸ್ಮೈ । ಏತಾಃ । ಮಲ್ಹಾಃ । ಏತಿ । ಲಭೇತ [೪]

---

| | |
|---|---|
| ಶ್ವೇತಾಮ್ ಬಾರ್ಹಸ್ಪತ್ಯಾಮ್ [ಆಲಭಂತ] | ಬೃಹಸ್ಪತಿದೇವನಿಗಾಗಿ ಬಿಳಿಯ ಬಣ್ಣದ ಆಡನ್ನೂ ಯಾಗ ಮಾಡಿದರು. |
| ತಾಭಿಃ ಏವ ಅಸ್ಮಿನ್ ರುಚಮ್ ಅದಧುಃ | ಆ ಯಾಗಗಳಿಂದ [ಪಶುಗಳಿಂದಲೇ] ಈ ಸೂರ್ಯನಲ್ಲಿ ಸ್ವಾಭಾವಿಕತೇಜಸ್ಸನ್ನು ಉಂಟು ಮಾಡಿದರು. |

**ಪಶುತ್ರಯಯಾಗಗಳ ವಿಧಿ**

| | |
|---|---|
| ಯಃ ಬ್ರಹ್ಮವರ್ಚಸಕಾಮಃ ಸ್ಯಾತ್ ತಸ್ಮೈ ಏತಾಃ ಮಲ್ಹಾಃ ಆಲಭೇತ | ಯಾವ ಯಜಮಾನನು ಶ್ರುತಾಧ್ಯಯನ–ರೂಪವಾದ ಬ್ರಹ್ಮವರ್ಚಸವನ್ನು ಬಯಸುತ್ತಾನೆಯೋ, ಅವನಿಗಾಗಿ ಈ ಕುತ್ತಿಗೆಯಲ್ಲಿ ಮೊಲೆಗಳಿರುವ ಮೂರು ಆಡುಗಳನ್ನು ಯಾಗ ಮಾಡಬೇಕು. |

---

ಮೊಲೆಗಳುಳ್ಳವುಗಳಾಗಿದ್ದವು. ಇವುಗಳಿಂದಲೇ ಸೂರ್ಯನಲ್ಲಿ ಸ್ವಾಭಾವಿಕತೇಜಸ್ಸನ್ನು ಉಂಟುಮಾಡಿದರು. ಶ್ರುತಾಧ್ಯಯನರೂಪವಾದ ತೇಜಸ್ಸನ್ನು ಬಯಸುವವನು ಈ

–ಗ್ನೇಯೀಂ ಕೃಷ್ಣಗ್ರೀವೀಗ್ಂ ಸಗ್ಂಹಿತಾಮ್ಯೆಂದ್ರೀಗ್ಂ

ಶ್ವೇತಾಂ ಬಾರ್ಹಸ್ಪತ್ಯಾಮೇತಾ ಏವ ದೇವತಾಃ ಸ್ವೇನ

ಭಾಗಧೇಯೇನೋಪಧಾವತಿ ತಾ ಏವಾಸ್ಮಿನ್ಬ್ರಹ್ಮವರ್ಚಸಂ

ದಧತಿ ಬ್ರಹ್ಮವರ್ಚಸ್ಯೇವ ಭವತಿ

---

ಆಗ್ನೇಯೀಮ್ । ಕೃಷ್ಣಗ್ರೀವೀಮಿತಿ ಕೃಷ್ಣ–ಗ್ರೀವೀಮ್ । ಸಗ್ಂಹಿತಾಮಿತಿ ಸಮ್–ಹಿತಾಮ್ । ಐಂದ್ರೀಮ್ । ಶ್ವೇತಾಮ್ । ಬಾರ್ಹಸ್ಪತ್ಯಾಮ್ । ಏತಾಃ । ಏವ । ದೇವತಾಃ ॥ ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ತಾಃ । ಏವ । ಅಸ್ಮಿನ್ । ಬ್ರಹ್ಮವರ್ಚಸಮಿತಿ ಬ್ರಹ್ಮ–ವರ್ಚಸಮ್ । ದಧತಿ । ಬ್ರಹ್ಮವರ್ಚಸೀತಿ ಬ್ರಹ್ಮ–ವರ್ಚಸೀ । ಏವ । ಭವತಿ ।

---

| | |
|---|---|
| ಆಗ್ನೇಯೀಮ್ ಕೃಷ್ಣಗ್ರೀವೀಮ್ ಸಗ್ಂಹಿತಾಮ್ ಐಂದ್ರೀಮ್ ಶ್ವೇತಾಮ್ ಬಾರ್ಹಸ್ಪತ್ಯಾಮ್ [ಆಲಭೇತ] | ಅಗ್ನಿದೇವನಿಗಾಗಿ ಕುತ್ತಿಗೆಯಲ್ಲಿ ಕಪ್ಪಾಗಿರುವ ಆಡನ್ನೂ, ಇಂದ್ರನಿಗಾಗಿ ಶುಕ್ಲಲೋಹಿತ ವರ್ಣವುಳ್ಳ ಆಡನ್ನೂ , ಬೃಹಸ್ಪತಿದೇವತಾಕವಾದ ಬಿಳಿಯ ಬಣ್ಣದ ಆಡನ್ನೂ ಯಾಗ ಮಾಡಬೇಕು. |
| ಏತಾಃ ಏವ ದೇವತಾಃ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗಗಳಿಂದ ಯಜಮಾನನು ಅಗ್ನಿ, ಇಂದ್ರ, ಬೃಹಸ್ಪತಿ – ಈ ದೇವತೆಗಳಿಗೆ ಅವರಿಗೆ ಪ್ರಿಯವಾದ ಭಾಗಗಳನ್ನಿತ್ತು, ಅವರನ್ನು ಸೇವಿಸಿದವನಾಗುತ್ತಾನೆ. |
| ತಾಃ ಅಸ್ಮಿನ್ ಬ್ರಹ್ಮವರ್ಚಸಮ್ ದಧತಿ ಏವ | ಈ ಯಾಗಗಳಿಂದ ತೃಪ್ತರಾದ ಅಗ್ನಿ, ಇಂದ್ರ, ಬೃಹಸ್ಪತಿ – ಈ ದೇವತೆಗಳು ಬ್ರಹ್ಮವರ್ಚಸವನ್ನು [ಶ್ರುತಾಧ್ಯಯನಸಂಪತ್ತಿಯನ್ನು] ಕೊಟ್ಟೇ ಕೊಡುತ್ತಾರೆ. |
| ಬ್ರಹ್ಮವರ್ಚಸೀ ಏವ ಭವತಿ | ಯಜಮಾನನು ಬ್ರಹ್ಮವರ್ಚಸಿಯಾಗಿಯೇ ಆಗುತ್ತಾನೆ. |

ವಸಂತಾ ಪ್ರಾತರಾಗ್ನೇಯೀಂ ಕೃಷ್ಣಗ್ರೀವೀಮಾಲಭೇತ

ಗ್ರೀಷ್ಮೇ ಮಧ್ಯಂದಿನೇ ಸಗ್ಂಹಿತಾಮೈಂದ್ರೀಗ್ಂ ಶರದ್ಯಪ-

ರಾಹ್ಣೇ ಶ್ವೇತಾಂ ಬಾರ್ಹಸ್ಪತ್ಯಾಂ ತ್ರೀಣಿ ವೈ ಆದಿತ್ಯಸ್ಯ

ತೇಜಾಗ್ಂಸಿ

---

ವಸಂತಾ। ಪ್ರಾತಃ। ಆಗ್ನೇಯೀಮ್। ಕೃಷ್ಣಗ್ರೀವೀಮಿತಿ ಕೃಷ್ಣ– ಗ್ರೀವೀಮ್। ಆ। ಲಭೇತ। ಗ್ರೀಷ್ಮೇ। ಮಧ್ಯಂದಿನೇ। ಸಗ್ಂಹಿತಾಮಿತಿ ಸಮ್ – ಹಿತಾಮ್। ಐಂದ್ರೀಮ್। ಶರದಿ। ಅಪರಾಹ್ಣ ಇತ್ಯಪರ – ಅಹ್ನೇ। ಶ್ವೇತಾಮ್। ಬಾರ್ಹಸ್ಪತ್ಯಾಮ್। ತ್ರೀಣಿ। ವೈ। ಆದಿತ್ಯಸ್ಯ। ತೇಜಾಗ್ಂಸಿ।

---

**ಮೇಲಿನ ಯಾಗಗಳಿಗೆ ಪಶುವಿಶೇಷ; ಕಾಲವಿಶೇಷವಿಧಿ**

| | |
|---|---|
| ವಸಂತಾ ಪ್ರಾತಃ ಆಗ್ನೇಯೀಮ್ ಕೃಷ್ಣಗ್ರೀವೀಮ್ ಆಲಭೇತ | ವಸಂತ ಋತುವಿನ ಪ್ರಾತಃಕಾಲದಲ್ಲಿ ಕಪ್ಪು ಬಣ್ಣದ ಕತ್ತುಳ್ಳ ಆಡನ್ನು ಅಗ್ನಿದೇವನಿಗಾಗಿ ಯಾಗ ಮಾಡಬೇಕು. |
| ಗ್ರೀಷ್ಮೇ ಮಧ್ಯಂದಿನೇ ಸಗ್ಂಹಿತಾಮ್ ಐಂದ್ರೀಮ್ [ಆಲಭೇತ] | ಗ್ರೀಷ್ಮ ಋತುವಿನ ಮಧ್ಯಾಹ್ನದಲ್ಲಿ ಇಂದ್ರನಿಗಾಗಿ ಮಿಶ್ರವರ್ಣದ ಆಡನ್ನು ಯಾಗ ಮಾಡಬೇಕು. |
| ಶರದಿ ಅಪರಾಹ್ಣೇ ಶ್ವೇತಾಮ್ ಬಾರ್ಹಸ್ಪತ್ಯಾಮ್ | ಶರದೃತುವಿನ ಅಪರಾಹ್ಣಕಾಲದಲ್ಲಿ ಬಿಳಿಯ ಬಣ್ಣದ ಆಡನ್ನು ಬೃಹಸ್ಪತಿದೇವನಿಗಾಗಿ ಯಾಗ ಮಾಡಬೇಕು. |
| ತ್ರೀಣಿ ವೈ ಆದಿತ್ಯಸ್ಯ ತೇಜಾಗ್ಂಸಿ | ಸೂರ್ಯನ ತೇಜಸ್ಸುಗಳು ಮುಖ್ಯವಾಗಿ ಮೂರಾಗಿವೆ. |

ಯಾಗವನ್ನು ಮಾಡಬೇಕು. ಇದರಿಂದ ಆ ದೇವತೆಗಳು ಶ್ರುತಾಧ್ಯಯನಸಂಪತ್ತಿನ ರೂಪವಾದ ತೇಜಸ್ಸನ್ನು ನೀಡಿಯೇ ನೀಡುತ್ತಾರೆ.

ವಸಂತಾ ಪ್ರಾತರ್ಗ್ರೀಷ್ಮೇ ಮಧ್ಯಂದಿನೇ ಶರದ್ಯಪರಾಹ್ಣೇ

ಯಾವಂತ್ಯೇವ ತೇಜಾಗ್‌ಂಸಿ ತಾನ್ಯೇವಾ (ತಾನ್ಯೇವ (ಹಿ)

ಅವರುಂಧೇ) ವರುಂಧೇ ಸಂವತ್ಸರಂ ಪರ್ಯಾಲಭ್ಯಂತೇ

---

ವಸಂತಾ । ಪ್ರಾತಃ । ಗ್ರೀಷ್ಮೇ । ಮಧ್ಯಂದಿನೇ । ಶರದಿ । ಅಪರಾಹ್ಣ ಇತ್ಯಪರ – ಅಹ್ನೇ । ಯಾವಂತಿ । ಏವ । ತೇಜಾಗ್‌ಂಸಿ । ತಾನಿ । ಏವ । ಅವೇತಿ । ರುಂಧೇ । ಸಂವತ್ಸರಮಿತಿ ಸಮ್–ವತ್ಸರಮ್ । ಪರ್ಯಾಲಭ್ಯಂತ ಇತಿ ಪರಿ– ಆಲಭ್ಯಂತೇ ।

---

| | |
|---|---|
| ವಸಂತಾ ಪ್ರಾತಃ ಗ್ರೀಷ್ಮೇ ಮಧ್ಯಂದಿನೇ | ವಸಂತಕಾಲದಲ್ಲಿ ಬೆಳಗಿನ ಹೊತ್ತು, ಗ್ರೀಷ್ಮ ಕಾಲದಲ್ಲಿ ಮಧ್ಯಾಹ್ನದ ಹೊತ್ತು, |
| ಶರದಿ ಅಪರಾಹ್ಣೇ | ಶರತ್ಕಾಲದ ಅಪರಾಹ್ಣ ಸಮಯದಲ್ಲಿ [ಹೀಗೆ ಮೂರಿವೆ ] |
| ಯಾವಂತಿ ಏವ ತೇಜಾಗ್‌ಂಸಿ ತಾನಿ ಏವ ಅವರುಂಧೇ | [ಆಯಾ ಕಾಲದಲ್ಲಿ ಈ ಯಾಗಗಳನ್ನು ಮಾಡುವುದರಿಂದ ] ಎಷ್ಟು ತೇಜಸ್ಸು ಗಳಿವೆಯೋ ಅವುಗಳನ್ನು ಪಡೆಯುತ್ತಾನೆ. |

**ಸಂವತ್ಸರಪರ್ಯಂತ ಅನುಷ್ಠಾನವಿಧಿ**

| | |
|---|---|
| ಸಂವತ್ಸರಂ ಪರ್ಯಾಲಭ್ಯಂತೇ | ಒಂದು ಸಂವತ್ಸರದವರೆವಿಗೂ [ನಿಯಮವಿದ್ದು] ಈ ಪಶುಗಳಿಂದ ಯಾಗವು ಮಾಡಲ್ಪಡಬೇಕು. |

---

ಹಿಂದಿನ ಯಾಗಗಳಿಗೆ ಕಾಲವಿಶೇಷವನ್ನೂ, ಪಶುವಿಶೇಷವನ್ನೂ ಶ್ರುತಿಯು ವಿಧಾನ ಮಾಡಿದೆ.

ವಸಂತ ಋತುವಿನ ಪ್ರಾತಃಕಾಲದಲ್ಲಿ ಕತ್ತಿನಲ್ಲಿ ಕಪ್ಪುಬಣ್ಣವಿರುವ ಆಡನ್ನು ಅಗ್ನಿದೇವನಿಗಾಗಿ ಯಾಗ ಮಾಡಬೇಕು. ಗ್ರೀಷ್ಮಕಾಲದ ಮಧ್ಯಾಹ್ನಸಮಯದಲ್ಲಿ ಬಿಳಿ, ಕಪ್ಪು, ಕೆಂಪು ಬಣ್ಣವುಳ್ಳ ಆಡನ್ನು ಇಂದ್ರನಿಗಾಗಿ ಯಾಗ ಮಾಡಬೇಕು. ಶರತ್ಕಾಲದ ಅಪರಾಹ್ಣದಲ್ಲಿ ಬಿಳಿಯ ಬಣ್ಣದ ಆಡನ್ನು ಬೃಹಸ್ಪತಿದೇವನಿಗಾಗಿ ಯಾಗ ಮಾಡಬೇಕು.

# ಸಂವತ್ಸರೋ ವೈ ಬ್ರಹ್ಮವರ್ಚಸಸ್ಯ ಪ್ರದಾತಾ

# ಸಂವತ್ಸರ ಏವಾಸ್ಮೈ ಬ್ರಹ್ಮವರ್ಚಸಂ ಪ್ರಯಚ್ಛತಿ

# ಬ್ರಹ್ಮವರ್ಚಸ್ಯೇವ ಭವತಿ

---

ಸಂವತ್ಸರ ಇತಿ ಸವಮ್-ವತ್ಸರಃ। ವೈ। ಬ್ರಹ್ಮವರ್ಚಸಸ್ಯೇತಿ ಬ್ರಹ್ಮ-ವರ್ಚಸಸ್ಯ। ಪ್ರದಾತೇತಿ ಪ್ರ-ದಾತಾ। ಸಂವತ್ಸರ ಇತಿ ಸವಮ್-ವತ್ಸರಃ। ಏವ। ಅಸ್ಮೈ। ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸವಮ್। ಪ್ರೇತಿ। ಯಚ್ಛತಿ। ಬ್ರಹ್ಮವರ್ಚಸೀತಿ ಬ್ರಹ್ಮ-ವರ್ಚಸೀ। ಏವ। ಭವತಿ।

---

| | |
|---|---|
| ಸಂವತ್ಸರಃ ವೈ ಬ್ರಹ್ಮವರ್ಚಸಸ್ಯ ಪ್ರದಾತಾ | ಸಂವತ್ಸರಕಾಲವು ಬ್ರಹ್ಮವರ್ಚಸವನ್ನು ಕೊಡಬಲ್ಲುದು. |
| ಸಂವತ್ಸರಃ ಏವ ಅಸ್ಮೈ ಬ್ರಹ್ಮವರ್ಚಸವಮ್ ಪ್ರಯಚ್ಛತಿ | ಸಂವತ್ಸರವೇ ಬ್ರಹ್ಮವರ್ಚಸವನ್ನು ಕೊಡುತ್ತದೆ. |
| ಬ್ರಹ್ಮವರ್ಚಸೀ ಏವ ಭವತಿ | ಯಜಮಾನನು ಬ್ರಹ್ಮವರ್ಚಸಿಯೇ ಆಗುತ್ತಾನೆ. |

---

ಸೂರ್ಯನಿಗೆ ವಸಂತದ ಪ್ರಾತಃಕಾಲದಲ್ಲಿ, ಗ್ರೀಷ್ಮದ ಮಧ್ಯಾಹ್ನದಲ್ಲಿ, ಶರತ್ಕಾಲದ ಅಪರಾಹ್ಣದಲ್ಲಿ - ಹೀಗೆ ಮೂರು ತೇಜಸ್ಸುಗಳಿವೆ. ಆಯಾ ಕಾಲಗಳಲ್ಲಿ ಆಯಾ ಪಶುಯಾಗಗಳನ್ನು ಮಾಡುವುದರಿಂದ ಸೂರ್ಯನ ಮೂರು ತೇಜಸ್ಸುಗಳನ್ನೂ ಯಜಮಾನನು ಪಡೆಯುತ್ತಾನೆ.

ಯಾವ ಜಪಾದಿಗಳನ್ನಾದರೂ ನಿಯಮಪೂರ್ವಕವಾಗಿ ಒಂದು ವರ್ಷಕಾಲ ಮಾಡಿದರ ಫಲಸಿದ್ಧಿಯಾಗುತ್ತದೆ. ಆದುದರಿಂದ ನಿಯಮಪೂರ್ವಕವಾಗಿ ಸಂವತ್ಸರದಲ್ಲಿ ಯಾಗವನ್ನು ಮಾಡುವುದರಿಂದ ಬ್ರಹ್ಮವರ್ಚಸಪ್ರದಾನಸಮರ್ಥವಾದ ಸಂವತ್ಸರವೇ

ಗರ್ಭಿಣಯೋ ಭವಂತೀಂದ್ರಿಯಂ ವೈ ಗರ್ಭ ಇಂದ್ರಿಯ-

ಮೇವಾಸ್ಮಿನ್ದಧತಿ ಸಾರಸ್ವತೀಂ ಮೇಷೀಮಾಲಭೇತ ಯ

ಈಶ್ವರೋ ವಾಚೋ ವದಿತೋಸ್ಸನ್ವಾಚಂ ನ ವದೇದ್ವಾಗ್ವೈ

ಸರಸ್ವತೀ ಸರಸ್ವತೀಮೇವ ಸ್ವೇನ ಭಾಗಧೇಯೇನೋಪಧಾವತಿ

---

ಗರ್ಭಿಣಯಃ । ಭವಂತಿ । ಇಂದ್ರಿಯಮ್ । ವೈ । ಗರ್ಭಃ । ಇಂದ್ರಿಯಮ್ । ಏವ । ಅಸ್ಮಿನ್ನ್ । ದಧತಿ । **ಸಾರಸ್ವತೀಮ್** । ಮೇಷೀಮ್ । ಏತಿ । ಲಭೇತ । ಯಃ । ಈಶ್ವರಃ । ವಾಚಃ । ವದಿತೋಃ । ಸನ್ನ್ । ವಾಚಮ್ । ನ । ವದೇತ್ । ವಾಕ್ । ವೈ । ಸರಸ್ವತೀ । ಸರಸ್ವತೀಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ ।

---

**ಪಶುಗಳ ಗುಣವಿಶೇಷವಿಧಿ**

| | |
|---|---|
| ಗರ್ಭಿಣಯಃ ಭವಂತಿ | ಈ ಪಶುಗಳು ಗರ್ಭವನ್ನು ಧರಿಸಿದವುಗಳಾಗಿರಬೇಕು. |
| ಇಂದ್ರಿಯಮ್ ವೈ ಗರ್ಭಃ | ಇಂದ್ರಿಯಶಕ್ತಿಯೇ ಗರ್ಭವಾಗಿದೆಯಷ್ಟೆ. |
| ಇಂದ್ರಿಯಮ್ ಏವ ಅಸ್ಮಿನ್ ದಧತಿ | [ಗರ್ಭವನ್ನು ಧರಿಸಿದ ಪಶುಗಳು] ಯಜಮಾನನಲ್ಲಿ ಇಂದ್ರಿಯಶಕ್ತಿಯನ್ನು ಕೊಡುತ್ತವೆ. |

**ವಾಕ್ಕಾಮನಿಗೆ ವಿಹಿತವಾದ ಯಾಗವಿಧಿ; ಪ್ರಶಂಸೆ**

| | |
|---|---|
| ಯಃ ವಾಚಃ ವದಿತೋಃ ಈಶ್ವರಃ ಸನ್ ವಾಚಮ್ ನ ವದೇತ್ [ಸಃ] ಸಾರಸ್ವತೀಮ್ ಮೇಷೀಮ್ ಆಲಭೇತ | ಯಾವಾತನು ಮಾತನಾಡಲು ಸಮರ್ಥನಾಗಿದ್ದರೂ, ಚೆನ್ನಾಗಿ ಮಾತನಾಡಲಾರನೋ ಅವನು ಹೆಣ್ಣಾಡನ್ನು ಸರಸ್ವತೀ ದೇವತೆಗಾಗಿ ಯಾಗ ಮಾಡಬೇಕು. |
| ವಾಕ್ ವೈ ಸರಸ್ವತೀ | ಸರಸ್ವತೀದೇವಿಯು ವಾಗ್ರೂಪಳಷ್ಟೆ. |
| ಸರಸ್ವತೀಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಈ ಯಾಗದಿಂದ] ಯಜಮಾನನು ಸರಸ್ವತೀ ದೇವತೆಯನ್ನು ಅವಳಿಗೆ ಇಷ್ಟವಾದ ಹವಿರ್ಭಾಗವನ್ನಿತ್ತು ಸೇವಿಸಿದವನಾಗುತ್ತಾನೆ. |

[ಸೈವಾಸ್ಮಿನ್ (೬) ವಾಚಂ] ಸೈವಾಸ್ಮಿನ್ವಾಚಂ ದಧಾತಿ
ಪ್ರವದಿತಾ ವಾಚೋ ಭವತ್ಯಪನ್ನದತೀ ಭವತಿ
ತಸ್ಮಾನ್ಮನುಷ್ಯಾಃ ಸರ್ವಾಂ ವಾಚಂ ವದಂತ್ಯಾಗ್ನೇಯಂ

---

ಸಾ । ಏವ । ಅಸ್ಮಿನ್ । ವಾಚಮ್ । ದಧಾತಿ । ಪ್ರವದಿತೇತಿ ಪ್ರ–ವದಿತಾ । ವಾಚಃ । ಭವತಿ । ಅಪನ್ನದತೀತ್ಯಪನ್ನ –ದತೀ । ಭವತಿ । ತಸ್ಮಾತ್ । ಮನುಷ್ಯಾಃ । ಸರ್ವಾಮ್ । ವಾಚಮ್ । ವದಂತಿ । ಆಗ್ನೇಯಮ್ ।

---

ಸಾ ಏವ ಅಸ್ಮಿನ್ ವಾಚಮ್ ದಧಾತಿ — ಆ ಸರಸ್ವತೀದೇವಿಯೇ ಈ ಯಜಮಾನನಲ್ಲಿ ಒಳ್ಳೆಯ ವಾಕ್ಶಕ್ತಿಯನ್ನು ನೆಲೆಗೊಳಿಸುತ್ತಾಳೆ.

ವಾಚಃ ಪ್ರವದಿತಾ ಭವತಿ — ಅವನು ಒಳ್ಳೆಯ ವಾಗ್ಮಿಯಾಗುತ್ತಾನೆ.

**ಮೇಷಿಕೆಯ ವಿಶೇಷಗುಣವಿಧಿ; ಪ್ರಶಂಸೆ**

ಅಪನ್ನದತೀ ಭವತಿ — ಆ ಪಶುವು ಬಿದ್ದು ಹೋಗದ ಹಲ್ಲುಳ್ಳದ್ದಾಗಿರಬೇಕು.

ತಸ್ಮಾತ್ ಮನುಷ್ಯಾಃ ಸರ್ವಾಮ್ ವಾಚಮ್ ವದಂತಿ — ಆದುದರಿಂದಲೇ [ಹಲ್ಲಿರುವ] ಮನುಷ್ಯರು ಎಲ್ಲಾ ಮಾತುಗಳನ್ನಾಡಬಲ್ಲರು.

**ದೀರ್ಘವ್ಯಾಧಿಪೀಡಿತನಿಗೆ ವಿಹಿತವಾದ ಯಾಗ**

ಆಗ್ನೇಯಮ್ — ಅಗ್ನಿದೇವತಾಕವಾದ

---

ಯಜಮಾನನಿಗೆ ಬ್ರಹ್ಮವರ್ಚಸವನ್ನು ಕೊಡುತ್ತದೆ. ಯಜಮಾನನು ಬ್ರಹ್ಮವರ್ಚಸಿಯೇ ಅಂದರೆ ಶ್ರುತಾಧ್ಯಯನಸಂಪನ್ನನೇ ಆಗುತ್ತಾನೆ.

ಈ ಮೂರು ಪಶುಗಳೂ ಗರ್ಭಧಾರಣೆಯನ್ನು ಮಾಡಿದವುಗಳಾಗಿರಬೇಕು. ಇಂದ್ರಿಯಶಕ್ತಿಯೇ ಗರ್ಭವಾಗಿ ಪರಿಣಮಿಸುತ್ತದೆ. ಈ ಗರ್ಭಿಣೀಪಶುಗಳು ಯಜಮಾನನಿಗೆ ಇಂದ್ರಿಯಸಾಮರ್ಥ್ಯವನ್ನು ಕೊಡುತ್ತವೆ.

ಮಾತನಾಡಲು ಸಮರ್ಥನಾಗಿದ್ದರೂ ಸಭಾಕಂಪಾದಿಗಳಿಂದ ಯಾವನು ಸಭೆಗಳಲ್ಲಿ ಮಾಡನಾಡಲಾರನೋ, ಅವನು ಸರಸ್ವತೀದೇವತೆಗಾಗಿ ಹೆಣ್ಣಾಡನ್ನು ಯಾಗ ಮಾಡಬೇಕು. ಸರಸ್ವತಿಯೇ ವಾಗ್ದೇವಿ. ಈ ಯಾಗದಿಂದ ಯಜಮಾನನು ಸರಸ್ವತಿಗೆ ಆ ದೇವತೆಯ

ಕೃಷ್ಣಗ್ರೀವಮಾಲಭೇತ ಸೌಮ್ಯಂ ಬಭ್ರುಂ

ಜ್ಯೋಗಾಮಯಾವ್ಯಗ್ನಿಂ ವಾ ಏತಸ್ಯ ಶರೀರಂ ಗಚ್ಛತಿ

ಸೋಮಗ್ಂ ರಸೋ ಯಸ್ಯ ಜ್ಯೋಗಾಮಯತ್ಯ

---

ಕೃಷ್ಣಗ್ರೀವಮಿತಿ ಕೃಷ್ಣ – ಗ್ರೀವಮ್ । ಏತಿ । ಲಭೇತ । ಸೌಮ್ಯಮ್ । ಬಭ್ರುಮ್ ।

ಜ್ಯೋಗಾಮಯಾವೀತಿ ಜ್ಯೋಕ್ – ಆಮಯಾವೀ । ಅಗ್ನಿಮ್ । ವೈ । ಏತಸ್ಯ । ಶರೀರಮ್ ।

ಗಚ್ಛತಿ । ಸೋಮಮ್ । ರಸಃ । ಯಸ್ಯ । ಜ್ಯೋಕ್ । ಆಮಯತಿ ।

---

| | |
|---|---|
| ಕೃಷ್ಣಗ್ರೀವಮ್ ಜ್ಯೋಗಾಮಯಾವೀ ಆಲಭೇತ | ದೀರ್ಘಕಾಲ ರೋಗಪೀಡಿತನಾದವನು ಕುತ್ತಿಗೆಯಲ್ಲಿ ಕಪ್ಪುಳ್ಳ ಪಶುವನ್ನು ಯಾಗ ಮಾಡಬೇಕು. |
| ಸೌಮ್ಯಮ್ ಬಭ್ರುಮ್ [ಆಲಭೇತ] | ಸೋಮದೇವನಿಗಾಗಿ ಗೋರೋಚನದಂತ ಕೆಂಪು–ಹಳದಿ ಬಣ್ಣವುಳ್ಳ ಪಶುವನ್ನು ಯಾಗ ಮಾಡಬೇಕು. **[ವಿಧಿ]** |
| [ಆಮಯಃ] ಯಸ್ಯ ಜ್ಯೋಕ್ ಆಮಯತಿ | ವ್ಯಾಧಿಯು ಯಾರನ್ನು ದೀರ್ಘಕಾಲ ರೋಗಿಯನ್ನಾಗಿಸುತ್ತದೆಯೋ ಅಂತಹ |
| ಅಗ್ನಿಮ್ ವೈ ಏತಸ್ಯ ಶರೀರಮ್ ಗಚ್ಛತಿ | ವ್ಯಾಧಿಪೀಡಿತನ ಶರೀರವು ಅಗ್ನಿಯಿಂದ ಶೋಷಿಸಲ್ಪಟ್ಟು ಅನ್ನರಸವಿಲ್ಲದೆ ಅಗ್ನಿಯನ್ನು ಹೊಂದುತ್ತದೆ. |
| ಸೋಮಮ್ ರಸಃ [ಗಚ್ಛತಿ] | ಪ್ರಾಣಧಾರಕವಾದ ಸೂಕ್ಷ್ಮಾನ್ನರಸವು ಓಷಧಿಗಳಿಗೆ ಒಡೆಯನಾದ ಸೋಮದೇವನನ್ನೇ ಹೊಂದುತ್ತದೆ. |

---

ಭಾಗವನ್ನು ಸಮರ್ಪಿಸಿ, ಸೇವಿಸಿದವನಾಗುತ್ತಾನೆ. ಆಕೆಯು ತೃಪ್ತಳಾಗಿ ಒಳ್ಳೆಯ ಮಾತುಗಾರಿಕೆಯನ್ನು ಕೊಡುತ್ತಾಳೆ. ಅವಳ ಅನುಗ್ರಹದಿಂದ ಯಜಮಾನನು ಮಾತುಗಾರನಾಗುತ್ತಾನೆ.

ಆ ಪಶುವಿನ ಹಲ್ಲುಗಳು ಬಿದ್ದುಹೋಗಿರಬಾರದು. ಹಲ್ಲು ಬೀಳದಿರುವ ಮನುಷ್ಯರೇ ಎಲ್ಲ ಮಾತುಗಳನ್ನೂ ಸ್ಪಷ್ಟವಾಗಿ ಆಡಲು ಸಮರ್ಥರಾಗಿರುತ್ತಾರೆ.

ದೀರ್ಘರೋಗಿಯಾದವನು ಅಗ್ನಿದೇವತೆಗಾಗಿ ಕಪ್ಪು ಬಣ್ಣದ ಕಂಠವುಳ್ಳ

–ಗ್ನೇರೇವಾಸ್ಯ ಶರೀರಂ ನಿಷ್ಕ್ರೀಣಾತಿ ಸೋಮಾದ್ರಸಮುತ

ಯದೀತಾಸುರ್ಭವತಿ ಜೀವತ್ಯೇವ ಸೌಮ್ಯಂ

ಬಭ್ರುಮಾಲಭೇತಾಽಗ್ನೇಯಂ ಕೃಷ್ಣಗ್ರೀವಂ ಪ್ರಜಾಕಾಮಃ

---

ಅಗ್ನೇಃ । ಏವ । ಅಸ್ಯ । ಶರೀರಮ್ । ನಿಷ್ಕ್ರೀಣಾತೀತಿ ನಿಃ–ಕ್ರೀಣಾತಿ । ಸೋಮಾತ್ । ರಸಮ್ । ಉತ । ಯದಿ । ಇತಾಸುರಿತೀತ – ಅಸುಃ । ಭವತಿ । ಜೀವತಿ । ಏವ । **ಸೌಮ್ಯಮ್** । ಬಭ್ರುಮ್ । ಏತಿ । ಲಭೇತ । ಆಗ್ನೇಯಮ್ । ಕೃಷ್ಣಗ್ರೀವಮಿತಿ ಕೃಷ್ಣ–ಗ್ರೀವಮ್ । ಪ್ರಜಾಕಾಮ ಇತಿ ಪ್ರಜಾ–ಕಾಮಃ ।

---

| | |
|---|---|
| ಅಗ್ನೇಃ ಏವ ಅಸ್ಯ ಶರೀರಮ್ ನಿಷ್ಕ್ರೀಣಾತಿ | [ಆಗ್ನೇಯಯಾಗದಿಂದ ಪ್ರೀತನಾದ] ಅಗ್ನಿಯಿಂದ [ಅಗ್ನಿಮಾಂದ್ಯರಹಿತನಾದ] ಯಜಮಾನನು ಶರೀರವನ್ನು ಹಿಂದಕ್ಕೆ ಪಡೆಯುತ್ತಾನೆ. |
| ಸೋಮಾತ್ ರಸಮ್ [ನಿಷ್ಕ್ರೀಣಾತಿ] | [ಸೋಮಪಶುಯಾಗದಿಂದ ಪ್ರೀತನಾದ, ಓಷಧಿಗಳಿಗೆ ಒಡೆಯನಾದ ] ಸೋಮದೇವನಿಂದ ಪ್ರಾಣಧಾರಕನಾದ ಅನ್ನರಸವನ್ನು ಮತ್ತೆ ಪಡೆಯುತ್ತಾನೆ. |
| ಉತ ಯದಿ ಇತಾಸುಃ ಭವತಿ ಜೀವತಿ ಏವ | ಒಂದು ವೇಳೆ ಪ್ರಾಣವೇ ಹೋಗುವ ಸ್ಥಿತಿಯಲ್ಲಿದ್ದವನಾದರೂ ಯಜಮಾನನು ಬದುಕಿಯೇ ಬದುಕುತ್ತಾನೆ. |

**ಪ್ರಜಾಕಾಮನಿಗೆ ವಿಹಿತವಾದ ಯಾಗದ ವಿಧಿ; ಪ್ರಶಂಸೆ**

| | |
|---|---|
| ಪ್ರಜಾಕಾಮಃ ಸೌಮ್ಯಮ್ ಬಭ್ರುಮ್ ಆಲಭೇತ | ಸಂತಾನವನ್ನು ಬಯಸುವವನು ಕೆಂಪು– ಹಳದಿ ಬಣ್ಣಗಳುಳ್ಳ ಪಶುವನ್ನು ಸೋಮದೇವತೆಗಾಗಿ ಯಾಗ ಮಾಡಬೇಕು. |
| ಆಗ್ನೇಯಮ್ ಕೃಷ್ಣಗ್ರೀವಮ್ [ಆಲಭೇತ] | ಕಪ್ಪು ಕುತ್ತಿಗೆಯ ಪಶುವನ್ನು ಅಗ್ನಿದೇವನಿಗಾಗಿ ಯಾಗ ಮಾಡಬೇಕು. **[ವಿಧಿ]** |

---

ಪಶುವನ್ನೂ , ಸೋಮದೇವನಿಗಾಗಿ ಪಿಂಗಲವರ್ಣದ ಪಶುವನ್ನೂ ಯಾಗ ಮಾಡಬೇಕು.

[ಸೋಮಃ(೭) ವೈ] ಸೋಮೋ ವೈ ರೇತೋಧಾ

ಅಗ್ನಿಃ ಪ್ರಜಾನಾಂ ಪ್ರಜನಯಿತಾ ಸೋಮ

ಏವಾಸ್ಮೈ ರೇತೋ ದಧಾತ್ಯಗ್ನಿಃ ಪ್ರಜಾಂ

ಸೋಮಃ।(೭)। ವೈ। ರೇತೋಧಾ ಇತಿ ರೇತಃ-ಧಾಃ। ಅಗ್ನಿಃ। ಪ್ರಜಾನಾಮಿತಿ ಪ್ರ-ಜಾನಾಮ್।

ಪ್ರಜನಯಿತೇತಿ ಪ್ರ-ಜನಯಿತಾ । ಸೋಮಃ । ಏವ । ಅಸ್ಮೈ । ರೇತಃ । ದಧಾತಿ।

ಅಗ್ನಿಃ । ಪ್ರಜಾಮಿತಿ ಪ್ರ-ಜಾಮ್ ।

| | |
|---|---|
| ಸೋಮಃ ವೈ ರೇತೋಧಾಃ | ಸೋಮದೇವನು ಗರ್ಭಾಶಯದಲ್ಲಿ ಪುರುಷನ ರೇತಸ್ಸು ನಿಲ್ಲುವಂತೆ ಮಾಡ ತಕ್ಕವನು. |
| ಅಗ್ನಿಃ ಪ್ರಜಾನಾಮ್ ಪ್ರಜನಯಿತಾ | ಅಗ್ನಿಯು ಪ್ರಜೋತ್ಪತ್ತಿಯಾಗುವಂತೆ ಮಾಡ ತಕ್ಕವನು. |

ರೋಗಿಗೆ ಅನ್ನವು ರುಚಿಸುವುದಿಲ್ಲ. ಅನ್ನರಸವಿಲ್ಲದಿದ್ದರೆ ಪ್ರಾಣಧಾರಕವಾದ ಅನ್ನರಸವು ದೊರೆಯುವುದಿಲ್ಲ. ಜಠರಾಗ್ನಿಯು ಮಂದವಾಗುತ್ತದೆ. ಶರೀರವು ಕ್ಷೀಣಿಸುತ್ತದೆ. ಇದನ್ನೇ ಶ್ರುತಿಯು 'ಶರೀರವು ಅಗ್ನಿಯನ್ನು ಹೊಂದುತ್ತದೆ. ರಸವು ಸೋಮನನ್ನು ಸೇರುತ್ತದೆ' ಎಂದು ಹೇಳುತ್ತದೆ. ಯಾಗದಿಂದ ಸುಪ್ರೀತರಾದ ಅಗ್ನಿ ಮತ್ತು ಸೋಮರು ನೀರೋಗ ಶರೀರವನ್ನೂ , ಜೀವನಾಧಾರರಸವನ್ನೂ ಹಿಂದಕ್ಕೆ ಕೊಡುತ್ತಾರೆ. ಇದರಿಂದ ಸಾಯುವ ಸ್ಥಿತಿಯಲ್ಲಿದ್ದರೂ ಸಹ ಯಜಮಾನನು ರೋಗರಹಿತನಾಗಿ ಬದುಕುತ್ತಾನೆ.

ಮಕ್ಕಳನ್ನು ಬಯಸುವವನು ಪಿಂಗಲವರ್ಣದ ಪಶುವನ್ನು ಸೋಮನಿಗಾಗಿಯೂ, ಕಪ್ಪು ಕುತ್ತಿಗೆಯ ಪಶುವನ್ನು ಅಗ್ನಿದೇವನಿಗಾಗಿಯೂ ಯಾಗ ಮಾಡಬೇಕು. ಸೋಮನು ಗರ್ಭಾಶಯದಲ್ಲಿ ರೇತಸ್ಸನ್ನು ನಿಲ್ಲಿಸತಕ್ಕವನು. ಅಗ್ನಿಯು ಪ್ರಜೆಗಳನ್ನು ಉತ್ಪತ್ತಿ ಮಾಡ ತಕ್ಕವನು. ಈ ಯಾಗದಿಂದ ಸುಪ್ರೀತನಾದ ಸೋಮನು ಈ ಯಜಮಾನನಿಗೆ ರೇತಸ್ಸು

ಪ್ರಜನಯತಿ ವಿಂದತೇ ಪ್ರಜಾಮಾಗ್ನೇಯಂ

ಕೃಷ್ಣಗ್ರೀವಮಾಲಭೇತ ಸೌಮ್ಯಂ ಬಭ್ರುಂ ಯೋ

ಬ್ರಾಹ್ಮಣೋ ವಿದ್ಯಾಮನೂಚ್ಯ

---

ಪ್ರೇತಿ । ಜನಯತಿ । ವಿಂದತೇ । ಪ್ರಜಾಮಿತಿ ಪ್ರ-ಜಾಮ್ । **ಆಗ್ನೇಯಮ್** । ಕೃಷ್ಣಗ್ರೀವಮಿತಿ ಕೃಷ್ಣ-ಗ್ರೀವಮ್ । ಏತಿ । ಲಭೇತ । ಸೌಮ್ಯಮ್ । ಬಭ್ರುಮ್ । ಯಃ । ಬ್ರಾಹ್ಮಣಃ । ವಿದ್ಯಾಮ್ । ಅನೂಚ್ಯೇತ್ಯನು-ಉಚ್ಯ ।

---

| | |
|---|---|
| **ಸೋಮಃ ಏವ ಅಸ್ಮೈ ರೇತಃ ದಧಾತಿ** | ಸೋಮದೇವನೇ ಈ ಯಜಮಾನನಿಗೆ ರೇತಸ್ಸು ಸ್ಥಿರವಾಗಿ ನಿಲ್ಲುವಂತೆ ಮಾಡುತ್ತಾನೆ. |
| **ಅಗ್ನಿಃ ಪ್ರಜಾಮ್ ಪ್ರಜನಯತಿ** | ಅಗ್ನಿಯು ಪ್ರಜೆಯನ್ನುಂಟುಮಾಡುತ್ತಾನೆ. |
| **ಪ್ರಜಾಮ್ ವಿಂದತೇ** | [ಹೀಗೆ] ಯಜಮಾನನು ಪುತ್ರವಂತನಾಗುತ್ತಾನೆ. |

**ಸಭೆಯಲ್ಲಿ ಮೂಕನಂತಾದವನಿಗಾಗಿ ವಿಧಿಸಿದ ಯಾಗ; ಪ್ರಶಂಸೆ**

| | |
|---|---|
| ಯಃ ಬ್ರಾಹ್ಮಣಃ ವಿದ್ಯಾಮ್ ಅನೂಚ್ಯ | ಯಾವ ಬ್ರಾಹ್ಮಣನು ವಿದ್ಯೆಯನ್ನು ಕಲಿತಿದ್ದರೂ |

---

ಸ್ಥಿರವಾಗಿ ನಿಲ್ಲುವಂತೆ ಮಾಡುತ್ತಾನೆ. ಅಗ್ನಿಯು ಪ್ರಜೋತ್ಪತ್ತಿಯಾಗುವಂತೆ ಮಾಡುತ್ತಾನೆ. ಹೀಗೆ ಯಜಮಾನನು ಪುತ್ರರನ್ನು ಪಡೆಯುತ್ತಾನೆ.

ಹಿಂದೆ ಸಭೆಯಲ್ಲಿ ಮೂಕನಾದಂತಾಗಿ, ವಿದ್ಯಾವಂತನಾದರೂ ವಿತಂಡವಾದವನ್ನು ಮಾಡುವ ಪ್ರತಿವಾದಿಗಳನ್ನು ಈಗ ಸೋಲಿಸಬೇಕೆಂದಿರುವವನಿಗೆ ಈ ಯಾಗವು ವಿಹಿತವಾಗಿದೆ. ಆತನು ಕೃಷ್ಣಗ್ರೀವಪಶುವನ್ನು ಅಗ್ನಿಗಾಗಿಯೂ, ಪಿಂಗಲಪಶುವನ್ನು ಸೋಮದೇವನಿಗಾಗಿಯೂ ಯಾಗ ಮಾಡಬೇಕು.

# ನ ವಿರೋಚೇತ ಯದಾಗ್ನೇಯೋ ಭವತಿ ತೇಜ

# ಏವಾಸ್ಮಿನ್ತೇನ ದಧಾತಿ ಯತ್ಸೌಮ್ಯೋ ಬ್ರಹ್ಮವರ್ಚಸಂ ತೇನ

---

ನ । ವಿರೋಚೇತೇತಿ ವಿ-ರೋಚೇತ । ಯತ್ । ಆಗ್ನೇಯಃ । ಭವತಿ । ತೇಜಃ । ಏವ । ಅಸ್ಮಿನ್ । ತೇನ । ದಧಾತಿ । ಯತ್ । ಸೌಮ್ಯಃ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ತೇನ ।

---

| | |
|---|---|
| ನ ವಿರೋಚೇತ | ಸಭೆಯಲ್ಲಿ ಪ್ರಕಾಶಿಸುವುದಿಲ್ಲವೋ |
| ಆಗ್ನೇಯಮ್ ಕೃಷ್ಣಗ್ರೀವಮ್ ಸೌಮ್ಯಮ್ ಬಭ್ರುಮ್ ಆಲಭೇತ | [ಅವನು] ಕೃಷ್ಣಗ್ರೀವಪಶುವನ್ನು ಅಗ್ನಿಗಾಗಿಯೂ, ಪಿಂಗಲಪಶುವನ್ನು ಸೋಮನಿಗಾಗಿಯೂ ಯಾಗ ಮಾಡಬೇಕು. |
| ಯತ್ ಆಗ್ನೇಯಃ ಭವತಿ | ಆಗ್ನೇಯ ಪಶುಯಾಗವು ಯಾವುದುಂಟೋ |
| ತೇನ ತೇಜಃ ಏವ ಅಸ್ಮಿನ್ ದಧಾತಿ | ಅದರಿಂದ ಈ ಯಜಮಾನನಲ್ಲಿ[ಪ್ರತಿವಾದಿಗಳಿಂದ ಸೋಲಿಸಲಾಗದ] ತೇಜಸ್ಸನ್ನು ಅಗ್ನಿಯು ಉಂಟು ಮಾಡುತ್ತಾನೆ. |
| ಯತ್ ಸೌಮ್ಯಃ [ಭವತಿ] | ಸೋಮದೇವತಾಕಪಶುಯಾಗವು ಯಾವುದುಂಟೋ |
| ತೇನ ಬ್ರಹ್ಮವರ್ಚಸಮ್ | ಅದರಿಂದ ಬ್ರಹ್ಮವರ್ಚಸವನ್ನು [ಈ ಯಾಗವು ಯಜಮಾನನಿಗೆ ಕೊಡುತ್ತದೆ]. |

---

ವಿದ್ಯೆಯನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದರೂ ಸಭೆಗಳಲ್ಲಿ ಪ್ರಕಾಶಿಸದ ಬ್ರಾಹ್ಮಣನು ಆಗ್ನೇಯಕೃಷ್ಣಗ್ರೀವಪಶುಯಾಗ, ಬಭ್ರುಸೌಮ್ಯಪಶುಯಾಗಗಳನ್ನು ಮಾಡಬೇಕು. ಅಗ್ನಿದೇವತಾಕವಾದುದರಿಂದ ಪ್ರತಿವಾದಿಗಳನ್ನು ಮೀರಿಸುವ ತೇಜಸ್ಸೂ, ಸೋಮ- ದೇವತಾಕವಾದುದರಿಂದ ಸಂದರ್ಭಕ್ಕೆ ತಕ್ಕ ವೇದವಚನಸ್ಫೂರ್ತಿರೂಪವಾದ ಬ್ರಹ್ಮವರ್ಚಸವು ಪ್ರಾಪ್ತವಾಗುತ್ತದೆ. ಪಶುವು ಕೃಷ್ಣಗ್ರೀವವಾದುದರಿಂದ

ಕೃಷ್ಣಗ್ರೀವ ಆಗ್ನೇಯೋ ಭವತಿ ತಮ ಏವಾಸ್ಮಾದಪಹಂತಿ

ಶ್ವೇತೋ ಭವತಿ (೮) ರುಚಮೇವಾಸ್ಮಿನ್ದಧಾತಿ ಬಭ್ರು

ಸ್ಸೌಮ್ಯೋ ಭವತಿ ಬ್ರಹ್ಮವರ್ಚಸಮೇವಾಸ್ಮಿನ್ತ್ವಿಷಿಂ

---

ಕೃಷ್ಣಗ್ರೀವ ಇತಿ ಕೃಷ್ಣ-ಗ್ರೀವಃ । ಆಗ್ನೇಯಃ । ಭವತಿ । ತಮಃ । ಏವ । ಅಸ್ಮಾತ್ ।

ಅಪೇತಿ । ಹಂತಿ । ಶ್ವೇತಃ । ಭವತಿ ।(೮)। ರುಚಮ್ । ಏವ । ಅಸ್ಮಿನ್ನ್ । ದಧಾತಿ । ಬಭ್ರುಃ ।

ಸೌಮ್ಯಃ। ಭವತಿ। ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್। ಏವ। ಅಸ್ಮಿನ್ನ್। ತ್ವಿಷಿಮ್ ।

---

| | |
|---|---|
| ಆಗ್ನೇಯಃ ಕೃಷ್ಣಗ್ರೀವಃ ಭವತಿ | ಆಗ್ನೇಯಪಶುವು ಕುತ್ತಿಗೆಯಲ್ಲಿ ಕಪ್ಪಾಗಿರುತ್ತದೆ. |
| ತಮಃ ಏವ ಅಸ್ಮಾತ್ ಅಪಹಂತಿ | ಆದರಿಂದ ಈ ಯಜಮಾನನಿಗೆ [ಬುದ್ಧಿಮಾಂದ್ಯರೂಪವಾದ] ಕತ್ತಲೆಯನ್ನು ಹೋಗಲಾಡಿಸುತ್ತದೆ. |
| ಶ್ವೇತಃ ಭವತಿ | ಕತ್ತನ್ನು ಬಿಟ್ಟು ಉಳಿದ ಕಡೆಗಳಲ್ಲಿ ಬಿಳುಪಾಗಿರುತ್ತದೆ. |
| ರುಚಮ್ ಏವ ಅಸ್ಮಿನ್ ದಧಾತಿ | ಆದರಿಂದ [ಸಭಾನುರಂಜನರೂಪವಾದ] ಕಾಂತಿಯನ್ನು ಯಜಮಾನನಲ್ಲಿ ಉಂಟುಮಾಡುತ್ತದೆ. |
| ಸೌಮ್ಯಃ ಬಭ್ರುಃ ಭವತಿ | ಸೌಮ್ಯಪಶುವು ಪಿಶಂಗರೂಪವಾಗಿರುತ್ತದೆ. |
| ಅಸ್ಮಿನ್ ಬ್ರಹ್ಮವರ್ಚಸಮ್ ತ್ವಿಷಿಮ್ ಏವ | [ಅದು] ಈ ಯಜಮಾನನಲ್ಲಿ[ಶ್ರುತಾಧ್ಯಯನರೂಪವಾದ] ಬ್ರಹ್ಮವರ್ಚಸವನ್ನೂ [ಸಭಾರಂಜನಾತಿಶಯವೆಂಬ] ಕಾಂತಿಯನ್ನೇ |

---

ಬುದ್ಧಿಮಾಂದ್ಯವೆಂಬ ಕತ್ತಲು ದೂರವಾಗುತ್ತದೆ. ಪಶುವಿನ ಉಳಿದ ಭಾಗಗಳಲ್ಲಿ ಬಿಳಿಯ ಬಣ್ಣವಿರುವುದರಿಂದ ಸಭಾರಂಜನರೂಪವಾದ ಕಾಂತಿಯುಂಟಾಗುತ್ತದೆ. ಪಶುವು ಪಿಂಗಲವರ್ಣವಿರುವುದರಿಂದ ಸೌಮ್ಯಪಶುವು ಬ್ರಹ್ಮವರ್ಚಸವನ್ನೂ,

ದಧಾತ್ಯಾಗ್ನೇಯಂ ಕೃಷ್ಣಗ್ರೀವಮಾಲಭೇತ ಸೌಮ್ಯಂ

ಬಭ್ರುಮಾಗ್ನೇಯಂ ಕೃಷ್ಣಗ್ರೀವಂ ಪುರೋಧಾಯಾಗ್ಂ

ಸ್ಪರ್ಧಮಾನ ಆಗ್ನೇಯೋ ವೈ ಬ್ರಾಹ್ಮಣಃ

---

ದಧಾತಿ। ಆಗ್ನೇಯಮ್। ಕೃಷ್ಣಗ್ರೀವಮಿತಿ ಕೃಷ್ಣ–ಗ್ರೀವಮ್। ಏತಿ। ಲಭೇತ। ಸೌಮ್ಯಮ್।

ಬಭ್ರುಮ್। ಆಗ್ನೇಯಮ್। ಕೃಷ್ಣಗ್ರೀವಮಿತಿ ಕೃಷ್ಣ– ಗ್ರೀವಮ್। ಪುರೋಧಾಯಾಮಿತಿ

ಪುರಃ – ಧಾಯಾಮ್। ಸ್ಪರ್ಧಮಾನಃ। ಆಗ್ನೇಯಃ। ವೈ। ಬ್ರಾಹ್ಮಣಃ।

---

ದಧಾತಿ — ಕೊಡುತ್ತದೆ.

**ಪೌರೋಹಿತ್ಯಕ್ಕಾಗಿ ಸ್ಪರ್ಧಿಸುವವನಿಗೆ ವಿಹಿತವಾದ ಯಾಗ; ಪ್ರಶಂಸೆ**

| | |
|---|---|
| ಪುರೋಧಾಯಾಮ್ ಸ್ಪರ್ಧಮಾನಃ | ಪೌರೋಹಿತ್ಯವಿಷಯದಲ್ಲಿ ಸ್ಪರ್ಧಿಸತಕ್ಕವನು |
| ಆಗ್ನೇಯಮ್ ಕೃಷ್ಣಗ್ರೀವಮ್, ಸೌಮ್ಯಮ್ ಬಭ್ರುಮ್, ಆಗ್ನೇಯಮ್ ಕೃಷ್ಣಗ್ರೀವಮ್ ಆಲಭೇತ | ಅಗ್ನಿದೇವತಾಕವಾದ ಕೃಷ್ಣಗ್ರೀವ ಪಶುಯಾಗವನ್ನೂ, ಸೋಮದೇವತಾಕವಾದ ಪಿಂಗಲ ಪಶುಯಾಗವನ್ನೂ, ಅಗ್ನಿದೇವತಾಕವಾದ ಕೃಷ್ಣಗ್ರೀವ ಪಶುಯಾಗವನ್ನೂ ಮಾಡಬೇಕು. [ವಿಧಿ] |
| ಆಗ್ನೇಯಃ ವೈ ಬ್ರಾಹ್ಮಣಃ | ಬ್ರಾಹ್ಮಣನು ಅಗ್ನಿಸಂಬಂಧಿಯಾದವನು. |

---

ಪ್ರತಿವಾದಿಗಳು ಗೆಲ್ಲಲಾಗದಂತಹ ಸಭಾರಂಜನಾತಿಶಯಕಾಂತಿಯನ್ನೂ ಉಂಟು ಮಾಡುತ್ತದೆ.

ರಾಷ್ಟ್ರದಲ್ಲಿ ಪುರೋಹಿತನ ಸ್ಥಾನವು ಮಹತ್ತರವಾದುದು. ಅದಕ್ಕಾಗಿ ಅನೇಕರು ಯತ್ನಿಸಬಹುದು. ಪೌರೋಹಿತ್ಯಕ್ಕಾಗಿ ಸ್ಪರ್ಧಿಸಬಯಸುವವನು ಆಗ್ನೇಯಕೃಷ್ಣಗ್ರೀವ ಪಶುಯಾಗವನ್ನೂ, ಸೌಮ್ಯಬಭ್ರುಪಶುಯಾಗವನ್ನೂ, ಮತ್ತೊಂದು ಆಗ್ನೇಯ ಕೃಷ್ಣಗ್ರೀವಪಶುಯಾಗವನ್ನೂ ಮಾಡಬೇಕು.

ಸೌಮ್ಯೋ ರಾಜನ್ಯೋಽಭಿತಸ್ಸೌಮ್ಯಮಾಗ್ನೇಯೌ

ಭವತಸ್ತೇಜಸ್ಯೈವ ಬ್ರಹ್ಮಣೋಭಯತೋ ರಾಷ್ಟ್ರಂ ಪರಿಗೃಹ್ಣಾ-

ತ್ಯೇಕಧಾ ಸಮಾವೃಂಕ್ತೇ ಪುರ ಏನಂ ದಧತೇ ॥೧೫–2॥

**[ಲಭೇತ ವರುಣಂ ವಶ್ಯತಾವಮಿಂ ವಶಾವಾದಿತ್ಯೇಭ್ಯಃ ಕಾಮಾಯ ಖಲ್ಹಾ ಆಲಭೇತ ತಾನ್ಯೇವ ಸ್ವೈವಾಸ್ಮಿನ್ಥ್ಸೋಮಃ ಶ್ವೇತೋ ಭವತಿ ತ್ರಿಚತ್ವಾರಿಗ್ಂಶಚ್ಚ ।]**

---

ಸೌಮ್ಯಃ । ರಾಜನ್ಯಃ । ಅಭಿತಃ । ಸೌಮ್ಯಮ್ । ಆಗ್ನೇಯೌ । ಭವತಃ । ತೇಜಸಾ । ಏವ । ಬ್ರಹ್ಮಣಾ । ಉಭಯತಃ । ರಾಷ್ಟ್ರಮ್ । ಪರೀತಿ । ಗೃಹ್ಣಾತಿ । ಏಕಧೇತ್ಯೇಕ–ಧಾ । ಸಮಾವೃಂಕ್ತ ಇತಿ ಸಮ್–ಆವೃಂಕ್ತೇ । ಪುರಃ । ಏನಮ್ । ದಧತೇ ॥೨॥

---

| | |
|---|---|
| ಸೌಮ್ಯಃ ರಾಜನ್ಯಃ | ರಾಜನು ಸೋಮಸಂಬಂಧಿ. |
| ಅಭಿತಃ ಸೌಮ್ಯಮ್ ಆಗ್ನೇಯೌ ಭವತಃ | ಸೌಮ್ಯಯಾಗದ ಉಭಯಪಾರ್ಶ್ವಗಳಲ್ಲಿಯೂ ಆಗ್ನೇಯಯಾಗಗಳಿರುತ್ತವೆ. |
| ಉಭಯತಃ ಬ್ರಹ್ಮಣಾ ತೇಜಸಾ ಏವ ರಾಷ್ಟ್ರಮ್ ಪರಿಗೃಹ್ಣಾತಿ | ವೇದಶಾಸ್ತ್ರಯುಕ್ತವಾದ ಬ್ರಾಹ್ಮಣೋಚಿತವಾದ ತೇಜಸ್ಸಿನಿಂದ ಯಜಮಾನನು ಸೋಮಸಂಬಂಧಿಯಾದ ರಾಷ್ಟ್ರವನ್ನು ವಶಪಡಿಸಿಕೊಳ್ಳುತ್ತಾನೆ. |
| ಏಕಧಾ ಸಮಾವೃಂಕ್ತೇ | ಒಂದೇ ಬಾರಿಗೆ ಪ್ರತಿಸ್ಪರ್ಧಿಯನ್ನು ಸೋಲಿಸಿಬಿಡುತ್ತಾನೆ. |
| ಪುರಃ ಏನಮ್ ದಧತೇ | ರಾಜ–ಅಮಾತ್ಯಾದಿಗಳು ಇವನನ್ನೇ ರಾಷ್ಟ್ರಪುರೋಹಿತನನ್ನಾಗಿ ಮಾಡಿಕೊಳ್ಳುತ್ತಾರೆ. |

---

ಪ್ರಜಾಪತಿಬ್ರಹ್ಮನ ಮುಖದಿಂದ ಅಗ್ನಿಯೂ, ಬ್ರಾಹ್ಮಣನೂ ಜನಿಸಿದುದರಿಂದ ಬ್ರಾಹ್ಮಣನು ಅಗ್ನಿಸಂಬಂಧಿ. **'ಸೋಮ ರಾಜನ್'** ಇತ್ಯಾದಿಗಳಲ್ಲಿ ಸೋಮನಿಗೆ

---

ರಾಜನೆಂಬ ವ್ಯವಹಾರವಿರುವುದರಿಂದ ರಾಜನು ಸೋಮಸಂಬಂಧಿ. ಹೀಗೆ ಉಭಯ ಪಾರ್ಶ್ವಗಳಲ್ಲಿ ಆಗ್ನೇಯವಿರುವುದರಿಂದ ಬ್ರಹ್ಮತೇಜಸ್ಸಿನಿಂದ ರಾಷ್ಟ್ರವನ್ನು ವಶೀಕರಿಸಿ ಕೊಂಡಂತೆ ಆಗುತ್ತದೆ. ಈ ಯಾಗಾನುಷ್ಠಾನವಾದ ಕೂಡಲೇ ಯಜಮಾನನು ಪ್ರತಿಸ್ಪರ್ಧಿಗಳನ್ನು ಸೋಲಿಸುತ್ತಾನೆ. ಈತನನ್ನೇ ರಾಜಮಾತ್ಯಾದಿಗಳು ಪುರೋಹಿತನನ್ನಾಗಿ ಮಾಡಿಕೊಳ್ಳುತ್ತಾರೆ.

* * *



# ಅನುವಾಕದ ವಿಶೇಷವಿಷಯಗಳು

## ಅ) ಮೀಮಾಂಸಾ

**೧. ಕೃಷ್ಣಗ್ರೀವಪಶುಯಾಗಗಳಿಗೆ ತಂತ್ರದಿಂದ ಅನುಷ್ಠಾನವೇ?**

**[ಜೈ.ಸೂ. 11:1.14]**

ಪೌರೋಹಿತ್ಯಕ್ಕಾಗಿ ಸ್ಪರ್ಧಿಸಬಯಸುವವನು ಮಾಡಬೇಕಾದ ಯಾಗದಲ್ಲಿ ಎರಡು ಆಗ್ನೇಯ ಕೃಷ್ಣಗ್ರೀವ ಪಶುಯಾಗಗಳಿವೆ. ಅವೆರಡರ ಮಧ್ಯದಲ್ಲಿ ಸೋಮದೇವತಾಕವಾದ ಪಶುಯಾಗವಿದೆ. ಎರಡು ಕೃಷ್ಣಗ್ರೀವಪಶುಯಾಗಗಳಿಗೂ ಅಗ್ನಿಯೇ ದೇವತೆಯಾಗಿರುವುದರಿಂದ, ದೇವತೈಕ್ಯವಿರುವುದರಿಂದ ಅಂಗಗಳನ್ನು ತಂತ್ರದಿಂದ ಅನುಷ್ಠಿಸಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಎರಡು ಯಾಗಗಳಿಗೂ ಮಧ್ಯದಲ್ಲಿ ಸೌಮ್ಯಪಶುಯಾಗವಿರುವುದರಿಂದ ಕಾಲವು ಬೇರೆಯಾಗಿರುವುದರಿಂದ ಬೇರೆಬೇರೆಯೇ ಅನುಷ್ಠಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

**೨. 'ಆಗ್ನೇಯೋ ವೈ ಬ್ರಾಹ್ಮಣಃ' ಎಂಬಲ್ಲಿ ಆಗ್ನೇಯ ಎಂದರೇನು?**

**'ಆಗ್ನೇಯೋ ವೈ ಬ್ರಾಹ್ಮಣಃ'** ಎಂಬಲ್ಲಿ ಆಗ್ನೇಯಶಬ್ದವು ಯಾಗದ ನಾಮಧೇಯವೇ? ಅಥವಾ ದೇವತಾರೂಪವಾದ ಗುಣವಿಧಿಯೇ?

**'ಸೂಕ್ತಭಾಜಃ ಹವಿರ್ಭಾಜಶ್ಚ ದೇವತಾಃ'** ಎಂದಿರುವುದರಿಂದ, ಇಲ್ಲಿ ದೇವತಾತದ್ಧಿತಪ್ರತ್ಯಯವಿಲ್ಲದಿರುವುದರಿಂದ ಇದು ದೇವತಾವಿಧಿಯಲ್ಲ, ಯಾಗದ ನಾಮಧೇಯವೂ ಅಲ್ಲ. **'ಆಗ್ನೇಯ'** ಎಂಬಲ್ಲಿರುವ ತದ್ಧಿತಪ್ರತ್ಯಯವು* ಸಂಬಂಧವಾಚಕವಾಗಿದೆ. ಅದು ಅಗ್ನಿಗೂ, ಬ್ರಾಹ್ಮಣನಿಗೂ ಸಂಬಂಧವಿದೆಯೆಂದು ತಿಳಿಸುತ್ತದೆ. ಅಗ್ನಿ–ಬ್ರಾಹ್ಮಣರು ಪ್ರಜಾಪತಿ ಬ್ರಹ್ಮನ ಮುಖದಿಂದ ಜನಿಸಿರುವುದರಿಂದ ಆ ಸಂಬಂಧವನ್ನು ತಿಳಿಸುವ ಪ್ರತ್ಯಯವಾಗಿದೆ. ಇದು ಸ್ತಾವಕವಾಗಿದೆ. ಇದರಂತೆಯೇ **'ಐಂದ್ರೋ ರಾಜನ್ಯಃ' 'ವೈಶ್ವದೇವೋ ಹಿ ವೈಶ್ಯಃ'** ಮೊದಲಾದವುಗಳೂ ಸಹ ಸ್ತಾವಕಗಳು. ಇದು ಇಲ್ಲಿನ **ಸಿದ್ಧಾಂತ.**

* * *

* ''ಸರ್ವತ್ರಾಗ್ನಿಕಲಿಭ್ಯಾಂ ಢಕ್'' । ಪಾ.ಸೂ. 4.2.7 [ವಾರ್ತಿಕ]

## ॥ ತೃತೀಯೋನುವಾಕಃ ॥

ದೇವಾಸುರಾ ಏಷು ಲೋಕೇಷ್ವಸ್ಪರ್ಧಂತ ಸ

---

**ದೇವಾಸುರಾ ಇತಿ ದೇವ – ಅಸುರಾಃ । ಏಷು । ಲೋಕೇಷು । ಅಸ್ಪರ್ಧಂತ । ಸಃ ।**

---

ಎರಡನೆಯ ಅನುವಾಕದಲ್ಲಿ ವಿಹಿತವಾದ ಯಾಗಗಳನ್ನು ಹೀಗೆ ಸಂಗ್ರಹಿಸಲಾಗಿದೆ.

**ಜಲೋದರಗೃಹೀತೋ ಯೋ ಯೇ ವಾಂಛಂತಿ ಪಶುಪ್ರಥಾವ್ ।**
**ಬ್ರಹ್ಮವರ್ಚಸಕಾಮೋ ಯೋ ಯೋ ವಿದ್ವಾನ್ವಕ್ತುಮುಕ್ಷಮಃ ॥**
**ದೀರ್ಘರೋಗೀ ಪ್ರಜಾಕಾಮಃ ಸಭಾರಂಜನವರ್ಜಿತಃ ।**
**ಪೌರೋಹಿತ್ಯೇ ಸ್ಪರ್ಧಮಾನಶ್ಚೈತೇಷಾಂ ಪಶವಃ ಸ್ಮೃತಾಃ ॥**

ಈ ಮೂರನೆಯ ಅನುವಾಕದಲ್ಲಿ ಜಯಾದಿಕಾರಣಗಳಿಂದ ಪಶುಗಳನ್ನು ಹೇಳಲಾಗಿದೆ.

---

**ಲೋಕತ್ರಯಜಯಕಾಮನಿಗೆ ವಿಹಿತವಾದ ಯಾಗ; ಪ್ರಶಂಸೆ**

| | |
|---|---|
| ದೇವಾಸುರಾಃ ಏಷು ಲೋಕೇಷು ಅಸ್ಪರ್ಧಂತ | ದೇವತೆಗಳು ಮತ್ತು ರಾಕ್ಷಸರು ಈ ಲೋಕಗಳ ವಿಷಯದಲ್ಲಿ ಸ್ಪರ್ಧಿಸಿದರು. |
| ಸಃ | ಆ ಪ್ರಸಿದ್ಧನಾದ |

---

ಹಿಂದೆ ಒಂದು ಕಾಲದಲ್ಲಿ ದೇವತೆಗಳಿಗೂ ರಾಕ್ಷಸರಿಗೂ ಈ ಲೋಕಗಳ ಒಡೆತನದ ವಿಷಯದಲ್ಲಿ ಸ್ಪರ್ಧೆಯುಂಟಾಯಿತು. ಆ ಪ್ರಸಿದ್ಧನಾದ ವಿಷ್ಣುವು ಗುಜ್ಜಾಗಿರುವ ಈ ಪಶುವನ್ನು ಜಯಸಾಧನವನ್ನಾಗಿ ತಿಳಿದನು. ಅದನ್ನು ವಿಷ್ಣುದೇವತೆಗಾಗಿ ಯಾಗ

ಏತಂ ವಿಷ್ಣುರ್ವಾಮನಮಪಶ್ಯತ್ತಗ್ಂ ಸ್ವಾಯೈ

ದೇವತಾಯಾ ಆऽಲಭತ ತತೋ ವೈ ಸ

ಇಮಾನ್ಲೋಕಾನಭ್ಯಜಯದ್ವೈಷ್ಣವಂ

ವಾಮನಮಾಲಭೇತ ಸ್ಪರ್ಧಮಾನೋ

---

ಏತಮ್ । ವಿಷ್ಣುಃ । ವಾಮನಮ್ । ಅಪಶ್ಯತ್ । ತಮ್ । ಸ್ವಾಯೈ । ದೇವತಾಯೈ । ಐತಿ ।

ಅಲಭತ । ತತಃ । ವೈ । ಸಃ । ಇಮಾನ್ । ಲೋಕಾನ್ । ಅಭೀತಿ । ಅಜಯತ್ ।

ವೈಷ್ಣವಮ್ । ವಾಮನಮ್ । ಐತಿ । ಲಭೇತ । ಸ್ಪರ್ಧಮಾನಃ ।

---

| | |
|---|---|
| ವಿಷ್ಣುಃ ಏತಮ್ ವಾಮನಮ್ ಅಪಶ್ಯತ್ | ಮಹಾವಿಷ್ಣುವು ಹ್ರಸ್ವವಾದ ಪಶುವನ್ನು ಯಾಗಪಶುವನ್ನಾಗಿ ನೋಡಿದನು. |
| ತಮ್ ಸ್ವಾಯೈ ದೇವತಾಯೈ ಆಲಭತ | ತನ್ನನ್ನೇ ದೇವತೆಯನ್ನಾಗಿ ಮಾಡಿಕೊಂಡು ಆ ಪಶುವಿನ ಯಾಗವನ್ನು ಮಾಡಿದನು. |
| ತತಃ ವೈ ಸಃ ಇಮಾನ್ ಲೋಕಾನ್ ಅಭ್ಯಜಯತ್ | ಅನಂತರ ಆ ಮಹಾವಿಷ್ಣುವು ಈ ಮೂರು ಲೋಕಗಳನ್ನೂ ಜಯಿಸಿದನು. |
| ಸ್ಪರ್ಧಮಾನಃ ವೈಷ್ಣವಮ್ ವಾಮನಮ್ ಆಲಭೇತ | ಸ್ಪರ್ಧೆಯಿರುವವನು ವಿಷ್ಣುದೇವತೆಗಾಗಿ ಹ್ರಸ್ವ ಪಶುವನ್ನು ಯಾಗ ಮಾಡಬೇಕು. [ವಿಧಿ] |

---

ಮಾಡಿದನು. ಯಾಗಪ್ರಭಾವದಿಂದ ವಿಷ್ಣುವು ಎಲ್ಲಾ ಲೋಕಗಳನ್ನೂ ಗೆದ್ದನು. ಲೋಕದಲ್ಲಿ ಮನೆ, ಭೂಮಿ ಮೊದಲಾದ ವಿಷಯಗಳಲ್ಲಿ ಸ್ಪರ್ಧೆಯಿರತಕ್ಕವನು ವಿಷ್ಣು ದೇವತೆಯನ್ನುದ್ದೇಶಿಸಿ ವಾಮನಪಶುವನ್ನು ಯಾಗ ಮಾಡಬೇಕು.

ವಿಷ್ಣುರೇವ ಭೂತ್ವೇಮಾನ್ಲೋಕಾನಭಿಜಯತಿ ವಿಷಮ

ಆಲಭೇತ ವಿಷಮಾ ಇವ ಹೀಮೇ ಲೋಕಾಸ್ಸಮೃದ್ಧ್ಯೈ

ಇಂದ್ರಾಯ ಮನ್ಯುಮತೇ ಮನಸ್ವತೇ ಲಲಾಮಂ

ಪ್ರಾಶೃಂಗಮಾಲಭೇತ ಸಂಗ್ರಾಮೇ [೧] ಸಂಯತ್ತ

---

ವಿಷ್ಣುಃ । ಏವ । ಭೂತ್ವಾ । ಇಮಾನ್ । ಲೋಕಾನ್ । ಅಭೀತಿ । ಜಯತಿ । ವಿಷಮ ಇತಿ ವಿ–ಸಮೇ । ಏತಿ । ಲಭೇತ । ವಿಷಮಾ ಇತಿ ವಿ–ಸಮಾಃ । ಇವ । ಹಿ । ಇಮೇ । ಲೋಕಾಃ । ಸಮೃದ್ಧ್ಯೈ ಇತಿ ಸಮ್–ಋದ್ಧ್ಯೈ । ಇಂದ್ರಾಯ । ಮನ್ಯುಮತ ಇತಿ ಮನ್ಯು–ಮತೇ । ಮನಸ್ವತೇ । ಲಲಾಮಮ್ । ಪ್ರಾಶೃಂಗಮ್ । ಏತಿ । ಲಭೇತ । ಸಂಗ್ರಾಮ ಇತಿ ಸಮ್–ಗ್ರಾಮೇ । ಸಂಯತ್ತ ಇತಿ ಸಮ್ – ಯತ್ತೇ ।

---

| | |
|---|---|
| ವಿಷ್ಣುಃ ಏವ ಭೂತ್ವಾ ಇಮಾನ್ ಲೋಕಾನ್ ಅಭಿಜಯತಿ | ಆತನು ವಿಷ್ಣುವಿನ ಸಾಮರ್ಥ್ಯವನ್ನು ಪಡೆದು ಈ ಲೋಕದಲ್ಲಿ ಎಲ್ಲವನ್ನೂ ಜಯಿಸುತ್ತಾನೆ. |

**ಪ್ರಾಕೃತಿಕ ಸಮಪ್ರದೇಶದ ಬದಲು ವಿಷಮಪ್ರದೇಶವಿಧಿ; ಪ್ರಶಂಸೆ**

| | |
|---|---|
| ವಿಷಮೇ ಆಲಭೇತ | ಹಳ್ಳದಿಣ್ಣೆಗಳುಳ್ಳ ಪ್ರದೇಶದಲ್ಲಿ ಈ ಯಾಗವನ್ನು ಮಾಡಬೇಕು. |
| ವಿಷಮಾಃ ಇವ ಹಿ ಇಮೇ ಲೋಕಾಃ | ಈ ಲೋಕಗಳು ಪರಸ್ಪರ ವೈಷಮ್ಯವುಳ್ಳವಷ್ಟೆ. |
| ಸಮೃದ್ಧ್ಯೈ | ಇದರಿಂದ ಫಲಸಮೃದ್ಧಿಯಾಗುತ್ತದೆ. |

**ಯುದ್ಧವು ಪ್ರಾಪ್ತವಾದಾಗ ಮಾಡಬೇಕಾದ ಯಾಗ; ಪ್ರಶಂಸೆ**

| | |
|---|---|
| ಸಂಗ್ರಾಮೇ ಸಂಯತ್ತೇ (ಸತಿ) | ಯುದ್ಧವು ಪ್ರಾಪ್ತವಾಗಲಾಗಿ |
| ಇಂದ್ರಾಯ ಮನ್ಯುಮತೇ ಮನಸ್ವತೇ | ಮನ್ಯುಮಂತನಾದ, ಮನಸ್ವಂತನಾದ ಇಂದ್ರನಿಗಾಗಿ |
| ಲಲಾಮಮ್ ಪ್ರಾಶೃಂಗಮ್ ಆಲಭೇತ | ಬಿಳಿಯ ಕೂದಲಿನಿಂದ ಕೂಡಿದ ಬಾಲವುಳ್ಳ, ಹಣೆಯಲ್ಲಿ ತಿಲಕವುಳ್ಳ , ಬಾಗಿರುವ ಕೊಂಬುಗಳುಳ್ಳ ವೃಷಭವನ್ನು ಯಾಗ ಮಾಡಬೇಕು. |

ಇಂದ್ರಿಯೇಣ ವೈ ಮನ್ಯುನಾ ಮನಸಾ ಸಂಗ್ರಾಮಂ
ಜಯತೀಂದ್ರಮೇವ ಮನ್ಯುಮಂತಂ ಮನಸ್ವಂತಗ್ಗ್ಂ
ಸ್ವೇನ ಭಾಗಧೇಯೇನೋಪಧಾವತಿ

---

ಇಂದ್ರಿಯೇಣ । ವೈ । ಮನ್ಯುನಾ । ಮನಸಾ । ಸಂಗ್ರಾಮಮಿತಿ ಸಮ್ – ಗ್ರಾಮಮ್ ।
ಜಯತಿ । ಇಂದ್ರಮ್ । ಏವ । ಮನ್ಯುಮಂತಮಿತಿ ಮನ್ಯು–ಮಂತಮ್ ।
ಮನಸ್ವಂತಮ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಇಂದ್ರಿಯೇಣ ವೈ ಮನ್ಯುನಾ ಮನಸಾ ಸಂಗ್ರಾಮಮ್ ಜಯತಿ | ಇಂದ್ರಿಯದಿಂದ [ಶರೀರಸಾಮರ್ಥ್ಯ], ಶತ್ರುಗಳಲ್ಲಿ ಮನ್ಯು [ಕ್ರೋಧ]ವಿನಿಂದ, ಮನಸ್ಸಿನಿಂದ [ಧೈರ್ಯ], ಯುದ್ಧದಲ್ಲಿ ಗೆಲ್ಲುತ್ತಾನೆ. |
| ಮನ್ಯುಮಂತಮ್ ಮನಸ್ವಂತಮ್ ಇಂದ್ರಮ್ ಏವ | [ಈ ಯಾಗಾನುಷ್ಠಾನದಿಂದ] ಮನ್ಯುಮಂತನೂ, ಮನಸ್ವಂತನೂ ಆದ ಇಂದ್ರನಿಗೆ |
| ಸ್ವೇನ ಭಾಗಧೇಯೇನ ಉಪಧಾವತಿ | ಅವನ ಭಾಗವನ್ನು ಕೊಟ್ಟು ಉಪಚರಿಸಿದವನಾಗುತ್ತಾನೆ. |

---

ಈ ಯಾಗಪ್ರಭಾವದಿಂದ ಅವನು ವಿಷ್ಣುವೇ ಅಂದರೆ ವಿಷ್ಣುವಿನಂತೆ ಅಧಿಕಶಕ್ತಿಯುಳ್ಳವನೇ ಆಗುತ್ತಾನೆ. ಈ ಲೋಕಗಳಲ್ಲಿ ತಾನು ಸ್ಪರ್ಧಿಸಿದುದೆಲ್ಲವನ್ನೂ ಜಯಿಸುತ್ತಾನೆ.

ಈ ಯಾಗವನ್ನು ಹಳ್ಳದಿಣ್ಣೆಗಳುಳ್ಳ ಪ್ರದೇಶದಲ್ಲಿ ಮಾಡಬೇಕು. ಈ ಲೋಕಗಳು ಪರಸ್ಪರ ವೈಷಮ್ಯಗಳುಳ್ಳವಷ್ಟೆ. ಫಲಸಮೃದ್ಧಿಗಾಗಿ ವಿಷಮದೇಶದಲ್ಲಿ ಯಾಗವನ್ನು ಮಾಡಬೇಕು.

ಸ ಏವಾಸ್ಮಿನ್ನಿಂದ್ರಿಯಂ ಮನ್ಯುಂ ಮನೋ ದಧಾತಿ

ಜಯತಿ ತಗ್ಂ ಸಂಗ್ರಾಮಮಿಂದ್ರಾಯ ಮರುತ್ವತೇ

ಪೃಶ್ನಿಸಕ್ಥಮಾಲಭೇತ ಗ್ರಾಮಕಾಮ

---

ಸಃ । ಏವ । ಅಸ್ಮಿನ್ನ್ । ಇಂದ್ರಿಯಮ್ । ಮನ್ಯುಮ್ । ಮನಃ । ದಧಾತಿ । ಜಯತಿ । ತಮ್ । ಸಂಗ್ರಾಮಮಿತಿ ಸಮ್ – ಗ್ರಾಮಮ್ । ಇಂದ್ರಾಯ । ಮರುತ್ವತೇ । ಪೃಶ್ನಿಸಕ್ಥಮಿತಿ ಪೃಶ್ನಿ–ಸಕ್ಥಮ್ । ಆ । ಲಭೇತ । ಗ್ರಾಮಕಾಮ ಇತಿ ಗ್ರಾಮ–ಕಾಮಃ ।

---

| | |
|---|---|
| ಸಃ ಏವ ಅಸ್ಮಿನ್ ಇಂದ್ರಿಯಮ್ ಮನ್ಯುಮ್ ಮನಃ ದಧಾತಿ | ಆ ಇಂದ್ರದೇವನೇ ಯಜಮಾನನಿಗೆ ಶಾರೀರ ಸಾಮರ್ಥ್ಯವನ್ನೂ, ಶತ್ರುಗಳಲ್ಲಿ ಕ್ರೋಧವನ್ನೂ, ಮನೋಧೈರ್ಯವನ್ನೂ ಕೊಡುತ್ತಾನೆ. |
| ತಮ್ ಸಂಗ್ರಾಮಮ್ ಜಯತಿ | ಯಜಮಾನನು ಆ ಯುದ್ಧದಲ್ಲಿ ಜಯಶೀಲನಾಗುತ್ತಾನೆ. |

**ಗ್ರಾಮಕಾಮನಿಗೆ ವಿಹಿತವಾದ ಪಶುಯಾಗ; ಪ್ರಶಂಸೆ**

| | |
|---|---|
| ಗ್ರಾಮಕಾಮಃ ಮರುತ್ವತೇ ಇಂದ್ರಾಯ ಪೃಶ್ನಿಸಕ್ಥಮ್ ಆಲಭೇತ | ಗ್ರಾಮದ ಒಡೆಯನಾಗಬಯಸುವವನು ಮರುತ್ವಂತನಾದ ಇಂದ್ರನಿಗಾಗಿ ಬಿಳಿಯ ತೊಡೆಗಳುಳ್ಳ ಪಶುವನ್ನು ಯಾಗ ಮಾಡಬೇಕು. |

---

ಯುದ್ಧವು ಪ್ರಾಪ್ತವಾದಾಗ ಜಯಕಾಮನಾದವನು ಮನ್ಯುಮಂತನಾದ, ಮನಸ್ವಂತನಾದ ಇಂದ್ರನನ್ನು ಉದ್ದೇಶಿಸಿ ಹಣೆಯಲ್ಲಿ ತಿಲಕವಿರುವ, ಬಾಲದಲ್ಲಿ ಬಿಳುಪಾದ ಕೂದಲುಳ್ಳ, ಬಾಗಿರುವ ಕೊಂಬುಳ್ಳ ವೃಷಭವನ್ನು ಯಾಗ ಮಾಡಬೇಕು. ಶಾರೀರ ಸಾಮರ್ಥ್ಯವೂ, ಶತ್ರುವಿನ ವಿಷಯದಲ್ಲಿ ಕ್ರೋಧವೂ, ಮನಸ್ಸಿನಲ್ಲಿ ಧೈರ್ಯವೂ ಶತ್ರುಜಯಕ್ಕೆ ಸಾಧನಗಳು. ಮನ್ಯುಮಂತನೂ, ಮನಸ್ವಂತನೂ ಆದ ಇಂದ್ರನಿಗೆ ನಿರ್ದಿಷ್ಟ ಪಶುಯಾಗವನ್ನು ಮಾಡುವುದರಿಂದ ತನ್ನ ಭಾಗವನ್ನು ಪಡೆದ ಇಂದ್ರನು ತುಷ್ಟನಾಗಿ ಶಾರೀರಸಾಮರ್ಥ್ಯವನ್ನೂ, ಮಾನಸಿಕಕ್ರೋಧವನ್ನೂ, ಮನೋಧೈರ್ಯವನ್ನೂ ನೀಡುತ್ತಾನೆ. ಇವುಗಳಿಂದ ಯಜಮಾನನು ಯುದ್ಧದಲ್ಲಿ ಗೆಲುವನ್ನು ಪಡೆಯುತ್ತಾನೆ.

ಇಂದ್ರಮೇವ ಮರುತ್ವಂತಗ್ಂ ಸ್ವೇನ

ಭಾಗಧೇಯೇನೋಪಧಾವತಿ ಸ ಏವಾಸ್ಮೈ

ಸಜಾತಾನ್ಪ್ರಯಚ್ಛತಿ ಗ್ರಾಮ್ಯೇವ ಭವತಿ

---

ಇಂದ್ರಮ್ । ಏವ । ಮರುತ್ವಂತಮ್ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮೈ । ಸಜಾತಾನಿತಿ ಸ-ಜಾತಾನ್ । ಪ್ರೇತಿ । ಯಚ್ಛತಿ । ಗ್ರಾಮೀ । ಏವ । ಭವತಿ ।

---

| | |
|---|---|
| ಇಂದ್ರಮ್ ಮರುತ್ವಂತಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಈ ಯಾಗದಿಂದ] ಯಜಮಾನನು ಮರುತ್ವಂತನಾದ ಇಂದ್ರನಿಗೆ ಅವನದಾದ ಭಾಗವನ್ನಿತ್ತು ಸೇವಿಸಿದವನಾಗುತ್ತಾನೆ. |
| ಸಃ ಏವ ಅಸ್ಮೈ ಸಜಾತಾನ್ ಪ್ರಯಚ್ಛತಿ | ಆ ಇಂದ್ರಮರುತ್ವಂತನೇ ಈ ಯಜಮಾನನಿಗೆ ಜ್ಞಾತಿ ಭೃತ್ಯಾದಿಗಳನ್ನು ಅಧೀನರನ್ನಾಗಿ ನೀಡುತ್ತಾನೆ. |
| ಗ್ರಾಮೀ ಏವ ಭವತಿ | ಯಜಮಾನನು ಗ್ರಾಮಸ್ವಾಮಿಯಾಗುತ್ತಾನೆ. |

---

ಗ್ರಾಮಕ್ಕೆ ಸ್ವಾಮಿಯಾಗಬಯಸುವವನು ಮರುತ್ವಂತನಾದ ಇಂದ್ರನಿಗೆ ತೊಡೆಗಳಲ್ಲಿ ಬಿಳಿಯ ಬಣ್ಣವುಳ್ಳ ಋಷಭವನ್ನು ಯಾಗ ಮಾಡಬೇಕು. ಈ ಯಾಗದಿಂದ ಇಂದ್ರಮರುತ್ವಂತನು ತನ್ನ ಭಾಗವನ್ನು ಹೊಂದಿ ಸುಪ್ರೀತನಾಗುತ್ತಾನೆ. ಅವನು ಇತರ ಪ್ರಜೆಗಳನ್ನು ಯಜಮಾನನ ಅಧೀನರನ್ನಾಗಿ ಮಾಡುತ್ತಾನೆ. ಯಜಮಾನನು ಗ್ರಾಮದ ಒಡೆಯನಾಗುತ್ತಾನೆ.

ಯದೃಷಭಸ್ತೇನೈಂದ್ರೋ [ಯದೃಷಭಸ್ತೇನ (೨)

ಐಂದ್ರೋ....] ಯತ್ಪೃಶ್ನಿಸ್ತೇನ ಮಾರುತಸ್ಸಮೃದ್ಧ್ಯೈ

ಪಶ್ಚಾತ್ಪೃಶ್ನಿಸಕ್ಥೋ ಭವತಿ ಪಶ್ಚಾದನ್ವವಸಾಯಿನೀ-

ಮೇವಾಸ್ಮೈ ವಿಶಂ ಕರೋತಿ

---

ಯತ್ । ಋಷಭಃ । ತೇನ । ಐಂದ್ರಃ । ಯತ್ । ಪೃಶ್ನಿಃ । ತೇನ । ಮಾರುತಃ । ಸಮೃದ್ಧ್ಯಾ ಇತಿ ಸಮ್-ಋದ್ಧ್ಯೈ । ಪಶ್ಚಾತ್ । ಪೃಶ್ನಿಸಕ್ಥ ಇತಿ ಪೃಶ್ನಿ – ಸಕ್ಥಃ । ಭವತಿ । ಪಶ್ಚಾದನ್ವವಸಾಯಿನೀಮಿತಿ ಪಶ್ಚಾತ್ – ಅನ್ವವಸಾಯಿನೀಮ್ । ಏವ । ಅಸ್ಮೈ । ವಿಶಮ್ । ಕರೋತಿ ।

---

| | |
|---|---|
| ಯತ್ ಋಷಭಃ ತೇನ ಐಂದ್ರಃ | ಯಾಗಪಶುವು ಋಷಭವಾದುದರಿಂದ ಸೇಚನಸಾಮರ್ಥ್ಯವುಳ್ಳ ಇಂದ್ರನು ಸುಪ್ರೀತನಾಗುತ್ತಾನೆ. |
| ಯತ್ ಪೃಶ್ನಿಃ ತೇನ ಮಾರುತಃ | ಶ್ವೇತೋರುವಾದುದರಿಂದ ಮಾರುತನು ಪ್ರೀತನಾಗುತ್ತಾನೆ. |
| ಸಮೃದ್ಧ್ಯೈ | ಇವೆರಡೂ ಗುಣಗಳು ಫಲಸಮೃದ್ಧಿಗೆ ಕಾರಣಗಳಾಗುತ್ತವೆ. |
| ಪಶ್ಚಾತ್ ಪೃಶ್ನಿಸಕ್ಥಃ ಭವತಿ | ಪಶುವು ಹಿಂಭಾಗದ ತೊಡೆಗಳಲ್ಲಿ ಬಿಳುಪುಳ್ಳದ್ದಾಗಿರಬೇಕು. |
| ಅಸ್ಮೈ ಪಶ್ಚಾದನ್ವವಸಾಯಿನೀಮ್ ಏವ ವಿಶಂ ಕರೋತಿ | ಇದರಿಂದ ಗ್ರಾಮವಾಸಿಗಳಾದ ಪ್ರಜೆಗಳೆಲ್ಲರೂ ಈ ಯಜಮಾನನನ್ನು ಅನುಸರಿಸುತ್ತಾರೆ. |

ಸೌಮ್ಯಂ ಬಭ್ರುಮಾಲಭೇತಾನ್ನಕಾಮಸ್ಸೌಮ್ಯಂ ವಾ

ಅನ್ನಗ್ಂ ಸೋಮಮೇವ ಸ್ವೇನ ಭಾಗಧೇಯೇನೋಪಧಾವತಿ

---

**ಸೌಮ್ಯಮ್** । ಬಭ್ರುಮ್ । ಏತಿ । ಲಭೇತ । ಅನ್ನಕಾಮ ಇತ್ಯನ್ನ–ಕಾಮಃ । ಸೌಮ್ಯಮ್ । ವೈ । ಅನ್ನಮ್ । ಸೋಮಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

**ಅನ್ನಕಾಮನಿಗೆ ವಿಹಿತವಾದ ಯಾಗ; ಪ್ರಶಂಸೆ**

| | |
|---|---|
| ಅನ್ನಕಾಮಃ ಸೌಮ್ಯಮ್ ಬಭ್ರುಮ್ ಆಲಭೇತ | ಅನ್ನವನ್ನು ಬಯಸುವವನು ಸೋಮ ದೇವತಾಕವಾದ ಪಿಂಗಲವರ್ಣಪಶುವಿನ ಯಾಗವನ್ನು ಮಾಡಬೇಕು. |
| ಸೌಮ್ಯಮ್ ವೈ ಅನ್ನಮ್ | ಅನ್ನವು ಸೋಮಸಂಬಂಧಿಯಾಗಿದೆ. |
| ಸೋಮಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದಲ್ಲಿ ಸೋಮ ದೇವನಿಗೆ ಅವನದಾದ ಭಾಗವನ್ನಿತ್ತು ಸೇವಿಸಿದವನಾಗುತ್ತಾನೆ. |

---

ಪಶುವು ಸೇಚನಸಮರ್ಥವಾದುದರಿಂದ ಇಂದ್ರದೇವತಾಕವಾಗಲು ಅರ್ಹವಾಗಿದೆ. ಅದು ಬಿಳುಪಾದ ತೊಡೆಗಳನ್ನು ಹೊಂದಿರುವುದರಿಂದ ಮಾರುತದೇವತಾಕವಾಗಲು ಅರ್ಹವಾಗಿದೆ. ಆದುದರಿಂದ ಈ ಯಾಗವು ಫಲಸಮೃದ್ಧಿಗೆ ಕಾರಣವಾಗಿದೆ. ಹಿಂಭಾಗದ ತೊಡೆಗಳು ಬಿಳುಪಾಗಿರಬೇಕು. ಇದರಿಂದ ಪ್ರಜೆಗಳು ಯಜಮಾನನನ್ನು ಹಿಂಬಾಲಿಸುವಂತೆ ಆಗುತ್ತದೆ.

ಅನ್ನಕಾಮನಾದವನು ಪಚ್ಚೆಬಣ್ಣದ ಪಶುವನ್ನು ಸೋಮದೇವತೆಗಾಗಿ ಯಾಗ ಮಾಡಬೇಕು. **'ಸೋಮೋ ವಾ ಓಷಧೀನಾಗ್ಂ ರಾಜಾ'** ಎಂಬ ವಚನದಂತೆ ಅನ್ನವು ಸೋಮಸಂಬಂಧಿಯಾಗಿದೆ. ಯಜಮಾನನು ಈ ಯಾಗದಿಂದ ಸೋಮದೇವತೆಯ ಭಾಗವನ್ನು ಸಮರ್ಪಿಸಿ ತೃಪ್ತಿಪಡಿಸುತ್ತಾನೆ.

ಸ ಏವಾಸ್ಮಾ ಅನ್ನಂ ಪ್ರಯಚ್ಛತ್ಯನ್ನಾದ ಏವ ಭವತಿ

ಬಭ್ರುರ್ಭವತ್ಯೇತದ್ವಾ ಅನ್ನಸ್ಯ ರೂಪಗ್‌ಂ ಸಮೃದ್ಧ್ಯೈ

ಸೌಮ್ಯಂ ಬಭ್ರುಮಾಲಭೇತ ಯಮಲಗ್‌ಂ

[ಯಮಲಮ್ (೩) ರಾಜ್ಯಾಯ] ರಾಜ್ಯಾಯ ಸಂತಗ್‌ಂ

---

ಸಃ । ಏವ । ಅಸ್ಮೈ । ಅನ್ನಮ್ । ಪ್ರೇತಿ । ಯಚ್ಛತಿ । ಅನ್ನಾದ ಇತ್ಯನ್ನ-ಅದಃ । ಏವ । ಭವತಿ । ಬಭ್ರುಃ । ಭವತಿ । ಏತತ್ । ವೈ । ಅನ್ನಸ್ಯ । ರೂಪಮ್ । ಸಮೃದ್ಧ್ಯಾ ಇತಿ ಸಮ್-ಋದ್ಧ್ಯೈ । **ಸೌಮ್ಯಮ್** । ಬಭ್ರುಮ್ । ಆ । ಲಭೇತ । ಯಮ್ । ಅಲಮ್ । ರಾಜ್ಯಾಯ । ಸಂತಮ್ ।

---

| | |
|---|---|
| **ಸಃ ಏವ ಅಸ್ಮೈ ಅನ್ನಮ್ ಪ್ರಯಚ್ಛತಿ** | ಆ ಸೋಮದೇವನೇ ಯಜಮಾನನಿಗೆ ಅನ್ನವನ್ನು ಕೊಡುತ್ತಾನೆ. |
| ಅನ್ನಾದಃ ಏವ ಭವತಿ | ಯಜಮಾನನು ಅನ್ನಭೋಕ್ತೃವೇ ಆಗುತ್ತಾನೆ. |
| ಬಭ್ರುಃ ಭವತಿ | ಪಶುವು ಪಿಂಗಲವರ್ಣವಾಗಿರುತ್ತದೆ. |
| ಏತತ್ ವೈ ಅನ್ನಸ್ಯ ರೂಪಮ್ ಸಮೃದ್ಧ್ಯೈ | ಪಿಂಗಲವರ್ಣವು ಅನ್ನದ ರೂಪವಾದುದರಿಂದ ಅನ್ನದ ಸಮೃದ್ಧಿಗೆ ಕಾರಣವಾಗುತ್ತದೆ. |

**ರಾಜ್ಯಕಾಮನಿಗೆ ವಿಹಿತವಾದ ಯಾಗ; ಪ್ರಶಂಸೆ**

| | |
|---|---|
| ಯಮ್ ರಾಜ್ಯಾಯ ಅಲಮ್ ಸಂತಮ್ | ರಾಜ್ಯವನ್ನು ಪಡೆಯಲು ತಕ್ಕ ಗುಣಗಳಿದ್ದರೂ |

---

ತೃಪ್ತನಾದ ಸೋಮನು ಅನ್ನವನ್ನು ಕೊಡುತ್ತಾನೆ. ಯಜಮಾನನು ಅನ್ನಭೋಕ್ತೃವಾಗುತ್ತಾನೆ. ಪಶುವು ಪಿಂಗಲವರ್ಣವಾದುದರಿಂದ ಕಡಲೆ, ಪ್ರಿಯಂಗು ಮುಂತಾದ ಅನ್ನಧಾನ್ಯಗಳ

ರಾಜ್ಯಂ ನೋಪನಮೇತ್ಸೌಮ್ಯಂ ವೈ ರಾಜ್ಯಗ್ಂ
ಸೋಮಮೇವ ಸ್ವೇನ ಭಾಗಧೇಯೇನೋಪಧಾವತಿ ಸ
ಏವಾಸ್ಮೈ ರಾಜ್ಯಂ ಪ್ರಯಚ್ಛತ್ಯುಪೈನಗ್ಂ ರಾಜ್ಯಂ ನಮತಿ

---

ರಾಜ್ಯಮ್ । ನ । ಉಪನಮೇದಿತ್ಯುಪ–ನಮೇತ್ । ಸೌಮ್ಯಮ್ । ವೈ । ರಾಜ್ಯಮ್ ।
ಸೋಮಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ ।
ಧಾವತಿ । ಸಃ । ಏವ । ಅಸ್ಮೈ । ರಾಜ್ಯಮ್ । ಪ್ರೇತಿ । ಯಚ್ಛತಿ । ಉಪೇತಿ । ಏನಮ್ ।
ರಾಜ್ಯಮ್ । ನಮತಿ ।

---

| | |
|---|---|
| ರಾಜ್ಯಮ್ ನ ಉಪನಮೇತ್ | ಯಾವನು ರಾಜ್ಯವನ್ನು ಹೊಂದುವುದಿಲ್ಲವೋ |
| [ಸಃ] ಸೌಮ್ಯಮ್ ಬಭ್ರುಮ್ ಆಲಭೇತ | ಅವನು ಪಚ್ಚೆಯ ಬಣ್ಣದ ಪಶುವನ್ನು ಸೋಮದೇವತಾಕವಾಗಿ ಯಾಗ ಮಾಡಬೇಕು. |
| ಸೌಮ್ಯಮ್ ವೈ ರಾಜ್ಯಮ್ | ಸೋಮನು ರಾಜ್ಯಕ್ಕೆ ದೇವತೆಯಾಗಿರುತ್ತಾನೆ. |
| ಸೋಮಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಸೋಮದೇವನನ್ನೇ ಈ ಯಾಗದಿಂದ ಅವನ ಭಾಗವನ್ನಿತ್ತು ಆರಾಧಿಸಿದವನಾಗುತ್ತಾನೆ. |
| ಸಃ ಏವ ಅಸ್ಮೈ ರಾಜ್ಯಮ್ ಪ್ರಯಚ್ಛತಿ | ಸುಪ್ರೀತನಾದ ಆ ಸೋಮದೇವನೇ ಈ ಯಜಮಾನನಿಗೆ ರಾಜ್ಯವನ್ನೀಯುತ್ತಾನೆ. |
| ಏನಮ್ ರಾಜ್ಯಮ್ ಉಪನಮತಿ | ರಾಜ್ಯವು ಈ ಯಜಮಾನನಿಗೆ ಪ್ರಾಪ್ತವಾಗುತ್ತದೆ. |

ಬಭ್ರುರ್ಭವತ್ಯೇತದ್ವೈ ಸೋಮಸ್ಯ ರೂಪಗ್ಂ

ಸಮೃದ್ಧ್ಯಾ ಇಂದ್ರಾಯ ವೃತ್ರತುರೇ ಲಲಾಮಂ

ಪ್ರಾಶೃಂಗಮಾಲಭೇತ ಗತಶ್ರೀಃ ಪ್ರತಿಷ್ಠಾಕಾಮಃ

---

ಬಭ್ರುಃ । ಭವತಿ । ಏತತ್ । ವೈ । ಸೋಮಸ್ಯ । ರೂಪಮ್ । ಸಮೃದ್ಧ್ಯಾ ಇತಿ ಸಮ್-ಋದ್ಧ್ಯೈ । ಇಂದ್ರಾಯ । ವೃತ್ರತುರ ಇತಿ ವೃತ್ರ-ತುರೇ । ಲಲಾಮಮ್ । ಪ್ರಾಶೃಂಗಮ್ । ಏತಿ । ಲಭೇತ । ಗತ ಶ್ರೀರಿತಿ ಗತ-ಶ್ರೀಃ । ಪ್ರತಿಷ್ಠಾಕಾಮ ಇತಿ ಪ್ರತಿಷ್ಠಾ - ಕಾಮಃ ।

---

| | |
|---|---|
| ಬಭ್ರುಃ ಭವತಿ ಏತತ್ ವೈ ಸೋಮಸ್ಯ ರೂಪಮ್ ಸಮೃದ್ಧ್ಯೈ | ಪಶುವು ಪಿಂಗಲವರ್ಣವಾಗಿರುತ್ತದೆ. ಈ ವರ್ಣವು ಚಂದ್ರನ ಹೊಂಬಣ್ಣವೂ ಆಗಿರುವುದರಿಂದ ಫಲಸಮೃದ್ಧಿಗೆ ಕಾರಣವಾಗುತ್ತದೆ. |

**ರಾಜ್ಯವನ್ನು ಕಳೆದುಕೊಂಡು ಮತ್ತೆ ಸುಸ್ಥಿರವಾದ ರಾಜ್ಯವನ್ನು ಪಡೆಯಲು ಮಾಡಬೇಕಾದ ಯಾಗ; ಪ್ರಶಂಸೆ**

| | |
|---|---|
| ಗತಶ್ರೀಃ ಪ್ರತಿಷ್ಠಾಕಾಮಃ | ಶತ್ರುಗಳಿಂದ ರಾಜ್ಯಶ್ರೀಯನ್ನು ಕಳೆದುಕೊಂಡು ಮತ್ತೆ ಅದು ಸ್ಥಿರವಾಗಿರಲೆಂದು ಬಯಸುವವನು |

---

ಸ್ವರೂಪವಾಗಿದೆ. ಆದುದರಿಂದ ಯಜಮಾನನ ಅನ್ನಸಮೃದ್ಧಿಗೆ ಕಾರಣವಾಗುತ್ತದೆ.

ಯಾವನು ಎಲ್ಲಾ ಗುಣಗಳಿಂದಲೂ ರಾಜ್ಯವನ್ನು ಪಡೆಯಲು ಯೋಗ್ಯನಾಗಿದ್ದರೂ ರಾಜ್ಯವನ್ನು ಹೊಂದಿರುವುದಿಲ್ಲವೋ ಅವನು ಪಚ್ಚೆಯ ಬಣ್ಣದ ಪಶುವನ್ನು ಸೋಮದೇವತೆಗಾಗಿ ಯಾಗ ಮಾಡಬೇಕು. **'ಸೋಮೋಽಸ್ಮಾಕಂ ಬ್ರಾಹ್ಮಣಾನಾಂ ರಾಜಾ' 'ಸೋಮೋ ರಾಜಾ ದಿಶೋಽಭ್ಯಧ್ಯಾಯತ್' 'ಸೋಮಗ್ಂ ರಾಜಾನಮ್'** ಮೊದಲಾದ ಕಡೆಗಳಲ್ಲಿ ಹೇಳಿರುವಂತೆ ಸೋಮನು ರಾಜ್ಯಕ್ಕೆ ಒಡೆಯನು.

ಪಾಪ್ಮಾನಮೇವ ವೃತ್ರಂ ತೀರ್ತ್ವಾ ಪ್ರತಿಷ್ಠಾಂ ಗಚ್ಛತೀಂದ್ರಾ-
ಯಾಭಿಮಾತಿಘ್ನೇ ಲಲಾಮಂ ಪ್ರಾಶೃಂಗಮಾಲಭೇತ
[ಪ್ರಾಶೃಂಗಮಾ (೪)ಲಭೇತ] ಯಃ ಪಾಪ್ಮನಾ ಗೃಹೀತಃ

---

ಪಾಪ್ಮಾನಮ್ । ಏವ । ವೃತ್ರಮ್ । ತೀರ್ತ್ವಾ । ಪ್ರತಿಷ್ಠಾಮಿತಿ ಪ್ರತಿ–ಸ್ಥಾಮ್ । ಗಚ್ಛತಿ । ಇಂದ್ರಾಯ। ಅಭಿಮಾತಿಘ್ನ ಇತ್ಯಭಿಮಾತಿ–ಘ್ನೇ । ಲಲಾಮಮ್ । ಪ್ರಾಶೃಂಗಮ್ । ಏತಿ । ಲಭೇತ । ಯಃ । ಪಾಪ್ಮನಾ । ಗೃಹೀತಃ ।

---

| | |
|---|---|
| ಇಂದ್ರಾಯ ವೃತ್ರತುರೇ ಲಲಾಮಮ್ ಪ್ರಾಶೃಂಗಮ್ ಆಲಭೇತ | ವೃತ್ರ [ಶತ್ರು]ಹಿಂಸಕನಾದ ಇಂದ್ರನಿಗೆ ಹಣೆಯಲ್ಲಿ ತಿಲಕಾಕಾರದ ಲೋಮವುಳ್ಳ , ಬಾಗಿದ ಕೊಂಬುಗಳುಳ್ಳ ಪಶುವನ್ನು ಯಾಗದಲ್ಲಿ ಸಮರ್ಪಿಸಬೇಕು. |
| ಪಾಪ್ಮಾನಮ್ ಏವ ವೃತ್ರಮ್ ತೀರ್ತ್ವಾ ಪ್ರತಿಷ್ಠಾಮ್ ಗಚ್ಛತಿ | ಇದರಿಂದ ನರಕವನ್ನು ಕೊಡುವ ಪಾಪದಂತೆ ಹಿಂಸಕನಾದ ಶತ್ರುವನ್ನು ಸೋಲಿಸಿ, ಸ್ಥಿರವಾದ ರಾಜ್ಯವನ್ನು ಪಡೆಯುತ್ತಾನೆ. |

**ಉಪಪಾತಕವನ್ನು ಮಾಡಿದವನಿಗೆ ಏಹಿತವಾದ ಯಾಗ; ಪ್ರಶಂಸೆ**

| | |
|---|---|
| ಯಃ ಪಾಪ್ಮನಾ ಗೃಹೀತಃ ಸ್ಯಾತ್ | ಯಾವನು ಗೋವಧಾದಿ ಉಪಪಾತಕಗ್ರಸ್ತನಾಗಿರುತ್ತಾನೆಯೋ |
| [ಸಃ] ಇಂದ್ರಾಯ ಅಭಿಮಾತಿಘ್ನೇ ಲಲಾಮಮ್ ಪ್ರಾಶೃಂಗಮ್ ಆಲಭೇತ | ಅವನು ಅಭಿಮಾತಿನಾಶಕನಾದ ಇಂದ್ರನಿಗಾಗಿ ಹಣೆಯಲ್ಲಿ ತಿಲಕವಿರುವ, ಬಾಗಿರುವ ಕೊಂಬುಳ್ಳ ಪಶುವನ್ನು ಯಾಗ ಮಾಡಬೇಕು. |

---

ಈ ಯಾಗದಿಂದ ಸೋಮನಿಗೆ ತನ್ನ ಭಾಗವು ದೊರೆತು ಸುಪ್ರೀತಿಯಾಗುತ್ತದೆ. ಅವನು ಈ ಯಜಮಾನನಿಗೆ ರಾಜ್ಯವನ್ನು ಅನುಗ್ರಹಿಸುತ್ತಾನೆ. ಯಜಮಾನನಿಗೆ ರಾಜ್ಯಪ್ರಾಪ್ತಿಯಾಗುತ್ತದೆ. ಸೋಮನು ಬಂಗಾರ ಬಣ್ಣದಿಂದ ಕೂಡಿರುವುದರಿಂದ, ಪಶುವೂ ಬಂಗಾರದ ಬಣ್ಣದಿಂದಿರುವುದರಿಂದ ಯಜಮಾನನಿಗೆ ಫಲಸಮೃದ್ಧಿಯಾಗುತ್ತದೆ.

ಸ್ಯಾತ್ಪಾಪ್ಮಾ ವಾ ಅಭಿಮಾತಿರಿಂದ್ರಮೇವಾ

ಭಿಮಾತಿಹನಗ್ಗ್ಂ ಸ್ವೇನ ಭಾಗಧೇಯೇನೋಪಧಾವತಿ

---

ಸ್ಯಾತ್ । ಪಾಪ್ಮಾ । ವೈ । ಅಭಿಮಾತಿರಿತ್ಯಭಿ–ಮಾತಿಃ । ಇಂದ್ರಮ್ । ಏವ । ಅಭಿಮಾತಿಹನಮಿತ್ಯಭಿಮಾತಿ – ಹನಮ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಪಾಪ್ಮಾ ವೈ ಅಭಿಮಾತಿಃ | ಅಭಿಮಾತಿಯೆಂದರೆ ಪಾಪವೇ ಆಗಿದೆ. |
| ಇಂದ್ರಮ್ ಏವ ಅಭಿಮಾತಿಹನಮ್ ಸ್ವೇನ ಭಾಗಧೇಯೇನ ಉಪಧಾವತಿ | ಅಭಿಮಾತಿಹನನಾದ ಇಂದ್ರನಿಗೆ ಯಜಮಾನನು ಆತನ ಭಾಗವನ್ನಿತ್ತು ಸೇವಿಸಿದವನಾಗುತ್ತಾನೆ. |

---

**'ತ್ರಯೋ ವೈ ಗತಶ್ರಿಯಃ ಶುಶ್ರುವಾನ್ ಗ್ರಾಮಣೀಃ ರಾಜನ್ಯಃ'** ಎಂದು ಹೇಳಿರುವಂತೆ ರಾಜಶ್ರೀಯನ್ನು ಹೊಂದಿದ್ದರೂ ಅದು ಸ್ಥಿರವಾಗಿ ಇರುವಂತೆ ಬಯಸುವವನು, ಶತ್ರುಗಳಿಂದ ಆಕ್ರಮಿಸಲ್ಪಟ್ಟ ರಾಜ್ಯವುಳ್ಳ ಯಜಮಾನನು ಮತ್ತೆ ರಾಜ್ಯವನ್ನು ಪಡೆಯಲು ಇಚ್ಛಿಸಿ ಈ ಯಾಗವನ್ನು ಮಾಡಬೇಕು. ಹಣೆಯಲ್ಲಿ ತಿಲಕವುಳ್ಳ, ಬಾಗಿದ ಕೊಂಬುಳ್ಳ ಪಶುವನ್ನು ವೃತ್ರತುರನಾದ ಇಂದ್ರನಿಗಾಗಿ ಸಮರ್ಪಿಸಬೇಕು. ಇದರಿಂದ ತೃಪ್ತನಾದ ಇಂದ್ರನು ಪಾಪರೂಪನಾದ ಶತ್ರುವನ್ನು ನಾಶಪಡಿಸಿ, ರಾಜ್ಯಪ್ರತಿಷ್ಠೆಯನ್ನು ಕೊಡುತ್ತಾನೆ. ಇದರಿಂದ ಯಜಮಾನನು ಸ್ಥಿರವಾದ ರಾಜ್ಯವನ್ನು ಪಡೆಯುತ್ತಾನೆ.

ಸ ಏವಾಸ್ಮಾತ್ಪಾಪ್ಮಾನಮಭಿಮಾತಿಂ ಪ್ರಣುದತ ಇಂದ್ರಾಯ ವಜ್ರಿಣೇ ಲಲಾಮಂ ಪ್ರಾಶೃಂಗಮಾಲಭೇತ ಯಮಲಗ್ಂ ರಾಜ್ಯಾಯ ಸಂತಗ್ಂ ರಾಜ್ಯಂ ನೋಪನಮೇದಿಂದ್ರಮೇವ

---

ಸಃ । ಏವ । ಅಸ್ಮಾತ್ । ಪಾಪ್ಮಾನಮ್ । ಅಭಿಮಾತಿಮಿತ್ಯಭಿ–ಮಾತಿಮ್ । ಪ್ರೇತಿ । ನುದತೇ । ಇಂದ್ರಾಯ । ವಜ್ರಿಣೇ । ಲಲಾಮಮ್ । ಪ್ರಾಶೃಂಗಮ್ । ಏತಿ । ಲಭೇತ । ಯಮ್ । ಅಲಮ್ । ರಾಜ್ಯಾಯ । ಸಂತಮ್ । ರಾಜ್ಯಮ್ । ನ । ಉಪನಮೇದಿತ್ಯುಪ–ನಮೇತ್ । ಇಂದ್ರಮ್ । ಏವ ।

---

| | |
|---|---|
| ಸಃ ಏವ ಅಸ್ಮಾತ್ ಪಾಪ್ಮಾನಮ್ ಅಭಿಮಾತಿಮ್ ಪ್ರಣುದತೇ | ಈ ಯಾಗದಿಂದ ತೃಪ್ತನಾದ ಇಂದ್ರನೇ ಈ ಯಜಮಾನನಿಂದ ಅಭಿಮಾತಿರೂಪನಾದ ಪಾಪವನ್ನು ದೂರ ಮಾಡುತ್ತಾನೆ. |

### ರಾಜ್ಯಕಾಮನಿಗೆ ವಿಹಿತವಾದ ಮತ್ತೊಂದು ಯಾಗ; ಪ್ರಶಂಸೆ

| | |
|---|---|
| ಯಮ್ ರಾಜ್ಯಾಯ ಅಲಮ್ ಸಂತಮ್ ರಾಜ್ಯಮ್ ನ ಉಪನಮೇತ್ [ಸಃ] ಇಂದ್ರಾಯ ವಜ್ರಿಣೇ ಲಲಾಮಂ ಪ್ರಾಶೃಂಗಮ್ ಆಲಭೇತ | ರಾಜ್ಯವನ್ನು ಹೊಂದಲು ಬೇಕಾದ ಎಲ್ಲ ಗುಣಗಳಿದ್ದರೂ ಯಾವನು ರಾಜ್ಯವನ್ನು ಹೊಂದುವುದಿಲ್ಲವೋ, ಅವನು ವಜ್ರಿಯಾದ ಇಂದ್ರನಿಗೆ ಹಣೆಯಲ್ಲಿ ತಿಲಕಾಕಾರದ ಲೋಮವುಳ್ಳ, ಬಾಗಿದ ಕೊಂಬಿನ ಪಶುವನ್ನು ಯಾಗ ಮಾಡಬೇಕು. |

---

ಗೋವಧಾದಿ ಉಪಪಾತಕಗಳನ್ನು ಮಾಡಿದವನು ಪಾಪಪರಿಹಾರಾರ್ಥವಾಗಿ ಅಭಿಮಾತಿಹನನಾದ ಇಂದ್ರನಿಗಾಗಿ ಹಣೆಯಲ್ಲಿ ತಿಲಕವುಳ್ಳ, ಬಾಗಿದ ಕೊಂಬುಳ್ಳ ಪಶುವನ್ನು ಯಾಗ ಮಾಡಬೇಕು. ಪಾಪವೇ ಅಭಿಮಾತಿ. ಇಂದ್ರನೇ ಅಭಿಮಾತಿನಾಶಕನು. ಈ ಯಾಗದಿಂದ ತನ್ನ ಭಾಗವನ್ನು ಪಡೆದ ಇಂದ್ರನು ಸುಪ್ರೀತನಾಗುತ್ತಾನೆ. ಯಜಮಾನನ ಪಾಪವನ್ನು ಹೋಗಲಾಡಿಸುತ್ತಾನೆ.

ವಜ್ರಿಣಗ್ಂ ಸ್ವೇನ ಭಾಗಧೇಯೇನೋಪಧಾವತಿ ಸ

ಏವಾಸ್ಮೈ ವಜ್ರಂ ಪ್ರಯಚ್ಛತಿ ಸ ಏನಂ

ವಜ್ರೋ ಭೂತ್ಯಾ ಇಂಧ

---

ವಜ್ರಿಣವ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ ।

ಏವ । ಅಸ್ಮೈ । ವಜ್ರಮ್ । ಪ್ರೇತಿ । ಯಚ್ಛತಿ । ಸಃ । ಏನವ್ । ವಜ್ರಃ । ಭೂತ್ಯೈ । ಇಂಧೇ ।

---

| | |
|---|---|
| ವಜ್ರಿಣವ್ ಇಂದ್ರವ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದಿಂದ ಯಜಮಾನನು ವಜ್ರಿಯಾದ ಇಂದ್ರನನ್ನು ಅವನ ಹವಿರ್ಭಾಗ ದಾನದಿಂದ ಸೇವಿಸಿದವನಾಗುತ್ತಾನೆ. |
| ಸಃ ಏವ ಅಸ್ಮೈ ವಜ್ರವ್ ಪ್ರಯಚ್ಛತಿ | ಆ ಇಂದ್ರನು ಯಜಮಾನನಿಗೆ ವಜ್ರಾಯುಧದಂತಿರುವ ಶತ್ರುನಾಶಕಸಮರ್ಥವಾದ ಆಯುಧವನ್ನೀಯುತ್ತಾನೆ. |
| ಸಃ ವಜ್ರಃ ಏನವ್ ಭೂತ್ಯೈ ಇಂಧೇ | ಆ ವಜ್ರದಂತಿರುವ ಆಯುಧವೇ ಈ ಯಜಮಾನನನ್ನು ರಾಜ್ಯರೂಪವಾದ ಐಶ್ವರ್ಯವನ್ನು ಹೊಂದಲು ಪ್ರಜ್ವಲಿಸುವಂತೆ ಮಾಡುತ್ತದೆ. |

---

ರಾಜ್ಯಕಾಮನ ಯಾಗವಿದು. ರಾಜ್ಯವನ್ನು ಹೊಂದಲು ತಕ್ಕ ಗುಣಗಳಿದ್ದರೂ ರಾಜ್ಯಪ್ರಾಪ್ತಿಯಾಗದವನು ವಜ್ರಿಯಾದ ಇಂದ್ರನಿಗೆ ಹಣೆಯಲ್ಲಿ ತಿಲಕದಂತೆ ರೂಪವುಳ್ಳ, ತೀಕ್ಷ್ಣವಾಗಿಯೂ ಬಾಗಿಯೂ ಇರುವ ಕೊಂಬುಗಳುಳ್ಳ, ಪಶುವನ್ನು ಯಾಗಹವ್ಯವಾಗಿ ಸಮರ್ಪಿಸಬೇಕು. ಈ ಯಾಗವು ಇಂದ್ರನಿಗೆ ಅವನ ಭಾಗವನ್ನಿತ್ತು ಸಂತೋಷಪಡಿಸುತ್ತದೆ. ಇಂದ್ರನು ಸಂತುಷ್ಟನಾಗಿ ಈ ಯಜಮಾನನಿಗೆ ಶತ್ರುನಾಶಕವಾದ ವಜ್ರದಂತಿರುವ ಆಯುಧವನ್ನು ಕೊಡುತ್ತಾನೆ. ಅವನ ಆಯುಧದಲ್ಲಿ ವಜ್ರಾಯುಧದ ಶಕ್ತಿಯನ್ನು ಕೊಡುತ್ತಾನೆ. ಆ ಶಸ್ತ್ರವು ಯಜಮಾನನು ಶತ್ರುಸಂತಾಪಕರವಾದ ತೇಜಸ್ಸನ್ನು ಹೊಂದಿ ಪ್ರಜ್ವಲಿಸುವಂತೆ ಮಾಡುತ್ತದೆ.

ಉಪೈನಗ್ಂ ರಾಜ್ಯಂ ನಮತಿ ಲಲಾಮಃ ಪ್ರಾಶ್ರಿಂಗೋ

ಭವತ್ಯೇತದ್ವೈ ವಜ್ರಸ್ಯ ರೂಪಗ್ಂ ಸಮೃದ್ಧ್ಯೈ ॥೨೦–3॥

[ಸಂಗ್ರಾಮೇ ತೇನಾಲಮಭಿಮಾತಿಘ್ನೇ ಲಲಾಮಂ ಪ್ರಾಶ್ರಿಂಗಮ್ಯೆನಂ ಪಂಚದಶ ಚ ।]

---

ಉಪೇತಿ । ಏನಮ್ । ರಾಜ್ಯಮ್ । ನಮತಿ ।ಲಲಾಮಃ । ಪ್ರಾಶ್ರಿಂಗಃ । ಭವತಿ । ಏತತ್ ।

ವೈ । ವಜ್ರಸ್ಯ । ರೂಪಮ್ । ಸಮೃದ್ಧ್ಯಾ ಇತಿ ಸಮ್–ಋದ್ಧ್ಯೈ ॥೩॥

---

| | |
|---|---|
| ಏನಮ್ ರಾಜ್ಯಮ್ ಉಪನಮತಿ | ಈ ಯಜಮಾನನನ್ನು ರಾಜ್ಯವು ಸೇರುತ್ತದೆ. |
| ಲಲಾಮಃ ಪ್ರಾಶ್ರಿಂಗಃ ಭವತಿ | ಪಶುವು ಹಣೆಯಲ್ಲಿ ತಿಲಕವುಳ್ಳದ್ದಾಗಿಯೂ, ಕೊಂಬಿನಲ್ಲಿ ತೀಕ್ಷ್ಣವಾದ ತುದಿಯುಳ್ಳದ್ದಾಗಿಯೂ ಇರುತ್ತದೆ. |
| ಏತತ್ ವೈ ವಜ್ರಸ್ಯ ರೂಪಮ್ ಸಮೃದ್ಧ್ಯೈ | ಇದೇ ವಜ್ರಸದೃಶವಾದ ರೂಪವಾದುದರಿಂದ ಫಲಸಮೃದ್ಧಿಗೆ ಸಾಧನವಾಗುತ್ತದೆ. |

---

ಈ ಯಜಮಾನನು ತನಗೆ ದೊರೆಯಬೇಕಾಗಿದ್ದ ರಾಜ್ಯವನ್ನು ಪಡೆಯುತ್ತಾನೆ. ರಾಜ್ಯವು ತಾನಾಗಿಯೇ ಇವನ ಕೈ ಸೇರುತ್ತದೆ. ಪಶುವು ಲಲಾಮವೂ ಪ್ರಾಶ್ರಿಂಗವೂ ಆಗಿ ವಜ್ರದಂತಹ ರೂಪವನ್ನು ಹೊಂದಿರುತ್ತದೆ. ಇದರಿಂದ ಶೀಘ್ರವಾಗಿ ಇಷ್ಟಸಿದ್ಧಿಯಾಗುತ್ತದೆ.

* * *

## ॥ ಚತುರ್ಥೋಽನುವಾಕಃ ॥

ಅಸಾವಾದಿತ್ಯೋ ನ ವ್ಯರೋಚತ ತಸ್ಮೈ

ದೇವಾಃ ಪ್ರಾಯಶ್ಚಿತ್ತಿಮೈಚ್ಛನ್ತಸ್ಮಾ

---

**ಅಸೌ** । ಆದಿತ್ಯಃ । ನ । ವೀತಿ । ಅರೋಚತ । ತಸ್ಮೈ । ದೇವಾಃ । ಪ್ರಾಯಶ್ಚಿತ್ತಿಮ್ । ಐಚ್ಛನ್ನ್ । ತಸ್ಮೈ ।

---

ಮೂರನೆಯ ಅನುವಾಕದಲ್ಲಿ ವಿಹಿತವಾಗಿರುವ ಯಾಗಗಳನ್ನು ಹೀಗೆ ಸಂಗ್ರಹಿಸಲಾಗಿದೆ.

**ಸ್ಪರ್ಧಾಕಾಮೋ ಯುದ್ಧಕಾಮೋ ಗ್ರಾಮಕಾಮೋಽನ್ನಕಾಮವಾನ್ ।**
**ರಾಜ್ಯಕಾಮಃ ಪ್ರತಿಷ್ಠಾರ್ಥೀ ಯಃ ಪಾಪಕ್ಷಯಮಿಚ್ಛತಿ ।**
**ರಾಜ್ಯಾರ್ಥೀ ಚ ಪುಮಾಂಸೋ ಯೇ ತೇಷಾಂ ಪಶವ ಈರಿತಾಃ ॥**

ಈ ನಾಲ್ಕನೆಯ ಅನುವಾಕದಲ್ಲಿ ಬ್ರಹ್ಮವರ್ಚಸಕಾಮನಿಗೆ ಬೇಕಾದ ಪಶುಯಾಗಗಳನ್ನು ಹೇಳಿರುತ್ತಾರೆ.

### ಪಶುಯಾಗವಿಧಿ; ಅದರ ಪ್ರಶಂಸೆ

| | |
|---|---|
| ಅಸೌ ಆದಿತ್ಯಃ ನ ವ್ಯರೋಚತ | ಸೂರ್ಯದೇವನು ಒಂದು ಕಾಲದಲ್ಲಿ ಚೆನ್ನಾಗಿ ಪ್ರಕಾಶಿಸಲಿಲ್ಲ.* |
| ತಸ್ಮೈ ದೇವಾಃ ಪ್ರಾಯಶ್ಚಿತ್ತಿಮ್ ಐಚ್ಛನ್ನ್ | ದೇವತೆಗಳು ಆದಿತ್ಯಪ್ರಕಾಶಮಾಂದ್ಯಕ್ಕಾಗಿ ಪರಿಹಾರವನ್ನು ಬಯಸಿದರು. |
| ತಸ್ಮೈ | ಪರಿಹಾರಕ್ಕಾಗಿ |

---

* ಹಿಂದೊಮ್ಮೆ ಹೀಗೆಯೇ ಬಂದಿದೆ. ಇದು ಇನ್ನೊಂದು ಪರಿಹಾರವೆಂದೂ ಹೇಳಬಹುದು. ಅಥವಾ ಕಾಲಾಂತರದ ವಿಷಯವೆಂದೂ ಹೇಳಬಹುದು.

ಅರ್ಥವಾದಗಳು ಪ್ರಶಂಸೆಗಾಗಿ. ಸ್ವಾರ್ಥದಲ್ಲಿ ಪ್ರಾಮಾಣ್ಯವಿರಬೇಕಾದುದಿಲ್ಲ.

ಏತಾಂ ದಶರ್ಷಭಾಮಾಽಲಭಂತ

ತಯೈವಾಸ್ಮಿನ್ರುಚಮದಧುರ್ಯೋ।

---

ಏತಾವ್ । ದಶರ್ಷಭಾಮಿತಿ ದಶ – ಋಷಭಾವ್ । ಏತಿ । ಅಲಭಂತ ।

ತಯಾ । ಏವ । ಅಸ್ಮಿನ್ । ರುಚವ್ । ಅದಧುಃ । ಯಃ ।

---

| | |
|---|---|
| ಏತಾವ್ ದಶರ್ಷಭಾವ್* ಆಲಭಂತ | ಹತ್ತು ಋಷಭಗಳ ಯಾಗಸಮುದಾಯವನ್ನು ಆದಿತ್ಯದೇವತೆಗೋಸ್ಕರ ಅನುಷ್ಠಾನ ಮಾಡಿದರು. |
| ತಯಾ ಏವ ಅಸ್ಮಿನ್ ರುಚವ್ ಅದಧುಃ | ಆ ಯಾಗಸಮುದಾಯದ ಅನುಷ್ಠಾನದಿಂದಲೇ ಈ ಆದಿತ್ಯನಲ್ಲಿ ಸ್ವಾಭಾವಿಕವಾದ ತೇಜಸ್ಸನ್ನುಂಟುಮಾಡಿದರು. |

---

ಒಂದು ಕಾಲದಲ್ಲಿ ಸೂರ್ಯದೇವನು ಸ್ವಾಭಾವಿಕತೇಜೋವಿಹೀನನಾದನು. ದೇವತೆಗಳು ಅದಕ್ಕಾಗಿ ಪರಿಹಾರವನ್ನು ಅಪೇಕ್ಷಿಸಿದರು. ಅದಕ್ಕಾಗಿ ಹತ್ತು ಹೋರಿಗಳ ಯಾಗವನ್ನು ಪರಿಹಾರವನ್ನಾಗಿ ಕಂಡುಕೊಂಡರು. ಇದನ್ನು ಆದಿತ್ಯದೇವತೆಯ* ಪ್ರೀತಿಗಾಗಿ ಮಾಡಿದರು.

---

* **ದಶರ್ಷಭಾ = ದಶಾನಾಂ ಋಷಭಾಣಾಂ ಸಮುದಾಯಃ** । ಹತ್ತು ಋಷಭಯಾಗಗಳ ಸಮುದಾಯ ಎಂಬರ್ಥ ಬರುವ ದ್ವಿಗು ಸಮಾಸ. '**ದಶರ್ಷಭಾ**' ಎಂಬುದು ಯಾಗನಾಮಧೇಯವೆಂದು ಇನ್ನೊಂದು ಮತ. ನಾಮಧೇಯಕ್ಕೆ ಆಲಂಭನವು ಅನ್ವಯಿಸದೇ ಇರುವುದರಿಂದ ಆ ಮತವು ಅಷ್ಟು ಸಮಂಜಸವಲ್ಲ. ಆದರೆ '**ಆಲಭೇತ**' ಎಂದರೆ '**ಯಜೇತ**' ಎಂದು ಅರ್ಥ ಮಾಡುವುದರಿಂದ ಕರ್ಮನಾಮಧೇಯವೂ ಆಗಬಹುದು.

* ಇಲ್ಲಿಯ ವಿಧಿವಾಕ್ಯದಲ್ಲಿ ದೇವತೆಯ ಉಲ್ಲೇಖವಿಲ್ಲದಿದ್ದರೂ ಅರ್ಥವಾದದಲ್ಲಿ 'ಅಮುಮೇವಾದಿತ್ಯಮ್' ಎಂದು ಇರುವುದರಿಂದ ಇಲ್ಲಿ ಆದಿತ್ಯನೇ ದೇವತೆಯೆಂದು ನಿರ್ಣಯ.

ಬ್ರಹ್ಮವರ್ಚಸಕಾಮಃ ಸ್ಯಾತ್ತಸ್ಮಾ ಏತಾಂ

ದಶರ್ಷಭಾಮಾಲಭೇತಾಮುಮೇವಾದಿತ್ಯಗ್ಂ

ಸ್ವೇನ ಭಾಗಧೇಯೇನೋಪಧಾವತಿ

---

ಬ್ರಹ್ಮವರ್ಚಸಕಾಮ ಇತಿ ಬ್ರಹ್ಮವರ್ಚಸ-ಕಾಮಃ । ಸ್ಯಾತ್ । ತಸ್ಮೈ । ಏತಾಮ್ ।
ದಶರ್ಷಭಾಮಿತಿ ದಶ- ಋಷಭಾಮ್ । ಏತಿ । ಲಭೇತ । ಅಮುಮ್ । ಏವ ।
ಆದಿತ್ಯಮ್ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಯಃ ಬ್ರಹ್ಮವರ್ಚಸಕಾಮಃ ಸ್ಯಾತ್ | ಯಾವ ಯಜಮಾನನು ಶ್ರುತಾಧ್ಯಯನ ಸಂಪತ್ತಿರೂಪವಾದ ಬ್ರಹ್ಮವರ್ಚಸವನ್ನು ಅಪೇಕ್ಷಿಸುತ್ತಾನೆಯೋ |
| ತಸ್ಮೈ ಏತಾಮ್ ದಶರ್ಷಭಾಮ್ ಆಲಭೇತ | ಆ ಯಜಮಾನನಿಗಾಗಿ ಆದಿತ್ಯದೇವತಾಕವಾದ ಹತ್ತು ಋಷಭಗಳ ಯಾಗ ಸಮುದಾಯವನ್ನು ಮಾಡಬೇಕು. |
| ಅಮುಮ್ ಆದಿತ್ಯಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಆದಿತ್ಯನನ್ನು ಅವನ ಹವಿರ್ಭಾಗವನ್ನು ಕೊಟ್ಟು ಸೇವಿಸಿದವನಾಗುತ್ತಾನೆ. |

---

ಇದರಿಂದ ಸೂರ್ಯನಲ್ಲಿ ಸ್ವಾಭಾವಿಕವಾದ ತೇಜಸ್ಸು ಉಂಟಾಯಿತು. ಬ್ರಹ್ಮವರ್ಚಸವನ್ನು ಬಯಸುವವನು ಈ ಯಾಗವನ್ನು ಮಾಡಬೇಕು. ಇದರಿಂದ ಆದಿತ್ಯನಿಗೆ ಹವಿರ್ಭಾಗವು ದೊರೆತು ಪ್ರೀತನಾಗುತ್ತಾನೆ. ಅವನು ಈ ಯಜಮಾನನಿಗೆ

ಸ ಏವಾಸ್ಮಿನ್ಬ್ರಹ್ಮವರ್ಚಸಂ ದಧಾತಿ ಬ್ರಹ್ಮವರ್ಚಸ್ಯೇವ

ಭವತಿ ವಸಂತಾ ಪ್ರಾತಸ್ತ್ರೀನ್ಲಲಾಮಾನಾಲಭೇತ ಗ್ರೀಷ್ಮೇ

[ಮಧ್ಯಂದಿನೇ (೧)] ಮಧ್ಯಂದಿನೇ

---

ಸಃ । ಏವ । ಅಸ್ಮಿನ್ನ್ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ದಧಾತಿ । ಬ್ರಹ್ಮ ವರ್ಚಸೀತಿ ಬ್ರಹ್ಮ-ವರ್ಚಸೀ । ಏವ । ಭವತಿ । ವಸಂತಾ । ಪ್ರಾತಃ । ತ್ರೀನ್ । ಲಲಾಮಾನ್ । ಆಲಭೇತ । ಗ್ರೀಷ್ಮೇ । ಮಧ್ಯಂದಿನೇ ।

---

| | |
|---|---|
| ಸಃ ಏವ ಅಸ್ಮಿನ್ ಬ್ರಹ್ಮವರ್ಚಸಮ್ ದಧಾತಿ | ಆ ಆದಿತ್ಯದೇವನೇ ಈ ಯಜಮಾನನಲ್ಲಿ ಬ್ರಹ್ಮವರ್ಚಸವನ್ನುಂಟುಮಾಡುತ್ತಾನೆ. |
| ಬ್ರಹ್ಮವರ್ಚಸೀ ಏವ ಭವತಿ | ಯಜಮಾನನು ಬ್ರಹ್ಮವರ್ಚಸವುಳ್ಳವನಾಗಿಯೇ ಆಗುತ್ತಾನೆ. |

**ಕಾಲವಿಶೇಷ-ವರ್ಣವಿಶೇಷಗಳ ವಿಧಿ; ಪ್ರಶಂಸೆ**

| | |
|---|---|
| ವಸಂತಾ ಪ್ರಾತಃ ತ್ರೀನ್ ಲಲಾಮಾನ್ ಆಲಭೇತ | ವಸಂತಕಾಲದ ಬೆಳಗಿನ ಹೊತ್ತುಹಣೆಯಲ್ಲಿ ತಿಲಕದ ಆಕಾರದ ಲೋಮಗಳಿರುವ ಮೂರು ಋಷಭಗಳ ಯಾಗವನ್ನು ಮಾಡಬೇಕು. |
| ಗ್ರೀಷ್ಮೇ ಮಧ್ಯಂದಿನೇ | ಗ್ರೀಷ್ಮಕಾಲದ ಮಧ್ಯಾಹ್ನದಲ್ಲಿ |

---

ಬ್ರಹ್ಮವರ್ಚಸವನ್ನು ಕೊಡುತ್ತಾನೆ. ಯಜಮಾನನು ಬ್ರಹ್ಮವರ್ಚಸಿಯೇ ಆಗುತ್ತಾನೆ.

ವಸಂತದ ಬೆಳಗಿನ ಹೊತ್ತುಹಣೆಯಲ್ಲಿ ತಿಲಕವಿರುವ ಮೂರು ವೃಷಭಗಳನ್ನೂ,

ತ್ರೀಂಛ್ಶಿತಿಪೃಷ್ಠಾಂಛ್ಶರದ್ಯಪರಾಹ್ಣೇ

ತ್ರೀಂಛ್ಶಿತಿವಾರಾನ್ತ್ರೀಣಿ ವಾ ಆದಿತ್ಯಸ್ಯ ತೇಜಾಗ್ಂಸಿ

ವಸಂತಾ ಪ್ರಾತರ್ಗ್ರೀಷ್ಮೇ ಮಧ್ಯಂದಿನೇ ಶರದ್ಯಪರಾಹ್ಣೇ

---

ತ್ರೀನ್। ಶಿತಿಪೃಷ್ಠಾನಿತಿ ಶಿತಿ–ಪೃಷ್ಠಾನ್। ಶರದಿ। ಅಪರಾಹ್ಣ ಇತ್ಯಪರ–ಅಹ್ನೇ। ತ್ರೀನ್। ಶಿತಿವಾರಾನಿತಿ ಶಿತಿ–ವಾರಾನ್। ತ್ರೀಣಿ। ವೈ। ಆದಿತ್ಯಸ್ಯ। ತೇಜಾಗ್ಂಸಿ। ವಸಂತಾ। ಪ್ರಾತಃ। ಗ್ರೀಷ್ಮೇ। ಮಧ್ಯಂದಿನೇ। ಶರದಿ। ಅಪರಾಹ್ಣ ಇತ್ಯಪರ–ಅಹ್ನೇ।

---

| | |
|---|---|
| ತ್ರೀನ್ ಶಿತಿಪೃಷ್ಠಾನ್ (ಆಲಭೇತ) | ಬೆನ್ನಿನಲ್ಲಿ ಬಿಳುಪಾಗಿರುವ ಮೂರು ವೃಷಭಗಳನ್ನು ಯಾಗ ಮಾಡಬೇಕು. |
| ಶರದಿ ಅಪರಾಹ್ಣೇ | ಶರತ್ಕಾಲದ ಅಪರಾಹ್ಣದಲ್ಲಿ |
| ತ್ರೀನ್ ಶಿತಿವಾರಾನ್ (ಆಲಭೇತ) | ಬಿಳುಪಾದ ಬಾಲವುಳ್ಳ ಮೂರು ವೃಷಭಗಳನ್ನು ಯಾಗ ಮಾಡಬೇಕು. |
| ತ್ರೀಣಿ ವೈ ಆದಿತ್ಯಸ್ಯ ತೇಜಾಗ್ಂಸಿ | ಸೂರ್ಯನಿಗೆ ಮೂರು ತೇಜಸ್ಸುಗಳಿವೆ. |
| ವಸಂತಾ ಪ್ರಾತಃ, ಗ್ರೀಷ್ಮೇ ಮಧ್ಯಂದಿನೇ, ಶರದಿ ಅಪರಾಹ್ಣೇ | [ಅವು] ವಸಂತದ ಪ್ರಾತಃಕಾಲದಲ್ಲಿ, ಗ್ರೀಷ್ಮದ ಮಧ್ಯಾಹ್ನದಲ್ಲಿ, ಶರತ್ಕಾಲದ ಅಪರಾಹ್ಣದಲ್ಲಿ ಮೂರಾಗಿವೆ. |

---

ಗ್ರೀಷ್ಮಕಾಲದ ಮಧ್ಯಾಹ್ನದಲ್ಲಿ ಬಿಳಿಯ ಬೆನ್ನುಳ್ಳ ಮೂರು ವೃಷಭಗಳನ್ನೂ, ಶರತ್ಕಾಲದ ಅಪರಾಹ್ಣದಲ್ಲಿ ಬಿಳಿಯ ಬಾಲಗಳುಳ್ಳ ಮೂರು ವೃಷಭಗಳನ್ನೂ ಯಾಗ ಮಾಡಬೇಕು. ಸೂರ್ಯನಿಗೆ – ವಸಂತದ ಪ್ರಾತಃಕಾಲದಲ್ಲಿ, ಗ್ರೀಷ್ಮದ ಮಧ್ಯಾಹ್ನದಲ್ಲಿ, ಶರದೃತುವಿನ ಅಪರಾಹ್ಣದಲ್ಲಿ ಹೀಗೆ – ಮೂರು ತೇಜಸ್ಸುಗಳಿವೆ.

ಯಾವನ್ತ್ಯೇವ ತೇಜಾಗ್ಂಸಿ ತಾನ್ಯೇವಾವರುನ್ಧೇ

ತ್ರಯಸ್ತ್ರಯ ಆಲಭ್ಯನ್ತೇಽಭಿಪೂರ್ವಮೇವಾಸ್ಮಿನ್ತೇಜೋ

ದಧಾತಿ

---

ಯಾವನ್ತಿ । ಏವ । ತೇಜಾಗ್ಂಸಿ । ತಾನಿ । ಏವ । ಅವೇತಿ । ರುನ್ಧೇ । ತ್ರಯಸ್ತ್ರಯ ಇತಿ ತ್ರಯಃ – ತ್ರಯಃ । ಏತಿ । ಲಭ್ಯನ್ತೇ । ಅಭಿಪೂರ್ವಮಿತ್ಯಭಿ–ಪೂರ್ವಮ್ । ಏವ । ಅಸ್ಮಿನ್ನ್ । ತೇಜಃ । ದಧಾತಿ ।

---

| | |
|---|---|
| ಯಾವನ್ತಿ ಏವ ತೇಜಾಗ್ಂಸಿ ತಾನಿ ಏವ ಅವರುನ್ಧೇ | ಸೂರ್ಯನಿಗೆ ಎಷ್ಟು ತೇಜಸ್ಸುಗಳಿವೆಯೋ ಅಷ್ಟನ್ನೂ ಯಜಮಾನನು ಹೊಂದುತ್ತಾನೆ. |

**ಸಂಖ್ಯಾವಿಶೇಷವಿಧಿ : ಅದರ ಫಲಪ್ರಶಂಸೆ**

| | |
|---|---|
| ತ್ರಯಸ್ತ್ರಯಃ ಆಲಭ್ಯನ್ತೇ | ಮೂರು ಮೂರು ವೃಷಭಗಳು ಒಂದೊಂದು ಕಾಲದಲ್ಲಿ ಯಾಗ ಮಾಡಲ್ಪಡುತ್ತವೆ. |
| ಅಭಿಪೂರ್ವಮ್ ಏವ ಅಸ್ಮಿನ್ ತೇಜಃ ದಧಾತಿ | ಇದರಿಂದ ಯಥಾಕ್ರಮವಾಗಿಯೇ ಯಜಮಾನನಲ್ಲಿ ಸೂರ್ಯನ ತೇಜಸ್ಸನ್ನುಂಟುಮಾಡಿದಂತಾಗುತ್ತದೆ. |

---

ಆಯಾ ಕಾಲಗಳಲ್ಲಿ ಆಯಾ ವೃಷಭಗಳನ್ನು ಯಾಗ ಮಾಡುವುದರಿಂದ ಸೂರ್ಯನಿಗಿರುವ ತೇಜಸ್ಸುಗಳೆಲ್ಲವನ್ನೂ ಯಜಮಾನನು ಪಡೆಯುತ್ತಾನೆ.

ಸಂವತ್ಸರಂ ಪರ್ಯಾಲಭ್ಯಂತೇ ಸಂವತ್ಸರೋ ವೈ

ಬ್ರಹ್ಮವರ್ಚಸಸ್ಯ ಪ್ರದಾತಾ ಸಂವತ್ಸರ ಏವಾಸ್ಮೈ

ಬ್ರಹ್ಮವರ್ಚಸಂ ಪ್ರಯಚ್ಛತಿ ಬ್ರಹ್ಮವರ್ಚಸ್ಯೇವ ಭವತಿ

---

ಸಂವತ್ಸರಮಿತಿ ಸಮ್–ವತ್ಸರಮ್ । ಪರ್ಯಾಲಭ್ಯಂತ ಇತಿ ಪರಿ–ಆಲಭ್ಯಂತೇ । ಸಂವತ್ಸರ ಇತಿ ಸಮ್–ವತ್ಸರಃ । ವೈ । ಬ್ರಹ್ಮವರ್ಚಸಸ್ಯೇತಿ ಬ್ರಹ್ಮ–ವರ್ಚಸಸ್ಯ । ಪ್ರದಾತೇತಿ ಪ್ರ–ದಾತಾ । ಸಂವತ್ಸರ ಇತಿ ಸಮ್–ವತ್ಸರಃ । ಏವ । ಅಸ್ಮೈ । ಬ್ರಹ್ಮವರ್ಚಸಮಿತಿ ಬ್ರಹ್ಮ–ವರ್ಚಸಮ್ । ಪ್ರೇತಿ । ಯಚ್ಛತಿ । ಬ್ರಹ್ಮವರ್ಚಸೀತಿ ಬ್ರಹ್ಮ–ವರ್ಚಸೀ । ಏವ । ಭವತಿ ।

---

**ಸಂವತ್ಸರಕಾಲನಿಯಮವಿಧಿ; ಅದರ ಪ್ರಶಂಸೆ**

| | |
|---|---|
| ಸಂವತ್ಸರಂ ಪರ್ಯಾಲಭ್ಯಂತೇ | ಸಂವತ್ಸರಕಾಲ ಯಜಮಾನನು ನಿಯಮಗಳನ್ನನುಸರಿಸುತ್ತಾ ಈ ಯಾಗಗಳನ್ನು ಆಚರಿಸಬೇಕು. |
| ಸಂವತ್ಸರಃ ವೈ ಬ್ರಹ್ಮವರ್ಚಸಸ್ಯ ಪ್ರದಾತಾ | ಸಂವತ್ಸರದೇವತೆಯೇ ಬ್ರಹ್ಮವರ್ಚಸದ ಪ್ರದಾತೃವಾಗಿದೆ. |
| ಸಂವತ್ಸರಃ ಏವ ಅಸ್ಮೈ ಬ್ರಹ್ಮವರ್ಚಸಂ ಪ್ರಯಚ್ಛತಿ | ಸಂವತ್ಸರದೇವತೆಯೇ ಈ ನಿಯಮಾನುಷ್ಠಾನ ಮಾಡಿದ ಯಜಮಾನನಿಗೆ ಬ್ರಹ್ಮವರ್ಚಸವನ್ನು ನೀಡುತ್ತದೆ. |
| ಬ್ರಹ್ಮವರ್ಚಸೀ ಏವ ಭವತಿ | ಯಜಮಾನನು ಬ್ರಹ್ಮವರ್ಚಸಿಯೇ ಆಗುತ್ತಾನೆ. |

ಸಂವತ್ಸರಸ್ಯ ಪರಸ್ತಾತ್ಪ್ರಾಜಾಪತ್ಯಂ ಕದ್ರುಮಾಲಭೇತ

[ಕದ್ರುಮ್ (೨) ಆಲಭೇತ] ಪ್ರಜಾಪತಿಸ್ಸರ್ವಾ

ದೇವತಾ ದೇವತಾಸ್ವೇವ ಪ್ರತಿತಿಷ್ಠತಿ

---

**ಸಂವತ್ಸರಸ್ಯೇತಿ ಸಮ್–ವತ್ಸರಸ್ಯ । ಪರಸ್ತಾತ್ । ಪ್ರಾಜಾಪತ್ಯಮಿತಿ ಪ್ರಾಜಾ–ಪತ್ಯಮ್ । ಕದ್ರುಮ್ । ಏತಿ । ಲಭೇತ । ಪ್ರಜಾಪತಿರಿತಿ ಪ್ರಜಾ–ಪತಿಃ । ಸರ್ವಾಃ । ದೇವತಾಃ । ದೇವತಾಸು । ಏವ । ಪ್ರತೀತಿ । ತಿಷ್ಠತಿ ।**

---

**ಪ್ರಾಜಾಪತ್ಯಯಾಗವಿಧಿ ; ಪ್ರಶಂಸೆ**

| | |
|---|---|
| ಸಂವತ್ಸರಸ್ಯ ಪರಸ್ತಾತ್ | ಸಂವತ್ಸರವಾದ ನಂತರ |
| ಪ್ರಾಜಾಪತ್ಯಂ ಕದ್ರುಮ್ ಆಲಭೇತ | ಪ್ರಜಾಪತಿದೇವತಾಕವಾದ ಪಿಂಗಲವರ್ಣದ ಪಶುವಿನ ಯಾಗವನ್ನು ಮಾಡಬೇಕು. |
| ಪ್ರಜಾಪತಿಃ ಸರ್ವಾಃ ದೇವತಾಃ | ಪ್ರಜಾಪತಿಯು ಸಕಲದೇವತಾಸ್ವರೂಪನು. |
| ದೇವತಾಸು ಏವ ಪ್ರತಿತಿಷ್ಠತಿ | ಯಜಮಾನನು ದೇವತೆಗಳಲ್ಲಿ ಪ್ರತಿಷ್ಠಿತನಾದವನೇ ಆಗುತ್ತಾನೆ. |

---

ಮೂರು ಮೂರು ವೃಷಭಗಳನ್ನು ಯಾಗ ಮಾಡಬೇಕು. ಇದರಿಂದ ಯಥಾಕ್ರಮವಾಗಿ ಆಯಾಕಾಲದ ಸೂರ್ಯನ ತೇಜಸ್ಸನ್ನು ಯಜಮಾನನಲ್ಲಿ ಉಂಟುಮಾಡಿದಂತಾಗುತ್ತದೆ.

ಯಜಮಾನನು ನಿಯಮಗಳನ್ನು ಅನುಸರಿಸುತ್ತಾ ಒಂದು ಸಂವತ್ಸರ ಕಾಲದಲ್ಲಿ ಈ ಪಶುಯಾಗಗಳನ್ನು ಮಾಡಬೇಕು. ಸಂವತ್ಸರದೇವತೆಯೇ ಬ್ರಹ್ಮವರ್ಚಸವನ್ನು ಕೊಡುವ ದೇವತೆ. ಆ ದೇವತೆಯೇ ನಿಯಮಾನುಷ್ಠಾನಪರನಾದ ಯಜಮಾನನಿಗೆ ಬ್ರಹ್ಮವರ್ಚಸವನ್ನು ಕೊಡುತ್ತದೆ. ಯಜಮಾನನು ಬ್ರಹ್ಮವರ್ಚಸಿಯೇ ಆಗುತ್ತಾನೆ.

ಯದಿ ಬಿಭೀಯಾದ್ದುಶ್ಚರ್ಮಾ ಭವಿಷ್ಯಾಮೀತಿ

ಸೋಮಾಪೌಷ್ಣಗ್ಗ್ಂ ಶ್ಯಾಮಮಾಲಭೇತ ಸೌಮ್ಯೋ ವೈ

ದೇವತಯಾ ಪುರುಷಃ ಪೌಷ್ಣಾಃ ಪಶವಃ

---

**ಯದಿ** । ಬಿಭೀಯಾತ್ । ದುಶ್ಚರ್ಮೇತಿ ದುಃ–ಚರ್ಮಾ । ಭವಿಷ್ಯಾಮಿ । ಇತಿ । ಸೋಮಾಪೌಷ್ಣಮಿತಿ ಸೋಮಾ–ಪೌಷ್ಣಮ್ । ಶ್ಯಾಮಮ್ । ಏತಿ । ಲಭೇತ । ಸೌಮ್ಯಃ । ವೈ । ದೇವತಯಾ । ಪುರುಷಃ । ಪೌಷ್ಣಾಃ । ಪಶವಃ ।

---

**ಪ್ರಾಸಂಗಿಕವಾದ ಸೋಮಾಪೌಷ್ಣಯಾಗವಿಧಿ ; ಪ್ರಶಂಸೆ**

| | |
|---|---|
| ದುಶ್ಚರ್ಮಾ ಭವಿಷ್ಯಾಮಿ ಇತಿ ಯದಿ ಬಿಭೀಯಾತ್ | ಯಜಮಾನನು ತಾನು ಕುಷ್ಠವ್ಯಾಧಿಗ್ರಸ್ತನಾಗಬಹುದೆಂದು ಹೆದರಿದ ಪಕ್ಷದಲ್ಲಿ |
| ಸೋಮಾಪೌಷ್ಣಮ್ ಶ್ಯಾಮಮ್ ಆಲಭೇತ | ಸೋಮಾಪೂಷದೇವತಾಕವಾಗಿ ಶ್ಯಾಮಲ ಬಣ್ಣದ ಪಶುವನ್ನು ಯಾಗ ಮಾಡಬೇಕು. [ವಿಧಿ] |
| ಸೌಮ್ಯಃ ವೈ ದೇವತಯಾ ಪುರುಷಃ | ಪುರುಷನು ದೇವತಾಸಂಬಂಧದಿಂದ ಸೌಮ್ಯನಾಗಿದ್ದಾನೆ. |
| ಪೌಷ್ಣಾಃ ಪಶವಃ | ಪಶುಗಳು ಪೂಷಸಂಬಂಧಿಗಳು. |

---

ವರ್ಷವಾದ ಮೇಲೆ ಹತ್ತನೆಯದಾಗಿ ಪ್ರಜಾಪತಿದೇವತೆಗೋಸ್ಕರ ಪಿಂಗಲ ವರ್ಣದ ವೃಷಭವನ್ನು ಯಾಗ ಮಾಡಬೇಕು. ಜಗತ್ತಿನ ಉತ್ಪಾದಕನಾದ ಪ್ರಜಾಪತಿಯು ಸರ್ವದೇವತಾಸ್ವರೂಪನು. ಆದುದರಿಂದ ಈ ಯಾಗಪ್ರಭಾವದಿಂದ ಯಜಮಾನನು ದೇವತೆಗಳಲ್ಲಿ ಪ್ರತಿಷ್ಠಿತನೇ ಆಗುತ್ತಾನೆ.

ಸ್ವಯೈವಾಸ್ಮೈ ದೇವತಯಾ ಪಶುಭಿಸ್ತ್ವಚಂ ಕರೋತಿ ನ

ದುಶ್ಚರ್ಮಾ ಭವತಿ

---

ಸ್ವಯಾ । ಏವ । ಅಸ್ಮೈ । ದೇವತಯಾ । ಪಶುಭಿರಿತಿ ಪಶು–ಭಿಃ । ತ್ವಚಮ್ । ಕರೋತಿ ।

ನ । ದುಶ್ಚರ್ಮೇತಿ ದುಃ–ಚರ್ಮಾ । ಭವತಿ ।

---

| | |
|---|---|
| ಅಸ್ಮೈ ಸ್ವಯಾ ಏವ ದೇವತಯಾ | ಸೋಮನು ತಾನು ದೇವತೆಯಾಗಿರುವುದರಿಂದ ಈ ಯಜಮಾನನಿಗೆ |
| ಪಶುಭಿಃ ತ್ವಚಮ್ ಕರೋತಿ | ಪಶುಗಳಿಂದ ಒಳ್ಳೆಯ ಚರ್ಮವನ್ನು ಉಂಟು ಮಾಡುತ್ತಾನೆ. |
| ನ ದುಶ್ಚರ್ಮಾ ಭವತಿ | ಯಜಮಾನನು ರೋಗಪೀಡಿತಚರ್ಮವುಳ್ಳವನಾಗುವುದಿಲ್ಲ. |

---

ಯಾವ ಯಜಮಾನನು ಚರ್ಮರೋಗವು ಬರಬಹುದೆಂದು ಹೆದರುತ್ತಾನೆಯೋ ಅವನು ಸೋಮಾಪೂಷದೇವತಾಕವಾಗಿ* ಶ್ಯಾಮವರ್ಣದ ಪಶುವನ್ನು ಯಾಗ ಮಾಡಬೇಕು. ಪುರುಷನು ಸೋಮಸಂಬಂಧಿ. ಪಶುಗಳು ಪೂಷಸಂಬಂಧಿಗಳು. ಈ ಯಾಗಾನುಷ್ಠಾನದಿಂದ ಸಂತುಷ್ಟರಾದ ಸೋಮ–ಪೂಷದೇವತೆಗಳು ಪೂಷಸಂಬಂಧಿಯಾದ ಪಶುಗಳಿಂದ ಕೂಡಿಕೊಂಡು ಸೋಮಸಂಬಂಧಿಯಾದ ಪುರುಷನಿಗೆ ಒಳ್ಳೆಯ ಚರ್ಮವನ್ನು ಕೊಡುತ್ತಾರೆ. ಯಜಮಾನನು ಚರ್ಮರೋಗರಹಿತನಾಗುತ್ತಾನೆ.

[ಅಧ್ವರ್ಯುವು ಈ ಯಾಗದಿಂದ ಯಜಮಾನನ ಚರ್ಮರೋಗವನ್ನು ದೇವತೆಗಳ ಅನುಗ್ರಹದಿಂದ ಪರಿಹರಿಸುತ್ತಾನೆ ]

---

* ಯಾಜ್ಯಾ–ಪುರೋನುವಾಕ್ಯೆಗಳನ್ನು ಅನುಸರಿಸಿ ಪ್ರಾಸಂಗಿಕವಾಗಿ ಈ ಸೋಮಾಪೂಷಯಾಗವನ್ನು ಶ್ರುತಿಯು ಹೇಳಿದೆ.

ದೇವಾಶ್ಚ ವೈ ಯಮಶ್ಚಾಸ್ಮಿನ್ಲೋಕೇಽಸ್ಪರ್ಧಂತ ಸ

ಯಮೋ ದೇವಾನಾಮಿಂದ್ರಿಯಂ ವೀರ್ಯಮಯುವತ

ತದ್ಯಮಸ್ಯ [(೩) ಯಮತ್ವಂ] ಯಮತ್ವಂ

---

**ದೇವಾಃ** । ಚ । ವೈ । ಯಮಃ । ಚ । ಅಸ್ಮಿನ್ । ಲೋಕೇ । ಅಸ್ಪರ್ಧಂತ । ಸಃ । ಯಮಃ ।

ದೇವಾನಾಮ್ । ಇಂದ್ರಿಯಮ್ । ವೀರ್ಯಮ್ । ಅಯುವತ । ತತ್ । ಯಮಸ್ಯ ।

ಯಮತ್ವಮಿತಿ ಯಮ–ತ್ವಮ್ ।

---

### ವೈಷ್ಣಾವರುಣಯಾಗವಿಧಿಗಾಗಿ ಉಪಾಖ್ಯಾನ

| | |
|---|---|
| ದೇವಾಃ ಚ ವೈ ಯಮಃ ಚ ಅಸ್ಮಿನ್ ಲೋಕೇ ಅಸ್ಪರ್ಧಂತ | ದೇವತೆಗಳೂ ಮತ್ತು ಯಮನೂ ಈ ಲೋಕದ ಆಧಿಪತ್ಯದ ವಿಷಯದಲ್ಲಿ ಸ್ಪರ್ಧಿಸಿದರು. |
| ಸಃ ಯಮಃ ದೇವಾನಾಮ್ ಇಂದ್ರಿಯಮ್ ವೀರ್ಯಮ್ ಅಯುವತ | ಆ ಯಮನು ದೇವತೆಗಳ ಇಂದ್ರಿಯಶಕ್ತಿಯನ್ನೂ, ಇಂದ್ರಿಯಗತವಾದ ವೀರ್ಯವನ್ನೂ ದೇವತೆಗಳಿಂದ ಬೇರ್ಪಡಿಸಿದನು. |
| ತತ್ ಯಮಸ್ಯ ಯಮತ್ವಮ್ | ಇದೇ [ಬೇರ್ಪಡಿಸಿದುದೇ] ಯಮನ ಯಮತ್ವವು. |

---

ಒಂದು ಕಾಲದಲ್ಲಿ ದೇವತೆಗಳೂ, ಯಮನೂ ಈ ಲೋಕದ ಆಧಿಪತ್ಯದ ವಿಷಯದಲ್ಲಿ ಸ್ಪರ್ಧಿಸಿದರು. ಆ ಯಮನು ದೇವತೆಗಳ ಇಂದ್ರಿಯಶಕ್ತಿಯನ್ನೂ ಸಾಮರ್ಥ್ಯವನ್ನೂ ಬೇರ್ಪಡಿಸಿದನು. ಹೀಗೆ ಬೇರ್ಪಡಿಸಿದುದರಿಂದ ಅವನು **'ಯುವ'** [ಬೇರ್ಪಡಿಸಿದವನು]ನೆನಿಸಿದನು. ವರ್ಣವ್ಯತ್ಯಯದಿಂದ **'ಯಮ'**ನೆನಿಸಿದನು. ಇದೇ ಯಮನ ಯಮತ್ವವೆನಿಸಿದೆ.

---

* ಯು ಮಿಶ್ರಣೇಽಮಿಶ್ರಣೇ ಚ । ಅದಾದಿ

ತೇ ದೇವಾ ಅಮನ್ಯಂತ ಯಮೋ ವಾ ಇದಮಭೂದ್ಯ

ದ್ವಯಗ್ಂ ಸ್ಮ ಇತಿ ತೇ ಪ್ರಜಾಪತಿಮುಪಾಧಾವನ್ಥ್ಸ ಏತೌ

ಪ್ರಜಾಪತಿರಾತ್ಮನ ಉಕ್ಷವಶೌ ನಿರಮಿಮೀತ

---

ತೇ । ದೇವಾಃ । ಅಮನ್ಯಂತ । ಯಮಃ । ವೈ । ಇದಮ್ । ಅಭೂತ್ । ಯತ್ । ವಯಮ್ । ಸ್ಮಃ । ಇತಿ । ತೇ । ಪ್ರಜಾಪತಿಮಿತಿ ಪ್ರಜಾ–ಪತಿಮ್ । ಉಪೇತಿ । ಅಧಾವನ್ನ್ । ಸಃ । ಏತೌ । ಪ್ರಜಾಪತಿರಿತಿ ಪ್ರಜಾ–ಪತಿಃ । ಆತ್ಮನಃ । ಉಕ್ಷವಶಾವಿತ್ಯುಕ್ಷ – ವಶೌ । ನಿರಿತಿ । ಅಮಿಮೀತ ।

---

| | |
|---|---|
| ಯಮಃ ವೈ ಇದಮ್ ಅಭೂತ್ ಯತ್ ವಯಮ್ ಸ್ಮಃ ಇತಿ ತೇ ದೇವಾಃ ಅಮನ್ಯಂತ | 'ನಾವು ಈ ಲೋಕದ ಅಧಿಪತಿಗಳಾಗಿದ್ದೆವು. ಈಗ ಯಮನೇ ಲೋಕಾಧಿಪತ್ಯವನ್ನು ಪಡೆದನು' ಎಂದು ದೇವತೆಗಳು ತಿಳಿದರು. |
| ತೇ ಪ್ರಜಾಪತಿಮ್ ಉಪಾಧಾವನ್ | ಆ ದೇವತೆಗಳು ಪ್ರಜಾಪತಿಯನ್ನು ಆಶ್ರಯಿಸಿದರು. |
| ಸಃ ಪ್ರಜಾಪತಿಃ ಆತ್ಮನಃ ಏತೌ ಉಕ್ಷವಶೌ ನಿರಮಿಮೀತ | ಆ ಪ್ರಜಾಪತಿಯು ತನ್ನಿಂದಲೇ ವೃಷಭವನ್ನೂ , ಬಂಜೆ ಹಸುವನ್ನೂ ನಿರ್ಮಿಸಿದನು. |

---

ಬಳಿಕ ದೇವತೆಗಳು ಇದುವರೆಗೂ ನಮ್ಮದಾಗಿದ್ದ ಲೋಕಾಧಿಪತ್ಯವನ್ನು ಯಮನು ಕಸಿದುಕೊಂಡನೆಂದು ತಿಳಿದು ಪರಿಹಾರಕ್ಕಾಗಿ ಪ್ರಜಾಪತಿಯನ್ನು ಆಶ್ರಯಿಸಿದರು. ಆ ಪ್ರಜಾಪತಿಯು ತನ್ನ ಆತ್ಮದಿಂದಲೇ ಸೇಚನಸಮರ್ಥವಾದ ವೃಷಭವನ್ನೂ , ಬಂಜೆಯಾದ ಹಸುವನ್ನೂ ಸೃಷ್ಟಿಸಿದನು.

ತೇ ದೇವಾ ವೈಷ್ಣಾವರುಣೀಂ ವಶಾಮಾಽಲಭಂತೈಂದ್ರಮುಕ್ಷಾಣಂ ತಂ ವರುಣೇನೈವ ಗ್ರಾಹಯಿತ್ವಾ ವಿಷ್ಣುನಾ ಯಜ್ಞೇನ ಪ್ರಾಣುದಂತೈಂದ್ರೇಣೈವಾಸ್ಯೇಂದ್ರಿಯಮವೃಂಜತ

---

ತೇ । ದೇವಾಃ । ವೈಷ್ಣಾವರುಣೀಮಿತಿ ವೈಷ್ಣಾ–ವರುಣೀಮ್ । ವಶಾಮ್ । ಏತಿ । ಆಲಭಂತ । ಐಂದ್ರಮ್ । ಉಕ್ಷಾಣಮ್ । ತಮ್ । ವರುಣೇನ । ಏವ । ಗ್ರಾಹಯಿತ್ವಾ । ವಿಷ್ಣುನಾ । ಯಜ್ಞೇನ । ಪ್ರೇತಿ । ಅನುದಂತ । ಐಂದ್ರೇಣ । ಏವ । ಅಸ್ಯ । ಇಂದ್ರಿಯಮ್ । ಅವೃಂಜತ ।

---

| | |
|---|---|
| ತೇ ದೇವಾಃ ವೈಷ್ಣಾವರುಣೀಮ್ ವಶಾಮ್ ಆಲಭಂತ | ಆ ದೇವತೆಗಳು ವಿಷ್ಣೂವರುಣದೇವತೆಗಳಿಗಾಗಿ ಬಂಜೆಹಸುವನ್ನು ಯಾಗ ಮಾಡಿದರು. |
| ಐಂದ್ರಮ್ ಉಕ್ಷಾಣಮ್ [ಆಲಭಂತ] | ಇಂದ್ರದೇವತೆಗಾಗಿ ವೃಷಭವನ್ನು ಯಾಗ ಮಾಡಿದರು. |
| ತಮ್ ವರುಣೇನ ಏವ ಗ್ರಾಹಯಿತ್ವಾ | ಆ ಯಮುನನ್ನು ವರುಣದೇವನಿಂದ ಹಿಡಿಸಿಹಾಕಿ |
| ವಿಷ್ಣುನಾ ಯಜ್ಞೇನ | ಯಜ್ಞಸ್ವರೂಪನಾದ ವಿಷ್ಣುವಿನಿಂದ ದೂರ ಮಾಡಿದರು. |
| ಐಂದ್ರೇಣ ಏವ ಅಸ್ಯ ಇಂದ್ರಿಯಮ್ ಅವೃಂಜತ | ಇಂದ್ರನ ಅನುಗ್ರಹದಿಂದಲೇ ಯಮುನ ಸಾಮರ್ಥ್ಯವನ್ನು ನಾಶಪಡಿಸಿದರು. |

---

ದೇವತೆಗಳು ವಿಷ್ಣೂವರುಣದೇವತೆಗಳಿಗಾಗಿ ವೃಷಭವನ್ನೂ, ಇಂದ್ರದೇವತೆಗಾಗಿ ವಶೆಯನ್ನೂ ಯಾಗ ಮಾಡಿದರು. ದೇವತೆಗಳು ಆ ಯಮುನನ್ನು ವರುಣನ ಅನುಗ್ರಹದಿಂದ ಬಂಧಿಸಿ, ಯಜ್ಞರೂಪವಾದ ವಿಷ್ಣುವಿನ ಅನುಗ್ರಹದಿಂದ ದೂರಕ್ಕೆ ಕಳಿಸಿದರು. ಇಂದ್ರನ ಅನುಗ್ರಹದಿಂದ ಯಮುನ ವೀರ್ಯವನ್ನು ಹೋಗಲಾಡಿಸಿದರು.

ಯೋ ಭ್ರಾತೃವ್ಯವಾನ್ಥ್ಸ್ಯಾತ್ಸ ಸ್ಪರ್ಧಮಾನೋ

ವೈಷ್ಣಾವರುಣೀಂ (೪)ವಶಾಮಾಲಭೇತೈಂದ್ರಮುಕ್ಷಾಣಂ

ವರುಣೇನೈವ ಭ್ರಾತೃವ್ಯಂ ಗ್ರಾಹಯಿತ್ವಾ ವಿಷ್ಣುನಾ

ಯಜ್ಞೇನ ಪ್ರಣುದತ

---

ಯಃ । ಭ್ರಾತೃವ್ಯವಾನಿತಿ ಭ್ರಾತೃವ್ಯ–ವಾನ್ । ಸ್ಯಾತ್ । ಸಃ । ಸ್ಪರ್ಧಮಾನಃ । ವೈಷ್ಣಾವರುಣೀಮಿತಿ ವೈಷ್ಣಾ–ವರುಣೀಮ್ । (೪) । ವಶಾಮ್ । ಏತಿ । ಲಭೇತ । ಐಂದ್ರಮ್ । ಉಕ್ಷಾಣಮ್ । ವರುಣೇನ । ಏವ । ಭ್ರಾತೃವ್ಯಮ್ । ಗ್ರಾಹಯಿತ್ವಾ । ವಿಷ್ಣುನಾ । ಯಜ್ಞೇನ । ಪ್ರೇತಿ । ನುದತೇ ।

---

**ಯಾಗವಿಧಿ ; ಪ್ರಶಂಸೆ**

| | |
|---|---|
| ಯಃ ಭ್ರಾತೃವ್ಯವಾನ್ ಸ್ಯಾತ್ | ಯಾವನು ಪ್ರಬಲರಾದ ಶತ್ರುಗಳುಳ್ಳವನಾಗಿರುತ್ತಾನೆಯೋ |
| ಸ್ಪರ್ಧಮಾನಃ ಸಃ | ಶತ್ರುಗಳೊಡನೆ ಸ್ಪರ್ಧಿಸುವ ಆ ಯಜಮಾನನು |
| ವೈಷ್ಣಾವರುಣೀಮ್ ವಶಾಮ್ ಆಲಭೇತ | ವಿಷ್ಣೂವರುಣದೇವತೆಗಳಿಗಾಗಿ ಬಂಜೆ ಹಸುವನ್ನು ಯಾಗ ಮಾಡಬೇಕು. |
| ಐಂದ್ರಮ್ ಉಕ್ಷಾಣಮ್ [ಆಲಭೇತ] | ಇಂದ್ರದೇವನಿಗಾಗಿ ವೃಷಭವನ್ನು ಯಾಗ ಮಾಡಬೇಕು. |
| ವರುಣೇನ ಏವ ಭ್ರಾತೃವ್ಯಮ್ ಗ್ರಾಹಯಿತ್ವಾ | [ಆ ಯಜಮಾನನು] ವರುಣನಿಂದಲೇ ಶತ್ರುವನ್ನು ಬಂಧಿಸಿ, |
| ವಿಷ್ಣುನಾ ಯಜ್ಞೇನ ಪ್ರಣುದತೇ | ವಿಷ್ಣುವಿನ ಅನುಗ್ರಹದಿಂದ ಶತ್ರುವನ್ನು ದೂರಕ್ಕೆ ಅಟ್ಟುತ್ತಾನೆ. |

---

ಯಾವ ಯಜಮಾನನಿಗೆ ಪ್ರಬಲಶತ್ರುಗಳುಂಟೋ ಆ ಯಜಮಾನನು

ಐಂದ್ರೇಣ್ಯೈವಾಸ್ಯೇಂದ್ರಿಯಂ ವೃಂಕ್ತೇ ಭವತ್ಯಾತ್ಮನಾ

ಪರಾಸ್ಯ ಭ್ರಾತೃವ್ಯೋ ಭವತೀಂದ್ರೋ ವೃತ್ರಮಹನ್ತಂ

ವೃತ್ರೋ ಹತಃ

---

ಐಂದ್ರೇಣ । ಏವ । ಅಸ್ಯ । ಇಂದ್ರಿಯಮ್ । ವೃಂಕ್ತೇ । ಭವತಿ । ಆತ್ಮನಾ । ಪರೇತಿ । ಅಸ್ಯ ।

ಭ್ರಾತೃವ್ಯಃ । ಭವತಿ । ಇಂದ್ರಃ । ವೃತ್ರಮ್ । ಅಹನ್ । ತಮ್ । ವೃತ್ರಃ । ಹತಃ ।

---

| | |
|---|---|
| ಐಂದ್ರೇಣ ಏವ ಅಸ್ಯ ಇಂದ್ರಿಯಮ್ ವೃಂಕ್ತೇ | ಇಂದ್ರನ ಅನುಗ್ರಹದಿಂದ ಈ ಶತ್ರುವಿನ ಇಂದ್ರಿಯಶಕ್ತಿಯನ್ನು ನಾಶಪಡಿಸುತ್ತಾನೆ. |
| ಆತ್ಮನಾ ಭವತಿ | ತಾನೇ ವಿಜಯಿಯಾಗುತ್ತಾನೆ. |
| ಅಸ್ಯ ಭ್ರಾತೃವ್ಯಃ ಪರಾ ಭವತಿ | ಈ ಯಜಮಾನನ ಶತ್ರುವು ಸೋತು ಹೋಗುತ್ತಾನೆ. |

**ಪಾಪನಾಶಕವಾದ ಪಶುಯಾಗವಿಧಿಗಾಗಿ ಉಪಾಖ್ಯಾನ**

| | |
|---|---|
| ಇಂದ್ರಃ ವೃತ್ರಮ್ ಅಹನ್ | ಇಂದ್ರನು ವೃತ್ರಾಸುರನನ್ನು ಸಂಹರಿಸಿದನು. |
| ಹತಃ ವೃತ್ರಃ | ಸಂಹರಿಸಲ್ಪಟ್ಟ ವೃತ್ರನು |

---

ಶತ್ರುಗಳೊಡನೆ ಸ್ಪರ್ಧಿಸುತ್ತಾ ವಿಷ್ಣುವರುಣದೇವತಾಕವಾಗಿ ಬಂಜೆ ಹಸುವನ್ನೂ, ಇಂದ್ರದೇವನಿಗಾಗಿ ವೃಷಭವನ್ನೂ ಯಾಗ ಮಾಡಬೇಕು. ಇದರಿಂದ ಪ್ರೀತನಾದ ವರುಣನು ಶತ್ರುವನ್ನು ತನ್ನ ಪಾಶಗಳಿಂದ ಬಂಧಿಸುತ್ತಾನೆ. ಯಜ್ಞರೂಪಿಯಾದ ವಿಷ್ಣುವು ಶತ್ರುವನ್ನು ದೂರಕ್ಕೆ ಅಟ್ಟುತ್ತಾನೆ. ಇಂದ್ರನ ಅನುಗ್ರಹದಿಂದ ಯಜಮಾನನು ಶತ್ರುವಿನ ಇಂದ್ರಿಯಶಕ್ತಿಯನ್ನು ಹೋಗಲಾಡಿಸುತ್ತಾನೆ. ಯಜಮಾನನು ವಿಜಯಿಯಾಗುತ್ತಾನೆ. ಈತನ ಶತ್ರುವು ಪರಾಜಿತನಾಗುತ್ತಾನೆ.

ಷೋಡಶಭಿರ್ಭೋಗೈರಸಿನಾತ್ತಸ್ಯ ವೃತ್ರಸ್ಯ ಶೀರ್ಷತೋ

ಗಾವ ಉದಾಯನ್ತಾ ವೈದೇಹ್ಯೋಽಭವನ್ತಾ-

ಸಾಮೃಷಭೋ ಜಘನೇಽನೂದೈತ್ತಮಿಂದ್ರೋಽ-

---

ಷೋಡಶಭಿರಿತಿ ಷೋಡಶ-ಭಿಃ । ಭೋಗೈಃ । ಅಸಿನಾತ್ । ತಸ್ಯ । ವೃತ್ರಸ್ಯ । ಶೀರ್ಷತಃ ।

ಗಾವಃ । ಉದಿತಿ । ಆಯನ್ನ್ । ತಾಃ । ವೈದೇಹ್ಯಃ । ಅಭವನ್ನ್ । ತಾಸಾಮ್ । ಋಷಭಃ ।

ಜಘನೇ । ಅನು । ಉದಿತಿ । ಐತ್ । ತಮ್ । ಇಂದ್ರಃ । (೫) ।

---

| | |
|---|---|
| ತಮ್ ಷೋಡಶಭಿಃ ಭೋಗೈಃ ಅಸಿನಾತ್ | ಸರ್ಪಾಕಾರದ ಹದಿನಾರು ಶರೀರಗಳನ್ನು ಹೊಂದಿ ಇಂದ್ರನನ್ನು ಬಂಧಿಸಿದನು. |
| ತಸ್ಯ ವೃತ್ರಸ್ಯ ಶೀರ್ಷತಃ ಗಾವಃ ಉದಾಯನ್ನ್ | ಆ ವೃತ್ರನ ತಲೆಯ ಭಾಗದಿಂದ ಗೋವುಗಳು ಮೇಲಕ್ಕೆ ಬಂದವು. |
| ತಾಃ ವೈದೇಹ್ಯಃ ಅಭವನ್ನ್ | ಅವು ವಿಶಿಷ್ಟವಾದ ದೇಹವುಳ್ಳವುಗಳಾಗಿದ್ದವು. |
| ತಾಸಾಮ್ ಋಷಭಃ ಜಘನೇ ಅನು ಉದೈತ್ | ಗೋವುಗಳ ಅನಂತರ ಒಂದು ವೃಷಭವು ಹುಟ್ಟಿ ಮೇಲೆ ಬಂದಿತು. |

---

ಪಾಪಮುಕ್ತಿಗಾಗಿ ವಿಹಿತವಾದ ಯಾಗದ ಉಪಾಖ್ಯಾನವಿದಾಗಿದೆ. ಇಂದ್ರನು ವೃತ್ರಾಸುರನನ್ನು ಸಂಹರಿಸಿದನು. ಹತನಾದ ವೃತ್ರನು ಸರ್ಪಾಕಾರವಾದ ಹದಿನಾರು ಶರೀರಗಳಿಂದ ಇಂದ್ರನನ್ನು ಬಂಧಿಸಿದನು. ಅಂದರೆ ಇಂದ್ರನು ಪಾಪಗ್ರಸ್ತನಾದನು. ಆ ವೃತ್ರಾಸುರನ ತಲೆಯಿಂದ ಗೋವುಗಳು ಹುಟ್ಟಿ ಹೊರಬಂದವು. ಅವು ವಿಶಿಷ್ಟವಾದ ದೇಹವುಳ್ಳವುಗಳಾಗಿದ್ದವು. ಅವುಗಳನ್ನು ಅನುಸರಿಸಿ ಕೊನೆಯಲ್ಲಿ ಒಂದು ವೃಷಭವು

[ಇಂದ್ರಃ] [ಇ] ಅಚಾಯತ್] ಚಾಯತ್ಸೋಽ

ಮನ್ಯತ ಯೋ ವಾ ಇಮಮಾಲಭೇತ ಮುಚ್ಯೇತಾಸ್ಮಾತ್ಪಾಪ್ಮನ

ಇತಿ ಸ ಆಗ್ನೇಯಂ ಕೃಷ್ಣಗ್ರೀವಮಾಽಲಭತೈಂದ್ರಮೃಷಭಂ

---

ಅಚಾಯತ್ । ಸಃ । ಅಮನ್ಯತ । ಯಃ । ವೈ । ಇಮಮ್ । ಆಲಭೇತೇತ್ಯಾ–ಲಭೇತ । ಮುಚ್ಯೇತ । ಅಸ್ಮಾತ್ । ಪಾಪ್ಮನಃ । ಇತಿ । ಸಃ । ಆಗ್ನೇಯಮ್ । ಕೃಷ್ಣಗ್ರೀವಮಿತಿ ಕೃಷ್ಣ–ಗ್ರೀವಮ್ । ಏತಿ । ಅಲಭತ । ಐಂದ್ರಮ್ । ಋಷಭಮ್ ।

---

| | |
|---|---|
| ತಮ್ ಇಂದ್ರಃ ಅಚಾಯತ್ | [ಆಶ್ಚರ್ಯವನ್ನು ಹೊಂದಿದ]ಇಂದ್ರನು ತನ್ನ ಕಾರ್ಯವನ್ನು ಪ್ರಶಂಸಿಸಿದನು. |
| ಸಃ ಅಮನ್ಯತ ಯಃ ವೈ ಇಮಮ್ ಆಲಭೇತ [ಸಃ] ಅಸ್ಮಾತ್ ಪಾಪ್ಮನಃ ಮುಚ್ಯೇತ ಇತಿ | ಆ ಇಂದ್ರನು 'ಈ ವೃಷಭವನ್ನು ದೇವತೆಗಾಗಿ ಯಾವನು ಯಾಗ ಮಾಡುತ್ತಾನೆಯೋ ಅವನು ಪ್ರಸಿದ್ಧವಾದ ಪಾಪದಿಂದ ಬಿಡುಗಡೆ ಹೊಂದುವನು' ಎಂದು ತಿಳಿದನು. |
| ಸಃ ಆಗ್ನೇಯಮ್ ಕೃಷ್ಣಗ್ರೀವಮ್ ಆಲಭತ ಐಂದ್ರಮ್ ಋಷಭಮ್ [ಆಲಭತ] | ಆ ಇಂದ್ರನು ಅಗ್ನಿದೇವತೆಗಾಗಿ ಕಪ್ಪಾದ ಕುತ್ತಿಗೆಯುಳ್ಳ ಪಶುವನ್ನು ಯಾಗ ಮಾಡಿದನು. ಇಂದ್ರದೇವತೆಗಾಗಿ ವೃಷಭವನ್ನು ಯಾಗ ಮಾಡಿದನು. |

---

ಹುಟ್ಟಿ ಹೊರಕ್ಕೆ ಬಂದಿತು. ಅದನ್ನು ಕಂಡು ಚಕಿತನಾದ ಇಂದ್ರನು ತನ್ನ ಕಾರ್ಯವು ಸರಿಯಾಯಿತೆಂದು ಪ್ರಶಂಸಿಸಿದನು. ಬಳಿಕ ಈ ಪಶುವನ್ನು ಯಾವನು ದೇವತೆಗಳಿಗಾಗಿ ಯಾಗ ಮಾಡುತ್ತಾನೆಯೋ ಅವನು ಪಾಪಮುಕ್ತನಾಗುವನೆಂದು ತಿಳಿದನು. ಆ ಇಂದ್ರನು ಅಗ್ನಿದೇವತೆಗಾಗಿ ಕಪ್ಪಾದ ಕತ್ತುಳ್ಳ ಪಶುವನ್ನು ಯಾಗ ಮಾಡಿದನು ಹಾಗೂ ತನಗಾಗಿ [ಇಂದ್ರನಿಗಾಗಿ] ಋಷಭವನ್ನು ಯಾಗ ಮಾಡಿದನು.

ತಸ್ಯಾಗ್ನಿರೇವ ಸ್ವೇನ ಭಾಗಧೇಯೇನೋಪಸೃತಷ್ಷೋಡ

ಶಧಾ ವೃತ್ರಸ್ಯ ಭೋಗಾನಪ್ಯದಹದೈಂದ್ರೇಣೇಂದ್ರಿಯ

ಮಾತ್ಮನ್ನಧತ್ತ ಯಃ ಪಾಪ್ಮನಾ ಗೃಹೀತಸ್ಸ್ಯಾತ್ಸ

---

ತಸ್ಯ । ಅಗ್ನಿಃ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪಸೃತ ಇತ್ಯುಪ–ಸೃತಃ । ಷೋಡಶಧೇತಿ ಷೋಡಶ–ಧಾ । ವೃತ್ರಸ್ಯ । ಭೋಗಾನ್ । ಅಪೀತಿ । ಅದಹತ್ । ಐಂದ್ರೇಣ । ಇಂದ್ರಿಯಮ್ । ಆತ್ಮನ್ನ್ । ಅಧತ್ತ । ಯಃ । ಪಾಪ್ಮನಾ । ಗೃಹೀತಃ । ಸ್ಯಾತ್ । ಸಃ ।

---

| | |
|---|---|
| ತಸ್ಯ ಸ್ವೇನ ಭಾಗಧೇಯೇನ ಉಪಸೃತಃ ಅಗ್ನಿಃ ಏವ | ಇಂದ್ರನು ಕೊಟ್ಟ ತನ್ನ ಹವಿರ್ಭಾಗದಿಂದ ಸುಪ್ರೀತನಾದ ಅಗ್ನಿದೇವನೇ |
| ವೃತ್ರಸ್ಯ ಷೋಡಶಧಾ ಭೋಗಾನ್ ಅಪಿ ಅದಹತ್ | ವೃತ್ರಾಸುರನಿಗೆ ಸಂಬಂಧಿಸಿದ ಹದಿನಾರು ಸರ್ಪಾಕಾರಶರೀರಗಳನ್ನೂ, ವೃತ್ರನನ್ನೂ ಸುಟ್ಟುಬಿಟ್ಟನು. |
| ಐಂದ್ರೇಣ ಇಂದ್ರಿಯಮ್ ಆತ್ಮನ್ನ್ ಅಧತ್ತ | ಐಂದ್ರವೃಷಭಯಾಗದಿಂದ ಇಂದ್ರಿಯ ಶಕ್ತಿಯನ್ನು ಮತ್ತೆ ತನ್ನಲ್ಲಿ ಹೊಂದಿದನು. |

**ಯಾಗವಿಧಿ; ಪ್ರಶಂಸೆ**

| | |
|---|---|
| ಯಃ ಪಾಪ್ಮನಾ ಗೃಹೀತಃ ಸ್ಯಾತ್ ಸಃ | ಯಾವನು ಪಾಪಗ್ರಸ್ತನಾಗಿರುತ್ತಾನೆಯೋ ಅವನು |

---

ಅಗ್ನಿಯು ತನ್ನ ಹವಿರ್ಭಾಗವನ್ನು ಪಡೆದು ಸುಪ್ರೀತನಾಗಿ ಇಂದ್ರನನ್ನು ಬಂಧಿಸಿದ್ದ ವೃತ್ರಾಸುರನ ಹದಿನಾರು ಸರ್ಪಾಕಾರದೇಹಗಳನ್ನು ಸುಟ್ಟು, ವೃತ್ರಾಸುರನನ್ನೂ ಸುಟ್ಟುಬಿಟ್ಟನು. ಐಂದ್ರಪಶುಯಾಗದಿಂದ ಇಂದ್ರನು ತನ್ನಲ್ಲಿ ಇಂದ್ರಿಯಶಕ್ತಿಯನ್ನು ಪಡೆದನು.

ಆಗ್ನೇಯಂ ಕೃಷ್ಣಗ್ರೀವಮಾಲಭೇತೈಂದ್ರಮೃಷಭ
ಮಗ್ನಿರೇವಾಸ್ಯ ಸ್ವೇನ ಭಾಗಧೇಯೇನೋಪಸೃತಃ [೬]
ಪಾಪ್ಮಾನಮಪಿ ದಹತ್ಯೈಂದ್ರೇಣೇಂದ್ರಿಯಮಾತ್ಮನ್ಧತ್ತೇ
ಮುಚ್ಯತೇ ಪಾಪ್ಮನೋ ಭವತ್ಯೇವ

---

ಆಗ್ನೇಯಮ್ । ಕೃಷ್ಣಗ್ರೀವಮಿತಿ ಕೃಷ್ಣ–ಗ್ರೀವಮ್ । ಐತಿ । ಲಭೇತ । ಐಂದ್ರಮ್ । ಋಷಭಮ್ । ಅಗ್ನಿಃ । ಏವ । ಅಸ್ಯ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪಸೃತ ಇತ್ಯುಪ–ಸೃತಃ। ಪಾಪ್ಮಾನಮ್ । ಅಪೀತಿ। ದಹತಿ। ಐಂದ್ರೇಣ। ಇಂದ್ರಿಯಮ್ । ಆತ್ಮನ್ನ್ । ಧತ್ತೇ । ಮುಚ್ಯತೇ । ಪಾಪ್ಮನಃ । ಭವತಿ । ಏವ ।

---

| | |
|---|---|
| ಆಗ್ನೇಯಮ್ ಕೃಷ್ಣಗ್ರೀವಮ್ ಆಲಭೇತ | ಅಗ್ನಿದೇವನಿಗಾಗಿ ಕಪ್ಪುಕಂಠವುಳ್ಳ ಪಶುವನ್ನು ಯಾಗ ಮಾಡಬೇಕು. |
| ಐಂದ್ರಮ್ ಋಷಭಮ್ [ಆಲಭೇತ] | ಇಂದ್ರನಿಗಾಗಿ ಋಷಭವನ್ನು ಯಾಗ ಮಾಡಬೇಕು. |
| ಅಗ್ನಿಃ ಏವ ಅಸ್ಯ ಸ್ವೇನ ಭಾಗಧೇಯೇನ ಉಪಸೃತಃ [ಅಸ್ಯ] ಪಾಪ್ಮಾನಮ್ ಅಪಿ ದಹತಿ | [ಈ ಯಾಗದಿಂದ ] ತನ್ನ ಭಾಗವನ್ನು ಪಡೆದು ಸುಪ್ರೀತನಾದ ಅಗ್ನಿಯು ಈ ಯಜಮಾನನ ಪಾಪವನ್ನು ಪರಿಹಾರ ಮಾಡುತ್ತಾನೆ. |
| ಐಂದ್ರೇಣ ಇಂದ್ರಿಯಮ್ ಆತ್ಮನ್ನ್ ಧತ್ತೇ ಪಾಪ್ಮನಃ ಮುಚ್ಯತೇ ಭವತಿ ಏವ | ಇಂದ್ರಾನುಗ್ರಹದಿಂದ ಇಂದ್ರಿಯಶಕ್ತಿಯನ್ನು ಪಡೆಯುತ್ತಾನೆ. ಪಾಪವನ್ನು ಕಳೆದುಕೊಳ್ಳುತ್ತಾನೆ. ಸಮರ್ಥನೇ ಆಗುತ್ತಾನೆ. |

---

ಯಾವನು ಪಾಪಗ್ರಸ್ತನೋ ಆ ಯಜಮಾನನು ಕೃಷ್ಣಗ್ರೀವವುಳ್ಳ ಪಶುವನ್ನು ಅಗ್ನಿದೇವನಿಗಾಗಿಯೂ, ಋಷಭವನ್ನು ಇಂದ್ರನಿಗಾಗಿಯೂ ಯಾಗ ಮಾಡಬೇಕು. ಇದರಿಂದ ಅಗ್ನಿಯು ತನ್ನ ಹವಿರ್ಭಾಗದಿಂದ ಸುಪ್ರೀತನಾಗಿ ಯಜಮಾನನ ಪಾಪಗಳನ್ನು ಹೋಗಲಾಡಿಸುತ್ತಾನೆ. ಇಂದ್ರನ ಅನುಗ್ರಹದಿಂದ ಇಂದ್ರಿಯಶಕ್ತಿಯನ್ನು ಪಡೆದು ಬಳಿಕ

ದ್ಯಾವಾಪೃಥಿವ್ಯಾಂ ಧೇನುಮಾಲಭೇತ

ಜ್ಯೋಗಪರುದ್ಧೋಽನಯೋರ್ ಹಿ ವಾ

ಏಷೋಽಪ್ರತಿಷ್ಠಿತೋಽಥೈಷ ಜ್ಯೋಗಪರುದ್ಧೋ

---

**ದ್ಯಾವಾಪೃಥಿವ್ಯಾಮಿತಿ ದ್ಯಾವಾ-ಪೃಥಿವ್ಯಾವ್** । ಧೇನುವ್ । ಏತಿ । ಲಭೇತ ।

ಜ್ಯೋಗಪರುದ್ಧ ಇತಿ ಜ್ಯೋಕ್ – ಅಪರುದ್ಧಃ । ಅನಯೋಃ । ಹಿ । ವೈ । ಏಷಃ ।

ಅಪ್ರತಿಷ್ಠಿತ ಇತ್ಯಪ್ರತಿ-ಸ್ಥಿತಃ । ಅಥ । ಏಷಃ । ಜ್ಯೋಕ್ । ಅಪರುದ್ಧ ಇತ್ಯಪ-ರುದ್ಧಃ ।

---

**ಬಹಳ ಕಾಲ ರಾಜ್ಯಭ್ರಷ್ಟನಾದವನಿಗೆ ವಿಹಿತವಾದ ಯಾಗ/ಪ್ರಶಂಸೆ**

| | |
|---|---|
| **ಜ್ಯೋಗಪರುದ್ಧಃ ದ್ಯಾವಾ ಪೃಥಿವ್ಯಾಮ್ ಧೇನುವ್ ಆಲಭೇತ** | ಚಿರಕಾಲ ರಾಜ್ಯಭ್ರಷ್ಟನಾದವನು ದ್ಯಾವಾ ಪೃಥಿವೀದೇವತೆಗಳಿಗಾಗಿ ಧೇನುಪಶು ಯಾಗವನ್ನು ಮಾಡಬೇಕು. |
| **ಅನಯೋಃ ಹಿ ವೈ ಏಷಃ ಅಪ್ರತಿಷ್ಠಿತ** | ಇವನು ಈ ಲೋಕದಲ್ಲಿಯೂ ಸ್ವರ್ಗಲೋಕ ದಲ್ಲಿಯೂ ಪ್ರತಿಷ್ಠಿತನಲ್ಲ. |
| **ಅಥ ಏಷಃ ಜ್ಯೋಕ್ ಅಪರುದ್ಧಃ** | ಇಂತಹವನು ಚಿರಕಾಲ ರಾಜ್ಯಭ್ರಷ್ಟ ನೆನಿಸಿಕೊಳ್ಳುತ್ತಾನೆ. |

---

ಸಮರ್ಥನಾಗಿ ಎಂದಿನಂತೆಯೇ ಆಗುತ್ತಾನೆ.

ಚಿರಕಾಲ ರಾಜ್ಯಭ್ರಷ್ಟನಾದವನು ದ್ಯಾವಾಪೃಥಿವೀದೇವತೆಗಳಿಗಾಗಿ ಧೇನುಪಶು ಯಾಗವನ್ನು ಮಾಡಬೇಕು. ಇಂತಹ ರಾಜ್ಯಭ್ರಷ್ಟನು ಪ್ರಜಾಪಾಲನೆಯಿಲ್ಲದಿರುವುದರಿಂದ ಭೂಮಿಯಲ್ಲಿ ನೆಲೆಯಿಲ್ಲದವನು; ವೈದಿಕಕರ್ಮಾದಿಗಳನ್ನು ಮಾಡದಿರುವುದರಿಂದ ಸ್ವರ್ಗದಲ್ಲಿಯೂ ನೆಲೆಯಿಲ್ಲದವನು. ಹೀಗಿರುವುದರಿಂದಲೇ ಅವನು ರಾಜ್ಯಭ್ರಷ್ಟ ನೆನಿಸಿಕೊಳ್ಳುವನು.

ದ್ಯಾವಾಪೃಥಿವೀ ಏವ ಸ್ವೇನ

ಭಾಗಧೇಯೇನೋಪಧಾವತಿ ತೇ ಏವೈನಂ ಪ್ರತಿಷ್ಠಾಂ

ಗಮಯತಃ ಪ್ರತ್ಯೇವ ತಿಷ್ಠತಿ ಪರ್ಯ್ಯಾರಿಣೀ ಭವತಿ

---

ದ್ಯಾವಾಪೃಥಿವೀ ಇತಿ ದ್ಯಾವಾ–ಪೃಥಿವೀ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ತೇ ಇತಿ । ಏವ । ಏನಮ್ । ಪ್ರತಿಷ್ಠಾಮಿತಿ ಪ್ರತಿ–ಸ್ಥಾಮ್ । ಗಮಯತಃ । ಪ್ರತೀತಿ । ಏವ । ತಿಷ್ಠತಿ । ಪರ್ಯ್ಯಾರಿಣೀ । ಭವತಿ ।

---

| | |
|---|---|
| ದ್ಯಾವಾಪೃಥಿವೀ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ದ್ಯಾವಾಪೃಥಿವ್ಯಪಶುಯಾಗ ಮಾಡಿದವನು ದ್ಯಾವಾಪೃಥಿವೀದೇವತೆಗಳಿಗೆ ಆ ದೇವತೆಗಳ ಭಾಗವನ್ನು ಕೊಟ್ಟು ಸೇವಿಸಿದವನಾಗುತ್ತಾನೆ. |
| ತೇ ಏವ ಏನಮ್ ಪ್ರತಿಷ್ಠಾಮ್ ಗಮಯತಃ | ಆ ದ್ಯಾವಾಪೃಥಿವೀದೇವತೆಗಳು ಈ ಯಜಮಾನನಿಗೆ ಇಲ್ಲಿಯೂ, ಸ್ವರ್ಗದಲ್ಲಿಯೂ ಸ್ಥಿರತೆಯನ್ನು ಉಂಟು ಮಾಡುತ್ತಾರೆ. |
| ಪರ್ಯಾರಿಣೀ ಭವತಿ | ಈ ಧೇನುವು ಕಾಲವನ್ನು ಮೀರಿ ಕರುವನ್ನು ಹಾಕಿರುವುದಾಗಿರಬೇಕು. |

---

ಅವನು ಈ ಧೇನುಯಾಗದಿಂದ ದ್ಯಾವಾಪೃಥಿವೀದೇವತೆಗಳನ್ನು ತೃಪ್ತಿಪಡಿಸಿದವನಾಗುತ್ತಾನೆ. ಆ ದ್ಯಾವಾಪೃಥಿವೀದೇವತೆಗಳ ಅನುಗ್ರಹದಿಂದ ಭೂಮಿಯಲ್ಲಿ ಸ್ಥಿರವಾದ ರಾಜ್ಯವನ್ನು ಪಡೆಯುತ್ತಾನೆ. ಸ್ವರ್ಗದಲ್ಲಿಯೂ ಪ್ರತಿಷ್ಠಿತನಾಗುತ್ತಾನೆ. ಆ ಯಾಗಧೇನುವು ಕಾಲವನ್ನು ಮೀರಿ ಪ್ರಸವಿಸಿದುದಾಗಿರಬೇಕು. ಈ ರಾಜ್ಯಭ್ರಷ್ಟನ ವಿಷಯದಲ್ಲಿ

ಪರ್ಯಾರೀವ ಹ್ಯೇತಸ್ಯ ರಾಷ್ಟ್ರಂ ಯೋ
ಜ್ಯೋಗಪರುದ್ಧಸ್ಸಮೃದ್ಧ್ಯೈ ವಾಯವ್ಯಂ ವತ್ಸಮಾಲಭೇತ
ವಾಯುರ್ವಾ ಅನಯೋರ್ವತ್ಸ

---

ಪರ್ಯಾರಿ । ಇವ । ಹಿ । ಏತಸ್ಯ । ರಾಷ್ಟ್ರಮ್ । ಯಃ । ಜ್ಯೋಗಪರುದ್ಧ ಇತಿ ಜ್ಯೋಕ್-ಅಪರುದ್ಧಃ । ಸಮೃದ್ಧ್ಯಾ ಇತಿ ಸಮ್-ಋದ್ಧ್ಯೈ । ವಾಯವ್ಯಮ್ । ವತ್ಸಮ್ । ಏತಿ । ಲಭೇತ । ವಾಯುಃ । ವೈ । ಅನಯೋಃ । ವತ್ಸಃ ।

---

| | |
|---|---|
| ಯಃ ಜ್ಯೋಗಪರುದ್ಧಃ | ಯಾವನು ಚಿರಕಾಲ ರಾಜ್ಯಭ್ರಷ್ಟನೋ |
| ಏತಸ್ಯ ರಾಷ್ಟ್ರಮ್ | ಅವನ ರಾಷ್ಟ್ರವೂ ಪರ್ಯಾರಿಯಂತೆಯೇ. |
| ಪರ್ಯ್ಯಾರಿ ಇವ ಹಿ | ಪರ್ಯಾರಿಯಾದ ಧೇನುವು ಯಾಗಪಶು |
| ಸಮೃದ್ಧ್ಯೈ | ವಾಗಿರುವುದರಿಂದ ಸಮಾನರೂಪವಾಗಿ ಫಲಸಮೃದ್ಧಿಗೆ ಕಾರಣವಾಗುತ್ತದೆ. |

**ವಾಯವ್ಯವತ್ಸಯಾಗವಿಧಿ; ಪ್ರಶಂಸೆ**

| | |
|---|---|
| ವಾಯವ್ಯಮ್ ವತ್ಸಮ್ ಆಲಭೇತ | ಚಿರಕಾಲ ರಾಜ್ಯಭ್ರಷ್ಟನಾದವನು ದ್ಯಾವಾಪೃಥಿವ್ಯಯಾಗದ ನಂತರ ವಾಯುದೇವತಾಕವಾದ ವತ್ಸವನ್ನು ಯಾಗ ಮಾಡಬೇಕು. |
| ವಾಯುಃ ವೈ ಅನಯೋಃ ವತ್ಸಃ | ವಾಯುವು ದ್ಯಾವಾಪೃಥಿವೀಗಳ ವತ್ಸನಾಗಿರುತ್ತಾನೆ. |

---

ರಾಷ್ಟ್ರವೂ ಚಿರಕಾಲಾನಂತರ ಪ್ರೀತಿಯನ್ನು ಹೊಂದುತ್ತದೆ. ಹೀಗೆ ಸಮಾನರೂಪವಾದುದರಿಂದ ಫಲಸಮೃದ್ಧಿಗೆ ಕಾರಣವಾಗುತ್ತದೆ.

ಚಿರಕಾಲ ರಾಜ್ಯಭ್ರಷ್ಟನಾದವನು ದ್ಯಾವಾಪೃಥಿವ್ಯಧೇನುಯಾಗದ ಜೊತೆಗೆ ವಾಯುದೇವತಾಕವಾದ ವತ್ಸಯಾಗವನ್ನು ಮಾಡಬೇಕು. **[ವಿಧಿ]**

ಇಮೇ ವಾ ಏತಸ್ಮೈ ಲೋಕಾ ಅಪಶುಷ್ಕಾ

ವಿಡಪಶುಷ್ಕಾಽಥೈಷ ಜ್ಯೋಗಪರುದ್ಧೋ ವಾಯುಮೇವ

ಸ್ವೇನ ಭಾಗಧೇಯೇನೋಪಧಾವತಿ

---

ಇಮೇ । ವೈ । ಏತಸ್ಮೈ । ಲೋಕಾಃ । ಅಪಶುಷ್ಕಾ ಇತ್ಯಪ-ಶುಷ್ಕಾಃ । ವಿಟ್ । ಅಪ ಶುಷ್ಕೇತ್ಯಪ-ಶುಷ್ಕಾ । ಅಥ । ಏಷಃ । ಜ್ಯೋಕ್ । ಅಪರುದ್ಧ ಇತ್ಯಪ-ರುದ್ಧಃ । ವಾಯುವ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಏತಸ್ಮೈ ಇಮೇ ಲೋಕಾಃ ಅಪಶುಷ್ಕಾಃ ವೈ | ಚಿರಕಾಲರಾಜ್ಯಭ್ರಷ್ಟನ ವಿಷಯದಲ್ಲಿ ಗ್ರಾಮಾಧಿಪತಿಗಳೇ ಮುಂತಾದ ಮುಖ್ಯರು ಅನುರಾಗರಹಿತರಾಗಿರುತ್ತಾರೆ. |
| ವಿಟ್ ಅಪಶುಷ್ಕಾ | ಸಾಮಾನ್ಯಪ್ರಜೆಯೂ ಅನುರಾಗರಹಿತನಾಗಿರುತ್ತಾನೆ. |
| ಅಥ ಏಷಃ ಜ್ಯೋಗಪರುದ್ಧಃ | ಹೀಗಾಗಿಯೇ ಇವನು ರಾಜ್ಯಭ್ರಷ್ಟನಾಗಿರುತ್ತಾನೆ. |
| ವಾಯುವ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಇಂತಹ ಯಜಮಾನನು ವಾಯವ್ಯಪಶುಯಾಗದಿಂದ ವಾಯುದೇವತೆಗೆ ಹವಿರ್ಭಾಗವನ್ನಿತ್ತು ಉಪಚರಿಸಿದವನಾಗುತ್ತಾನೆ. |

---

ತಾಯಿಹಸುವಿನ ಹತ್ತಿರದಲ್ಲಿ ಸಂಚರಿಸುವ ಕರುವಿನಂತೆ ದ್ಯಾವಾಪೃಥಿವಿಗಳ ಸಮೀಪದಲ್ಲಿ ಬೀಸುತ್ತಿರುವ ಗಾಳಿಯು ದ್ಯಾವಾಪೃಥಿವಿಗಳ ಕರುವಾಗಿರುತ್ತಾನೆ. ಗ್ರಾಮಾಧಿಕಾರಿಗಳೇ ಮುಂತಾದ ಪ್ರಮುಖರೂ, ಸಾಮಾನ್ಯಪ್ರಜೆಗಳೂ ರಾಜ್ಯಭ್ರಷ್ಟನ ವಿಷಯದಲ್ಲಿ ಅನುರಾಗವನ್ನು ಕಳೆದುಕೊಂಡಿರುತ್ತಾರೆ. ಇಂತಹವನು ವಾಯವ್ಯವತ್ಸಯಾಗದಿಂದ ವಾಯುವಿನ ಹವಿರ್ಭಾಗವನ್ನು ಕೊಟ್ಟು, ಅವನನ್ನು ಸೇವಿಸಿದವನಾಗುತ್ತಾನೆ.

ಸ ಏವಾಸ್ಮಾ ಇಮಾನ್ಲೋಕಾನ್ ವಿಶಂ ಪ್ರದಾಪಯತಿ

ಪ್ರಾಸ್ಮಾ ಇಮೇ ಲೋಕಾಃ ಸ್ನುವಂತಿ ಭುಂಜತ್ಯೇನಂ

ವಿಡುಪತಿಷ್ಠತೇ ॥೨೮-4॥

**[ಮಧ್ಯಂದಿನೇ ಕದ್ರುಂ ಯಮಸ್ಯ ಸ್ಪರ್ಧಮಾನೋ ಮೈತ್ರಾವರುಣೀಂ ತಮಿಂದ್ರೋಽಸ್ಯ ಸ್ವೇನ ಭಾಗಧೇಯೇನೋಪಸೃತೋ ವಾಯವ್ಯಂ ದ್ವಿಚತ್ವಾರಿಗ್ಂಶಚ್ಚ ।]**

---

**ಸಃ । ಏವ । ಅಸ್ಮೈ । ಇಮಾನ್ । ಲೋಕಾನ್ । ವಿಶಮ್ । ಪ್ರೇತಿ । ದಾಪಯತಿ । ಪ್ರೇತಿ । ಅಸ್ಮೈ । ಇಮೇ । ಲೋಕಾಃ । ಸ್ನುವಂತಿ । ಭುಂಜತೀ । ಏನಮ್ । ವಿಟ್ । ಉಪೇತಿ । ತಿಷ್ಠತೇ ॥4॥**

---

| | |
|---|---|
| **ಸಃ ಏವ ಅಸ್ಮೈ ಇಮಾನ್ ಲೋಕಾನ್ ವಿಶಮ್ ಪ್ರದಾಪಯತಿ** | ಆ ತುಷ್ಟನಾದ ವಾಯುದೇವತೆಯೇ ಈ ಯಜಮಾನನಿಗೆ ಎಲ್ಲ ಪ್ರಜೆಗಳೂ ಕಾಣಿಕೆಯನ್ನು ಕೊಡುವಂತೆ ಮಾಡುತ್ತಾನೆ. |

**ವಾಯವ್ಯಯಾಗದ ಪ್ರಶಂಸೆ**

| | |
|---|---|
| **ಅಸ್ಮೈ ಇಮೇ ಲೋಕಾಃ ಪ್ರ ಸ್ನುವಂತಿ** | ಈ ಯಜಮಾನನಿಗೆ [ಹಸುಗಳು ಹಾಲನ್ನು ಸುರಿಸುವಂತೆ ]ಪ್ರಜೆಗಳು ಧನಾದಿಗಳನ್ನು ಅರ್ಪಿಸುತ್ತಾರೆ. |
| **ವಿಟ್ ಭುಂಜತೀ ಏನಮ್ ಉಪತಿಷ್ಠತೇ** | ಸಾಮಾನ್ಯಪ್ರಜೆಯೂ ಇವನನ್ನು ಪಾಲಿಸುತ್ತಾ ಸೇವಿಸುತ್ತಾನೆ. |

---

ಆ ತುಷ್ಟನಾದ ವಾಯುದೇವತೆಯೇ ಈ ಯಜಮಾನನಿಗೆ ಗ್ರಾಮಾಧಿಪತಿಗಳೇ ಮೊದಲಾದವರೂ, ಸಾಮಾನ್ಯಪ್ರಜೆಗಳೂ ಕಂದಾಯ, ತೆರಿಗೆ, ಕಾಣಿಕೆ

ಮೊದಲಾದವುಗಳನ್ನು ಸಲ್ಲಿಸುವಂತೆ ಮಾಡುತ್ತಾನೆ. ಕರುವನ್ನು ಕಂಡು ಹಸುವು ಪ್ರೀತಿಯಿಂದ ಹಾಲನ್ನು ಸುರಿಸುವಂತೆ ಪ್ರಜೆಗಳು ಅನುರಾಗದಿಂದ ರಾಜನಿಗೆ ಕಪ್ಪ–ಕಾಣಿಕೆಗಳನ್ನು ನೀಡುವಂತೆ ಮಾಡುತ್ತಾನೆ. ಮುಖ್ಯವಾದ ಗ್ರಾಮಾಧಿಪತಿಗಳೂ, ಸಾಮಾನ್ಯಪ್ರಜೆಗಳೂ ಧನ–ಕನಕಾದಿಗಳನ್ನು ಅಧಿಕವಾಗಿ ನೀಡುತ್ತಾರೆ. ಪ್ರಜೆಗಳಿಗೆ ಈತನ ವಿಷಯದಲ್ಲಿ ಅನುರಾಗವು ಉಂಟಾಗುತ್ತದೆ.

* * *



# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

### ೧. ಪಶುಗಣಯಾಗದಲ್ಲಿ ಯಾವುದರ ಧರ್ಮದ ಅತಿದೇಶ? [ಜೈ.ಸೂ.8.1]

**'ವಸಂತಾ ಪ್ರಾತಸ್ತ್ರೀನ್ ಲಲಾಮಾನ್ ಆಲಭೇತ'** ಎಂಬುದಾಗಿ ಪಶುಗಣ ಯಾಗದ ವಿಧಿ ಇದೆ. ಈ ಪಶುಗಣಯಾಗಕ್ಕೆ ಅಗ್ನೀಷೋಮೀಯಧರ್ಮಗಳ ಅತಿದೇಶವೇ? ಐಕಾದಶಿನಪಶುಗಣಯಾಗದ ಧರ್ಮಗಳ ಅತಿದೇಶವೇ? ಎಂಬುದು ಇಲ್ಲಿನ ಸಂಶಯ.

ವಿಶೇಷಲಿಂಗವಿಲ್ಲದುದರಿಂದ ಪ್ರಕೃತಿಯಾದ ಅಗ್ನೀಷೋಮೀಯ ಧರ್ಮಗಳ ಅತಿದೇಶವೇ ಯುಕ್ತ ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ **ಸಿದ್ಧಾಂತ** ಹೀಗಿದೆ : ಪಶುಗಣಸಾಮ್ಯವಿಶೇಷವಿರುವುದರಿಂದ ಐಕಾದಶಿನವು ಅವಾಂತರಪ್ರಕೃತಿಯಾಗುತ್ತದೆ. ಅಗ್ನೀಷೋಮೀಯವು ಪರಮಪ್ರಕೃತಿ ಯೆನಿಸುತ್ತದೆ. ಪಶುಗಣಯಾಗಗಳಿಗೆ ಅಗ್ನೀಷೋಮೀಯವೇ ಪ್ರಕೃತಿಯಾಗುವುದಾದರೆ ಪಶುಗಣಯಾಗವುಳ್ಳ ಸೌತ್ರಾಮಣಿಯಾಗದಲ್ಲಿ ಪ್ರಕೃತಿಯಿಂದ ಎಲ್ಲ ಪಶುಗಳನ್ನೂ ಬಂಧಿಸಲು ಒಂದೇ ಯೂಪವು ಪ್ರಾಪ್ತವಾಗುವುದರಿಂದ **'ಯತ್ರಿಷು ಯೂಪೇಷ್ವಾ ಲಭೇತ'** ಎಂದು ಆರಂಭಿಸಿ, ಮೂರು ಯೂಪಗಳಿದ್ದರೆ ದೋಷವುಂಟಾಗುವುದೆಂದು ಹೇಳಿದುದೂ, **'ಏಕಯೂಪ ಆಲಭತೇ'** ಎಂಬುದಾಗಿ ವಿಶೇಷವಿಧಿಯನ್ನು ಹೇಳಿದುದೂ ವ್ಯರ್ಥವಾಗುತ್ತದೆ. ಪಶುಗಣಯಾಗಕ್ಕೆ ಐಕಾದಶಿನಪಶುಗಣಯಾಗದ ಧರ್ಮವೇ ಅತಿದೇಶವಾಗುತ್ತದೆಯೆಂದಾದರೆ ಅದು ಸಮಂಜಸವಾಗುತ್ತದೆ. ಆದುದರಿಂದ ಪಶುಗಣಯಾಗಕ್ಕೆ ಐಕಾದಶಿನಪಶುಗಣಯಾಗದ ಧರ್ಮವನ್ನೇ ಅತಿದೇಶ ಮಾಡಬೇಕು.

### ೨. 'ಧೇನು' 'ವತ್ಸ' 'ಋಷಭ' ಇವು ಯಾವ ದ್ರವ್ಯದ ಗುಣವಾಚಕಗಳು?

**'ದ್ಯಾವಾಪೃಥಿವ್ಯಾಂ ಧೇನುಮಾಲಭೇತ 'ಮಾರುತಂ ವತ್ಸಮ್' 'ಐಂದ್ರಮ್ ಋಷಭಮ್'** ಎಂಬಲ್ಲಿರುವ 'ಧೇನು' 'ವತ್ಸ' 'ಋಷಭ' ಈ ಶಬ್ದಗಳಿಗೆ ಕ್ರಮವಾಗಿ 'ಹಾಲು ಕೊಡುವ ಪಶು' 'ಕರು' 'ಸೇಚನಸಮರ್ಥವಾದ ಪಶು' ಎಂದು ಅರ್ಥ. ಹೀಗಿರುವುದರಿಂದ ಪಶುವಿಕೃತಿಯಾಗದಲ್ಲಿ ಪ್ರಕೃತಿಯಾಗದಿಂದ ಪ್ರಾಪ್ತವಾಗುವ ಆಡಿಗೆ ಇವು ಗುಣವಾಚಕಗಳು. ಗೋಶಬ್ದವು ಈ ವಿಧಿವಾಕ್ಯದಲ್ಲಿ ಇಲ್ಲದೇ ಇರುವುದರಿಂದ ಇವು ಗೋವಿಗೆ ವಿಶೇಷ ಗುಣವಾಚಕಗಳಲ್ಲ ಎಂಬುದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ **'ಸಿದ್ಧಾಂತ'**ವು ಹೀಗಿದೆ; ಧೇನು ಮುಂತಾದ ಶಬ್ದಗಳು ಗುಣವಾಚಕ ಗಳಾದರೂ ಗೋವಿನಲ್ಲಿರುವ ಗುಣಗಳನ್ನೇ ರೂಢಿಯಿಂದ ಹೇಳುತ್ತವೆ. ಹೀಗಾಗಿ ಅತಿದೇಶ ದಲ್ಲಿ ಮೇಷಜಾತಿಗೆ ಗೋಜಾತಿಯಿಂದ ಬಾಧೆಯುಂಟಾಗುತ್ತದೆ. ಈ ವಿಧಿವಾಕ್ಯದಲ್ಲಿ ಗೋವು ಎಂಬುದು ಉಕ್ತವಾಗದಿದ್ದರೂ, ಅತಿದೇಶದಿಂದ ಪ್ರಾಪ್ತವಾಗದಿದ್ದರೂ ರೂಢಿಯೆಂಬ ಮುಖ್ಯವೃತ್ತಿಯಿಂದ ಈ ಶಬ್ದಗಳು ಗೋವಿನ ಗುಣವಾಚಕಗಳೇ ಆಗಿವೆ. ★

## ॥ಪಂಚಮೋಽನುವಾಕಃ॥

ಇಂದ್ರೋ ವಲಸ್ಯ ಬಿಲಮಪೌರ್ಣೋತ್ಸ ಯ ಉತ್ತಮಃ

ಪಶುರಾಸೀತ್ತಂ ಪೃಷ್ಠಂ ಪ್ರತಿ ಸಂಗೃಹ್ಯೋದಕ್ಖಿದತ್ತಗ್ಂ

---

ಇಂದ್ರಃ। ವಲಸ್ಯ। ಬಿಲಮ್। ಅಪೇತಿ। ಔರ್ಣೋತ್। ಸಃ। ಯಃ। ಉತ್ತಮಇತ್ಯುತ್-ತಮಃ।

ಪಶುಃ। ಆಸೀತ್। ತಮ್। ಪೃಷ್ಠಮ್। ಪ್ರತೀತಿ। ಸಂಗೃಹ್ಯೇತಿ ಸಮ್-ಗೃಹ್ಯ। ಉದಿತಿ। ಅಕ್ಖಿದತ್।

---

ನಾಲ್ಕನೆಯ ಅನುವಾಕದಲ್ಲಿ ಈ ಕೆಳಗಿನ ಯಾಗಗಳನ್ನು ಹೇಳಲಾಗಿದೆ ;

**ಬ್ರಹ್ಮವರ್ಚಸಕಾಮೋ ಯಶ್ಚಮೃದೋಷಾದ್ವಿಭೇತಿ ಯಃ ॥**

**ಭ್ರಾತೃವ್ಯವಾನ್ಸಾಪಭೀರುರ್ಭ್ರಷ್ಟರಾಜ್ಯಶ್ಚ ಯೋ ಭವೇತ್ ॥**

**ಅನುವಾಕೇ ಚತುರ್ಥೇಽಸ್ಮಿನ್ನೇತೇಷಾಂ ಪಶವಃ ಸ್ಮೃತಾಃ ॥**

ಈ ಐದನೆಯ ಅನುವಾಕದಲ್ಲಿ ಪಶುಕಾಮಾದಿಗಳಿಗೆ ವಿಹಿತವಾದ ಇಷ್ಟಿಗಳನ್ನು ಹೇಳಲಾಗಿದೆ.

---

### ಐಂದ್ರ ಉನ್ನತ ಪಶುಯಾಗದ ಆಖ್ಯಾನ

| | |
|---|---|
| **ಇಂದ್ರಃ ವಲಸ್ಯ ಬಿಲಮ್ ಅಪೌರ್ಣೋತ್** | ಇಂದ್ರನು ಬಲಾಸುರನು ಮುಚ್ಚಿಟ್ಟಿದ್ದ ಬಿಲದ ಬಾಗಿಲನ್ನು ತೆರೆದನು. |
| **ಸಃ ಯಃ ಉತ್ತಮಃ ಪಶುಃ ಆಸೀತ್** | ಆ ಇಂದ್ರನು [ಆ ಪಶುಗಳಲ್ಲಿ] ಶ್ರೇಷ್ಠವಾದ ಪಶುವು ಯಾವುದಿತ್ತೋ, |
| **ತಮ್ ಪೃಷ್ಠಮ್ ಪ್ರತಿ ಸಂಗೃಹ್ಯ ಉದಕ್ಖಿದತ್** | ಆ ಪಶುವನ್ನು ಬೆನ್ನಿನಲ್ಲಿರುವ ಹಿಣಿಲನ್ನು ಹಿಡಿದು ಮೇಲಕ್ಕೆತ್ತಿದನು. |

---

ಬಲಾಸುರನೆಂಬುವನು ಹಸುಗಳನ್ನು ಕದ್ದು ತಂದು ಗುಹೆಯಲ್ಲಿ ಬಚ್ಚಿಟ್ಟಿದ್ದನು. ಇಂದ್ರನು ಈ ವಿಷಯವನ್ನು ತಿಳಿದು ಗುಹೆಯ ಮುಚ್ಚಿದ ಬಾಗಿಲನ್ನು ತೆಗೆದನು. ಆ ಇಂದ್ರನು–ಗುಹೆಯಿಂದ ಪಶುಗಳಲ್ಲಿ ಶ್ರೇಷ್ಠವಾದ ಒಂದು ಹಸುವಿನ ಬೆನ್ನಿನ ಹಿಣಿಲನ್ನು ಹಿಡಿದು – ಮೇಲಕ್ಕೆ ಎತ್ತಿದನು. ಹಸುಗಳ ಹಿಂಡಿಗೆ ಮುಖ್ಯವಾದ ಆ ಹಸುವನ್ನು ಅನುಸರಿಸಿ ಸಾವಿರಾರು ಪಶುಗಳು ಮೇಲಕ್ಕೆ ಬಂದವು. ಮೊದಲನೇ ಹಿಂಡಿಗೆ ಮುಖ್ಯಸ್ಥನಾಗಿ

# ಸಹಸ್ರಂ ಪಶವೋಽನೂದಾಯನ್ತ್ಸ ಉನ್ನತೋಽಭವದ್ಯಃ ಪಶುಕಾಮಃ ಸ್ಯಾತ್ಸ ಏತಮೈಂದ್ರಮುನ್ನತಮಾಲಭೇತೇಂದ್ರ ಮೇವ ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮೈ ಪಶೂನ್ಪ್ರಯಚ್ಛತಿ

---

ತವ್ । ಸಹಸ್ರಮ್ । ಪಶವಃ । ಅನು । ಉದಿತಿ । ಆಯನ್ನ್ । ಸಃ । ಉನ್ನತಃ । ಅಭವತ್ । ಯಃ । ಪಶುಕಾಮ ಇತಿ ಪಶು–ಕಾಮಃ । ಸ್ಯಾತ್ । ಸಃ । ಏತಮ್ । ಐಂದ್ರಮ್ । ಉನ್ನತ ಮಿತ್ಯುತ್– ನತಮ್ । ಏತಿ । ಲಭೇತ । ಇಂದ್ರಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮೈ । ಪಶೂನ್ । ಪ್ರೇತಿ । ಯಚ್ಛತಿ ।

---

| | |
|---|---|
| ತವ್ ಸಹಸ್ರಮ್ ಪಶವಃ ಅನೂದಾಯನ್ನ್ | ಯೂಥಪತಿಯಾದ ಆ ವೃಷಭವನ್ನು ಅನುಸರಿಸಿ ಸಾವಿರಾರು ಪಶುಗಳು ಮೇಲೆ ಬಂದವು. |
| ಸಃ ಉನ್ನತಃ ಅಭವತ್ | ಆ ಪಶುವು ಮತ್ತಷ್ಟು ಎತ್ತರವಾಯಿತು. |
| ಯಃ ಪಶುಕಾಮಃ ಸ್ಯಾತ್ ಸಃ ಏತಮ್ ಐಂದ್ರಮ್ ಉನ್ನತಮ್ ಆಲಭೇತ | ಯಾವ ಯಜಮಾನನು ಪಶುಗಳನ್ನು ಬಯಸುವವನೋ ಆತನು ಎತ್ತರವಾದ/ಶ್ರೇಷ್ಠವಾದ ಈ ಪಶುವನ್ನು ಇಂದ್ರದೇವನಿಗಾಗಿ ಯಾಗ ಮಾಡಬೇಕು. [ವಿಧಿ] |
| ಇಂದ್ರಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ ಸಃ ಏವ ಅಸ್ಮೈ ಪಶೂನ್ ಪ್ರಯಚ್ಛತಿ | ಆ ಯಜಮಾನನು ಇಂದ್ರದೇವನನ್ನು ಆತನ ಹವಿರ್ಭಾಗವನ್ನಿತ್ತು ಉಪಚರಿಸಿದವನಾಗುತ್ತಾನೆ. ತುಷ್ಟನಾದ ಆ ಇಂದ್ರನೇ ಈ ಯಜಮಾನನಿಗೆ ಪಶುಗಳನ್ನು ಕೊಡುತ್ತಾನೆ. |

---

ಶ್ರೇಷ್ಠನಾಗಿದ್ದ ಆ ವೃಷಭವು ಮತ್ತಷ್ಟು ಎತ್ತರವಾಯಿತು. ಪಶುಗಳು ಬೇಕೆಂದು ಬಯಸುವವನು ಈ ಉನ್ನತಪಶುವನ್ನು ಇಂದ್ರದೇವತೆಗಾಗಿ ಯಾಗ ಮಾಡಬೇಕು.

ಪಶುಮಾನೇವ ಭವತ್ಯುನ್ನತೋ [..ನ್ನತಃ (೧) ಭವತಿ]

ಭವತಿ ಸಾಹಸ್ರೀ ವಾ ಏಷಾ ಲಕ್ಷ್ಮೀ ಯದುನ್ನತೋ

ಲಕ್ಷ್ಮಿಯೈವ ಪಶೂನವರುಂಧೇ ಯದಾ ಸಹಸ್ರಂ

ಪಶೂನ್ಪ್ರಾಪ್ನುಯಾದಥ

---

ಪಶುಮಾನಿತಿ ಪಶು–ಮಾನ್ । ಏವ । ಭವತಿ । ಉನ್ನತ ಇತ್ಯುತ್–ನತಃ । ಭವತಿ । ಸಾಹಸ್ರೀ । ವೈ । ಏಷಾ । ಲಕ್ಷ್ಮೀ । ಯತ್ । ಉನ್ನತ ಇತ್ಯುತ್–ನತಃ । ಲಕ್ಷ್ಮಿಯಾ । ಏವ । ಪಶೂನ್ । ಅವೇತಿ । ರುಂಧೇ । ಯದಾ । ಸಹಸ್ರಮ್ । ಪಶೂನ್ । ಪ್ರಾಪ್ನುಯಾದಿತಿ ಪ್ರ–ಆಪ್ನುಯಾತ್ । ಅಥ ।

---

| | |
|---|---|
| ಪಶುಮಾನ್ ಏವ ಭವತಿ | ಯಜಮಾನನು ಪಶುಸಮೃದ್ಧಿಯುಳ್ಳವನೇ ಆಗುತ್ತಾನೆ. |

**ಪಶುವು ಎತ್ತರವಾಗಿರುವುದರ ಪ್ರಶಂಸೆ**

| | |
|---|---|
| ಉನ್ನತಃ ಭವತಿ<br>ಯತ್ ಉನ್ನತಃ | ಯಾಗ ಮಾಡುವ ಪಶುವು ಉನ್ನತವಾಗಿರಬೇಕು. [ಆಲಂಭನ ಮಾಡುವ ಪಶುವು] ಉನ್ನತವಾಗಿದೆ ಯೆಂಬುದು ಯಾವುದುಂಟೋ |
| ಏಷಾ ಸಾಹಸ್ರೀ ವೈ ಲಕ್ಷ್ಮೀ<br>ಲಕ್ಷ್ಮಿಯಾ ಏವ ಪಶೂನ್<br>ಅವರುಂಧೇ | ಇದು ಸಾವಿರಾರು ಪಶುಗಳಿಗೆ ನಿಮಿತ್ತಭೂತವಾದ ಸಂಪದ್ರೂಪವಾಗಿದೆ. ಇಂತಹ ಲಕ್ಷ್ಮಿಯಿಂದ ಕೂಡಿದ ಯಜಮಾನನು ಪಶುಸಂಪತ್ತನ್ನು ಪಡೆಯುತ್ತಾನೆ. |

**ಉನ್ನತಪಶುಯಾಗಾನಂತರ ವಾಮನಯಾಗವಿಧಿ; ಪ್ರಶಂಸೆ**

| | |
|---|---|
| ಯದಾ ಸಹಸ್ರಮ್ ಪಶೂನ್<br>ಪ್ರಾಪ್ನುಯಾತ್ ಅಥ | ಯಾವಾಗ ಯಜಮಾನನು ಸಹಸ್ರ ಪಶುಗಳನ್ನು ಹೊಂದುತ್ತಾನೆಯೋ ಆಗ . |

ವೈಷ್ಣವಂ ವಾಮನಮಾಲಭೇತೈತಸ್ಮಿನ್ವೈ ತತ್ಸಹಸ್ರಮಧ್ಯ

ತಿಷ್ಠತ್ತಸ್ಮಾದೇಷ ವಾಮನಸ್ಸಮೀಷಿತಃ ಪಶುಭ್ಯ ಏವ

ಪ್ರಜಾತೇಭ್ಯಃ ಪ್ರತಿಷ್ಠಾಂ ದಧಾತಿ

---

ವೈಷ್ಣವಮ್ । ವಾಮನವಮ್ । ಏತಿ । ಲಭೇತ । ಏತಸ್ಮಿನ್ನ್ । ವೈ । ತತ್ । ಸಹಸ್ರಮ್ । ಅಧೀತಿ । ಅತಿಷ್ಠತ್ । ತಸ್ಮಾತ್ । ಏಷಃ । ವಾಮನಃ । ಸಮೀಷಿತ ಇತಿ ಸಮ್–ಈಷಿತಃ । ಪಶುಭ್ಯ ಇತಿ ಪಶು–ಭ್ಯಃ । ಏವ । ಪ್ರಜಾತೇಭ್ಯ ಇತಿ ಪ್ರ–ಜಾತೇಭ್ಯಃ । ಪ್ರತಿಷ್ಠಾಮಿತಿ ಪ್ರತಿ–ಸ್ಥಾಮ್ । ದಧಾತಿ ।

---

| | |
|---|---|
| ವೈಷ್ಣವಮ್ ವಾಮನವಮ್ ಆಲಭೇತ | ವಿಷ್ಣುದೇವತಾಕವಾಗಿ ಕುಬ್ಜವಾದ ಪಶುವನ್ನು ಯಾಗ ಮಾಡಬೇಕು. [ವಿಧಿ] |
| ಏತಸ್ಮಿನ್ ವೈ ತತ್ ಸಹಸ್ರಮ್ ಅಧ್ಯತಿಷ್ಠತ್ | ಈ ವಾಮನಪಶುವಿನಲ್ಲಿ ಆ ಸಹಸ್ರ ಪಶುಗಳೂ ಕ್ರೀಡಾರ್ಥವಾಗಿ ಆರೋಹಣಾದಿಗಳನ್ನು ಮಾಡುತ್ತವೆ. |
| ತಸ್ಮಾತ್ ಏಷಃ ವಾಮನಃ ಸಮೀಷಿತಃ | ಆದುದರಿಂದ [ಸರ್ವಪಶುಪ್ರಿಯವಾದ್ದುದರಿಂದ] ವಾಮನಪಶುವು ವಿಷ್ಣುವಿಗೆ ಪ್ರಿಯವಾಗಿದೆ. |
| ಪ್ರಜಾತೇಭ್ಯಃ ಪಶುಭ್ಯಃ ಏವ ಪ್ರತಿಷ್ಠಾಮ್ ದಧಾತಿ | ಹುಟ್ಟಿದ ಪಶುಗಳಿಗೆ ವಾಸಸ್ಥಾನವನ್ನು ಕಲ್ಪಿಸಿಕೊಡುತ್ತದೆ. |

---

ಇಂದ್ರನು ಯಾಗದಲ್ಲಿ ತನ್ನ ಪಾಲನ್ನು ಹೊಂದಿ ಪೂಜಿತನಾಗುತ್ತಾನೆ. ಆತನು ತೃಪ್ತನಾಗಿ ಈ ಯಜಮಾನನಿಗೆ ಪಶುಗಳನ್ನು ಕೊಡುತ್ತಾನೆ. ಯಜಮಾನನು ಪಶುಗಳನ್ನು ಹೊಂದುತ್ತಾನೆ.

ಯಾಗ ಮಾಡುವ ಪಶುವು ಉನ್ನತವಾಗಿರಬೇಕು. ಅದರ ಉನ್ನತತೆಯು ಸಹಸ್ರ ಪಶುಗಳಿಗೆ ನಿಮಿತ್ತವಾದ ಸಂಪದ್ರೂಪವಾಗಿದೆ. ಇಂತಹ ಲಕ್ಷ್ಮಿಯಿಂದ ಕೂಡಿದ ಯಜಮಾನನು ಪಶುಸಂಪತ್ತನ್ನು ಪಡೆಯುತ್ತಾನೆ.

ಕೋಽರ್‌ಹತಿ ಸಹಸ್ರಂ ಪಶೂನ್ಪ್ರಾಪ್ತುಮಿತ್ಯಾಹುರ-

ಹೋರಾತ್ರಾಣ್ಯೇವ ಸಹಸ್ರಗ್ಂ ಸಂಪಾದ್ಯಾಽಽಲಭೇತ

ಪಶವೋ [ಪಶವಃ (೨) ವಾ] ವಾ ಅಹೋರಾತ್ರಾಣಿ

ಪಶೂನೇವ ಪ್ರಜಾತಾನ್ಪ್ರತಿಷ್ಠಾಂ

---

ಕಃ । ಅರ್‌ಹತಿ । ಸಹಸ್ರಮ್ । ಪಶೂನ್ । ಪ್ರಾಪ್ತುಮಿತಿ ಪ್ರ-ಆಪ್ತುಮ್ । ಇತಿ । ಆಹುಃ । ಅಹೋರಾತ್ರಾಣೀತ್ಯಹಃ - ರಾತ್ರಾಣಿ । ಏವ । ಸಹಸ್ರಮ್ । ಸಂಪಾದ್ಯೇತಿ ಸಮ್-ಪಾದ್ಯ । ಏತಿ । ಲಭೇತ । ಪಶವಃ । ವೈ । ಅಹೋರಾತ್ರಾಣೀತ್ಯಹಃ - ರಾತ್ರಾಣಿ । ಪಶೂನ್ । ಏವ । ಪ್ರಜಾತಾನಿತಿ ಪ್ರ-ಜಾತಾನ್ । ಪ್ರತಿಷ್ಠಾಮಿತಿ ಪ್ರತಿ-ಸ್ಥಾಮ್ ।

---

| | |
|---|---|
| ಕಃ ಸಹಸ್ರಮ್ ಪಶೂನ್ ಪ್ರಾಪ್ತುಮ್ ಅರ್‌ಹತಿ ಇತಿ ಆಹುಃ | ಆದರೆ 'ಯಾವನು ತಾನೇ ಸಾವಿರ ಪಶುಗಳನ್ನು ಹೊಂದಲು ಸಮರ್ಥನಾದಾನು?' ಎಂದು ಬ್ರಹ್ಮವಾದಿಗಳು ಹೇಳುತ್ತಾರೆ. |
| ಸಹಸ್ರಮ್ ಅಹೋರಾತ್ರಾಣಿ ಸಂಪಾದ್ಯ ಏವ ಆಲಭೇತ | ಆದುದರಿಂದ ಸಾವಿರ ಹಗಲು-ರಾತ್ರಿಗಳನ್ನು ಕಳೆದ ಮೇಲೆ ಈ ವಾಮನಪಶುವನ್ನು ಯಾಗ ಮಾಡಬೇಕು. |
| ಪಶವಃ ವೈ ಅಹೋರಾತ್ರಾಣಿ | ಪಶುಗಳು ಅಹೋರಾತ್ರರೂಪವಾಗಿವೆ. |
| ಪಶೂನ್ ಏವ ಪ್ರಜಾತಾನ್ ಪ್ರತಿಷ್ಠಾಮ್ | ಇರುವ ಪಶುಗಳು ತೃಣೋದಕಾದಿಸಮೃದ್ಧಿಯಿಂದ ಚೆನ್ನಾಗಿ ಬಾಳುವಂತೆ |

ಗಮಯತ್ಯೋಷಧೀಭ್ಯೋ ವೇಹತಮಾಲಭೇತ ಪ್ರಜಾ
ಕಾಮ ಓಷಧಯೋ ವಾ ಏತಂ ಪ್ರಜಾಯ್ಯೈ ಪರಿಬಾಧಂತೇ
ಯೋಽಲಂ ಪ್ರಜಾಯ್ಯೈ ಸನ್ಪ್ರಜಾಂ ನ ವಿಂದತ

---

ಗಮಯತಿ । ಓಷಧೀಭ್ಯ ಇತ್ಯೋಷಧಿ-ಭ್ಯಃ । ವೇಹತಮ್ । ಏತಿ । ಲಭೇತ । ಪ್ರಜಾಕಾಮ ಇತಿ ಪ್ರಜಾ-ಕಾಮಃ । ಓಷಧಯಃ । ವೈ । ಏತಮ್ । ಪ್ರಜಾಯಾ ಇತಿ ಪ್ರ-ಜಾಯ್ಯೈ । ಪರೀತಿ । ಬಾಧಂತೇ । ಯಃ । ಅಲಮ್ । ಪ್ರಜಾಯಾ ಇತಿ ಪ್ರ-ಜಾಯ್ಯೈ । ಸನ್ । ಪ್ರಜಾಮಿತಿ ಪ್ರ-ಜಾಮ್ । ನ । ವಿಂದತೇ ।

---

| | |
|---|---|
| ಗಮಯತಿ | ಮಾಡುತ್ತಾನೆ. |

**ಪ್ರಜಾಕಾಮನಿಗೆ ವೇಹತಯಾಗವಿಧಿ; ಅದರ ಪ್ರಶಂಸೆ**

| | |
|---|---|
| ಪ್ರಜಾಕಾಮಃ | ಮಕ್ಕಳನ್ನು ಬಯಸುವವನು |
| ಓಷಧೀಭ್ಯಃ ವೇಹತಮ್ ಆಲಭೇತ | ಓಷಧಿದೇವತೆಗಳಿಗಾಗಿ ಗರ್ಭಘಾತಿನಿಯಾದ [ಕಂದುಕರುವನ್ನು ಹಾಕಿದ] ಪಶುವನ್ನು ಯಾಗ ಮಾಡಬೇಕು. |
| ಯಃ ಪ್ರಜಾಯ್ಯೈ ಅಲಮ್ ಸನ್ ಪ್ರಜಾಮ್ ನ ವಿಂದತೇ | ಯಾವನು ಪ್ರಜೆಯನ್ನು ಹೊಂದಲು ಸಮರ್ಥನಾಗಿದ್ದರೂ ಪ್ರಜೆಯನ್ನು ಹೊಂದುವುದಿಲ್ಲವೋ |

---

ಉನ್ನತಯಾಗಕ್ಕೆ ಸಂಬಂಧಿಸಿದಂತೆ ವಾಮನಯಾಗದ ವಿಧಿಯನ್ನು ಹೇಳಲಾಗಿದೆ. ಸಹಸ್ರ ಪಶುಗಳನ್ನು ಯಾವಾಗ ಹೊಂದುತ್ತಾನೆಯೋ, ಆಗ ವೈಷ್ಣವವಾದ ವಾಮನಪಶುಯಾಗವನ್ನು ಮಾಡಬೇಕು. ವಾಮನಪಶುವು ಉಳಿದ ಪಶುಗಳಿಗೆ ಆರೋಹಣಾದಿ ಕ್ರೀಡಾಸ್ಥಾನವಾಗಿ ಪ್ರಿಯವಾಗಿದೆ. ಇದು ವಿಷ್ಣುವಿಗೂ ಪ್ರಿಯವಾಗಿದೆ. ಈ ವಾಮನಪಶುಯಾಗದಿಂದ ಮೊದಲು ಹುಟ್ಟಿರುವ ಪಶುಗಳಿಗೆ ತೃಣಜಲಾದಿಸಮೃದ್ಧಿಯುಕ್ತವಾದ ವಾಸಸ್ಥಾನವು/ಶ್ರೇಷ್ಠಸ್ಥಿತಿಯು ಲಭಿಸುತ್ತದೆ.

ಓಷಧಯಃ ಖಲು ವಾ ಏತಸ್ಯೈ ಸೂತುಮಪಿ ಘ್ನಂತಿ

ಯಾ ವೇಹದ್ಭವತ್ಯೋಷಧೀರೇವ ಸ್ವೇನ

ಭಾಗಧೇಯೇನೋಪಧಾವತಿ

---

ಓಷಧಯಃ । ಖಲು । ವೈ । ಏತಸ್ಯೈ । ಸೂತುಮ್ । ಅಪೀತಿ । ಘ್ನಂತಿ । ಯಾ । ವೇಹತ್ । ಭವತಿ । ಓಷಧೀಃ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಯಾ ವೇಹತ್ ಭವತಿ ಓಷಧಯಃ ಖಲು ವೈ ಏತಸ್ಯೈ ಸೂತುಮ್ ಅಪಿಘ್ನಂತಿ | ಯಾವುದು ಗರ್ಭಘಾತಿನಿಯಾದ ಹಸುವೋ ಅದಕ್ಕೆ ಓಷಧಿಗಳೇ ಗರ್ಭಘಾತವನ್ನುಂಟು ಮಾಡುತ್ತವೆ. |
| ಓಷಧೀಃ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದಿಂದ ಯಜಮಾನನು ಓಷಧಿ ದೇವತೆಗಳನ್ನೇ ಸೇವಿಸುತ್ತಾನೆ. |

---

ಈ ವಾಮನಯಾಗಕ್ಕೆ ಮತ್ತೊಂದು ಕಾಲವನ್ನು ಹೇಳಿರುತ್ತಾರೆ. ಅದಕ್ಕೆ ಸಂಬಂಧಿಸಿದಂತೆ ಬ್ರಹ್ಮವಾದಿಗಳು 'ರೋಗ–ಚೋರ–ವ್ಯಾಘ್ರಾದಿ ಪ್ರತಿಬಂಧಕಗಳು ಇರುವುದರಿಂದ ಯಾವನು ತಾನೇ ಸಹಸ್ರ ಪಶುಗಳನ್ನು ಹೊಂದಬಲ್ಲನು? ಅಷ್ಟು ಪಶುಗಳ ಪ್ರಾಪ್ತಿಯು ದುರ್ಲಭಪ್ರಾಯವೇ ಸರಿ' ಎನ್ನುತ್ತಾರೆ. ಆದುದರಿಂದ ಉನ್ನತ ಯಾಗವನ್ನು ಅನುಷ್ಠಾನ ಮಾಡಿದ ನಂತರ ಸಾವಿರ ಹಗಲು–ರಾತ್ರಿಗಳನ್ನು ಕಳೆದ ಮೇಲೆ ಈ ವಾಮನ ಯಾಗವನ್ನು ಮಾಡಬೇಕು. ಹಗಲು–ರಾತ್ರಿಗಳಲ್ಲಿ ಪಶುಗಳು ಹಾಲು ಮೊದಲಾದವುಗಳನ್ನು ಕೊಡುವುದರಿಂದ ಪಶುಗಳು ಅಹೋರಾತ್ರರೂಪವಾಗಿವೆ. ಹೀಗೆ ವಾಮನಯಾಗದಿಂದ ಸಂತುಷ್ಟನಾದ ವಿಷ್ಣುವು ಹುಟ್ಟಿದ ಪಶುಗಳು ತೃಣಜಲಾದಿಸಮೃದ್ಧಿಯನ್ನು ಪಡೆದು ಯಜಮಾನನಲ್ಲಿ ಸ್ಥಿರವಾಗಿರುವಂತೆ ಮಾಡುತ್ತಾನೆ.

ತಾ ಏವಾಸ್ಮೈ ಸ್ವಾದ್ಯೋನೇಃ ಪ್ರಜಾಂ ಪ್ರಜನಯಂತಿ

ವಿಂದತೇ [೩] ಪ್ರಜಾಮಾಪೋ ವಾ

ಓಷಧಯೋऽಸತ್ಪುರುಷ ಆಪ ಏವಾಸ್ಮಾ ಅಸತಸ್ಸದ್ದದತಿ

---

ತಾಃ । ಏವ । ಅಸ್ಮೈ । ಸ್ವಾತ್ । ಯೋನೇಃ । ಪ್ರಜಾಮಿತಿ ಪ್ರ–ಜಾವಮ್ । ಪ್ರೇತಿ । ಜನಯಂತಿ । ವಿಂದತೇ । ಪ್ರಜಾಮಿತಿ ಪ್ರ–ಜಾಮ್ । ಆಪಃ । ವೈ । ಓಷಧಯಃ । ಅಸತ್ । ಪುರುಷಃ । ಆಪಃ । ಏವ । ಅಸ್ಮೈ । ಅಸತಃ । ಸತ್ । ದದತಿ ।

---

| | |
|---|---|
| ತಾಃ ಏವ ಅಸ್ಮೈ ಸ್ವಾತ್ ಯೋನೇಃ ಪ್ರಜಾವಮ್ ಪ್ರಜನಯಂತಿ | ಆ ಓಷಧಿದೇವತೆಗಳೇ ಯಜಮಾನನ ಸ್ವವೀರ್ಯದಿಂದಲೇ ಪ್ರಜೆಯುಂಟಾಗುವಂತೆ ಮಾಡುತ್ತಾರೆ. |
| ವಿಂದತೇ ಪ್ರಜಾವಮ್ | ಯಜಮಾನನು ಸಂತತಿಯನ್ನು ಪಡೆಯುತ್ತಾನೆ. |

### ಮತ್ತೊಂದು ರೀತಿಯಲ್ಲಿ ಯಾಗದ ಪ್ರಶಂಸೆ

| | |
|---|---|
| ಆಪಃ ವೈ ಓಷಧಯಃ | ನೀರುಗಳು ಸಸ್ಯಪೋಷಣೆಗೆ ಕಾರಣವಾಗಿರುವುದರಿಂದ ಓಷಧಿಗಳೇ ಆಗಿವೆ. |
| ಅಸತ್ ಪುರುಷಃ | [ರೇತೋರೂಪದಲ್ಲಿರುವ] ಪುರುಷನು ಅವ್ಯಕ್ತನಾಗಿರುತ್ತಾನೆ. |
| ಆಪಃ ಏವ ಅಸ್ಮೈ ಅಸತಃ ಸತ್ ದದತಿ | ಜಲದೇವತೆಗಳೇ ಓಷಧಿಯ ಮೂಲಕವಾಗಿ ಈ ಯಜಮಾನನಿಗೆ ಅವ್ಯಕ್ತರೂಪವಾದ ರೇತಸ್ಸಿನಿಂದ ವ್ಯಕ್ತರೂಪವಾದ ಪ್ರಜೆಯನ್ನು ಕೊಡುತ್ತಾರೆ. |

ತಸ್ಮಾದಾಹುರ್ಯಶ್ಚೈವಂ ವೇದ ಯಶ್ಚ ನಾಽಽಪಸ್ತ್ವಾವಾಸತಃ

ಸದ್ದದತೀತ್ಯೈಂದ್ರೀಗ್ಂ ಸೂತವಶಾಮಾಲಭೇತ ಭೂತಿ

ಕಾಮೋಽಜಾತೋ ವಾ ಏಷ ಯೋಽಲಂ ಭೂತ್ಯೈ ಸನ್ಭೂತಿಂ

---

ತಸ್ಮಾತ್ । ಆಹುಃ । ಯಃ । ಚ । ಏವಮ್ । ವೇದ । ಯಃ । ಚ । ನ । ಆಪಃ । ತು । ವಾವ । ಅಸತಃ । ಸತ್ । ದದತಿ । ಇತಿ । **ಐಂದ್ರೀಮ್** । ಸೂತವಶಾಮಿತಿ ಸೂತ–ವಶಾಮ್ । ಏತಿ । ಲಭೇತ । ಭೂತಿಕಾಮ ಇತಿ ಭೂತಿ–ಕಾಮಃ । ಅಜಾತಃ । ವೈ । ಏಷಃ । ಯಃ । ಅಲಮ್ । ಭೂತ್ಯೈ । ಸನ್ । ಭೂತಿಮ್ ।

---

| | |
|---|---|
| **ತಸ್ಮಾತ್ ಆಹುಃ** | ಆದುದರಿಂದ ಅಭಿಜ್ಞರು ಆ ರೀತಿ ಹೇಳುತ್ತಾರೆ. |
| **ಆಪಃ ತು ವಾವ ಅಸತಃ ಸತ್ ದದತಿ ಇತಿ** | 'ಜಲದೇವತೆಗಳು ಅವ್ಯಕ್ತರೂಪವಾದ ರೇತಸ್ಸಿನಿಂದ [ಓಷಧಿಮೂಲಕವಾಗಿ] ವ್ಯಕ್ತರೂಪನಾದ ಪುತ್ರನನ್ನು ಕೊಡುತ್ತಾರೆ' ಎಂದು |
| **ಯಃ ಚ ಏವಮ್ ವೇದ** | ಯಾರು ಈ ರೀತಿಯಾಗಿ ತಿಳಿದಿರುತ್ತಾರೆಯೋ |
| **ಯಃ ಚ ಏವಮ್ ನ ವೇದ** | ಯಾರು ಈ ರೀತಿ ತಿಳಿದಿರುವುದಿಲ್ಲವೋ [ಅವರ ಯಾಗವೂ ಪ್ರಶಸ್ತವೇ] |

---

ಪುತ್ರನನ್ನು ಅಪೇಕ್ಷಿಸುವವನು ಓಷಧಿದೇವತೆಗಳಿಗಾಗಿ ಕಂದುಕರುವನ್ನು ಹಾಕುವ ಗರ್ಭಘಾತಿನಿಯಾದ ಹಸುವನ್ನು ಯಾಗ ಮಾಡಬೇಕು. ಯಾವನು ಪ್ರಜೆಯನ್ನು ಹೊಂದಲು ಸಮರ್ಥನಾಗಿದ್ದರೂ ಮಗನನ್ನು ಪಡೆಯಲಿಲ್ಲವೋ ಅವನಿಗೆ ಪ್ರಜೆಯಾಗದಂತೆ ಓಷಧಿದೇವತೆಗಳು ಅಡ್ಡಿಯುಂಟು ಮಾಡುವುದೇ ಕಾರಣ. ಯಾವ ಹಸುವು ಗರ್ಭಘಾತಿನಿಯೋ ಅದರ ಗರ್ಭವನ್ನು ಓಷಧಿದೇವತೆಗಳೇ ನಾಶಪಡಿಸುತ್ತಾರೆ. ಆದುದರಿಂದ ಈ ವೇಹತಪಶುವು ಓಷಧಿದೇವತೆಗಳಿಗೆ ಪ್ರಿಯವಾಗಿದೆ. ಯಜಮಾನನು ಈ ಗರ್ಭಘಾತಿನಿಯಾದ ಪಶುವನ್ನು ಓಷಧಿದೇವತೆಗಳಿಗೆ ಯಾಗ ಮಾಡುವುದರಿಂದ ಓಷಧಿದೇವತೆಗಳಿಗೆ ತಕ್ಕ ಭಾಗವನ್ನು ಕೊಟ್ಟು ಆರಾಧಿಸಿದವನಾಗುತ್ತಾನೆ. ಆ ಓಷಧಿದೇವತೆಗಳು ಯಜಮಾನನಿಗೆ ಸ್ವವೀರ್ಯದಿಂದಲೇ ಔರಸಪುತ್ರನನ್ನು ಉಂಟುಮಾಡುತ್ತಾರೆ. ಯಜಮಾನನು ಪ್ರಜಾವಂತನಾಗುತ್ತಾನೆ.

ನ ಪ್ರಾಪ್ನೋತೀಂದ್ರಂ ಖಲು ವಾ ಏಷಾ ಸೂತ್ವಾ

ವಶಾऽಭವ [....ಭವತ್ (೪) ಇಂದ್ರಮೇವ]ದಿಂದ್ರ–

ಮೇವ ಸ್ವೇನ ಭಾಗಧೇಯೇನೋಪಧಾವತಿ ಸ

ಏವೈನಂ ಭೂತಿಂ ಗಮಯತಿ ಭವತ್ಯೇವ

---

ನ । ಪ್ರಾಪ್ನೋತೀತಿ ಪ್ರ–ಆಪ್ನೋತಿ । ಇಂದ್ರಮ್ । ಖಲು । ವೈ । ಏಷಾ । ಸೂತ್ವಾ । ವಶಾ । ಅಭವತ್ । ಇಂದ್ರಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಏನಮ್ । ಭೂತಿಮ್ । ಗಮಯತಿ । ಭವತಿ । ಏವ ।

---

**ಐಶ್ವರ್ಯಕಾಮನಿಗೆ ವಿಹಿತವಾದ ಐಂದ್ರಯಾಗ; ಪ್ರಶಂಸೆ**

| | |
|---|---|
| ಭೂತಿಕಾಮಃ ಸೂತವಶಾಮ್ ಐಂದ್ರೀಮ್ ಆಲಭೇತ | ಐಶ್ವರ್ಯವನ್ನು ಬಯಸುವವನು ಇಂದ್ರದೇವತೆಗಾಗಿ ಒಂದು ಕರುವನ್ನು ಹಾಕಿ ಬಳಿಕ ಬಂಜೆಯಾಗಿರುವ ಹಸುವನ್ನು ಯಾಗ ಮಾಡಬೇಕು. |
| ಯಃ ಭೂತ್ಯೈ ಅಲಮ್ ಸನ್ ಭೂತಿಮ್ ನ ಪ್ರಾಪ್ನೋತಿ | ಯಾವನು ಐಶ್ವರ್ಯವನ್ನು ಹೊಂದಲು ಸಮರ್ಥನಾದರೂ ಐಶ್ವರ್ಯವನ್ನು ಹೊಂದಿರುವುದಿಲ್ಲವೋ |
| ಏಷಃ ಅಜಾತಃ ವೈ ಏಷಾ ಖಲು ವೈ ಇಂದ್ರಮ್ ಸೂತ್ವಾ ವಶಾ ಅಭವತ್ | ಈತನು ಹುಟ್ಟಿದ್ದರೂ ಹುಟ್ಟದಂತೆಯೇ. ಈ ಸೂತವಶಾ ಧೇನುವಾದರೋ ಇಂದ್ರಸಮಾನವಾದ ಕರುವನ್ನು ಹಾಕಿ ಬಂಜೆಯಾಗಿದೆ. |
| ಇಂದ್ರಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಇಂದ್ರನಿಗೆ ಬೇಕಾದ ಹವಿರ್ಭಾಗದಿಂದ ಯಜಮಾನನು ಇಂದ್ರನನ್ನು ಸೇವಿಸಿದವನಾಗುತ್ತಾನೆ. |
| ಸಃ ಏವ ಏನಮ್ ಭೂತಿಮ್ ಗಮಯತಿ | ಆ ತೃಪ್ತನಾದ ಇಂದ್ರನೇ ಈ ಯಜಮಾನನು ಐಶ್ವರ್ಯವನ್ನು ಹೊಂದುವಂತೆ ಮಾಡುತ್ತಾನೆ. |
| ಭವತಿ ಏವ | ಯಜಮಾನನು ಐಶ್ವರ್ಯವಂತನೇ ಆಗುತ್ತಾನೆ. |

ಯಗ್ಂ ಸೂತ್ವಾ ವಶಾ ಸ್ಯಾತ್ತಮೈಂದ್ರಮೇವಾಽಽಲಭೇತೈ

ತದ್ವಾವ ತದಿಂದ್ರಿಯಗ್ಂ ಸಾಕ್ಷಾದೇವೇಂದ್ರಿಯಮವರುಂಧ

ಐಂದ್ರಾಗ್ನಂ ಪುನರುತ್ಸೃಷ್ಟಮಾಲಭೇತ ಯ ಆ ತೃತೀಯಾ–

---

ಯಮ್ । ಸೂತ್ವಾ । ವಶಾ । ಸ್ಯಾತ್ । ತಮ್ । ಐಂದ್ರಮ್ । ಏವ । ಏತಿ । ಲಭೇತ ।

ಏತತ್ । ವಾವ । ತತ್ । ಇಂದ್ರಿಯಮ್ । ಸಾಕ್ಷಾದಿತಿ ಸ–ಅಕ್ಷಾತ್ । ಏವ । ಇಂದ್ರಿಯಮ್ ।

ಅವೇತಿ । ರುಂಧೇ । ಐಂದ್ರಾಗ್ನಮಿತ್ಯೈಂದ್ರ–ಅಗ್ನಮ್ । ಪುನರುತ್ಸೃಷ್ಟಮಿತಿ ಪುನಃ–

ಉತ್ಸೃಷ್ಟಮ್ । ಏತಿ । ಲಭೇತ । ಯಃ । ಏತಿ । ತೃತೀಯಾತ್ ।

---

**ಮೇಲಿನ ಯಾಗಕ್ಕೆ ಸಂಬಂಧಿಸಿದ ಇನ್ನೊಂದು ಯಾಗವಿಧಿ ; ಪ್ರಶಂಸೆ**

| | |
|---|---|
| ಯಮ್ ಸೂತ್ವಾ ವಶಾ ಸ್ಯಾತ್ ತಮ್ ಐಂದ್ರಮ್ ಏವ ಆಲಭೇತ | ಹಸುವು ಯಾವ ಕರುವನ್ನು ಹಾಕಿ ಬಂಜೆ ಯಾಯಿತೋ ಈ ಕರುವನ್ನೇ ಇಂದ್ರ ದೇವತೆಗಾಗಿ ಯಾಗ ಮಾಡಬೇಕು. |
| ಏತತ್ ವಾವ ತತ್ ಇಂದ್ರಿಯಮ್ ಸಾಕ್ಷಾತ್ ಏವ ಇಂದ್ರಿಯಮ್ ಅವರುಂಧೇ | ಈ ಕರುವೇ ಮುಖ್ಯವಾದ ಸಾಮರ್ಥ್ಯದ ಫಲವಾಗಿದೆ. ಯಜಮಾನನು ಸಾಕ್ಷಾತ್ತಾಗಿ ಇಂದ್ರಿಯಶಕ್ತಿಯನ್ನು ಪಡೆಯುತ್ತಾನೆ. |

**ಮೂರು ತಲೆಮಾರಿನಿಂದ ವಿಚ್ಛಿನ್ನವಾದ ಸೋಮಪಾನವುಳ್ಳವನಿಗೆ ವಿಹಿತವಾದ ಐಂದ್ರಾಗ್ನಪಶುಯಾಗದ ವಿಧಿ; ಪ್ರಶಂಸೆ**

| | |
|---|---|
| ಯಃ ಆ ತೃತೀಯಾತ್ | ಯಾವನು ಪಿತೃ–ಪಿತಾಮಹ–ಪ್ರಪಿತಾಮಹ ಹೀಗೆ ಮೂರು |

---

**'ಓಷಧೀಭ್ಯೋಽನ್ನಮ್' 'ಅನ್ನಾತ್ಪುರುಷಃ'** ಎಂಬ ಶ್ರುತಿವಚನಗಳಿವೆ. ಈ ವಿಷಯದಲ್ಲಿ ಬಲ್ಲವರು ಹೀಗೆ ಹೇಳುತ್ತಾರೆ. ಓಷಧಿಗೆ ಕಾರಣವಾದ ನೀರೂ ಸಹ ಓಷಧಿಯೇ ಆಗಿದೆ. ಇದೇ ಓಷಧಿಮೂಲಕವಾಗಿ ರೇತೋರೂಪದಲ್ಲಿ ಅಸತ್ತಾಗಿರುವ ವಸ್ತುವಿನಿಂದ ವ್ಯಕ್ತರೂಪನಾದ ಪುತ್ರನನ್ನು ಕೊಡುತ್ತದೆ. ಯಾವನು ಇದನ್ನು ತಿಳಿದಿರುತ್ತಾನೆಯೋ, ಯಾವನು ನೀರು ಸಸ್ಯಗಳಿಗೆ ಕಾರಣವೆಂದು ಮಾತ್ರ ತಿಳಿದಿರುತ್ತಾನೆಯೋ ಅವನು ಮಾಡುವ ಯಾಗವೂ ಫಲಪ್ರದವೇ ಆಗುತ್ತದೆ.

ತ್ಪುರುಷಾತ್ಸೋಮಂ ನ ಪಿಬೇದ್ವಿಚ್ಛಿನ್ನೋ ವಾ ಏತಸ್ಯ

ಸೋಮಪೀಥೋ ಯೋ ಬ್ರಾಹ್ಮಣಸ್ಸನ್ನಾ [೫]

ತೃತೀಯಾತ್ಪುರುಷಾತ್ಸೋಮಂ ನ ಪಿಬತೀಂದ್ರಾಗ್ನೀ ಏವ

---

ಪುರುಷಾತ್ । ಸೋಮಮ್ । ನ । ಪಿಬೇತ್ । ವಿಚ್ಛಿನ್ನ ಇತಿ ವಿ–ಛಿನ್ನಃ । ವೈ । ಏತಸ್ಯ ।

ಸೋಮಪೀಥ ಇತಿ ಸೋಮ–ಪೀಥಃ । ಯಃ । ಬ್ರಾಹ್ಮಣಃ । ಸನ್ । ಆ । ತೃತೀಯಾತ್ ।

ಪುರುಷಾತ್ । ಸೋಮಮ್ । ನ । ಪಿಬತಿ । ಇಂದ್ರಾಗ್ನೀ ಇತೀಂದ್ರ–ಅಗ್ನೀ । ಏವ ।

---

| | |
|---|---|
| ಪುರುಷಾತ್ ಸೋಮಮ್ ನ ಪಿಬೇತ್ | ತಲೆಗಳಿಂದಲೂ ಸೋಮಪಾನವನ್ನು ಮಾಡಿಲ್ಲವೋ, ಆತನು |
| ಐಂದ್ರಾಗ್ನಮ್ ಪುನರುತ್ಸೃಷ್ಟಮ್ ಆಲಭೇತ | ಇಂದ್ರಾಗ್ನಿದೇವತೆಗಳಿಗಾಗಿ ಪುನರುತ್ಸೃಷ್ಟ* ಪಶುವನ್ನು ಯಾಗ ಮಾಡಬೇಕು. |
| ಯಃ ಬ್ರಾಹ್ಮಣಃ ಸನ್ ಆ ತೃತೀಯಾತ್ ಸೋಮಮ್ ನ ಪಿಬತಿ | ಯಾವನು ಬ್ರಾಹ್ಮಣನಾಗಿ ಮೂರನೆಯ ತಲೆಯವರೆಗೂ ಸೋಮಪಾನ ಮಾಡಿಲ್ಲವೋ |
| ಏತಸ್ಯ ಸೋಮಪೀಥಃ ವಿಚ್ಛಿನ್ನಃ ವೈ | ಈತನ ಸೋಮಪಾನವು ವಿಚ್ಛಿನ್ನವಾಯಿತಷ್ಟೆ. |
| ಇಂದ್ರಾಗ್ನೀ ಏವ | [ಈ ಯಾಗ ಮಾಡಿದ ಯಜಮಾನನು] ಇಂದ್ರ–ಅಗ್ನಿ ದೇವತೆಗಳಿಗೆ |

---

ಐಶ್ವರ್ಯವನ್ನು ಪಡೆಯಲು ತಕ್ಕವನಾಗಿದ್ದರೂ ಧನಹೀನನಾಗಿಯೇ ಇರುವವನು ಇಂದ್ರ ದೇವತೆಗೆ ಸೂತವಶೆಯನ್ನು [ಒಂದು ಕರುವನ್ನು ಹಾಕಿ ಅನಂತರ ಬಂಜೆಯಾದ ಹಸುವನ್ನು] ಯಾಗ ಮಾಡಬೇಕು. ಇಂತಹ ಧನಹೀನನು ಹುಟ್ಟಿದ್ದರೂ ಹುಟ್ಟದಂತೆಯೇ. ಆದುದರಿಂದ ಅವನು ಈ ಐಂದ್ರಯಾಗವನ್ನು ಮಾಡಬೇಕು. ಈ ಯಾಗದಿಂದ ಧನಪ್ರಾಪ್ತಿಯಾಗುತ್ತದೆ. ಈ ಸೂತವಶೆಯು ಮೊದಲು ಇಂದ್ರನಂತಹ ಕರುವನ್ನು ಹಾಕಿ ಅನಂತರ ಬಂಜೆಯಾಗಿದೆ. ಸೂತವಶೆಯ ಕರುವು ಇಂದ್ರನಿಗೆ ಸಮಾನವಾದುದು.

---

* **ಪುನರುತ್ಸೃಷ್ಟ** = (1) ಮುದಿಯಾಗಿ ನೇಗಿಲಿಗೆ ಅಥವಾ ನೊಗಕ್ಕೆ ಕಟ್ಟದೆ ಬಿಟ್ಟಿರುವ ಎತ್ತು.
(2) ಹಸುಗಳ ಗುಂಪಿನಲ್ಲಿ ಮಹರ್ಷಭವಾಗಲು ಬಿಟ್ಟ ವೃಷಭ ಅಥವಾ ಹೋತ (ಭರದ್ವಾಜ ಮತ)

ಸ್ವೇನ ಭಾಗಧೇಯೇನೋಪಧಾವತಿ ತಾವೇವಾಸ್ಮೈ

ಸೋಮಪೀಥಂ ಪ್ರಯಚ್ಛತ ಉಪೈನಗ್ಂ ಸೋಮಪೀಥೋ

ನಮತಿ ಯದೈಂದ್ರೋ ಭವತೀಂದ್ರಿಯಂ ವೈ ಸೋಮಪೀಥ

---

ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ತೌ । ಏವ । ಅಸ್ಮೈ । ಸೋಮಪೀಥಮಿತಿ ಸೋಮ-ಪೀಥಮ್ । ಪ್ರೇತಿ । ಯಚ್ಛತಃ । ಉಪೇತಿ । ಏನಮ್ । ಸೋಮಪೀಥ ಇತಿ ಸೋಮ-ಪೀಥಃ । ನಮತಿ । **ಯತ್** । ಐಂದ್ರಃ । ಭವತಿ । ಇಂದ್ರಿಯಮ್ । ವೈ । ಸೋಮಪೀಥ ಇತಿ ಸೋಮ-ಪೀಥಃ ।

---

| | |
|---|---|
| ಸ್ವೇನ ಭಾಗಧೇಯೇನ ಉಪಧಾವತಿ | ಅವರ ಹವಿರ್ಭಾಗವನ್ನು ಕೊಟ್ಟು ಸೇವಿಸಿದವನಾಗುತ್ತಾನೆ. |
| **ತೌ ಏವ ಅಸ್ಮೈ ಸೋಮಪೀಥಮ್ ಪ್ರಯಚ್ಛತಃ** | ಆ ದೇವತೆಗಳಿಬ್ಬರೂ ಪ್ರೀತರಾಗಿ ಈ ಯಜಮಾನನಿಗೆ ಸೋಮಪಾನವನ್ನು ಕೊಡುತ್ತಾರೆ. |
| **ಸೋಮಪೀಥಃ ಏನಮ್ ಉಪನಮತಿ** | ಇವನಿಗೆ ಸೋಮಪಾನವು ಪ್ರಾಪ್ತವಾಗುತ್ತದೆ. |

**ಯಾಗದ ಇನ್ನೊಂದು ಪ್ರಶಂಸೆ**

| | |
|---|---|
| ಯತ್ ಐಂದ್ರಃ ಭವತಿ | ಯಾಗಪಶುವು ಇಂದ್ರದೇವತಾಕವಾದುದರಿಂದ, |
| ಇಂದ್ರಿಯಮ್ ವೈ ಸೋಮಪೀಥಃ | ಸೋಮಪಾನವು ಇಂದ್ರಿಯವೃದ್ಧಿಗೆ ಕಾರಣವಾಗಿರುವುದರಿಂದ |

---

**'ತಸ್ಯಾ ಇಂದ್ರ ಏವಾಜಾಯತ' 'ತಸ್ಯಾ ಅನುವೃಶ್ಯ ಯೋನಿವಮಾಚ್ಛನತ್ಸಾ ಸೂತವಶಾऽಭವತ್'** ಎಂದು ಶ್ರುತಿಯಲ್ಲಿ ಪಠಿತವಾಗಿದೆ [ತೈ.ಸಂ. 6.1.3].

ಸೂತವಶೆಯು ಇಂದ್ರನಿಗೆ ಪ್ರಿಯವಾದುದು. ಇದರ ಯಾಗದಿಂದ ತನ್ನ ಭಾಗವು ಸಿಕ್ಕುತ್ತದೆ ಎಂದು ತೃಪ್ತನಾದ ಇಂದ್ರನು ಐಶ್ವರ್ಯವನ್ನು ಕೊಡುತ್ತಾನೆ. ಯಜಮಾನನು ಧನವಂತನಾಗುತ್ತಾನೆ.

ಇಂದ್ರಿಯಮೇವ ಸೋಮಪೀಥಮವರುಂಧೇ
ಯದಾಗ್ನೇಯೋ ಭವತ್ಯಾಗ್ನೇಯೋ ವೈ ಬ್ರಾಹ್ಮಣಃ
ಸ್ವಾಮೇವ ದೇವತಾಮನು ಸಂತನೋತಿ

---

ಇಂದ್ರಿಯಮ್ । ಏವ । ಸೋಮಪೀಥಮಿತಿ ಸೋಮ–ಪೀಥಮ್ । ಅವೇತಿ । ರುಂಧೇ ।
ಯತ್ । ಆಗ್ನೇಯಃ । ಭವತಿ । ಆಗ್ನೇಯಃ । ವೈ । ಬ್ರಾಹ್ಮಣಃ । ಸ್ವಾಮ್ । ಏವ ।
ದೇವತಾಮ್ । ಅನು । ಸಮಿತಿ । ತನೋತಿ ।

---

| | |
|---|---|
| ಇಂದ್ರಿಯಮ್ ಏವ ಸೋಮಪೀಥಮ್ ಅವರುಂಧೇ | ಇಂದ್ರಿಯಶಕ್ತಿಯನ್ನು ವೃದ್ಧಿಗೊಳಿಸುವ ಸೋಮಪಾನವನ್ನು ಪಡೆಯುತ್ತಾನೆ. |
| ಯತ್ ಆಗ್ನೇಯಃ ಭವತಿ | ಪಶುವು ಅಗ್ನಿದೇವತಾಕವಾಗಿರುವ ಕಾರಣದಿಂದ, |
| ಆಗ್ನೇಯಃ ವೈ ಬ್ರಾಹ್ಮಣಃ | ಬ್ರಾಹ್ಮಣನು ಅಗ್ನಿಸಂಬಂಧಿಯಾದುದರಿಂದ |
| ಸ್ವಾಮ್ ಏವ ದೇವತಾಮ್ ಅನು ಸಂತನೋತಿ | [ಆ ಯಜಮಾನನು] ತನ್ನ ದೇವತೆಯನ್ನೇ ಅನುಸರಿಸಿ ವೃದ್ಧಿ ಹೊಂದುತ್ತಾನೆ. |

---

ಈ ಯಾಗಕ್ಕೆ ಸಂಬಂಧಿಸಿದಂತೆಯೇ ಇನ್ನೊಂದು ಯಾಗವನ್ನು ಶ್ರುತಿಯು ಹೇಳಿದೆ. ಸೂತವಶೆಯು ಮೊದಲು ಹಾಕಿರುವ ಕರುವನ್ನು ಇಂದ್ರಿಯಕಾಮನು ಇಂದ್ರದೇವತೆಗಾಗಿ ಯಾಗ ಮಾಡಬೇಕು. ಈ ಕರುವು ಇಂದ್ರಿಯರೂಪವಾಗಿದೆ. ಇಂದ್ರನಿಗೆ ಪ್ರಿಯವಾದ ಈ ಕರುವಿನ ಯಾಗದಿಂದ ಇಂದ್ರಿಯದೇವತೆಯಾದ ಇಂದ್ರನು ಯಜಮಾನನಿಗೆ ಇಂದ್ರಿಯ ಶಕ್ತಿಯನ್ನು ನೀಡುತ್ತಾನೆ. ಯಜಮಾನನು ಸಾಕ್ಷಾತ್ತಾಗಿ ಇಂದ್ರಿಯಶಕ್ತಿಯನ್ನು ಪಡೆಯುತ್ತಾನೆ.

ಮೂರು ತಲೆಮಾರಿನಿಂದ ಸೋಮಪಾನವಿಲ್ಲದವನು ಈ ಐಂದ್ರಾಗ್ನ ಪುನರುತ್ಸೃಷ್ಟ ಯಾಗವನ್ನು ಮಾಡಬೇಕು.

❖ ಶ್ರುತಿಯಲ್ಲಿ **'ಆ ತೃತೀಯಾತ್ ಪುರುಷಾತ್'** ಎಂದು ಹೇಳಿದೆ. ಈ ವಾಕ್ಯಕ್ಕೆ

ಪುನರುತ್ಸೃಷ್ಟೋ ಭವತಿ ಪುನರುತ್ಸೃಷ್ಟ ಇವ ಹ್ಯೇತಸ್ಯ

[(೬) ಸೋಮಪೀಥಃ] ಸೋಮಪೀಥಸ್ಸಮೃದ್ಧ್ಯೈ

---

ಪುನರುತ್ಸೃಷ್ಟ ಇತಿ ಪುನಃ – ಉತ್ಸೃಷ್ಟಃ । ಭವತಿ । ಪುನರುತ್ಸೃಷ್ಟ ಇತಿ ಪುನಃ–ಉತ್ಸೃಷ್ಟಃ । ಇವ । ಹಿ । ಏತಸ್ಯ । (೬)। ಸೋಮಪೀಥ ಇತಿ ಸೋಮ–ಪೀಥಃ । ಸಮೃದ್ಧ್ಯಾ ಇತಿ ಸಮ್–ಋದ್ಧ್ಯೈ ।

---

**ಯಾಗದ ಪ್ರಶಂಸೆ**

| | |
|---|---|
| ಪುನರುತ್ಸೃಷ್ಟಃ ಭವತಿ | ಪುನರುತ್ಸೃಷ್ಟವು ಯಾಗಪಶುವಾಗಿದೆ. |
| ಏತಸ್ಯ ಸೋಮಪೀಥಃ ಪುನರುತ್ಸೃಷ್ಟಃ ಇವ ಹಿ ಸಮೃದ್ಧ್ಯೈ | ಈ ಯಜಮಾನನಿಗೂ ಸೋಮಪಾನವು ಪುನರುತ್ಸೃಷ್ಟದಂತೆಯೇ [ಬಿಟ್ಟಂತೆಯೇ] ಇದೆ. ಹೀಗೆ ಸರೂಪವಾದುದರಿಂದ ಫಲ ಸಮೃದ್ಧಿಗೆ ಕಾರಣವಾಗುತ್ತದೆ. |

---

ತಾನು ತಂದೆ – ಅಜ್ಜ ಹೀಗೆ ಮೂವರು ಎಂಬುದಾಗಿಯೂ, ತಂದೆ – ಅಜ್ಜ – ಮುತ್ತಜ್ಜ ಹೀಗೆ ಮೂವರು ಎಂದಾಗಲೀ ಅರ್ಥ ಮಾಡಬಹುದು.* **'ಆಙ್'** ಎಂಬ **ನಿಪಾತಕ್ಕೆ** 'ಅದನ್ನು ಸೇರಿಸಿ' 'ಅದರವರೆಗೆ' ಹೀಗೆ ಎರಡು ಮುಖ್ಯವಾದ ಅರ್ಥಗಳನ್ನು ಮಾಡಬಹುದು.

ಯಾವ ಬ್ರಾಹ್ಮಣನಿಗೆ ಮೂರು ತಲೆಮಾರಿನಿಂದಲೂ ಸೋಮಪಾನವು ತಪ್ಪಿ ಹೋಗಿದೆಯೋ ಆತನ ಸೋಮಪಾನವು ವಿಚ್ಛಿನ್ನವಾಗಿ ಹೋಯಿತು. ಈ ಐಂದ್ರಾಗ್ನ ಯಾಗ ಮಾಡುವುದರಿಂದ ಅಗ್ನಿ–ಇಂದ್ರರು ತಮ್ಮ ಪಾಲನ್ನು ಪಡೆದು ತೃಪ್ತರಾಗಿ ಈ ಯಜಮಾನನಿಗೆ ಸೋಮಪಾನವನ್ನು ಕೊಡುತ್ತಾರೆ. ಸೋಮಪಾನವು ಈತನನ್ನು ಹೊಂದುತ್ತದೆ.

ಪಶುವು ಇಂದ್ರದೇವತಾಕವಾದುದರಿಂದ ಇಂದ್ರಿಯಶಕ್ತಿಯನ್ನು ಕೊಡುವ ಇಂದ್ರನೇ ಯಾಗದೇವತೆಯಾದುದರಿಂದ ಯಜಮಾನನು ಇಂದ್ರಿಯಶಕ್ತಿಯನ್ನು ಕೊಡುವ ಸೋಮಪಾನವನ್ನು ಹೊಂದುತ್ತಾನೆ. ದೇವತೆಯು ಅಗ್ನಿಯಾದುದರಿಂದ ಅಗ್ನಿಸಂಬಂಧಿಯಾದ ಬ್ರಾಹ್ಮಣನು / ಯಜಮಾನನು ತನ್ನ ಸಂಬಂಧಿಯಾದ ದೇವತೆಯನ್ನೇ ಅನುಸರಿಸಿ ವೃದ್ಧಿ ಹೊಂದುತ್ತಾನೆ.

---

* ಆಙೀಷದರ್ಥೇऽಭಿವ್ಯಾಪ್ತೌ ಸೀಮಾರ್ಥೇ ಧಾತುಯೋಗಜೇ । ಏತಮಾತಂ ಙಿತಂ ವಿದ್ಯಾತ್

* ಆಙ್ ಮರ್ಯಾದಾಭಿವಿಧ್ಯೋಃ ಪಾ.ಸೂ. 2.1.

ಬ್ರಾಹ್ಮಣಸ್ಪತ್ಯಂ ತೂಪರಮಾಲಭೇತಾಭಿಚರನ್ಬ್ರಹ್ಮಣಸ್ಪತಿ
ಮೇವ ಸ್ವೇನ ಭಾಗಧೇಯೇನೋಪಧಾವತಿ ತಸ್ಮಾ
ಏವೈನಮಾವೃಶ್ಚತಿ ತಾಜಗಾರ್ತಿಮಾರ್ಛತಿ

---

ಬ್ರಾಹ್ಮಣಸ್ಪತ್ಯಮಿತಿ ಬ್ರಾಹ್ಮಣಃ-ಪತ್ಯಮ್ । ತೂಪರಮ್ । ಆ । ಲಭೇತ । ಅಭಿಚರನ್ನಿತ್ಯಭಿ-ಚರನ್ । ಬ್ರಹ್ಮಣಃ । ಪತಿಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ತಸ್ಮೈ । ಏವ । ಏನಮ್ । ಆ । ವೃಶ್ಚತಿ । ತಾಜಕ್ । ಆರ್ತಿಮ್ । ಆ । ಋಚ್ಛತಿ ।

---

**ಅಭಿಚಾರಾರ್ಥವಾದ ಬ್ರಾಹ್ಮಣಸ್ಪತ್ಯಯಾಗ; ಪ್ರಶಂಸೆ**

| | |
|---|---|
| ಅಭಿಚರನ್ | ಶತ್ರುವಿಗೆ ಮಾಟ ಮಾಡಬೇಕೆಂದು ಅಪೇಕ್ಷಿಸುವವನು |
| ಬ್ರಾಹ್ಮಣಸ್ಪತ್ಯಮ್ ತೂಪರಮ್ ಆಲಭೇತ | ಬ್ರಹ್ಮಣಸ್ಪತಿದೇವನಿಗಾಗಿ ಶೃಂಗವಿಹೀನವಾದ / ಪುಚ್ಛವಿಲ್ಲದ ಪಶುವನ್ನು ಯಾಗ ಮಾಡಬೇಕು. |
| ಬ್ರಹ್ಮಣಸ್ಪತಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಪಶುಯಾಗದಿಂದ ಬ್ರಹ್ಮಣಸ್ಪತಿದೇವನಿಗೆ ಅವನ ಭಾಗವನ್ನು ಸಲ್ಲಿಸಿ ಸೇವಿಸಿದವನಾಗುತ್ತಾನೆ. |
| ತಸ್ಮೈ ಏವ ಏನಮ್ ಆವೃಶ್ಚತಿ | ಆ ಬ್ರಹ್ಮಣಸ್ಪತಿದೇವನು ಈ ಯಜಮಾನನಿಗಾಗಿ ಅವನ ಶತ್ರುವನ್ನು ನಾಶಪಡಿಸುತ್ತಾನೆ. |
| ತಾಜಕ್ ಆರ್ತಿಮ್ ಆರ್ಛತಿ | ಶತ್ರುವು ಒಡನೆಯೇ ಮರಣವನ್ನು ಹೊಂದುತ್ತಾನೆ. |

---

ಪಶುವೂ ಪುನರುತ್ಸೃಷ್ಟ. ಯಜಮಾನನೂ ಸೋಮಪಾನದ ವಿಷಯದಲ್ಲಿ ಪುನರುತ್ಸೃಷ್ಟನಂತೆಯೇ. ಹೀಗೆ ಸಾದೃಶ್ಯವಿರುವುದರಿಂದ ಫಲಸಮೃದ್ಧಿಯುಂಟಾಗುತ್ತದೆ.

ಶತ್ರುವಿನ ಮಾರಣವನ್ನು ಬಯಸುವವನು ಶೃಂಗ/ಪುಚ್ಛಹೀನವಾದ ಪಶುವನ್ನು ಬ್ರಹ್ಮಣಸ್ಪತಿದೇವನಿಗಾಗಿ ಯಾಗ ಮಾಡಬೇಕು. ಇದರಿಂದ ತೃಪ್ತನಾದ ಬ್ರಹ್ಮಣಸ್ಪತಿದೇವನು ಯಜಮಾನನ ಶತ್ರುವನ್ನು ನಾಶಪಡಿಸುತ್ತಾನೆ. ಆ ಶತ್ರುವು ಒಡನೆಯೇ ಸಾಯುತ್ತಾನೆ.

ತೂಪರೋ ಭವತಿ ಕ್ಷುರಪವಿರ್ವಾ ಏಷಾ ಲಕ್ಷ್ಮೀ

ಯತ್ತೂಪರಸ್ಸಮೃದ್ಧ್ಯೈ ಸ್ಫ್ಯೋ ಯೂಪೋ ಭವತಿ

ವಜ್ರೋ ವೈ ಸ್ಫ್ಯೋ ವಜ್ರಮೇವಾಸ್ಮೈ ಪ್ರಹರತಿ

---

**ತೂಪರಃ** । ಭವತಿ । ಕ್ಷುರಪವಿರಿತಿ ಕ್ಷುರ-ಪವಿಃ । ವೈ । ಏಷಾ । ಲಕ್ಷ್ಮೀ । ಯತ್ । ತೂಪರಃ । ಸಮೃದ್ಧ್ಯಾ ಇತಿ ಸಮ್-ಋದ್ಧ್ಯೈ । ಸ್ಫ್ಯಃ । ಯೂಪಃ । ಭವತಿ । ವಜ್ರಃ । ವೈ । ಸ್ಫ್ಯಃ । ವಜ್ರಮ್ । ಏವ । ಅಸ್ಮೈ । ಪ್ರೇತಿ । ಹರತಿ ।

---

### ಈ ಯಾಗದಲ್ಲಿನ ವಿಶೇಷವಿಧಿಗಳು; ಪ್ರಶಂಸೆ

| | |
|---|---|
| ತೂಪರಃ ಭವತಿ | ಯಜ್ಞಪಶುವು *ಶೃಂಗಹೀನವಾಗಿದೆ. |
| ಯತ್ ತೂಪರಃ ಏಷಾ ಕ್ಷುರಪವಿಃ ಲಕ್ಷ್ಮೀ ವೈ | ಈ ತೂಪರವು ಕ್ಷುರ [ಕ್ಷೌರದ ಕತ್ತಿ]ದಂತೆ, ಹರಿತವಾದ ಅಲಗುಳ್ಳ ಇಂದ್ರನ ವಜ್ರಾಯುಧದಂತೆ ಲಕ್ಷಣವುಳ್ಳ/ಕಾಂತಿಯುಳ್ಳದ್ದಾಗಿದೆ. |
| ಸಮೃದ್ಧ್ಯೈ | ಇದು ಫಲಸಮೃದ್ಧಿಗೆ ಕಾರಣವಾಗುತ್ತದೆ. |
| ಯೂಪಃ ಸ್ಫ್ಯಃ ಭವತಿ | ಯೂಪವು ಸ್ಫ್ಯದ ಆಕಾರವುಳ್ಳದ್ದಾಗಿರಬೇಕು. |
| ವಜ್ರಃ ವೈ ಸ್ಫ್ಯಃ | ಸ್ಫ್ಯವು ವಜ್ರಾಯುಧವೇ ಆಗಿದೆ. |
| ವಜ್ರಮ್ ಏವ ಅಸ್ಮೈ ಪ್ರಹರತಿ | ಈ ಯಜಮಾನನಿಗಾಗಿ ವಜ್ರಾಯುಧವನ್ನು ಶತ್ರುವಿನ ಮೇಲೆ ಪ್ರಹರಿಸಿದಂತಾಗುತ್ತದೆ / ಈ ಯಜಮಾನನ ವೈರಿಯ ಮೇಲೆ ಪ್ರಹರಿಸಿದಂತಾಗುತ್ತದೆ. |

---

* ಇಲ್ಲಿ ತೂಪರ ಶಬ್ದಕ್ಕೆ 'ಶೃಂಗರಹಿತ ಪಶು' ಎಂಬ ಕೋಶಾರ್ಥವನ್ನು ಅಂಗೀಕರಿಸಲಾಗಿದೆ. 'ಪುಚ್ಛರಹಿತ' ಎಂಬ ಅರ್ಥವನ್ನೂ ಭಟ್ಟಭಾಸ್ಕರರು ಹೇಳಿರುತ್ತಾರೆ. ಆಗ ತೂಪರವು ವಜ್ರಸದೃಶವೆಂದು ಹೇಳಿರುವುದು ಅಷ್ಟು ಹೊಂದುವುದಿಲ್ಲ.

ಜ್ಯೋತಿಶ್ಶಾಸ್ತ್ರದಲ್ಲಿ ತೂಪರ ಶಬ್ದವನ್ನು, ಟಗರಿಗೆ [ಹೋತ] ಸಮಾನಾರ್ಥವಾಗಿ ಹೇಳಿರುವುದನ್ನು ಇಲ್ಲಿ ಅಂಗೀಕರಿಸಿದರೆ 'ಟಗರು ಎದುರಾಳಿಯನ್ನು ಗುದ್ದಿ ಹಾಕುವಂತೆ' ಎಂಬ ಅರ್ಥವು ದೊರೆಯುವುದರಿಂದ ವಜ್ರಸದೃಶವೆಂದು ಹೇಳಿದುದು ಸಮಂಜಸವಾಗುತ್ತದೆ.

ಶರಮಯಂ ಬರ್ಹಿಃ ಶೃಣಾತ್ಯೇವೈನಂ ವೈಭೀದಕ

ಇಧ್ಮೋ ಭಿನತ್ತ್ಯೇವೈನಮ್ ॥೩೫–5॥

[ಭವತ್ಯುನ್ನತಃ ಪಶವೋ ಜನಯಂತಿ ಏಂದತೇಽಭವತ್ಸನ್ನೈತಸ್ಯೇಧ್ಮಸ್ತ್ರೀಣಿ ಚ ।]

---

ಶರಮಯಮಿತಿ ಶರ–ಮಯಮ್ । ಬರ್ಹಿಃ । ಶೃಣಾತಿ । ಏವ । ಏನಮ್ । ವೈಭೀದಕಃ । ಇಧ್ಮಃ । ಭಿನತ್ತಿ । ಏವ । ಏನಮ್ ॥5॥

---

| | |
|---|---|
| ಶರಮಯಮ್ ಬರ್ಹಿಃ | ದರ್ಭೆಯ ಬದಲು ಕಾಗೆಬಿದಿರು ಬರ್ಹಿಸ್ಸಾಗಬೇಕು. |
| ಏನಮ್ ಶೃಣಾತಿ ಏವ | ಇದು ಶತ್ರುವನ್ನು ಹಿಂಸಿಸುತ್ತದೆ. |
| ವೈಭೀದಕಃ ಇಧ್ಮಃ | ಪಾಲಾಶ ಸಮಿತ್ತುಗಳ ಬದಲು ತಾರೇಮರದ ಸಮಿತ್ತುಗಳಾಗಬೇಕು. |
| ಏನಮ್ ಭಿನತ್ತಿ ಏವ | ಇವು ಈ ಶತ್ರುವನ್ನು ಭೇದಿಸುತ್ತವೆ. |

---

ಈ ಅಭಿಚಾರಯಾಗದಲ್ಲಿ ತೂಪರವು ಪಶುವಾದುದರಿಂದ ಮೋಷವು ಪ್ರತಿಸ್ಪರ್ಧಿಯನ್ನು ಗುದ್ದಿ ಬೀಳಿಸುವಂತೆ ಶತ್ರುನಾಶಕಾರಣವಾಗುತ್ತದೆ. ಯೂಪವೂ ಅಷ್ಟಕೋನಾಕೃತಿಯ ಬದಲು ಸ್ಫ್ಯದ ಆಕೃತಿಯದಾಗಿರುತ್ತದೆ. ಬರ್ಹಿಸ್ಸು ದರ್ಭೆಯ ಬದಲು ಕಾಗೆಬಿದಿರಾಗುತ್ತದೆ. ಇಧ್ಮವು ಪಾಲಾಶದ ಸಮಿತ್ತುಗಳ ಬದಲು ತಾರೆ ಮರದ ಸಮಿತ್ತಾಗಿರುತ್ತದೆ. ಇವೆಲ್ಲವೂ ಬೇಗನೆ ಶತ್ರುವಿನ ನಾಶಕ್ಕೆ ಕಾರಣವಾಗುತ್ತವೆ.

* * *

# ಅನುವಾಕದ ವಿಶೇಷ ವಿಷಯಗಳು

## ಅ. ಮೀಮಾಂಸಾ

### ೧. ಶರ–ದರ್ಭಗಳಿಗೆ ಬ್ರಾಹ್ಮಣಸ್ಪತ್ಯಯಾಗದಲ್ಲಿ ಸಮುಚ್ಚಯವೇ? ಬಾಧವೇ? [ಜೈ.ಸೂ. 10.4]

ಬ್ರಾಹ್ಮಣಸ್ಪತ್ಯಪಶುಯಾಗದಲ್ಲಿ **'ಶರಮಯಂ ಬರ್ಹಿಃ'** ಎಂದು ವಿಹಿತವಾಗಿದೆ. **'ಶರಮಯಮ್'** ಎಂಬಲ್ಲಿ ಶರ ಶಬ್ದದ ಮೇಲೆ ಇರುವ ಮಯಟ್ ಪ್ರತ್ಯಯವು ಪ್ರಾಚುರ್ಯ ಎಂಬ ಅರ್ಥ ಕೊಡುವುದರಿಂದ ಶರ ಬರ್ಹಿಸ್ಸು ಹೆಚ್ಚು ಇರಬೇಕೆಂಬ ಅರ್ಥವು ದೊರೆಯುತ್ತದೆ. ಅತಿದೇಶದಿಂದ ಪ್ರಾಪ್ತವಾದ ದರ್ಭೆಗಳಿಗೆ ಈ ಶರದೊಡನೆ ಸಮುಚ್ಚಯ ಅಂದರೆ ಎರಡೂ ಇರಬೇಕು ಎಂದು ಅರ್ಥ ಎಂಬುದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ **ಸಿದ್ಧಾಂತ** ಹೀಗಿದೆ : **'ಶರಮಯಮ್'** ಎಂಬಲ್ಲಿರುವ ಮಯಟ್ ಪ್ರತ್ಯಯವು ವಿಕಾರಾರ್ಥದಲ್ಲಿ **'ನಿತ್ಯಂ ವೃದ್ಧಶರಾದಿಭ್ಯಃ' [ಪಾ.ಸೂ. 4.3.144]** ಎಂಬ ವಿಶೇಷ ಸೂತ್ರದಿಂದ ವಿಧಿಸಲ್ಪಟ್ಟಿದೆ. ಶರಶಬ್ದವನ್ನು ಹೇಳಿ ಮಯಟ್ ಪ್ರತ್ಯಯ ವನ್ನು ವಿಧಿಸಿರುವುದರಿಂದ ವಿಕಾರಾರ್ಥವಾದ ಆ ಪ್ರತ್ಯಯವನ್ನೇ ಅಂಗೀಕರಿಸಬೇಕು. ಅಲ್ಲದೆ **'ಶೃಣಾತ್ಯೇವೈನಮ್'** ಎಂಬುದಾಗಿ ಶರವನ್ನು ಶತ್ರುಹಿಂಸಕವನ್ನಾಗಿ ಹೇಳಿದೆ. ಸಮುಚ್ಚಯವನ್ನು ಅಂಗೀಕರಿಸಿದರೆ ದರ್ಭೆಗಳಿಗೆ ಕಾರ್ಯಾಂತರವನ್ನು ಕಲ್ಪಿಸಬೇಕಾಗು ತ್ತದೆ. ಅದು ಯುಕ್ತವಲ್ಲ.

ಆದುದರಿಂದ ಇಲ್ಲಿ ಶರದಿಂದ ದರ್ಭೆಗೆ ಬಾಧವೇ. ಶರವೇ ಬರ್ಹಿಸ್ಸು ಎಂಬುದು ಸಿದ್ಧಾಂತ.

* * *

## ॥ ಷಷ್ಠೋಽನುವಾಕಃ ॥

ಬಾರ್ಹಸ್ಪತ್ಯಗ್ಂ ಶಿತಿಪೃಷ್ಠಮಾಲಭೇತ ಗ್ರಾಮಕಾಮೋ

ಯಃ ಕಾಮಯೇತ ಪೃಷ್ಠಗ್ಂ ಸಮಾನಾನಾಗ್ಂ ಸ್ಯಾಮಿತಿ

---

**ಬಾರ್ಹಸ್ಪತ್ಯಮ್** । ಶಿತಿಪೃಷ್ಠಮಿತಿ ಶಿತಿ – ಪೃಷ್ಠಮ್ । ಆ । ಲಭೇತ । ಗ್ರಾಮಕಾಮ ಇತಿ

ಗ್ರಾಮ–ಕಾಮಃ । ಯಃ । ಕಾಮಯೇತ । ಪೃಷ್ಠಮ್ । ಸಮಾನಾನಾಮ್ । ಸ್ಯಾಮ್ । ಇತಿ ।

---

ಐದನೆಯ ಅನುವಾಕದಲ್ಲಿ ಪಶುಕಾಮಾದಿಗಳಿಗೆ ಈ ಕೆಳಗಿನ ಯಾಗಗಳನ್ನು ಹೇಳಲಾಗಿದೆ.

**ಪಶುಕಾಮಃ ಪ್ರಜಾಕಾಮೋ ಭ್ರಾತೃವ್ಯವಾನ್ ಛಿನ್ನಸೋಮಕಃ ।**
**ಅಭಿಚಾರೀ ಚ ಯೇ ತೇಷಾಂ ಪಂಚಮೋ ಪಶವಃ ಶ್ರುತಾಃ ॥**

ಈ ಆರನೆಯ ಅನುವಾಕದಲ್ಲಿ ಗ್ರಾಮಕಾಮಾದಿಗಳಿಗೆ ಪಶುಯಾಗಗಳು ಉಕ್ತವಾಗಿವೆ.

### ಗ್ರಾಮಕಾಮನಾದವನಿಗೆ ವಿಹಿತವಾದ ಯಾಗ; ಪ್ರಶಂಸೆ

| | |
|---|---|
| ಯಃ ಸಮಾನಾನಾಮ್ ಪೃಷ್ಠಮ್ ಸ್ಯಾಮ್ ಇತಿ ಕಾಮಯೇತ | ಯಾವನು ಸಮಾನರಾದವರ ನಡುವೆ ಬೆನ್ನಿನಂತೆ ಮೇಲಿನವನಾಗಬೇಕೆಂದು ಬಯಸುತ್ತಾನೆಯೋ |
| [ಸಃ] ಗ್ರಾಮಕಾಮಃ ಬಾರ್ಹಸ್ಪತ್ಯಮ್ ಶಿತಿಪೃಷ್ಠಮ್ ಆಲಭೇತ | ಆ ಗ್ರಾಮಮುಖ್ಯನಾಗಬೇಕೆನ್ನುವವನು ಬೃಹಸ್ಪತಿದೇವತೆಗಾಗಿ ಬೆನ್ನಿನಲ್ಲಿ ಬೆಳ್ಳಗಿರುವ ಪಶುವನ್ನು ಯಾಗ ಮಾಡಬೇಕು. |

---

ಸಮಾನರ ಮಧ್ಯದಲ್ಲಿ ಶ್ರೇಷ್ಠನಾಗಿ ಗ್ರಾಮಮುಖ್ಯನಾಗಬೇಕೆಂದು ಬಯಸುವವನು ಬೃಹಸ್ಪತಿದೇವತೆಗಾಗಿ ಬೆನ್ನಿನಲ್ಲಿ ಬೆಳ್ಳಗಿರುವ ಪಶುವನ್ನು ಯಾಗ ಮಾಡಬೇಕು.

ಬೃಹಸ್ಪತಿಮೇವ ಸ್ವೇನ ಭಾಗಧೇಯೇನೋಪಧಾವತಿ ಸ

ಏವೈನಂ ಪೃಷ್ಠಗ್ಂ ಸಮಾನಾನಾಂ ಕರೋತಿ

ಗ್ರಾಮ್ಯೇವ ಭವತಿ

---

ಬೃಹಸ್ಪತಿಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ಸಃ । ಏವ । ಏನಮ್ । ಪೃಷ್ಠಮ್ । ಸಮಾನಾನಾಮ್ । ಕರೋತಿ । ಗ್ರಾಮೀ । ಏವ । ಭವತಿ ।

---

| | |
|---|---|
| ಬೃಹಸ್ಪತಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಯಜಮಾನನು] ಬೃಹಸ್ಪತಿಗೆ ತಕ್ಕ ಭಾಗವನ್ನು ಸಮರ್ಪಿಸಿ ಸೇವಿಸಿದವನಾಗುತ್ತಾನೆ. |
| ಸಃ ಏವ ಏನಮ್ ಸಮಾನಾನಾಮ್ ಪೃಷ್ಠಮ್ ಕರೋತಿ | ತುಷ್ಟನಾದ ಬೃಹಸ್ಪತಿಯೇ ಈ ಯಜಮಾನನನ್ನು ಸಮಾನರಾದವರಲ್ಲಿ ಶ್ರೇಷ್ಠನನ್ನಾಗಿ ಮಾಡುತ್ತಾನೆ. |
| ಗ್ರಾಮೀ ಏವ ಭವತಿ | ಯಜಮಾನನು ಗ್ರಾಮಮುಖ್ಯನೇ ಆಗುತ್ತಾನೆ. |

---

ಇದರಿಂದ ಬೃಹಸ್ಪತಿಗೆ ತನ್ನ ಹವಿರ್ಭಾಗವು ಸಿಕ್ಕಿದಂತಾಗಿ ಆತನು ಸುಪ್ರೀತನಾಗುತ್ತಾನೆ. ಈ ಯಜಮಾನನನ್ನು ಗ್ರಾಮಮುಖ್ಯನನ್ನಾಗಿ ಮಾಡುತ್ತಾನೆ. ಇದರಿಂದ ಯಜಮಾನನು ಗ್ರಾಮದ ಮುಖ್ಯನೇ ಆಗುತ್ತಾನೆ.

ಶಿತಿಪೃಷ್ಠೋ ಭವತಿ ಬಾರ್ಹಸ್ಪತ್ಯೋ ಹ್ಯೇಷ

ದೇವತಯಾ ಸಮೃದ್ಧ್ಯೈ ಪೌಷ್ಣಗ್ಂ

ಶ್ಯಾಮಮಾಲಭೇತಾನ್ನಕಾಮೋಽನ್ನಂ ವೈ ಪೂಷಾ

ಪೂಷಣಮೇವ ಸ್ವೇನ ಭಾಗಧೇಯೇನೋಪಧಾವತಿ

---

ಶಿತಿಪೃಷ್ಠ ಇತಿ ಶಿತಿ–ಪೃಷ್ಠಃ । ಭವತಿ । ಬಾರ್ಹಸ್ಪತ್ಯಃ । ಹಿ । ಏಷಃ । ದೇವತಯಾ । ಸಮೃದ್ಧ್ಯಾ ಇತಿ ಸಮ್–ಋದ್ಧ್ಯೈ । **ಪೌಷ್ಣಮ್** । ಶ್ಯಾಮಮ್ । ಏತಿ । ಲಭೇತ । ಅನ್ನಕಾಮ ಇತ್ಯನ್ನ–ಕಾಮಃ । ಅನ್ನಮ್ । ವೈ । ಪೂಷಾ । ಪೂಷಣಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

**ಶಿತಿಪೃಷ್ಠಃ ಭವತಿ** — ಪಶುವು ಬೆನ್ನಿನಲ್ಲಿ ಬಿಳಿಯ ಬಣ್ಣವುಳ್ಳದ್ದಾಗಿರುತ್ತದೆ.

**ಏಷಃ ದೇವತಯಾ ಬಾರ್ಹಸ್ಪತ್ಯಃ ಹಿ ಸಮೃದ್ಧ್ಯೈ** — ಇಂತಹ ಪಶುವು ಬೃಹಸ್ಪತಿದೇವತಾಕವಾಗಿರುವುದರಿಂದ ಫಲಸಮೃದ್ಧಿಗೆ ಕಾರಣವಾಗುತ್ತದೆ.

### ಅನ್ನಕಾಮನಿಗೆ ವಿಹಿತವಾದ ಪೌಷ್ಣಪಶುಯಾಗ; ಪ್ರಶಂಸೆ

**ಅನ್ನಕಾಮಃ ಪೌಷ್ಣಮ್ ಶ್ಯಾಮಮ್ ಆಲಭೇತ** — ಅನ್ನವನ್ನು ಅಪೇಕ್ಷಿಸುವವನು ಕಪ್ಪುಬಣ್ಣದ ಪಶುವನ್ನು ಪೂಷದೇವನಿಗಾಗಿ ಯಾಗ ಮಾಡಬೇಕು.

**ಅನ್ನಮ್ ವೈ ಪೂಷಾ** — ಅನ್ನವು ಪೂಷವೇ ಆಗಿದೆ.

**ಪೂಷಣಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ** — [ಈ ಯಾಗದಿಂದ] ಯಜಮಾನನು ಪೂಷದೇವತೆಗೆ ಬೇಕಾದ ಹವಿರ್ಭಾಗವನ್ನೇ ಸಮರ್ಪಿಸಿ ಸೇವಿಸಿದವನಾಗುತ್ತಾನೆ.

ಸ ಏವಾಸ್ಮಾ [ಏವಾಸ್ಮೈ (೧) ಅನ್ನಂ] ಅನ್ನಂ

ಪ್ರಯಚ್ಛತ್ಯನ್ನಾದ ಏವ ಭವತಿ ಶ್ಯಾಮೋ ಭವತ್ಯೇತದ್ವಾ

ಅನ್ನಸ್ಯ ರೂಪಗ್ಂ ಸಮೃದ್ಧ್ಯೈ

---

ಸಃ । ಏವ । ಅಸ್ಮೈ । ಅನ್ನಮ್ । ಪ್ರೇತಿ । ಯಚ್ಛತಿ । ಅನ್ನಾದ ಇತ್ಯನ್ನ–ಅದಃ । ಏವ । ಭವತಿ । ಶ್ಯಾಮಃ । ಭವತಿ । ಏತತ್ । ವೈ । ಅನ್ನಸ್ಯ । ರೂಪಮ್ । ಸಮೃದ್ಧ್ಯಾ ಇತಿ ಸಮ್–ಋದ್ಧ್ಯೈ ।

---

| | |
|---|---|
| ಸಃ ಏವ ಅಸ್ಮೈ ಅನ್ನಮ್ ಪ್ರಯಚ್ಛತಿ | ಪೂಷದೇವತೆಯೇ ಈ ಯಜಮಾನನಿಗೆ ಅನ್ನವನ್ನು ಕೊಡುತ್ತಾನೆ. |
| ಅನ್ನಾದಃ ಏವ ಭವತಿ | ಯಜಮಾನನು ಅನ್ನಭೋಗಿಯೇ ಆಗುತ್ತಾನೆ. |
| ಶ್ಯಾಮಃ ಭವತಿ | ಪಶುವು ಕಪ್ಪಾಗಿದೆ. |
| ಏತದ್ ವೈ ಅನ್ನಸ್ಯ ರೂಪಮ್ ಸಮೃದ್ಧ್ಯೈ | ಈ ಕಪ್ಪು ಪತ್ರಶಾಕಾದ್ಯನ್ನದ ರೂಪವಾಗಿರುವುದರಿಂದ ಫಲಸಮೃದ್ಧಿಗೆ ಕಾರಣವಾಗುತ್ತದೆ. |

---

**'ಬಾರ್‌ಹಸ್ಪತ್ಯಂ ಚರುಂ ನಿರ್ವಪತಿ ಬ್ರಹ್ಮಣೋ ಗೃಹೇ ಶಿತಿಪೃಷ್ಠೋ ದಕ್ಷಿಣಾ'** ಎಂದು ರಾಜಸೂಯದಲ್ಲಿ ಹೇಳಿರುವಂತೆ ಶಿತಿಪೃಷ್ಠಪಶುವು ಬೃಹಸ್ಪತಿಗೆ ಸಂಬಂಧಿಸಿದೆ. ಇದು ಫಲಸಮೃದ್ಧಿಗೆ ಕಾರಣವಾಗುತ್ತದೆ.

ಅನ್ನಕಾಮನಿಗೆ ವಿಹಿತವಾದ ಈ ಪಶುಯಾಗದಲ್ಲಿ ಅನ್ನಕಾಮನು ಪೂಷದೇವತೆಗಾಗಿ ಕಪ್ಪುಬಣ್ಣದ ಪಶುವನ್ನು ಯಾಗ ಮಾಡಬೇಕು. ಪೂಷನು ಅನ್ನದ ಪೋಷಕನು. ಆದುದರಿಂದ ಅನ್ನವು ಪೂಷದೇವತಾಕವಾಗಿದೆ. ಈ ಯಾಗದಿಂದ ಯಜಮಾನನು ಪೂಷದೇವತೆಯನ್ನು ತೃಪ್ತಿಪಡಿಸುತ್ತಾನೆ. ತುಷ್ಟನಾದ ಪೂಷದೇವತೆಯು ಯಜಮಾನನಿಗೆ ಅನ್ನವನ್ನು ಕೊಡುತ್ತಾನೆ. ಯಜಮಾನನು ಅನ್ನಭೋಗಿಯಾಗುತ್ತಾನೆ.

ಮಾರುತಂ ಪೃಶ್ನಿಮಾಲಭೇತಾನ್ನಕಾಮೋಽನ್ನಂ ವೈ ಮರುತೋ ಮರುತ ಏವ ಸ್ವೇನ ಭಾಗಧೇಯೇನೋಪ ಧಾವತಿ ತ ಏವಾಸ್ಮಾ ಅನ್ನಂ ಪ್ರಯಚ್ಛಂತ್ಯನ್ನಾದ ಏವ ಭವತಿ

---

**ಮಾರುತಮ್** । ಪೃಶ್ನಿಮ್ । ಏತಿ । ಲಭೇತ । ಅನ್ನಕಾಮ ಇತ್ಯನ್ನ–ಕಾಮಃ । ಅನ್ನಮ್ । ವೈ । ಮರುತಃ । ಮರುತಃ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ತೇ । ಏವ । ಅಸ್ಮೈ । ಅನ್ನಮ್ । ಪ್ರೇತಿ । ಯಚ್ಛಂತಿ । ಅನ್ನಾದ ಇತ್ಯನ್ನ–ಅದಃ । ಏವ । ಭವತಿ ।

---

**ಅನ್ನಕಾಮನಿಗಾಗಿ ಇನ್ನೊಂದು ಪಶುಯಾಗವಿಧಿ; ಪ್ರಶಂಸೆ**

| | |
|---|---|
| ಅನ್ನಕಾಮಃ ಮಾರುತಮ್ ಪೃಶ್ನಿಮ್ ಆಲಭೇತ | ಅನ್ನವನ್ನು ಬಯಸುವವನು ಮರುದ್ದೇವತೆಗಳಿಗಾಗಿ ಬಿಳಿಯ ಬಣ್ಣದ ಪಶುವನ್ನು ಯಾಗ ಮಾಡಬೇಕು. |
| ಅನ್ನಮ್ ವೈ ಮರುತಃ | ಮರುತ್ತುಗಳು ಅನ್ನವೇ ಆಗಿವೆ. |
| ಮರುತಃ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಹವಿರ್ಭಾಗಪ್ರದಾನದಿಂದ ಮರುದ್ದೇವತೆಗಳನ್ನು ಸೇವಿಸಿದವನಾಗುತ್ತಾನೆ. |
| ತೇ ಏವ ಅಸ್ಮೈ ಅನ್ನಮ್ ಪ್ರಯಚ್ಛಂತಿ | ಆ ಮರುದ್ದೇವತೆಗಳು ಈ ಯಜಮಾನನಿಗೆ ಅನ್ನವನ್ನು ಕೊಡುತ್ತಾರೆ. |
| ಅನ್ನಾದಃ ಏವ ಭವತಿ | ಯಜಮಾನನು ಅನ್ನದ್ರವ್ಯಭೋಗಿಯಾಗುತ್ತಾನೆ. |

---

ಯಾಗಪಶುವು ಕಪ್ಪು. ಪತ್ರಶಾಕಾದ್ಯನ್ನದ ಬಣ್ಣವೂ ಕಪ್ಪು. ಹೀಗೆ ವರ್ಣಸಾದೃಶ್ಯ ಇರುವುದರಿಂದ ಶ್ಯಾಮಪಶುವು ಫಲಸಮೃದ್ಧಿಯನ್ನು ಕೊಡುತ್ತದೆ.

ಪೃಶ್ನಿರ್ಭವತ್ಯೇತದ್ವಾ ಅನ್ನಸ್ಯ ರೂಪಗ್ಂ ಸಮೃದ್ಧ್ಯಾ

ಐಂದ್ರಮರುಣಮಾಲಭೇತೇಂದ್ರಿಯಕಾಮ ಇಂದ್ರಮೇವ

(೨) ಸ್ವೇನ ಭಾಗಧೇಯೇನೋಪಧಾವತಿ

---

ಪೃಶ್ನಿಃ। ಭವತಿ। ಏತತ್। ವೈ। ಅನ್ನಸ್ಯ। ರೂಪವ್। ಸಮೃದ್ಧ್ಯಾ ಇತಿ ಸಮ್– ಋದ್ಧ್ಯ।

**ಐಂದ್ರವ್।** ಅರುಣಮ್। ಆ। ಲಭೇತ। ಇಂದ್ರಿಯಕಾಮ ಇತೀಂದ್ರಿಯ–ಕಾಮಃ।

ಇಂದ್ರಮ್। ಏವ। ಸ್ವೇನ। ಭಾಗಧೇಯೇನೇತಿ ಭಾಗ–ಧೇಯೇನ। ಉಪೇತಿ। ಧಾವತಿ।

---

| | |
|---|---|
| ಪೃಶ್ನಿಃ ಭವತಿ | ಯಾಗಪಶುವು ಶ್ವೇತವರ್ಣವಾಗಿದೆ. |
| ಏತತ್ ವೈ ಅನ್ನಸ್ಯ ರೂಪವ್ ಸಮೃದ್ಧ್ಯ | ಇದು ಶಾಲ್ಯನ್ನಾದಿಗಳ ರೂಪವೂ ಆಗಿರುವುದರಿಂದ ಅನ್ನಸಮೃದ್ಧಿಗೆ ಕಾರಣವಾಗುತ್ತದೆ. |

**ಇಂದ್ರಿಯಕಾಮನಿಗೆ ವಿಹಿತವಾದ ಯಾಗ; ಪ್ರಶಂಸೆ**

| | |
|---|---|
| ಇಂದ್ರಿಯಕಾಮಃ | ಇಂದ್ರಿಯಶಕ್ತಿಯನ್ನು ಬಯಸುವವನು |
| ಐಂದ್ರಮ್ ಅರುಣವ್ ಆಲಭೇತ | ಎಳೆಗೆಂಪು ಬಣ್ಣದ ಪಶುವನ್ನು ಇಂದ್ರನಿಗಾಗಿ ಯಾಗ ಮಾಡಬೇಕು. |
| ಇಂದ್ರಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗಕರ್ತನು ಇಂದ್ರನನ್ನು ಹವಿರ್ಭಾಗ ದಾನದಿಂದ ಸೇವಿಸಿದವನಾಗುತ್ತಾನೆ. |

---

ಅನ್ನಕಾಮನು ಮರುದ್ದೇವತೆಗಳಿಗಾಗಿ ಬಿಳಿಯ ಬಣ್ಣದ ಪಶುವನ್ನು ಯಾಗ ಮಾಡಬೇಕು. ಮರುತ್ತುಗಳು ಮಳೆಗೆ ಕಾರಣವಾಗಿ ಸಸ್ಯಗಳನ್ನು ಪೋಷಿಸುವುದರಿಂದ ಮರುತ್ತುಗಳೂ ಅನ್ನವೇ ಆಗಿವೆ. ಈ ಯಾಗದಿಂದ ಯಜಮಾನನು ಮರುದ್ದೇವತೆಗಳನ್ನು ಸಂತೋಷಗೊಳಿಸುತ್ತಾನೆ. ಸಂತುಷ್ಟರಾದ ಮರುತ್ತುಗಳು ಯಜಮಾನನಿಗೆ ಅನ್ನವನ್ನು ಕೊಡುತ್ತಾರೆ. ಯಜಮಾನನು ಅನ್ನಭೋಗಶಾಲಿಯಾಗುತ್ತಾನೆ. ಪಶುವಿನ ಬಣ್ಣವೂ ಬಿಳುಪು. ಅನ್ನದ ರೂಪವೂ ಬಿಳುಪು. ಹೀಗೆ ರೂಪಸಾದೃಶ್ಯವು ಅನ್ನಸಮೃದ್ಧಿಗೆ ಕಾರಣವಾಗುತ್ತದೆ.

ಸ ಏವಾಸ್ಮಿನ್ನಿಂದ್ರಿಯಂ ದಧಾತೀಂದ್ರಿಯಾವ್ಯೇವ

ಭವತ್ಯರುಣೋ ಭ್ರೂಮಾನ್ಭವತ್ಯೇತದ್ವಾ ಇಂದ್ರಸ್ಯ

ರೂಪಗ್ಂ ಸಮೃದ್ಧ್ಯೈ

---

ಸಃ। ಏವ। ಅಸ್ಮಿನ್। ಇಂದ್ರಿಯಮ್। ದಧಾತಿ। ಇಂದ್ರಿಯಾವೀ। ಏವ। ಭವತಿ। ಅರುಣಃ। ಭ್ರೂಮಾನಿತಿ ಭ್ರೂ-ಮಾನ್। ಭವತಿ। ಏತತ್। ವೈ। ಇಂದ್ರಸ್ಯ। ರೂಪಮ್। ಸಮೃದ್ಧ್ಯಾ ಇತಿ ಸಮ್-ಋದ್ಧ್ಯೈ।

---

| | |
|---|---|
| ಸಃ ಏವ ಅಸ್ಮಿನ್ ಇಂದ್ರಿಯಮ್ ದಧಾತಿ | ಆ ಇಂದ್ರನೇ ಈ ಯಜಮಾನನಲ್ಲಿ ಇಂದ್ರಿಯಶಕ್ತಿಯನ್ನು ಇಡುತ್ತಾನೆ. |
| ಇಂದ್ರಿಯಾವೀ ಏವ ಭವತಿ | ಯಜಮಾನನು ಇಂದ್ರಿಯಶಕ್ತಿಯನ್ನು ಪಡೆದವನೇ ಆಗುತ್ತಾನೆ. |
| ಅರುಣಃ ಭ್ರೂಮಾನ್ ಭವತಿ | [ಯಾಗಪಶುವು] ಎಳೆಗೆಂಪಾಗಿ ಒಳ್ಳೆಯ ಹುಬ್ಬುಗಳುಳ್ಳದ್ದಾಗಿರಬೇಕು. |
| ಏತತ್ ವೈ ಇಂದ್ರಸ್ಯ ರೂಪಮ್ | ಇದು ಇಂದ್ರನ ರೂಪವಾಗಿದೆ. |
| ಸಮೃದ್ಧ್ಯೈ | [ಈ ರೂಪಸಾದೃಶ್ಯವು] ಇಂದ್ರಿಯ ಬಲಸಮೃದ್ಧಿಗೆ ಕಾರಣವಾಗುತ್ತದೆ. |

---

ಹೆಚ್ಚಾದ ಇಂದ್ರಿಯಶಕ್ತಿಯನ್ನು ಬಯಸುವವನು ಇಂದ್ರದೇವತೆಗಾಗಿ ಎಳೆಗೆಂಪು ಬಣ್ಣದ ಪಶುವನ್ನು ಯಾಗ ಮಾಡಬೇಕು. ಯಜಮಾನನು ಈ ಯಾಗದಿಂದ ಇಂದ್ರನನ್ನು ಸೇವಿಸುತ್ತಾನೆ. ಇದರಿಂದ ತೃಪ್ತನಾದ ಇಂದ್ರನು ಈ ಯಜಮಾನನಿಗೆ

ಸಾವಿತ್ರಮುಪಧ್ವಸ್ತಮಾಲಭೇತ ಸನಿಕಾಮಸ್ಸವಿತಾ ವೈ

ಪ್ರಸವಾನಾಮೀಶೇ ಸವಿತಾರಮೇವ ಸ್ವೇನ ಭಾಗ

ಧೇಯೇನೋಪಧಾವತಿ ಸ ಏವಾಸ್ಮೈ ಸನಿಂ ಪ್ರಸುವತಿ

---

**ಸಾವಿತ್ರಮ್** । ಉಪಧ್ವಸ್ತಮಿತ್ಯುಪ–ಧ್ವಸ್ತಮ್ । ಏತಿ । ಲಭೇತ । ಸನಿಕಾಮ ಇತಿ ಸನಿ–ಕಾಮಃ । ಸವಿತಾ । ವೈ । ಪ್ರಸವಾನಾಮಿತಿ ಪ್ರ–ಸವಾನಾಮ್ । ಈಶೇ । ಸವಿತಾರಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮೈ । ಸನಿಮ್ । ಪ್ರೇತಿ । ಸುವತಿ ।

---

**ಬೇರೆಯವರು ತನಗೆ ದಾನ ಮಾಡುವಂತೆ ಪ್ರೇರಿಸಲು ಮಾಡಬೇಕಾದ ಪಶುಯಾಗ; ಪ್ರಶಂಸೆ**

| | |
|---|---|
| ಸನಿಕಾಮಃ ಸಾವಿತ್ರಮ್ ಉಪಧ್ವಸ್ತಮ್ ಆಲಭೇತ | ಬೇರೆಯವರಿಂದ ಧನವನ್ನು ಬೇಡಿ ಪಡೆಯಬೇಕೆಂದಿರುವವನು ಸವಿತೃದೇವತೆಗಾಗಿ ಸಂಕೀರ್ಣವರ್ಣದ ಪಶುವನ್ನು ಯಾಗ ಮಾಡಬೇಕು. |
| ಸವಿತಾ ವೈ ಪ್ರಸವಾನಾಮ್ ಈಶೇ | ಸವಿತೃದೇವನೇ ಅನುಮತಿಯನ್ನು ನೀಡುವ ಪ್ರಭುವಾಗಿರುತ್ತಾನೆ. |
| ಸವಿತಾರಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಈ ಪಶುಯಾಗದಿಂದ] ಯಜಮಾನನು ಸವಿತೃದೇವತೆಗೆ ತಕ್ಕ ಹವಿರ್ಭಾಗವನ್ನಿತ್ತು ಉಪಚರಿಸಿದವನಾಗುತ್ತಾನೆ. |
| ಸಃ ಏವ ಅಸ್ಮೈ ಸನಿಮ್ ಪ್ರಸುವತಿ | ಆ ಸವಿತೃದೇವನೇ ಈ ಯಜಮಾನನಿಗೆ ದಾನ ಮಾಡುವಂತೆ ಬೇರೆಯವರನ್ನು ಪ್ರೇರಿಸುತ್ತಾನೆ. |

ದಾನಕಾಮಾ ಅಸ್ಮೈ ಪ್ರಜಾ ಭವಂತ್ಯುಪಧ್ವಸ್ತೋ ಭವತಿ

ಸಾವಿತ್ರೋ ಹ್ಯೇಷ [ಹ್ಯೇಷಃ (೩)] ದೇವತಯಾ

ಸಮೃದ್ಧ್ಯೈ

---

ದಾನಕಾಮಾ ಇತಿ ದಾನ–ಕಾಮಾಃ। ಅಸ್ಮೈ। ಪ್ರಜಾ ಇತಿ ಪ್ರ–ಜಾಃ। ಭವಂತಿ। ಉಪಧ್ವಸ್ತ ಇತ್ಯುಪ–ಧ್ವಸ್ತಃ। ಭವತಿ। ಸಾವಿತ್ರಃ। ಹಿ। ಏಷಃ। ದೇವತಯಾ। ಸಮೃದ್ಧ್ಯಾ ಇತಿ ಸಮ್–ಋದ್ಧ್ಯೈ।

---

| | |
|---|---|
| ಅಸ್ಮೈ ಪ್ರಜಾಃ ದಾನಕಾಮಾಃ ಭವಂತಿ | ಪ್ರಜೆಗಳು ಈ ಯಜಮಾನನಿಗೆ ದಾನವನ್ನು ಕೊಡಲು ಮುಂದೆ ಬರುತ್ತಾರೆ. |
| ಉಪಧ್ವಸ್ತಃ ಭವತಿ | ಈ ಯಾಗದ ಪಶುವು ಸಂಕೀರ್ಣವರ್ಣವುಳ್ಳದ್ದಾಗಿದೆ. |
| ಏಷಃ ಸಾವಿತ್ರಃ ಹಿ | ಈ ಪಶುವು [ರಾಜಸೂಯಯಾಗದ] ಸಾವಿತ್ರೇಷ್ಟಿಯಲ್ಲಿ ದಕ್ಷಿಣೆಯಾದುದರಿಂದ ಸವಿತೃದೇವತಾಕವಾಗಿದೆ. |
| ಸಮೃದ್ಧ್ಯೈ | ಆದುದರಿಂದ ಪಶುವು ಫಲಸಮೃದ್ಧಿಗೆ ಕಾರಣವಾಗುತ್ತದೆ. |

---

ಇಂದ್ರಿಯಸಾಮರ್ಥ್ಯವನ್ನು ನೀಡುತ್ತಾನೆ. ಯಜಮಾನನು ಇಂದ್ರಿಯಶಕ್ತಿಸಂಪನ್ನನಾಗುತ್ತಾನೆ. ಎಳೆಗೆಂಪು ಬಣ್ಣದ ಪಶುವು ಒಳ್ಳೆಯ ಹುಬ್ಬುಗಳುಳ್ಳದ್ದಾಗಿರಬೇಕು. ಇದು – ಸಹಸ್ರಾಕ್ಷನಾದುದರಿಂದ ಅನೇಕ ಹುಬ್ಬುಗಳುಳ್ಳ ಇಂದ್ರನ ರೂಪಕ್ಕೆ ಸದೃಶವಾಗಿ – ಫಲಸಮೃದ್ಧಿಗೆ ಕಾರಣವಾಗುತ್ತದೆ.

ವೈಶ್ವದೇವಂ ಬಹುರೂಪಮಾಲಭೇತಾನ್ನಕಾಮೋ

ವೈಶ್ವದೇವಂ ವಾ ಅನ್ನಂ ವಿಶ್ವಾನೇವ ದೇವಾನ್ಥ್ಸ್ವೇನ

ಭಾಗಧೇಯೇನೋಪಧಾವತಿ ತ ಏವಾಸ್ಮಾ ಅನ್ನಂ

---

ವೈಶ್ವದೇವಮಿತಿ ವೈಶ್ವ–ದೇವಮ್। ಬಹುರೂಪಮಿತಿ ಬಹು–ರೂಪಮ್। ಏತಿ। ಲಭೇತ।

ಅನ್ನಕಾಮ ಇತ್ಯನ್ನ–ಕಾಮಃ। ವೈಶ್ವದೇವಮಿತಿ ವೈಶ್ವ–ದೇವಮ್। ವೈ। ಅನ್ನಮ್।

ವಿಶ್ವಾನ್। ಏವ। ದೇವಾನ್। ಸ್ವೇನ। ಭಾಗಧೇಯೇನೇತಿ ಭಾಗ–ಧೇಯೇನ। ಉಪೇತಿ।

ಧಾವತಿ। ತೇ। ಏವ। ಅಸ್ಮೈ। ಅನ್ನಮ್।

---

### ಅನ್ನಕಾಮನಿಗೆ ವಿಹಿತವಾದ ಪಶುಯಾಗ; ಪ್ರಶಂಸೆ

| | |
|---|---|
| ಅನ್ನಕಾಮಃ ವೈಶ್ವದೇವಮ್ ಬಹುರೂಪಮ್ ಆಲಭೇತ | ಅನ್ನಸಮೃದ್ಧಿಯನ್ನು ಬಯಸುವವನು ವಿಸ್ಪಷ್ಟವಾದ ಬಗೆಬಗೆಯ ಬಣ್ಣದ ಪಶುವನ್ನು ವಿಶ್ವೇದೇವರಿಗಾಗಿ ಯಾಗ ಮಾಡಬೇಕು. |
| ವೈಶ್ವದೇವಮ್ ವೈ ಅನ್ನಮ್ | ಅನ್ನವು ವಿಶ್ವೇದೇವದೇವತಾಕವಾದುದು. |
| ವಿಶ್ವಾನ್ ಏವ ದೇವಾನ್ ಸ್ವೇನ ಭಾಗಧೇಯೇನ ಉಪಧಾವತಿ | [ಯಜಮಾನನು ಈ ಯಾಗದಿಂದ] ವಿಶ್ವೇದೇವರಿಗೆ ಬೇಕಾದ ಹವಿರ್ಭಾಗದ ಸಮರ್ಪಣೆಯಿಂದ ಸೇವಿಸಿದವನಾಗುತ್ತಾನೆ. |
| ತೇ ಏವ ಅಸ್ಮೈ ಅನ್ನಮ್ ಪ್ರಯಚ್ಛಂತಿ | ಆ ವಿಶ್ವೇದೇವರು ಈ ಯಜಮಾನನಿಗೆ ಸಮೃದ್ಧವಾದ ಅನ್ನವನ್ನು ಕೊಡುತ್ತಾರೆ. |

ಪ್ರಯಚ್ಛಂತ್ಯನ್ನಾದ ಏವ ಭವತಿ ಬಹುರೂಪೋ ಭವತಿ

ಬಹುರೂಪಗ್ಂ ಹ್ಯನ್ನಗ್ಂ ಸಮೃದ್ಧ್ಯೈ ವೈಶ್ವದೇವಂ

ಬಹುರೂಪಮಾಲಭೇತ ಗ್ರಾಮಕಾಮೋ

ವೈಶ್ವದೇವಾ ವೈ ಸಜಾತಾ

---

ಪ್ರೇತಿ। ಯಚ್ಛಂತಿ। ಅನ್ನಾದ ಇತ್ಯನ್ನ–ಅದಃ। ಏವ। ಭವತಿ। ಬಹುರೂಪ ಇತಿ ಬಹು–ರೂಪಃ। ಭವತಿ। ಬಹುರೂಪಮಿತಿ ಬಹು–ರೂಪಮ್। ಹಿ। ಅನ್ನಮ್। ಸಮೃದ್ಧ್ಯಾ ಇತಿ ಸಮ್–ಋದ್ಧ್ಯೈ। **ವೈಶ್ವದೇವಮಿತಿ ವೈಶ್ವ–ದೇವಮ್**। ಬಹುರೂಪಮಿತಿ ಬಹು–ರೂಪಮ್। ಏತಿ। ಲಭೇತ। ಗ್ರಾಮಕಾಮ ಇತಿ ಗ್ರಾಮ–ಕಾಮಃ। ವೈಶ್ವದೇವಾ ಇತಿ ವೈಶ್ವ–ದೇವಾಃ। ವೈ। ಸಜಾತಾ ಇತಿ ಸ–ಜಾತಾಃ।

---

| | |
|---|---|
| ಅನ್ನಾದಃ ಏವ ಭವತಿ | ಯಜಮಾನನು ಅನ್ನಭೋಗಿಯೇ ಆಗುತ್ತಾನೆ. |
| ಬಹುರೂಪಃ ಭವತಿ | ಪಶುವು ಬಹುವರ್ಣವುಳ್ಳದ್ದಾಗಿದೆ. |
| ಅನ್ನಮ್ ಬಹುರೂಪಮ್ ಹಿ | ಅನ್ನವೂ ಅಕ್ಕಿ, ಗೋಧಿ ಮುಂತಾಗಿ ಬಹುರೂಪ ವಾಗಿದೆ. |
| ಸಮೃದ್ಧ್ಯೈ | ಆದುದರಿಂದ ಅನ್ನಸಮೃದ್ಧಿಗೆ ಕಾರಣವಾಗುತ್ತದೆ. |

**ಗ್ರಾಮಕಾಮನಾದವನಿಗೂ ವಿಹಿತವಾದ ವೈಶ್ವದೇವಯಾಗ; ಪ್ರಶಂಸೆ**

| | |
|---|---|
| ಗ್ರಾಮಕಾಮಃ ವೈಶ್ವದೇವಮ್ ಬಹುರೂಪಮ್ ಆಲಭೇತ | ಗ್ರಾಮದ ಒಡೆಯನಾಗಲು ಬಯಸುವವನು ಬಹುವರ್ಣದ ಪಶುವನ್ನು ವಿಶ್ವೇದೇವರಿಗೆ ಯಾಗ ಮಾಡಬೇಕು. |
| ಸಜಾತಾಃ ವೈಶ್ವದೇವಾಃ ವೈ | ಜೊತೆಗಾರರೂ ಜ್ಞಾತಿ–ಸಂಬಂಧಿ ಭೃತ್ಯಾದಿಗಳೂ ವಿಶ್ವೇದೇವಸಂಬಂಧಿಗಳೇ ಆಗಿರುತ್ತಾರೆ. |

ವಿಶ್ವಾನೇವ ದೇವಾನ್ತ್ಸ್ವೇನ

ಭಾಗಧೇಯೇನೋಪಧಾವತಿ ತ ಏವಾಸ್ಮೈ [ಏವಾಸ್ಮೈ (೪)

ಸಜಾತಾನ್] ಸಜಾತಾನ್ಪ್ರಯಚ್ಛಂತಿ ಗ್ರಾಮ್ಯೇವ ಭವತಿ

---

ವಿಶ್ವಾನ್। ಏವ। ದೇವಾನ್। ಸ್ವೇನ। ಭಾಗಧೇಯೇನೇತಿ ಭಾಗ–ಧೇಯೇನ। ಉಪೇತಿ। ಧಾವತಿ। ತೇ। ಏವ। ಅಸ್ಮೈ। ಸಜಾತಾನಿತಿ ಸ–ಜಾತಾನ್। ಪ್ರೇತಿ। ಯಚ್ಛಂತಿ। ಗ್ರಾಮೀ। ಏವ। ಭವತಿ।

---

| | |
|---|---|
| ವಿಶ್ವಾನ್ ಏವ ದೇವಾನ್ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದ ಹವಿರ್ಭಾಗದಾನದಿಂದ ವಿಶ್ವೇದೇವರನ್ನು ತುಷ್ಟಿಗೊಳಿಸುತ್ತಾನೆ. |
| ತೇ ಏವ ಅಸ್ಮೈ ಸಜಾತಾನ್ ಪ್ರಯಚ್ಛಂತಿ | ಆ ವಿಶ್ವೇದೇವರು ಈ ಯಜಮಾನನಿಗೆ ಉಳಿದವರನ್ನೂ ವಶರಾಗುವಂತೆ ಮಾಡುತ್ತಾರೆ. |
| ಗ್ರಾಮೀ ಏವ ಭವತಿ | ಯಜಮಾನನು ಗ್ರಾಮಸ್ವಾಮಿಯೇ ಆಗುತ್ತಾನೆ. |

---

ಬೇಡಿ ಪಡೆಯಲು ಬಯಸುವವನು ಸವಿತೃದೇವತಾಕವಾದ ಸಂಕೀರ್ಣವರ್ಣದ ಪಶುವನ್ನು ಯಾಗ ಮಾಡಬೇಕು. ಇಂತಹ ಅನುಮತಿಯನ್ನು ಕೊಡುವುದರಲ್ಲಿ ಸವಿತೃದೇವನೇ ಪ್ರಭು. ಈ ಯಾಗದಿಂದ ತನ್ನ ಭಾಗವನ್ನು ಪಡೆದು ಸವಿತೃದೇವನು ತೃಪ್ತನಾಗಿ ಬೇರೆಯವರು ಯಜಮಾನನ ಇಷ್ಟಾರ್ಥಗಳನ್ನು ನೆರವೇರಿಸುವಂತೆ ಪ್ರೇರಿಸುತ್ತಾನೆ. ಬೇರೆಯ ಪ್ರಜೆಗಳು ಈತನ ಬೇಡಿಕೆಯನ್ನು ಸಲ್ಲಿಸಲು ಮುಂದೆ ಬರುತ್ತಾರೆ. ಉಪಧ್ವಸ್ತಪಶುವು ಸವಿತೃದೇವತಾಕವಾದುದರಿಂದ ಈ ಯಾಗದ ಫಲಸಮೃದ್ಧಿಗೆ ಕಾರಣವಾಗುತ್ತದೆ.

ಬಹುರೂಪೋ ಭವತಿ ಬಹುದೇವತ್ಯೋಽಹ್ಯೇಷ

ಸಮೃದ್ಧ್ಯೈ

---

ಬಹುರೂಪ ಇತಿ ಬಹು-ರೂಪಃ। ಭವತಿ। ಬಹುದೇವತ್ಯ ಇತಿ ಬಹು-ದೇವತ್ಯಃ। ಹಿ।

ಏಷಃ। ಸಮೃದ್ಧ್ಯಾ ಇತಿ ಸಮ್-ಋದ್ಧ್ಯೈ।

---

| | |
|---|---|
| ಬಹುರೂಪಃ ಭವತಿ | ಈ ಯಾಗಪಶುವು ಹಲವು ಬಣ್ಣಗಳುಳ್ಳದ್ದಾಗಿದೆ. |
| ಏಷಃ ಬಹುದೇವತ್ಯಃ ಹಿ | ಈ ಯಾಗವು ಬಹುದೇವತಾಕವಾಗಿದೆ. |
| ಸಮೃದ್ಧ್ಯೈ | ಈ ಸಾರೂಪ್ಯವು ಗ್ರಾಮದ ಒಡೆತನಕ್ಕೆ ಕಾರಣವಾಗುತ್ತದೆ. |

---

ಅನ್ನಸಂಪತ್ತಿಯನ್ನು ಪಡೆಯಬೇಕೆನ್ನುವವನು ವಿಶ್ವೇದೇವರಿಗಾಗಿ ಬಹುವರ್ಣದ ಪಶುವನ್ನು ಯಾಗ ಮಾಡಬೇಕು. ಅನ್ನಕ್ಕೆ ವಿಶ್ವೇದೇವರೇ ದೇವತೆಗಳು. ಈ ಯಾಗದಿಂದ ವಿಶ್ವೇದೇವರಿಗೆ ತಮ್ಮದಾದ ಹವಿರ್ಭಾಗವು ಸಿಕ್ಕಿದಂತಾಗುತ್ತದೆ. ಅವರು ತೃಪ್ತರಾಗಿ ಯಜಮಾನನಿಗೆ ಅನ್ನಸಂಪತ್ತಿಯನ್ನು ಕೊಡುತ್ತಾರೆ. ಯಜಮಾನನು ಅನ್ನಭೋಗಿಯೇ ಆಗುತ್ತಾನೆ. ಪಶುವೂ ಬಹುರೂಪ. ಅನ್ನವೂ ಅಕ್ಕಿ, ಗೋಧಿ ಮೊದಲಾಗಿ ಬಹುವಿಧವಾಗಿದೆ. ಈ ಸಾರೂಪ್ಯವು ಅನ್ನಸಮೃದ್ಧಿಗೆ ಕಾರಣವಾಗುತ್ತದೆ.

ಗ್ರಾಮಸ್ವಾಮಿಯಾಗಬಯಸುವವನು ಬಹುವರ್ಣದ ಪಶುವನ್ನು ವಿಶ್ವೇದೇವರಿಗಾಗಿ ಯಾಗ ಮಾಡಬೇಕು. ಜ್ಞಾತಿ-ಸಂಬಂಧಿ-ಭೃತ್ಯಾದಿಗಳಿಗೆ ವಿಶ್ವೇದೇವರೇ ದೇವತೆಗಳು. ಈ ಪಶುವು ವಿಶ್ವೇದೇವದೇವತಾಸಂಬಂಧಿಯಾದುದರಿಂದ ಇದರ ಯಾಗದಿಂದ ವಿಶ್ವೇದೇವರಿಗೆ ತಮ್ಮ ಭಾಗವು ಸಿಕ್ಕಿದಂತಾಗಿ ಅವರು ಪ್ರೀತರಾಗುತ್ತಾರೆ.

ಪ್ರಾಜಾಪತ್ಯಂ ತೂಪರಮಾಲಭೇತ ಯಸ್ಯಾನಾಜ್ಞಾತಮಿವ
ಜ್ಯೋಗಾಮಯೇತ್ಪ್ರಾಜಾಪತ್ಯೋ ವೈ ಪುರುಷಃ ಪ್ರಜಾಪತಿಃ
ಖಲು ವೈ ತಸ್ಯ ವೇದ ಯಸ್ಯಾನಾಜ್ಞಾತಮಿವ ಜ್ಯೋಗಾಮಯತಿ

---

ಪ್ರಾಜಾಪತ್ಯಮಿತಿ ಪ್ರಾಜಾ–ಪತ್ಯಮ್ । ತೂಪರಮ್ । ಏತಿ । ಲಭೇತ । ಯಸ್ಯ । ಅನಾಜ್ಞಾತಮಿತ್ಯನಾ–ಜ್ಞಾತಮ್ । ಇವ । ಜ್ಯೋಕ್ । ಆಮಯೇತ್ । ಪ್ರಾಜಾಪತ್ಯ ಇತಿ ಪ್ರಾಜಾ–ಪತ್ಯಃ । ವೈ । ಪುರುಷಃ । ಪ್ರಜಾಪತಿರಿತಿ ಪ್ರಜಾ–ಪತಿಃ । ಖಲು । ವೈ । ತಸ್ಯ । ವೇದ । ಯಸ್ಯ । ಅನಾಜ್ಞಾತಮಿತ್ಯನಾ–ಜ್ಞಾತಮ್ । ಇವ । ಜ್ಯೋಕ್ । ಆಮಯತಿ ।

---

**ರೋಗಪರಿಹಾರಾರ್ಥವಾಗಿ ಪ್ರಾಜಾಪತ್ಯಪಶುವಿಧಿ; ಪ್ರಶಂಸೆ**

| | |
|---|---|
| ಯಸ್ಯ ಅನಾಜ್ಞಾತಮ್ ಇವ ಜ್ಯೋಕ್ ಆಮಯೇತ್ | ದೀರ್ಘಕಾಲ ರೋಗಲಕ್ಷಣವೇ ತಿಳಿಯದ ವ್ಯಾಧಿಯಿಂದ ಪೀಡಿತನಾದ ಯಜಮಾನನಿಗಾಗಿ/ಯಜಮಾನನು |
| ಪ್ರಾಜಾಪತ್ಯಮ್ ತೂಪರಮ್ ಆಲಭೇತ | ಕೊಂಬಿಲ್ಲದ ಪಶುವನ್ನು ಪ್ರಜಾಪತಿ ದೇವನಿಗಾಗಿ ಯಾಗ ಮಾಡಬೇಕು. |
| ಪ್ರಾಜಾಪತ್ಯಃ ವೈ ಪುರುಷಃ | ಪುರುಷನು ಪ್ರಜಾಪತಿಸಂಬಂಧಿಯಾಗಿರುತ್ತಾನೆ. |
| ಯಸ್ಯ ಅನಾಜ್ಞಾತಮ್ ಇವ ಜ್ಯೋಕ್ ಆಮಯತಿ | ಕಾರಣವೇ ತಿಳಿಯದ ವ್ಯಾಧಿಯು ಯಾವನನ್ನು ಚಿರಕಾಲ ಪೀಡಿಸುತ್ತದೆಯೋ |

---

ಈ ಯಜಮಾನನಿಗೆ ಜ್ಞಾತಿ–ಭೃತ್ಯಾದಿಗಳು ಅಧೀನರಾಗುವಂತೆ ಮಾಡುತ್ತಾರೆ. ಯಜಮಾನನು ಗ್ರಾಮಸ್ವಾಮಿಯಾಗುತ್ತಾನೆ. ಪಶುವೂ ಬಹುವರ್ಣ. ಯಾಗವೂ ಬಹುದೇವತಾಕವಾಗಿದೆ. ಹೀಗಿರುವುದರಿಂದ ಫಲಸಮೃದ್ಧಿಯುಂಟಾಗುತ್ತದೆ.

ಪ್ರಜಾಪತಿಮೇವ ಸ್ವೇನ ಭಾಗಧೇಯೇನೋಪಧಾವತಿ

ಸ ಏವೈನಂ ತಸ್ಮಾತ್ಸ್ರಾಮಾನ್ಮುಂಚತಿ ತೂಪರೋ ಭವತಿ

ಪ್ರಾಜಾಪತ್ಯೋ ಹ್ಯೇಷ ದೇವತಯಾ ಸಮೃದ್ಧ್ಯೈ ||೪೦-6||

**[ಅಸ್ಮಾ ಇಂದ್ರವೋವೈಷ ಸಜಾತಾ ವಿಶ್ವಾನೇವ ದೇವಾನ್ಸ್ವೇನ ಭಾಗ ಧೇಯೇನೋಪಧಾವತಿ ತ ಏವಾಸ್ಮೈ ಪ್ರಾಜಾಪತ್ಯೋ ಹಿ ತ್ರೀಣಿ ಚ ।]**

---

ಪ್ರಜಾಪತಿಮಿತಿ ಪ್ರಜಾ-ಪತಿಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ಸಃ । ಏವ । ಏನಮ್ । ತಸ್ಮಾತ್ । ಸ್ರಾಮಾತ್ । ಮುಂಚತಿ । ತೂಪರಃ । ಭವತಿ । ಪ್ರಾಜಾಪತ್ಯ ಇತಿ ಪ್ರಾಜಾ-ಪತ್ಯಃ । ಹಿ । ಏಷಃ । ದೇವತಯಾ । ಸಮೃದ್ಧ್ಯಾ ಇತಿ ಸಮ್-ಋದ್ಧ್ಯೈ ॥ 6॥

---

| | |
|---|---|
| ತಸ್ಯ ಪ್ರಜಾಪತಿಃ ಖಲು ವೈ ವೇದ | ಅವನ ವ್ಯಾಧಿಯನ್ನು ಪ್ರಜಾಪತಿದೇವನು ತಿಳಿದಿರುತ್ತಾನಷ್ಟೆ. |
| ಪ್ರಜಾಪತಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಯಜಮಾನನು ಈ ಯಾಗದಿಂದ] ಪ್ರಜಾಪತಿಗೆ ಸಲ್ಲಬೇಕಾದ ಹವಿರ್ಭಾಗವನ್ನು ಕೊಟ್ಟು ಸೇವಿಸಿದವನಾಗುತ್ತಾನೆ. |
| ಸಃ ಏವ ಏನಮ್ ತಸ್ಮಾತ್ ಸ್ರಾಮಾತ್ ಮುಂಚತಿ | ಆ ಪ್ರಜಾಪತಿದೇವನೇ ಈ ಯಜಮಾನನನ್ನು ಕಾರಣವೇ ತಿಳಿಯದಿರುವ ದೀರ್ಘ ರೋಗದಿಂದ ಬಿಡಿಸುತ್ತಾನೆ. |

---

ವೈದ್ಯರಿಗೂ ತಿಳಿಯದ ವ್ಯಾಧಿಯಿಂದ ಬಹುಕಾಲ ಪೀಡಿತನಾದವನು ಕೊಂಬಿಲ್ಲದ ತೂಪರ ಪಶುವನ್ನು ಪ್ರಜಾಪತಿದೇವನಿಗಾಗಿ ಸಮರ್ಪಿಸಬೇಕು. "**ಪ್ರಜಾಪತಿಃ**

**ತೂಪರಪಶುಯಾಗದ ಪ್ರಶಂಸೆ**

| | |
|---|---|
| **ತೂಪರಃ ಭವತಿ** | ಕೊಂಬಿಲ್ಲದ ಅಜಪಶುವು ಈ ಯಾಗದ ಪಶುವಾಗಿದೆ. |
| **ಪ್ರಾಜಾಪತ್ಯಃ ಹಿ ಏಷಃ ದೇವತಯಾ ಸಮೃದ್ಧ್ಯೈ** | ಈ ಪಶುವು ಪ್ರಜಾಪತಿದೇವತಾಕವಾಗಿದೆ. [ಆದುದರಿಂದ] ಕ್ಷಿಪ್ರವಾಗಿ ರೋಗವನ್ನು ಪರಿಹರಿಸುತ್ತದೆ. |

**ಪುರುಷಮಸೃಜತ''** ಎಂಬ ಶ್ರುತಿವಚನದಂತೆ ಪ್ರಜಾಪತಿಯೇ ಪುರುಷನನ್ನು ಸೃಷ್ಟಿಸಿರುವುದರಿಂದ ಪುರುಷನು ಪ್ರಜಾಪತಿಸಂಬಂಧಿಯಾಗಿರುತ್ತಾನೆ.

ಬೇರೆಯವರಿಂದ ತಿಳಿಯಲಾಗದ ರೋಗವನ್ನೂ ಅದರ ಪರಿಹಾರವನ್ನೂ ಪ್ರಜಾಪತಿಯೇ ತಿಳಿದಿರುತ್ತಾನೆ. ತೂಪರಪಶುವು ಪ್ರಜಾಪತಿಯ ವಪೆಯಿಂದ ಉತ್ಪನ್ನವಾದುದರಿಂದ ಪ್ರಜಾಪತಿಯ ಭಾಗವಾಗಿದೆ. ಈ ಯಾಗದಿಂದ ಯಜಮಾನನು ಪ್ರಜಾಪತಿಯನ್ನು ಸಂತೋಷಪಡಿಸುತ್ತಾನೆ. ಸಂತುಷ್ಟನಾದ ಪ್ರಜಾಪತಿಯು ಈ ಯಜಮಾನನ ರೋಗವನ್ನು ಪರಿಹರಿಸುತ್ತಾನೆ. ಪಶುವೂ ಪ್ರಜಾಪತಿಯ ವಪೆಯಿಂದ ಜನ್ಯವಾದುದಾಗಿದೆ. ಇದು ಪ್ರಜಾಪತಿದೇವತಾಕವಾದುದೂ ಆಗಿದೆ. ಆದುದರಿಂದ ಬೇಗ ಫಲಕಾರಿಯಾಗುತ್ತದೆ.

* * *

## ॥ ಸಪ್ತಮೋಽನುವಾಕಃ ॥

ವಷಟ್ಕಾರೋ ವೈ ಗಾಯತ್ರಿಯೈ ಶಿರೋಽಚ್ಛಿನತ್ತಸ್ಯೈ

---

ವಷಟ್ಕಾರ ಇತಿ ವಷಟ್–ಕಾರಃ । ವೈ । ಗಾಯತ್ರಿಯೈ । ಶಿರಃ । ಅಚ್ಛಿನತ್ । ತಸ್ಯೈ ।

---

ಹಿಂದಿನ ಆರನೆಯ ಅನುವಾಕದಲ್ಲಿ ಈ ಪಶುಯಾಗಗಳು ಹೇಳಲ್ಪಟ್ಟಿವೆ.

**ಪೃಷ್ಠಕಾಮೋಽನ್ನಕಾಮೋ ದ್ವಾವಿಂದ್ರಿಯಾರ್ಥೀ ಸನಿಂ ತಥಾ ।**
**ಅನ್ನಂ ಗ್ರಾಮಂ ಚ ವಾಂಛಂತಃ ಗೂಢರೋಗಾಶ್ಚ ಯೇ ಸ್ಥಿತಾಃ ॥**
**ಷಷ್ಠೇಽನುವಾಕೇ ಪಶವಃ ಕ್ರಮೇಣೈಷಾಮುದೀರಿತಾಃ ॥**

[ಸಮಾನರಲ್ಲಿ ಶ್ರೇಷ್ಠತೆಯನ್ನು ಬಯಸುವವನಿಗೆ ಒಂದು, ಅನ್ನಕಾಮನಿಗೆ ಎರಡು, ಇಂದ್ರಿಯವನ್ನು ಬಯಸುವವನಿಗೆ ಒಂದು, ಬೇಡುವಿಕೆಯಲ್ಲಿ ಸಫಲನಾಗಲು ಒಂದು, ಅನ್ನಕಾಮನಿಗೆ ಒಂದು, ಗ್ರಾಮಕಾಮನಿಗೆ ಒಂದು, ಅಜ್ಞಾತರೋಗಪೀಡಿತನಿಗೆ ಒಂದು – ಹೀಗೆ ಹೇಳಲ್ಪಟ್ಟಿವೆ].

ಈ ಏಳನೆಯ ಅನುವಾಕದಲ್ಲಿ ಬ್ರಹ್ಮವರ್ಚಸಾದಿಗಳನ್ನು ಬಯಸುವವರಿಗೆ ಪಶುಯಾಗಗಳು ಉಕ್ತವಾಗಿವೆ.

---

### ಶಿತಿಪೃಷ್ಠ–ವಶಾದಿಗಳ ಉತ್ಪತ್ತಿಯ ಉಪಾಖ್ಯಾನ

| | |
|---|---|
| ವಷಟ್ಕಾರಃ ವೈ ಗಾಯತ್ರಿಯೈ ಶಿರಃ ಅಚ್ಛಿನತ್ | [ಒಂದು ಕಾಲದಲ್ಲಿ] 'ವೌಷಟ್' ಮಂತ್ರಾಧಿದೇವತೆಯಾದ ವಷಟ್ಕಾರವು ಗಾಯತ್ರಿಯ ತಲೆಯನ್ನು ಕತ್ತರಿಸಿತು. |
| ತಸ್ಯೈ | ಕತ್ತರಿಸಿದ ಗಾಯತ್ರಿಯ ಶಿರಸ್ಸಿನಿಂದ |

ರಸಃ ಪರಾಪತತ್ತಂ ಬೃಹಸ್ಪತಿರುಪಾಗೃಹ್ಣಾತ್ಸಾ ಶಿತಿಪೃಷ್ಠಾ

ವಶಾಽಭವದ್ಯೋ ದ್ವಿತೀಯಃ ಪರಾಪತತ್ತಂ

ಮಿತ್ರಾವರುಣಾವುಪಾಗೃಹ್ಣೀತಾಗ್ಂ

---

ರಸಃ । ಪರೇತಿ । ಅಪತತ್ । ತಮ್ । ಬೃಹಸ್ಪತಿಃ । ಉಪೇತಿ । ಅಗೃಹ್ಣಾತ್ । ಸಾ । ಶಿತಿಪೃಷ್ಠೇತಿ ಶಿತಿ–ಪೃಷ್ಠಾ । ವಶಾ । ಅಭವತ್ । ಯಃ । ದ್ವಿತೀಯಃ । ಪರಾಪತದಿತಿ ಪರಾ–ಅಪತತ್ । ತಮ್ । ಮಿತ್ರಾವರುಣಾವಿತಿ ಮಿತ್ರಾ–ವರುಣೌ । ಉಪೇತಿ । ಅಗೃಹ್ಣೀತಾಮ್ ।

---

| | |
|---|---|
| ರಸಃ ಪರಾಪತತ್ | ನೀರೂ, ರಕ್ತವೂ ಹೊರಬಂದವು. |
| ತಮ್ ಬೃಹಸ್ಪತಿಃ ಉಪಾಗೃಹ್ಣಾತ್ | [ಮೊದಲು ಬಿದ್ದ] ಆ ರಸವನ್ನು ಬೃಹಸ್ಪತಿ ದೇವನು ತೆಗೆದುಕೊಂಡನು. |
| ಸಾ ಶಿತಿಪೃಷ್ಠಾ ವಶಾ ಅಭವತ್ | ಅದು ಬೆನ್ನಿನಲ್ಲಿ ಬೆಳ್ಳಗಿರುವ ಬಂಜೆಯಾದ ಪಶುವಾಯಿತು. |
| ಯಃ ದ್ವಿತೀಯಃ ಪರಾಪತತ್ | ಯಾವುದು ಎರಡನೆಯದಾಗಿ ಬಿದ್ದಿತೋ, |
| ತಮ್ ಮಿತ್ರಾವರುಣೌ ಉಪಾಗೃಹ್ಣೀತಾಮ್ | ಆ ರಸವನ್ನು ಮಿತ್ರಾವರುಣರು ಸ್ವೀಕರಿಸಿದರು. |

---

**'ವೌಷಟ್'** ಎಂಬ ಮಂತ್ರಭಾಗದ ದೇವತೆಯಾದ ವಷಟ್ಕಾರವು ಒಮ್ಮೆ ಗಾಯತ್ರಿಯ ತಲೆಯನ್ನು ಕತ್ತರಿಸಿತು. ಆ ತಲೆಯಿಂದ ರಸವೂ [ನೀರೂ], ರಕ್ತವೂ ಹೊರ ಬಂದವು. ಮೊದಲು ಬಿದ್ದ ರಸವನ್ನು ಬೃಹಸ್ಪತಿಯು ಸ್ವೀಕರಿಸಿದನು. ಅದು ಬೆನ್ನಿನಲ್ಲಿ ಬೆಳ್ಳಗಿರುವ ಬಂಜೆ ಹಸುವಾಯಿತು. ಎರಡನೆಯದಾಗಿ ಬಿದ್ದುದನ್ನು ಮಿತ್ರಾವರುಣರು ಸ್ವೀಕರಿಸಿದರು.

ಸಾ ದ್ವಿರೂಪಾ ವಶಾಽಭವದ್ಯಸ್ತೃತೀಯಃ ಪರಾಪತತ್ತಂ

ವಿಶ್ವೇ ದೇವಾ ಉಪಾಗೃಹ್ಣನ್ತ್ಸಾ ಬಹುರೂಪಾ

ವಶಾಽಭವದ್ಯಶ್ಚತುರ್ಥಃ ಪರಾಪತತ್ಸ

---

ಸಾ। ದ್ವಿರೂಪೇತಿ ದ್ವಿ – ರೂಪಾ। ವಶಾ। ಅಭವತ್। ಯಃ। ತೃತೀಯಃ। ಪರಾಪತದಿತಿ ಪರಾ–ಅಪತತ್। ತಮ್। ವಿಶ್ವೇ। ದೇವಾಃ। ಉಪೇತಿ। ಅಗೃಹ್ಣನ್ನ್। ಸಾ। ಬಹು ರೂಪೇತಿ ಬಹು–ರೂಪಾ। ವಶಾ। ಅಭವತ್। ಯಃ। ಚತುರ್ಥಃ। ಪರಾಪತದಿತಿ ಪರಾ–ಅಪತತ್। ಸಃ।

---

| | |
|---|---|
| ಸಾ ದ್ವಿರೂಪಾ ವಶಾ ಅಭವತ್ | ಅದು ಎರಡು ಬಣ್ಣಗಳುಳ್ಳ ಬಂಜೆಯಾದ ಪಶುವಾಯಿತು. |
| ಯಃ ತೃತೀಯಃ ಪರಾಪತತ್ | ಯಾವುದು ಮೂರನೆಯದಾಗಿ ಬಿದ್ದಿತೋ |
| ತಮ್ ವಿಶ್ವೇ ದೇವಾಃ ಉಪಾಗೃಹ್ಣನ್ನ್ | ಆ ರಸವನ್ನು ವಿಶ್ವೇದೇವರು ತೆಗೆದು ಕೊಂಡರು. |
| ಸಾ ಬಹುರೂಪಾ ವಶಾ ಅಭವತ್ | ಆ ರಸವು ಹಲವು ಬಣ್ಣಗಳುಳ್ಳ ಬಂಜೆ ಹಸುವಾಯಿತು. |
| ಯಃ ಚತುರ್ಥಃ ಪರಾಪತತ್ ಸಃ | ಯಾವುದು ನಾಲ್ಕನೆಯದಾಗಿ ಬಿದ್ದಿತೋ ಅದು |

---

ಅದು ಎರಡು ಬಣ್ಣಗಳುಳ್ಳ ಬಂಜೆ ಹಸುವಾಯಿತು. ಮೂರನೆಯದಾಗಿ ಬಿದ್ದುದನ್ನು ವಿಶ್ವೇದೇವರು ತೆಗೆದುಕೊಂಡರು. ಅದು ಹಲವು ಬಣ್ಣಗಳುಳ್ಳ ಬಂಜೆ ಹಸುವಾಯಿತು. ನಾಲ್ಕನೆಯದಾಗಿ ಬಿದ್ದ ಆ ರಸವು ಭೂಮಿಯನ್ನು ಪ್ರವೇಶಿಸಿತು. ಬೃಹಸ್ಪತಿಯು 'ಇದು

ಪೃಥಿವೀಂ ಪ್ರಾವಿಶತ್ತಂ ಬೃಹಸ್ಪತಿ [..ಬೃಹಸ್ಪತಿರಭಿ (೧)
ಅಗ್ರಹ್ಣಾದಸ್ತ್ವೇವಾಯಂ] ರಭ್ಯಗೃಹ್ಣಾದಸ್ತ್ವೇವಾಯಂ
ಭೋಗಾಯೇತಿ ಸ ಉಕ್ಷವಶಸ್ಸಮಭವದ್ಯಲ್ಲೋಹಿತಂ
ಪರಾಪತತ್ತದ್ರುದ್ರ

---

ಪೃಥಿವೀಮ್ । ಪ್ರೇತಿ । ಅವಿಶತ್ । ತಮ್ । ಬೃಹಸ್ಪತಿಃ । ಅಭೀತಿ । ಅಗೃಹ್ಣಾತ್ । ಅಸ್ತು । ಏವ । ಅಯಮ್ । ಭೋಗಾಯ । ಇತಿ । ಸಃ । ಉಕ್ಷ ವಶ ಇತ್ಯುಕ್ಷ – ವಶಃ । ಸಮಿತಿ । ಅಭವತ್ । ಯತ್ । ಲೋಹಿತಮ್ । ಪರಾಪತದಿತಿ ಪರಾ–ಅಪತತ್ । ತತ್ । ರುದ್ರಃ ।

---

| | |
|---|---|
| ಪೃಥಿವೀಮ್ ಪ್ರಾವಿಶತ್ | ಭೂಮಿಯನ್ನು ಪ್ರವೇಶಿಸಿತು. |
| ತಮ್ ಬೃಹಸ್ಪತಿಃ ಅಯಮ್ ಭೋಗಾಯ ಅಸ್ತು ಏವ ಇತಿ ಅಭಿ ಅಗೃಹ್ಣಾತ್ | ಅದನ್ನು ಬೃಹಸ್ಪತಿದೇವನು 'ಇದು ನನ್ನ ಭೋಗಕ್ಕೆ ಆಗಲಿ' ಎಂದು ತಿಳಿದು [ನೆಲಕ್ಕೆ ಬಿದ್ದಿದ್ದ] ಆ ರಸವನ್ನು ತೆಗೆದುಕೊಂಡನು. |
| ಸಃ ಉಕ್ಷವಶಃ ಸಮಭವತ್ | ಅದು ವ್ಯರ್ಥವೀರ್ಯವುಳ್ಳ ಸ್ವೇಚ್ಛೆಯಿಂದ ಸಂಚರಿಸುವ ವೃಷಭವಾಯಿತು. |
| ಯತ್ ಲೋಹಿತಮ್ ಪರಾ ಪತತ್ ತತ್ ರುದ್ರಃ | ಯಾವ ರಕ್ತವು ಬಿದ್ದಿತೋ ಅದನ್ನು ರುದ್ರದೇವನು |

---

ನನ್ನ ಭೋಗಕ್ಕೆ ಒದಗುವುದು' ಎಂದು ಭಾವಿಸಿ ನೆಲದಲ್ಲಿ ಬಿದ್ದಿದ್ದ ಆ ರಸವನ್ನು ತೆಗೆದುಕೊಂಡನು. ಅದು ವ್ಯರ್ಥವೀರ್ಯವುಳ್ಳ ಅಂದರೆ ಸ್ವೇಚ್ಛೆಯಿಂದ ಓಡಾಡುವ ವೃಷಭವಾಯಿತು. ಯಾವ ರಕ್ತವು ಬಿದ್ದಿತೋ ಅದನ್ನು ರುದ್ರನು ಸ್ವೀಕರಿಸಿದನು.

ಉಪಾಗೃಹ್ಣಾತ್ಸಾ ರೌದ್ರೀ ರೋಹಿಣೀ ವಶಾಽಭವದ್ಬಾರ್

ಹಸ್ಪತ್ಯಾಗ್ಂ ಶಿತಿಪೃಷ್ಠಾಮಾಲಭೇತ ಬ್ರಹ್ಮವರ್ಚಸ

ಕಾಮೋ ಬೃಹಸ್ಪತಿಮೇವ ಸ್ವೇನ ಭಾಗಧೇಯೇನೋಪ

ಧಾವತಿ ಸ ಏವಾಸ್ಮಿನ್ಬ್ರಹ್ಮವರ್ಚಸಂ ದಧಾತಿ

---

ಉಪೇತಿ । ಅಗೃಹ್ಣಾತ್ । ಸಾ । ರೌದ್ರೀ । ರೋಹಿಣೀ । ವಶಾ । ಅಭವತ್ । ಬಾರ್ – ಹಸ್ಪತ್ಯಾಮ್ । ಶಿತಿಪೃಷ್ಠಾಮಿತಿ ಶಿತಿ–ಪೃಷ್ಠಾಮ್ । ಏತಿ । ಲಭೇತ । ಬ್ರಹ್ಮವರ್ಚಸಕಾಮ ಇತಿ ಬ್ರಹ್ಮವರ್ಚಸ–ಕಾಮಃ । ಬೃಹಸ್ಪತಿಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮಿನ್ । ಬ್ರಹ್ಮವರ್ಚಸಮಿತಿ ಬ್ರಹ್ಮ–ವರ್ಚಸಮ್ । ದಧಾತಿ ।

---

| | |
|---|---|
| ಉಪಾಗೃಹ್ಣಾತ್ | ಸ್ವೀಕರಿಸಿದನು. |
| ಸಾ ರೌದ್ರೀ ರೋಹಿಣೀ ವಶಾ ಅಭವತ್ | ಅದು ರುದ್ರದೇವತಾಕವಾದ ಕೆಂಪು ಬಣ್ಣದ ಬಂಜೆಯಾದ ಪಶುವಾಯಿತು. |

**ಬಾರ್ಹಸ್ಪತ್ಯಪಶುಯಾಗವಿಧಿ; ಪ್ರಶಂಸೆ**

| | |
|---|---|
| ಬ್ರಹ್ಮವರ್ಚಸಕಾಮಃ ಬಾರ್ಹಸ್ಪತ್ಯಾಮ್ ಶಿತಿಪೃಷ್ಠಾಮ್ ಆಲಭೇತ | ಶ್ರುತಾಧ್ಯಯನಸಂಪತ್ತಿರೂಪವಾದ ಬ್ರಹ್ಮ ವರ್ಚಸವನ್ನು ಬಯಸುವವನು ಬೆನ್ನಿನಲ್ಲಿ ಬೆಳ್ಳಗಿರುವ ವಂಧ್ಯಾಪಶುವನ್ನು ಬೃಹಸ್ಪತಿ ದೇವನಿಗಾಗಿ ಯಾಗ ಮಾಡಬೇಕು. |
| ಬೃಹಸ್ಪತಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಈ ಪಶುಯಾಗದಿಂದ] ಬೃಹಸ್ಪತಿಗೆ ಅವನ ಭಾಗವನ್ನು ಕೊಟ್ಟು ಸೇವಿಸಿದವನಾಗುತ್ತಾನೆ. |
| ಸಃ ಏವ ಅಸ್ಮಿನ್ ಬ್ರಹ್ಮವರ್ಚಸಮ್ ದಧಾತಿ | [ತುಷ್ಟನಾದ] ಆ ಬೃಹಸ್ಪತಿದೇವನು ಈ ಯಜಮಾನನಲ್ಲಿ ಬ್ರಹ್ಮವರ್ಚಸವನ್ನು ನೆಲೆಗೊಳಿಸುತ್ತಾನೆ. |

ಬ್ರಹ್ಮವರ್ಚಸ್ಯೇವ ಭವತಿ ಛಂದಸಾಂ ವಾ ಏಷ ರಸೋ

ಯದ್ವಶಾ ರಸ ಇವ ಖಲು [ಖಲು (೨)] ವೈ

ಬ್ರಹ್ಮವರ್ಚಸಂ

---

ಬ್ರಹ್ಮವರ್ಚಸೀತಿ ಬ್ರಹ್ಮ-ವರ್ಚಸೀ । ಏವ । ಭವತಿ । ಛಂದಸಾವ್ । ವೈ । ಏಷಃ । ರಸಃ । ಯತ್ । ವಶಾ । ರಸಃ । ಇವ । ಖಲು । ವೈ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸವ್ ।

---

| | |
|---|---|
| ಬ್ರಹ್ಮವರ್ಚಸೀ ಏವ ಭವತಿ | ಯಜಮಾನನು ಬ್ರಹ್ಮವರ್ಚಸಿಯೇ ಆಗುತ್ತಾನೆ. |
| ಯತ್ ವಶಾ ಛಂದಸಾವ್ ವೈ ಏಷಃ ರಸಃ | ವಂಧ್ಯಪಶುವೆಂಬುದು ಛಂದಸ್ಸುಗಳ ರಸರೂಪವಾಗಿದೆ. |
| ರಸಃ ಇವ ಖಲು ವೈ ಬ್ರಹ್ಮವರ್ಚಸವ್ | ಬ್ರಹ್ಮವರ್ಚಸವೂ ರಸರೂಪವಾಗಿಯೇ ಇರುವುದಷ್ಟೆ. |

---

ಅದು ರುದ್ರದೇವತಾಕವಾದ ಕೆಂಪು ಬಣ್ಣದ ಬಂಜೆಯಾದ ಹಸುವಾಯಿತು.

ಬ್ರಹ್ಮವರ್ಚಸವನ್ನು ಅಪೇಕ್ಷಿಸುವವನು ಬೆನ್ನಿನಲ್ಲಿ ಬೆಳ್ಳಗಿರುವ ವಂಧ್ಯೆಯಾದ ಪಶುವನ್ನು ಬೃಹಸ್ಪತಿದೇವತೆಗಾಗಿ ಯಾಗ ಮಾಡಬೇಕು. ಈ ವಂಧ್ಯಪಶುವನ್ನು ಬೃಹಸ್ಪತಿಯು ಸ್ವೀಕರಿಸಿದುದರಿಂದ ಅದು ಬಾರ್ಹಸ್ಪತ್ಯವಾಗಿದೆ. ಈ ಯಾಗದಿಂದ ಯಜಮಾನನು ಬೃಹಸ್ಪತಿಯನ್ನು ತೃಪ್ತಿಪಡಿಸುತ್ತಾನೆ. ಆ ಬೃಹಸ್ಪತಿಯು ಈ ಯಜಮಾನನಿಗೆ ಬ್ರಹ್ಮವರ್ಚಸವನ್ನು ಕೊಡುತ್ತಾನೆ. ಯಜಮಾನನು ಬ್ರಹ್ಮವರ್ಚಸಿಯಾಗುತ್ತಾನೆ. ಛಂದಸ್ಸುಗಳಲ್ಲಿ ಮುಖ್ಯವಾದ ಗಾಯತ್ರಿಯಿಂದ ಹುಟ್ಟಿರುವುದರಿಂದ ವಂಧ್ಯಪಶುವೂ ರಸರೂಪವಾಗಿದೆ. ಬ್ರಹ್ಮವರ್ಚಸವೂ ಐಹಿಕಾಮುಷ್ಮಿಕಕರ್ಮಗಳಿಗೆ ಸಾಧನವಾಗಿ ರಸರೂಪವಾಗಿದೆ. ಆದುದರಿಂದ ಈ ಯಾಗದಿಂದ ಯಜಮಾನನು ರಸರೂಪವಾದ

ಛಂದಸಾಮೇವ ರಸೇನ ರಸಂ

ಬ್ರಹ್ಮವರ್ಚಸಮವರುಂಧೇ ಮೈತ್ರಾವರುಣೀಂ

ದ್ವಿರೂಪಾಮಾಲಭೇತ ವೃಷ್ಟಿಕಾಮೋ

---

ಛಂದಸಾಮ್ । ಏವ । ರಸೇನ । ರಸಮ್ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ಅವೇತಿ । ರುಂಧೇ । ಮೈತ್ರಾವರುಣೀಮಿತಿ ಮೈತ್ರಾ-ವರುಣೀಮ್ । ದ್ವಿರೂಪಾಮಿತಿ ದ್ವಿ-ರೂಪಾಮ್ । ಏತಿ । ಲಭೇತ । ವೃಷ್ಟಿಕಾಮ ಇತಿ ವೃಷ್ಟಿ-ಕಾಮಃ ।

---

| | |
|---|---|
| ಛಂದಸಾಮ್ ರಸೇನ ಏವ ರಸಮ್ ಬ್ರಹ್ಮವರ್ಚಸಮ್ ಅವರುಂಧೇ | ಛಂದಸ್ಸುಗಳ ರಸರೂಪವಾದ ಈ ವಂಧ್ಯ ಪಶುವಿನ ಯಾಗದಿಂದ ಯಜಮಾನನು ರಸರೂಪವಾದ ಬ್ರಹ್ಮವರ್ಚಸವನ್ನು ಪಡೆದು ಬ್ರಹ್ಮವರ್ಚಸಿಯಾಗುತ್ತಾನೆ. |

**ವೃಷ್ಟಿಕಾಮನಿಗೆ ವಿಹಿತವಾದ ಪಶುಯಾಗ; ಪ್ರಶಂಸೆ**

| | |
|---|---|
| ವೃಷ್ಟಿಕಾಮಃ ಮೈತ್ರಾವರುಣೀಮ್ ದ್ವಿರೂಪಾಮ್ ಆಲಭೇತ | ಮಳೆಯನ್ನು ಅಪೇಕ್ಷಿಸುವವನು ಎರಡು ಬಣ್ಣಗಳುಳ್ಳ ವಂಧ್ಯಪಶುವನ್ನು ಮಿತ್ರಾ-ವರುಣದೇವತೆಗಳಿಗಾಗಿ ಯಾಗ ಮಾಡಬೇಕು. |

---

ಬ್ರಹ್ಮವರ್ಚಸವನ್ನು ಪಡೆದು ಬ್ರಹ್ಮವರ್ಚಸಿಯಾಗುತ್ತಾನೆ.

ವೃಷ್ಟಿಕಾಮನು ಮಿತ್ರಾವರುಣದೇವತೆಗಳಿಗಾಗಿ ಎರಡು ಬಣ್ಣಗಳ ಬಂಜೆ ಹಸುವನ್ನು ಯಾಗ ಮಾಡಬೇಕು.

ಮೈತ್ರಂ ವಾ ಅಹರ್ವಾರುಣೀ ರಾತ್ರಿ

ರಹೋರಾತ್ರಾಭ್ಯಾಂ ಖಲು ವೈ ಪರ್ಜನ್ಯೋ ವರ್ಷತಿ

ಮಿತ್ರಾವರುಣಾವೇವ ಸ್ವೇನ ಭಾಗಧೇಯೇನೋಪಧಾವತಿ

---

ಮೈತ್ರಮ್ । ವೈ । ಅಹಃ । ವಾರುಣೀ । ರಾತ್ರಿಃ । ಅಹೋರಾತ್ರಾಭ್ಯಾಮಿತ್ಯಹಃ – ರಾತ್ರಾಭ್ಯಾಮ್ । ಖಲು । ವೈ । ಪರ್ಜನ್ಯಃ । ವರ್ಷತಿ । ಮಿತ್ರಾವರುಣಾವಿತಿ ಮಿತ್ರಾ– ವರುಣೌ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಮೈತ್ರಮ್ ವೈ ಅಹಃ | ಹಗಲು ಸೂರ್ಯಾತ್ಮಕನಾದ ಮಿತ್ರದೇವನಿಗೆ ಸಂಬಂಧಿಸಿದುದಾಗಿದೆ. |
| ವಾರುಣೀ ರಾತ್ರಿಃ | ಆಚ್ಛಾದಕವಾದ ರಾತ್ರಿಯು ವರುಣನಿಗೆ ಸಂಬಂಧಿಸಿದುದಾಗಿದೆ. |
| ಅಹೋರಾತ್ರಾಭ್ಯಾಮ್ ಖಲು ವೈ ಪರ್ಜನ್ಯಃ ವರ್ಷತಿ | ಹಗಲು ರಾತ್ರಿಗಳಿಂದಲೇ ಮಳೆಯು ಸುರಿಯುತ್ತದೆಯಷ್ಟೆ. |
| ಮಿತ್ರಾವರುಣೌ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಈ ಯಾಗದಿಂದ] ಯಜಮಾನನು ಮಿತ್ರಾವರುಣರಿಗೆ ಅವರ ಭಾಗವನ್ನಿತ್ತು ಸೇವಿಸಿದವನಾಗುತ್ತಾನೆ. |

---

ಹಗಲು ಪ್ರಕಾಶಮಾನಸೂರ್ಯಾತ್ಮಕನಾದ ಮಿತ್ರನಿಗೆ ಸಂಬಂಧಿಸಿದೆ. ರಾತ್ರಿಯು ಆಚ್ಛಾದಕವಾಗಿ ಆಚ್ಛಾದಕನಾದ ವರುಣನಿಗೆ ಸಂಬಂಧಿಸಿದೆ. ಈ ಯಾಗದ ಎರಡು ಬಣ್ಣಗಳ ವಂಧ್ಯಪಶುವು ಮಿತ್ರಾವರುಣರಿಗೆ ಸಂಬಂಧಿಸಿರುವುದರಿಂದ ಯಜಮಾನನು ಈ ಯಾಗದಿಂದ ಮಿತ್ರಾವರುಣದೇವತೆಗಳನ್ನು ಸಂತೋಷಪಡಿಸುತ್ತಾನೆ.

ತಾವೇವಾಸ್ಮಾ ಅಹೋರಾತ್ರಾಭ್ಯಾಂ ಪರ್ಜನ್ಯಂ ವರ್‌ಷಯತ
ಶ್ಛಂದಸಾಂ ವಾ ಏಷ ರಸೋ ಯದ್ವಶಾ ರಸ ಇವ ಖಲು ವೈ
ವೃಷ್ಟಿಶ್ಛಂದಸಾಮೇವ ರಸೇನ [೩] ರಸಂ ವೃಷ್ಟಿಮವರುಂಧೇ

---

ತೌ । ಏವ । ಅಸ್ಮೈ । ಅಹೋರಾತ್ರಾಭ್ಯಾಮಿತ್ಯಹಃ – ರಾತ್ರಾಭ್ಯಾಮ್ । ಪರ್ಜನ್ಯಮ್ ।
ವರ್‌ಷಯತಃ । ಛಂದಸಾಮ್ । ವೈ । ಏಷಃ । ರಸಃ । ಯತ್ । ವಶಾ । ರಸಃ । ಇವ । ಖಲು ।
ವೈ । ವೃಷ್ಟಿಃ । ಛಂದಸಾಮ್ । ಏವ । ರಸೇನ । ರಸಮ್ । ವೃಷ್ಟಿಮ್ । ಅವೇತಿ । ರುಂಧೇ ।

---

| | |
|---|---|
| ತೌ ಏವ ಅಸ್ಮೈ ಅಹೋರಾತ್ರಾಭ್ಯಾಮ್ ಪರ್ಜನ್ಯಮ್ ವರ್‌ಷಯತಃ | ತೃಪ್ತರಾದ ಆ ಮಿತ್ರಾವರುಣರು ಹಗಲು ರಾತ್ರಿಗಳಿಂದ ಮಳೆಯನ್ನು ಸುರಿಸುತ್ತಾರೆ. |
| ಛಂದಸಾಮ್ ವೈ ಏಷಃ ರಸಃ ಯತ್ ವಶಾ | ಈ ಯಾಗದ ಪಶುವು ಛಂದಸ್ಸುಗಳಲ್ಲಿ ಮುಖ್ಯವಾದ ಗಾಯತ್ರಿಯ ರಸರೂಪವಾಗಿದೆ. |
| ವೃಷ್ಟಿಃ ರಸಃ ಇವ ಖಲು ವೈ | ಮಳೆಯ ನೀರೂ ಸಸ್ಯಾದಿಗಳನ್ನು ಪೋಷಿಸುವ ರಸರೂಪವಾಗಿದೆಯಷ್ಟೆ. |
| ಛಂದಸಾಮ್ ಏವ ರಸೇನ | [ಈ ಯಾಗದ ಯಜಮಾನನು] ರಸರೂಪವಾದ ಬಂಜೆ ಹಸುವಿನಿಂದಲೇ |
| ರಸಮ್ ವೃಷ್ಟಿಮ್ ಅವರುಂಧೇ | ರಸರೂಪವಾದ ವೃಷ್ಟಿಯನ್ನು ಪಡೆಯುತ್ತಾನೆ. |

---

ಸಂತುಷ್ಟರಾದ ಮಿತ್ರಾವರುಣದೇವತೆಗಳು ಯಜಮಾನನು ಅಪೇಕ್ಷಿಸಿದ ಮಳೆಯನ್ನು ಹಗಲು–ರಾತ್ರಿಗಳಿಂದ ಸುರಿಸುತ್ತಾರೆ. ಯಾಗದ ದ್ವಿರೂಪವಾದ ವಂಧ್ಯಪಶುವು ಗಾಯತ್ರೀಛಂದಸ್ಸಿನ ರಸರೂಪವಾಗಿದೆ. ಮಳೆಯೂ ಸಸ್ಯಾದಿಗಳನ್ನು ಪೋಷಿಸುವ ರಸರೂಪವಾಗಿದೆ. ಹೀಗೆ ಯಜಮಾನನು ರಸರೂಪವಾದ ಪಶುವಿನಿಂದ ರಸರೂಪವಾದ ವೃಷ್ಟಿಯನ್ನು ಪಡೆದು ಸಸ್ಯಾದಿವೃದ್ಧಿಯಿಂದ ಸುಖಪಡುತ್ತಾನೆ.

ಮೈತ್ರಾವರುಣೀಂ ದ್ವಿರೂಪಾಮಾಲಭೇತ ಪ್ರಜಾಕಾಮೋ

ಮೈತ್ರಂ ವಾ ಅಹರ್ವಾರುಣೀ ರಾತ್ರಿರಹೋರಾತ್ರಾಭ್ಯಾಂ

ಖಲು ವೈ ಪ್ರಜಾಃ ಪ್ರಜಾಯಂತೇ ಮಿತ್ರಾವರುಣಾವೇವ

ಸ್ವೇನ ಭಾಗಧೇಯೇನೋಪಧಾವತಿ

---

**ಮೈತ್ರಾವರುಣೀಮಿತಿ ಮೈತ್ರಾ-ವರುಣೀಮ್** । ದ್ವಿರೂಪಾಮಿತಿ ದ್ವಿ-ರೂಪಾಮ್ । ಆ ಇತಿ । ಲಭೇತ । ಪ್ರಜಾಕಾಮ ಇತಿ ಪ್ರಜಾ-ಕಾಮಃ । ಮೈತ್ರಮ್ । ವೈ । ಅಹಃ । ವಾರುಣೀ । ರಾತ್ರಿಃ । ಅಹೋರಾತ್ರಾಭ್ಯಾಮಿತ್ಯಹಃರಾತ್ರಾಭ್ಯಾಮ್ । ಖಲು । ವೈ । ಪ್ರಜಾ ಇತಿ ಪ್ರ-ಜಾಃ । ಪ್ರೇತಿ । ಜಾಯಂತೇ । ಮಿತ್ರಾವರುಣಾವಿತಿ ಮಿತ್ರಾ-ವರುಣೌ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ ।

---

**ಪ್ರಜಾಕಾಮನಿಗೆ ವಿಹಿತವಾದ ಹಿಂದಿನ ಯಾಗ; ಪ್ರಶಂಸೆ**

| | |
|---|---|
| ಪ್ರಜಾಕಾಮಃ ಮೈತ್ರಾವರುಣೀಮ್ ದ್ವಿರೂಪಾಮ್ ಆಲಭೇತ | ಪ್ರಜೆಗಳನ್ನು ಬಯಸುವವನು ಮಿತ್ರಾವರುಣ ದೇವತೆಗಳಿಗಾಗಿ ಎರಡು ಬಣ್ಣದ ವಂಧ್ಯ ಪಶುವಿನ ಯಾಗವನ್ನು ಮಾಡಬೇಕು. |
| ಮೈತ್ರಮ್ ವೈ ಅಹಃ | ಹಗಲು ಸೂರ್ಯಾತ್ಮಕನಾದ ಮಿತ್ರನಿಗೆ ಸಂಬಂಧಿಸಿದುದು. |
| ವಾರುಣೀ ರಾತ್ರಿಃ | ರಾತ್ರಿಯು ಆಚ್ಛಾದಕನಾದ ವರುಣನಿಗೆ ಸಂಬಂಧಿಸಿದುದು. |
| ಅಹೋರಾತ್ರಾಭ್ಯಾಮ್ ಖಲು ವೈ ಪ್ರಜಾಃ ಪ್ರಜಾಯಂತೇ | ಹಗಲು-ರಾತ್ರಿಗಳಿಂದಲೇ ಪ್ರಜೆಗಳು ಹುಟ್ಟುತ್ತಾರಷ್ಟೆ. |
| ಮಿತ್ರಾವರುಣೌ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಈ ದ್ವಿರೂಪಪಶುಯಾಗದಿಂದ ಯಜಮಾನನು] ಮಿತ್ರಾವರುಣರಿಗೆ ಅವರ ಭಾಗವನ್ನು ಕೊಟ್ಟು ಆರಾಧಿಸಿದವನಾಗುತ್ತಾನೆ. |

ತಾವೇವಾಸ್ಮಾ ಅಹೋರಾತ್ರಾಭ್ಯಾಂ ಪ್ರಜಾಂ

ಪ್ರಜನಯತಶ್ಛಂದಸಾಂ ವಾ ಏಷ ರಸೋ ಯದ್ವಶಾ

ರಸ ಇವ ಖಲು ವೈ ಪ್ರಜಾ

---

ತೌ । ಏವ । ಅಸ್ಮೈ । ಅಹೋರಾತ್ರಾಭ್ಯಾಮಿತ್ಯಹಃ – ರಾತ್ರಾಭ್ಯಾಮ್ । ಪ್ರಜಾಮಿತಿ ಪ್ರ–ಜಾಮ್ । ಪ್ರೇತಿ । ಜನಯತಃ । ಛಂದಸಾಮ್ । ವೈ । ಏಷಃ । ರಸಃ । ಯತ್ । ವಶಾ । ರಸಃ । ಇವ । ಖಲು । ವೈ । ಪ್ರಜೇತಿ ಪ್ರ–ಜಾ ।

---

| | |
|---|---|
| ತೌ ಏವ ಅಸ್ಮೈ ಅಹೋರಾತ್ರಾಭ್ಯಾಮ್ ಪ್ರಜಾಮ್ ಪ್ರಜನಯತಃ | ಆ ಮಿತ್ರಾವರುಣದೇವತೆಗಳೇ ಹಗಲು ರಾತ್ರಿಗಳಿಂದ ಪ್ರಜೆಯನ್ನು ಉಂಟು ಮಾಡುತ್ತಾರೆ. |
| ಛಂದಸಾಮ್ ವೈ ಏಷಃ ರಸಃ ಯತ್ ವಶಾ | ದ್ವಿರೂಪವಾದ ವಂಧ್ಯಪಶುವು ಯಾವುದುಂಟೋ ಅದು ಛಂದಸ್ಸಿನ ರಸರೂಪವಾಗಿದೆ. |
| ಪ್ರಜಾ ರಸಃ ಇವ ಖಲು ವೈ | ಪ್ರಜೆಯೂ ರಸರೂಪವೇ ಆಗಿದೆಯಷ್ಟೆ. |

---

ಮಕ್ಕಳನ್ನು ಬಯಸುವವನು ಮಿತ್ರಾವರುಣದೇವತೆಗಳಿಗಾಗಿ ಎರಡು ಬಣ್ಣದ ಬಂಜೆ ಹಸುಗಳನ್ನು ಯಾಗ ಮಾಡಬೇಕು. ಹಗಲು ಪ್ರಕಾಶಕನಾದ ಮಿತ್ರನಿಗೆ ಸಂಬಂಧಿಸಿದೆ. ರಾತ್ರಿಯು ಆಚ್ಛಾದಕನಾದ ವರುಣನಿಗೆ ಸಂಬಂಧಿಸಿದೆ. ಈ ಯಾಗದಿಂದ ಹಗಲು ರಾತ್ರಿಗಳ ಒಡೆಯರಾದ ಮಿತ್ರಾವರುಣರು ಸುಪ್ರೀತರಾಗುತ್ತಾರೆ. ಅವರು ಈ ಯಜಮಾನನಿಗೆ ಹಗಲು–ರಾತ್ರಿಗಳಿಂದ ಮಕ್ಕಳನ್ನು ಉಂಟು ಮಾಡುತ್ತಾರೆ. ಗಾಯತ್ರೀಛಂದಸ್ಸಿನ ರಸದಿಂದ ಈ ದ್ವಿರೂಪವಶೆಯು ಹುಟ್ಟಿರುವುದರಿಂದ ಅದು ರಸರೂಪವಾಗಿದೆ.

ಛಂದಸಾಮೇವ ರಸೇನ ರಸಂ ಪ್ರಜಾಮವ [..ಮವ

(೪) ರುಂಧೇ] ರುಂಧೇ ವೈಶ್ವದೇವೀಂ ಬಹುರೂಪಾ-

ಮಾಲಭೇತಾನ್ನಕಾಮೋ ವೈಶ್ವದೇವಂ ವಾ ಅನ್ನಂ

---

ಛಂದಸಾಮ್ । ಏವ । ರಸೇನ । ರಸಮ್ । ಪ್ರಜಾಮಿತಿ ಪ್ರ-ಜಾಮ್ । ಅವೇತಿ । ರುಂಧೇ । ವೈಶ್ವದೇವೀಮಿತಿ ವೈಶ್ವ-ದೇವೀಮ್ । ಬಹುರೂಪಾಮಿತಿ ಬಹು-ರೂಪಾಮ್ । ಏತಿ । ಲಭೇತ । ಅನ್ನಕಾಮಃ ಇತ್ಯನ್ನ-ಕಾಮಃ । ವೈಶ್ವದೇವಮಿತಿ ವೈಶ್ವ-ದೇವಮ್ । ವೈ । ಅನ್ನಮ್ ।

---

| | |
|---|---|
| ಛಂದಸಾಮ್ ರಸೇನ ಏವ ರಸಮ್ ಪ್ರಜಾಮ್ ಅವರುಂಧೇ | [ಈ ಪಶುಯಾಗದಿಂದ] ಯಜಮಾನನು ಛಂದಸ್ಸುಗಳ ರಸದಿಂದಲೇ ರಸರೂಪವಾದ ಪ್ರಜೆಯನ್ನು ಪಡೆಯುತ್ತಾನೆ. |

**ಅನ್ನಕಾಮನಿಗೆ ವಿಹಿತವಾದ ಪಶುಯಾಗ; ಪ್ರಶಂಸೆ**

| | |
|---|---|
| ಅನ್ನಕಾಮಃ ವೈಶ್ವದೇವೀಮ್ ಬಹುರೂಪಾಮ್ ಆಲಭೇತ | ಅನ್ನಸಮೃದ್ಧಿಯನ್ನು ಬಯಸುವವನು ಹಲವು ಬಣ್ಣಗಳುಳ್ಳ ವಂಧ್ಯಪಶುವನ್ನು ವಿಶ್ವೇ-ದೇವರಿಗಾಗಿ ಯಾಗ ಮಾಡಬೇಕು. |
| ಅನ್ನಮ್ ವೈಶ್ವದೇವಮ್ ವೈ | ಅನ್ನವು ಸರ್ವದೇವಭೋಗ್ಯವಾಗಿ ವಿಶ್ವೇ ದೇವರಿಗೆ ಸಂಬಂಧಿಸಿದೆ. |

---

ಪ್ರಜೆಯೂ ರಸಪರಿಣಾಮವೇ ಆಗಿದೆ. ಆದುದರಿಂದ ಯಜಮಾನನು ರಸದಿಂದಲೇ ರಸವನ್ನು ಪಡೆಯುತ್ತಾನೆ. ಪ್ರಜಾವಂತನಾಗುತ್ತಾನೆ.

ಅನ್ನಸಮೃದ್ಧಿಯನ್ನು ಬಯಸುವವನು ಬಹುರೂಪವಂಧ್ಯಪಶುವನ್ನು ವಿಶ್ವೇ ದೇವರಿಗೆ ಯಾಗ ಮಾಡಬೇಕು. ಸರ್ವದೇವತಾಭೋಜ್ಯವಾಗಿ ಅನ್ನವು ವಿಶ್ವೇದೇವರಿಗೆ

ವಿಶ್ವಾನೇವ ದೇವಾನ್ತ್ಸ್ವೇನ ಭಾಗಧೇಯೇನೋಪಧಾವತಿ

ತ ಏವಾಸ್ಮಾ ಅನ್ನಂ ಪ್ರಯಚ್ಛಂತ್ಯನ್ನಾದ ಏವ ಭವತಿ

ಛಂದಸಾಂ ವಾ ಏಷ ರಸೋ ಯದ್ವಶಾ

---

ವಿಶ್ವಾನ್ । ಏವ । ದೇವಾನ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ತೇ । ಏವ । ಅಸ್ಮೈ । ಅನ್ನಮ್ । ಪ್ರೇತಿ । ಯಚ್ಛಂತಿ । ಅನ್ನಾದ ಇತ್ಯನ್ನ–ಅದಃ । ಏವ । ಭವತಿ । ಛಂದಸಾಮ್ । ವೈ । ಏಷಃ । ರಸಃ । ಯತ್ । ವಶಾ ।

---

| | |
|---|---|
| ವಿಶ್ವಾನ್ ಏವ ದೇವಾನ್ ಸ್ವೇನ ಭಾಗಧೇಯೇನ ಉಪಧಾವತಿ | [ಯಜಮಾನನು] ವಿಶ್ವೇದೇವರನ್ನು ಅವರ ಹವಿರ್ಭಾಗಸಮರ್ಪಣೆಯಿಂದ ತುಷ್ಟಿಪಡಿಸುತ್ತಾನೆ. |
| ತೇ ಏವ ಅಸ್ಮೈ ಅನ್ನಮ್ ಪ್ರಯಚ್ಛಂತಿ | ಅವರು ಈ ಯಜಮಾನನಿಗೆ ಅನ್ನಸಮೃದ್ಧಿಯನ್ನೀಯುತ್ತಾರೆ. |
| ಅನ್ನಾದಃ ಏವ ಭವತಿ | ಯಜಮಾನನು ಅನ್ನಭೋಗಿಯೇ ಆಗುತ್ತಾನೆ. |
| ಯತ್ ವಶಾ ಛಂದಸಾಮ್ ವೈ ಏಷಃ ರಸಃ | ಈ ಬಹುರೂಪವಂಧ್ಯಪಶುವು ಗಾಯತ್ರೀ ಛಂದಸ್ಸಿನ ರಸರೂಪವಾಗಿದೆ. |

---

ಸಂಬಂಧಿಸಿದೆ. ಈ ಯಾಗದಿಂದ ತುಷ್ಟರಾದ ವಿಶ್ವೇದೇವರು ಅನ್ನವನ್ನು ಕೊಡುತ್ತಾರೆ. ಯಜಮಾನನು ಅನ್ನಭೋಗಿಯಾಗುತ್ತಾನೆ. ವಂಧ್ಯಪಶುವು ಛಂದಸ್ಸುಗಳ ರಸ ; ಅನ್ನವೂ ರಸರೂಪವೇ. ಈ ಯಾಗದಿಂದ ಯಜಮಾನನು ರಸದಿಂದ ರಸವನ್ನು ಪಡೆಯುತ್ತಾನೆ.

ರಸ ಇವ ಖಲು ವಾ ಅನ್ನಂ ಛಂದಸಾಮೇವ ರಸೇನ

ರಸಮನ್ನಮವರುಂಧೇ ವೈಶ್ವದೇವೀಂ ಬಹುರೂಪಾಮಾ

ಲಭೇತ ಗ್ರಾಮಕಾಮೋ ವೈಶ್ವದೇವಾ ವೈ [೫] ಸಜಾತಾ

---

ರಸಃ। ಇವ। ಖಲು। ವೈ। ಅನ್ನಮ್। ಛಂದಸಾಮ್। ಏವ। ರಸೇನ। ರಸಮ್। ಅನ್ನಮ್। ಅವೇತಿ। ರುಂಧೇ। **ವೈಶ್ವದೇವೀಮಿತಿ ವೈಶ್ವ-ದೇವೀಮ್।** ಬಹುರೂಪಾಮಿತಿ ಬಹು-ರೂಪಾಮ್। ಏತಿ। ಲಭೇತ। ಗ್ರಾಮಕಾಮ ಇತಿ ಗ್ರಾಮ-ಕಾಮಃ। ವೈಶ್ವದೇವಾ ಇತಿ ವೈಶ್ವ-ದೇವಾಃ। ವೈ। ಸಜಾತಾ ಇತಿ ಸ-ಜಾತಾಃ।

---

| | |
|---|---|
| ಅನ್ನಮ್ ರಸಃ ಇವ ಖಲು ವೈ | ಬಲವರ್ಧಕವಾದ ಅನ್ನವೂ ರಸರೂಪವಾಗಿದೆ. |
| ಛಂದಸಾಮ್ ರಸೇನ ಏವ ರಸಮ್ ಅನ್ನಮ್ ಅವರುಂಧೇ | ಛಂದಸ್ಸುಗಳ ರಸರೂಪವಾದ ವಂಧ್ಯ ಪಶುವಿನಿಂದ ರಸರೂಪವಾದ ಅನ್ನವನ್ನು ಯಜಮಾನನು ಪಡೆಯುತ್ತಾನೆ. |

**ಗ್ರಾಮಕಾಮನಿಗೆ ವಿಹಿತವಾದ ಇದೇ ಪಶುಯಾಗ; ಪ್ರಶಂಸೆ**

| | |
|---|---|
| ಗ್ರಾಮಕಾಮಃ ವೈಶ್ವದೇವೀಮ್ ಬಹುರೂಪಾಮ್ ಆಲಭೇತ | ಗ್ರಾಮಮುಖ್ಯಸ್ಥನಾಗಲು ಬಯಸುವವನು ಬಹುವರ್ಣಗಳುಳ್ಳ ವಂಧ್ಯಪಶುವನ್ನು ವಿಶ್ವೇದೇವರಿಗೆ ಯಾಗ ಮಾಡಬೇಕು. |
| ಸಜಾತಾಃ ವೈಶ್ವದೇವಾಃ ವೈ | ಜ್ಞಾತಿಭೃತ್ಯಾದಿಗಳು ಬಹುತ್ವಸಾಮ್ಯದಿಂದ ವಿಶ್ವೇದೇವರಿಗೆ ಸಂಬಂಧಿಸಿರುತ್ತಾರೆ. |

---

ಅವನ ಅನ್ನಭೋಗೇಚ್ಛೆಯು ಪೂರ್ಣವಾಗುತ್ತದೆ.

ಗ್ರಾಮಕಾಮನು ಹಲವು ಬಣ್ಣಗಳ ಬಂಜೆ ಹಸುವನ್ನು ವಿಶ್ವೇದೇವರಿಗೆ ಯಾಗ ಮಾಡಬೇಕು. ಜ್ಞಾತಿ-ಭೃತ್ಯಾದಿಗಳು ವಿಶ್ವೇದೇವರಿಗೆ ಸಂಬಂಧಿಸಿರುತ್ತಾರೆ.

ವಿಶ್ವಾನೇವ ದೇವಾನ್ಥ್ಸ್ವೇನ ಭಾಗಧೇಯೇನೋಪ

ಧಾವತಿ ತ ಏವಾಸ್ಮೈ ಸಜಾತಾನ್ಪ್ರಯಚ್ಛಂತಿ ಗ್ರಾಮ್ಯೇವ

ಭವತಿ ಛಂದಸಾಂ ವಾ ಏಷ ರಸೋ ಯದ್ವಶಾ

---

ವಿಶ್ವಾನ್ । ಏವ । ದೇವಾನ್ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ ।

ಧಾವತಿ । ತೇ । ಏವ । ಅಸ್ಮೈ । ಸಜಾತಾನಿತಿ ಸ-ಜಾತಾನ್ । ಪ್ರೇತಿ । ಯಚ್ಛಂತಿ । ಗ್ರಾಮೀ ।

ಏವ । ಭವತಿ । ಛಂದಸಾಮ್ । ವೈ । ಏಷಃ । ರಸಃ । ಯತ್ । ವಶಾ ।

---

| | |
|---|---|
| ವಿಶ್ವಾನ್ ಏವ ದೇವಾನ್ ಸ್ವೇನ ಭಾಗಧೇಯೇನ ಉಪಧಾವತಿ | [ಯಜಮಾನನು ಈ ಯಾಗದಿಂದ] ವಿಶ್ವೇದೇವರಿಗೆ ಬೇಕಾದ ಹವಿರ್ಭಾಗವನ್ನು ಕೊಟ್ಟು ಸೇವಿಸಿದವನಾಗುತ್ತಾನೆ. |
| ತೇ ಏವ ಅಸ್ಮೈ ಸಜಾತಾನ್ ಪ್ರಯಚ್ಛಂತಿ | ಆ ವಿಶ್ವೇದೇವರು ಈ ಯಜಮಾನನಿಗೆ ಜ್ಞಾತಿ-ಭೃತ್ಯಾದಿಗಳನ್ನು ಅಧೀನರನ್ನಾಗಿ ಮಾಡುತ್ತಾರೆ. |
| ಗ್ರಾಮೀ ಏವ ಭವತಿ | ಯಜಮಾನನು ಗ್ರಾಮಸ್ವಾಮಿಯೇ ಆಗುತ್ತಾನೆ. |
| ಯತ್ ವಶಾ ಛಂದಸಾಮ್ ವೈ ಏಷಃ ರಸಃ | ಈ ಬಹುವರ್ಣದ ವಂಧ್ಯಪಶುವೆಂಬುದು ಛಂದಸ್ಸುಗಳ ರಸವಾಗಿದೆ. |

---

ಈ ಯಾಗದಿಂದ ಯಜಮಾನನು ವಿಶ್ವೇದೇವರಿಗೆ ಇಷ್ಟವಾದ ಭಾಗವನ್ನು ಕೊಟ್ಟು ಆರಾಧಿಸಿದವನಾಗುತ್ತಾನೆ. ತೃಪ್ತರಾದ ವಿಶ್ವೇದೇವರು ಈ ಯಜಮಾನನಿಗೆ ಜ್ಞಾತಿ-ಭೃತ್ಯಾದಿಗಳನ್ನೂ, ಗ್ರಾಮವಾಸಿಗಳನ್ನೂ ವಶವರ್ತಿಗಳನ್ನಾಗಿ ಮಾಡುತ್ತಾರೆ. ಯಜಮಾನನು ಗ್ರಾಮದ ಒಡೆಯನಾಗುತ್ತಾನೆ. ಯಾಗಪಶುವೂ ಛಂದಸ್ಸುಗಳಲ್ಲಿ

ರಸ ಇವ ಖಲು ವೈ ಸಜಾತಾಶ್ಛಂದಸಾಮೇವ ರಸೇನ

ರಸಗ್ಂ ಸಜಾತಾನವರುಂಧೇ ಬಾರ್ಹಸ್ಪತ್ಯಮುಕ್ಷವಶ

ಮಾಲಭೇತ ಬ್ರಹ್ಮವರ್ಚಸಕಾಮೋ

---

ರಸಃ । ಇವ । ಖಲು । ವೈ । ಸಜಾತಾ ಇತಿ ಸ-ಜಾತಾಃ । ಛಂದಸಾಮ್ । ಏವ । ರಸೇನ । ರಸಮ್ । ಸಜಾತಾನಿತಿ ಸ-ಜಾತಾನ್ । ಅವೇತಿ । ರುಂಧೇ । ಬಾರ್ಹಸ್ಪತ್ಯಮ್ । ಉಕ್ಷವಶಮಿತ್ಯುಕ್ಷ-ವಶಮ್ । ಏತಿ । ಲಭೇತ । ಬ್ರಹ್ಮವರ್ಚಸಕಾಮ ಇತಿ ಬ್ರಹ್ಮವರ್ಚಸ-ಕಾಮಃ ।

---

| | |
|---|---|
| ಸಜಾತಾಃ ರಸಃ ಇವ ಖಲು ವೈ | ಸ್ವಾಮಿಭೃತ್ಯಾದಿಗಳೂ ಉಪಕಾರಿಗಳಾದುದರಿಂದ ರಸವೇ ಆಗಿರುತ್ತಾರೆ. |
| ಛಂದಸಾಮ್ ರಸೇನ ಏವ ರಸಮ್ ಸಜಾತಾನ್ ಅವರುಂಧೇ | [ಈ ಯಾಗದಿಂದ] ಯಜಮಾನನು ಛಂದಸ್ಸುಗಳ ಸಾರದಿಂದಲೇ ರಸರೂಪರಾದ ಸ್ವಾಮಿ-ಭೃತ್ಯಾದಿಗಳನ್ನು ಪಡೆಯುತ್ತಾನೆ. |

**ಬ್ರಹ್ಮವರ್ಚಸಕಾಮನಿಗೆ ವಿಹಿತವಾದ ಉಕ್ಷಪಶುಯಾಗ; ಪ್ರಶಂಸೆ**

| | |
|---|---|
| ಬ್ರಹ್ಮವರ್ಚಸಕಾಮಃ ಬಾರ್ಹಸ್ಪತ್ಯಮ್ ಉಕ್ಷವಶಮ್ ಆಲಭೇತ | ಬ್ರಹ್ಮವರ್ಚಸವನ್ನು ಬಯಸುವವನು ವ್ಯರ್ಥ ವೀರ್ಯವುಳ್ಳ ಇಚ್ಛೆ ಬಂದಂತೆ ಸಂಚರಿಸುವ ಹೋರಿಯನ್ನು ಬೃಹಸ್ಪತಿದೇವತೆಗೆ ಯಾಗ ಮಾಡಬೇಕು. |

---

ಮುಖ್ಯವಾದ ಗಾಯತ್ರೀಛಂದಸ್ಸಿನ ರಸರೂಪವಾಗಿದೆ. ಜ್ಞಾತಿಗಳೇ ಮೊದಲಾದವರೂ ಉಪಕಾರ ಮಾಡುವವರಾಗಿ ರಸ [ಸಾರ] ರೂಪರಾಗಿರುತ್ತಾರೆ. ಈ ಯಜಮಾನನು ರಸದಿಂದಲೇ ರಸವನ್ನು ಪಡೆದವನಾಗುತ್ತಾನೆ. ಗ್ರಾಮಸ್ವಾಮಿಯಾಗಬೇಕೆಂಬ ಅವನ ಇಷ್ಟಾರ್ಥವು ಕೈಗೂಡುತ್ತದೆ.

ಬ್ರಹ್ಮವರ್ಚಸವನ್ನು ಬಯಸುವವನು ಸ್ವೇಚ್ಛೆಯಾಗಿ ಗೋವುಗಳ ಜೊತೆಯಲ್ಲಿ ತಿರುಗಾಡುವ ಹೋರಿಯನ್ನು ಬೃಹಸ್ಪತಿಗಾಗಿ ಯಾಗ ಮಾಡಬೇಕು. ಗಾಯತ್ರಿಯ

ಬೃಹಸ್ಪತಿಮೇವ ಸ್ವೇನ ಭಾಗಧೇಯೇನೋಪಧಾವತಿ ಸ

ಏವಾಸ್ಮಿನ್ಬ್ರಹ್ಮವರ್ಚಸಂ [..ವರ್ಚಸಮ್ (೬) ದಧಾತಿ

ಬ್ರಹ್ಮವರ್ಚಸ್ಯೇವ] ದಧಾತಿ ಬ್ರಹ್ಮವರ್ಚಸ್ಯೇವ ಭವತಿ

ವಶಂ ವಾ ಏಷ ಚರತಿ ಯದುಕ್ಷಾ

---

ಬೃಹಸ್ಪತಿಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮಿನ್ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ದಧಾತಿ । ಬ್ರಹ್ಮವರ್ಚಸೀತಿ ಬ್ರಹ್ಮ-ವರ್ಚಸೀ । ಏವ । ಭವತಿ । ವಶಮ್ । ವೈ । ಏಷಃ । ಚರತಿ । ಯತ್ । ಉಕ್ಷಾ ।

---

| | |
|---|---|
| ಬೃಹಸ್ಪತಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಆ ಹವಿರ್ಭಾಗದಿಂದ ಬೃಹಸ್ಪತಿಯನ್ನು ಅವನ ಹವಿರ್ಭಾಗದಿಂದ ಸೇವಿಸಿದವನಾಗುತ್ತಾನೆ. |
| ಸಃ ಏವ ಅಸ್ಮಿನ್ ಬ್ರಹ್ಮವರ್ಚಸಮ್ ದಧಾತಿ | ತುಷ್ಟನಾದ ಬೃಹಸ್ಪತಿಯೇ ಈ ಯಜಮಾನ ನಲ್ಲಿ ಬ್ರಹ್ಮವರ್ಚಸವನ್ನು ನೆಲೆಗೊಳಿಸುತ್ತಾನೆ. |
| ಬ್ರಹ್ಮವರ್ಚಸೀ ಏವ ಭವತಿ | ಯಜಮಾನನು ಬ್ರಹ್ಮವರ್ಚಸಿಯೇ ಆಗುತ್ತಾನೆ. |
| ಯತ್ ಉಕ್ಷಾ ವಶಮ್ ವೈ ಏಷಃ ಚರತಿ | ಈ ಹೋರಿಯೆಂಬುದು ಗೋವುಗಳ ವಶವರ್ತಿಯಾಗಿ ತಿರುಗಾಡುತ್ತದೆ. |

---

ರಸವನ್ನು ಪರಿಗ್ರಹಿಸಿದ ಬೃಹಸ್ಪತಿಗೆ ಆ ಉಕ್ಷವಶವು ತನ್ನ ಭಾಗವಾಗಿದೆ. ಈ ಯಾಗ ದಿಂದ ಬೃಹಸ್ಪತಿಯು ಸುಪ್ರೀತನಾಗಿ ಯಜಮಾನನಿಗೆ ಬ್ರಹ್ಮವರ್ಚಸವನ್ನು ಕೊಡು ತ್ತಾನೆ. ಯಜಮಾನನು ಬ್ರಹ್ಮವರ್ಚಸಿಯಾಗುತ್ತಾನೆ. ಈ ಹೋರಿಯು ಹಸುಗಳ ಹಿಂದೆ ಓಡಾಡುವುದರಿಂದ ಅವುಗಳ ವಶವಾಗಿ ತಿರುಗಾಡುತ್ತದೆ. ಇಂದ್ರಿಯಗಳನ್ನು

ವಶ ಇವ ಖಲು ವೈ ಬ್ರಹ್ಮವರ್ಚಸಂ ವಶೇನೈವ ವಶಂ

ಬ್ರಹ್ಮವರ್ಚಸಮವರುಂಧೇ ರೌದ್ರೀಗ್ಂ

ರೋಹಿಣೀಮಾಲಭೇತಾಭಿಚರನ್ರುದ್ರಮೇವ ಸ್ವೇನ

ಭಾಗಧೇಯೇನೋಪಧಾವತಿ

---

ವಶಃ । ಇವ । ಖಲು । ವೈ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ವಶೇನ । ಏವ । ವಶಮ್ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ಅವೇತಿ । ರುಂಧೇ । **ರೌದ್ರೀಮ್ ।** ರೋಹಿಣೀಮ್ । ಏತಿ । ಲಭೇತ । ಅಭಿಚರನ್ನಿತ್ಯಭಿ-ಚರನ್ನ್ । ರುದ್ರಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಬ್ರಹ್ಮವರ್ಚಸಮ್ ವಶಃ ಇವ ಖಲು ವೈ | ಬ್ರಹ್ಮವರ್ಚಸವೂ ವಶದಂತೆಯೇ ಇದೆ. |
| ವಶೇನ ಏವ ವಶಮ್ ಬ್ರಹ್ಮವರ್ಚಸಮ್ ಅವರುಂಧೇ | ವಶರೂಪವಾದ ಯಾಗಪಶುವಿನಿಂದ ಯಜಮಾನನು ವಶರೂಪವಾದ ಬ್ರಹ್ಮ ವರ್ಚಸವನ್ನು ಹೊಂದುತ್ತಾನೆ. |

**ಶತ್ರುಮಾರಣಕಾಮನಿಗೆ ವಿಹಿತವಾದ ರೌದ್ರಪಶುಯಾಗ; ಪ್ರಶಂಸೆ**

| | |
|---|---|
| ಅಭಿಚರನ್ ರೌದ್ರೀಮ್ ರೋಹಿಣೀಮ್ ಆಲಭೇತ | ಶತ್ರುಮಾರಣವನ್ನು ಮಾಡಬಯಸುವವನು ಕೆಂಬಣ್ಣದ ಬಂಜೆ ಹಸುವನ್ನು ರುದ್ರ ದೇವನಿಗಾಗಿ ಯಾಗ ಮಾಡಬೇಕು. |
| ರುದ್ರಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಪಶುವನ್ನು ಸಮರ್ಪಿಸಿ ಯಜಮಾನನು ರುದ್ರದೇವನಿಗೆ ಅವನ ಭಾಗವನ್ನು ಕೊಟ್ಟು ಸೇವಿಸುತ್ತಾನೆ. |

---

ವಶದಲ್ಲಿ ಇಟ್ಟುಕೊಳ್ಳುವ ಬ್ರಹ್ಮವರ್ಚಸವೂ ವಶೆ. ಹೀಗೆ ಯಜಮಾನನು ವಶದಿಂದ ವಶರೂಪವಾದ ಬ್ರಹ್ಮವರ್ಚಸವನ್ನು ಹೊಂದುತ್ತಾನೆ. ಶತ್ರುನಾಶವಾಗಬೇಕೆನ್ನುವವನು

ತಸ್ಮಾ ಏವೈನಮಾವೃಶ್ಚತಿ ತಾಜಗಾರ್ತಿಮಾರ್ಛತಿ

ರೋಹಿಣೀ ಭವತಿ ರೌದ್ರೀ ಹ್ಯೇಷಾ ದೇವತಯಾ ಸಮೃದ್ಧ್ಯೈ

ಸ್ಫ್ಯೋ ಯೂಪೋ ಭವತಿ ವಜ್ರೋ ವೈ ಸ್ಫ್ಯಃ

---

ತಸ್ಮೈ । ಏವ । ಏನಮ್ । ಐತಿ । ವೃಶ್ಚತಿ । ತಾಜಕ್ । ಆರ್ತಿಮ್ । ಐತಿ । ಋಚ್ಛತಿ । ರೋಹಿಣೀ । ಭವತಿ । ರೌದ್ರೀ । ಹಿ । ಏಷಾ । ದೇವತಯಾ । ಸಮೃದ್ಧ್ಯಾ ಇತಿ ಸಮ್-ಋದ್ಧ್ಯೈ । ಸ್ಫ್ಯಃ । ಯೂಪಃ । ಭವತಿ । ವಜ್ರಃ । ವೈ । ಸ್ಫ್ಯಃ ।

---

| | |
|---|---|
| ತಸ್ಮೈ ಏವ ಏನಮ್ ಆವೃಶ್ಚತಿ | ಆ ಯಜಮಾನನಿಗಾಗಿ ರುದ್ರನು ಈ ಶತ್ರುವನ್ನು ಭೇದಿಸುತ್ತಾನೆ. |
| ತಾಜಕ್ ಆರ್ತಿಮ್ ಆರ್ಛತಿ | ಆ ಶತ್ರುವು ಒಡನೆಯೇ ಮರಣವನ್ನು ಹೊಂದುತ್ತಾನೆ. |
| ರೋಹಿಣೀ ಭವತಿ | ಯಾಗಪಶುವು ಕೆಂಪುಬಣ್ಣದ್ದಾಗಿದೆ. |
| ರೌದ್ರೀ ಹಿ ಏಷಾ ದೇವತಯಾ ಸಮೃದ್ಧ್ಯೈ | ಈ ಪಶುವು ರುದ್ರನಿಗೆ ಸಂಬಂಧಿಸಿದುದಾಗಿದೆ. ಆದುದರಿಂದ ಬೇಗನೆ ಫಲ ಸಮೃದ್ಧಿಗೆ ಕಾರಣವಾಗುತ್ತದೆ. |

**ಯೂಪವಿಶೇಷವಿಧಾನ; ಪ್ರಶಂಸೆ**

| | |
|---|---|
| ಸ್ಫ್ಯಃ ಯೂಪಃ ಭವತಿ | ಯೂಪವು ಸ್ಫ್ಯದ ಆಕಾರವಾಗಿರಬೇಕು. |
| ಸ್ಫ್ಯಃ ವಜ್ರಃ ವೈ | ಸ್ಫ್ಯವು ಇಂದ್ರನ ವಜ್ರಾಯುಧದಂತೆ ಹಿಂಸಕವಷ್ಟೆ. |

---

ಕೆಂಬಣ್ಣದ ವಂಧ್ಯಪಶುವನ್ನು ರುದ್ರದೇವನಿಗಾಗಿ ಯಾಗ ಮಾಡಬೇಕು. ಆ ರೋಹಿಣೀ ಪಶುವು ರುದ್ರನು ಗ್ರಹಿಸಿದ ರಕ್ತದಿಂದ ಹುಟ್ಟಿದುದರಿಂದ ರುದ್ರದೇವನ ಭಾಗವಾಗಿದೆ. ಈ ಯಾಗದಿಂದ ಯಜಮಾನನು ರುದ್ರನನ್ನು ಸಂತೋಷಪಡಿಸುತ್ತಾನೆ. ಆ ರುದ್ರನು ಈ ಯಜಮಾನನಿಗಾಗಿ ಶತ್ರುವನ್ನು ಭೇದಿಸುತ್ತಾನೆ. ಶತ್ರುವು ಒಡನೆಯೇ ಸಾಯುತ್ತಾನೆ. ಪಶುವೂ ರಕ್ತವರ್ಣವಾಗಿದೆ. ರುದ್ರಾಧ್ಯಾಯದಲ್ಲಿ **'ನೀಲಗ್ರೀವೋ ವಿಲೋಹಿತಃ'** ಎಂದು ಹೇಳಿರುವಂತೆ ರುದ್ರದೇವನೂ ರಕ್ತವರ್ಣನಾಗಿದ್ದಾನೆ. ಈ ವರ್ಣಸಮಾನತೆಯು

ವಜ್ರಮೇವಾಸ್ಮೈ ಪ್ರಹರತಿ ಶರಮಯಂ ಬರ್‌ಹಿಶ್ಶೃಣಾತ್ಯೇ

ವೈನಂ ವೈಭೀದಕ ಇಧ್ಮೋ ಭಿನತ್ತ್ಯೇವೈನಮ್ ॥೪೭–7॥

[ಅಭಿ ಖಲು ವೃಷ್ಟಿಶ್ಛಂದಸಾಮೇವ ರಸೇನ ರಸಂ ಪ್ರಜಾಮುವ ವೈಶ್ವದೇವಾ

ವೈ ಬ್ರಹ್ಮವರ್ಚಸಂ ಯೂಪ ಏಕಾನ್ನವಿಗ್ಂಶತಿಶ್ಚ ॥]

---

ವಜ್ರಮ್ । ಏವ । ಅಸ್ಮೈ । ಪ್ರೇತಿ । ಹರತಿ । ಶರಮಯಮಿತಿ ಶರ–ಮಯಮ್ ।

ಬರ್‌ಹಿಃ । ಶೃಣಾತಿ । ಏವ । ಏನಮ್ । ವೈಭೀದಕಃ । ಇಧ್ಮಃ । ಭಿನತ್ತಿ । ಏವ ।

ಏನಮ್ ॥7॥

---

| | |
|---|---|
| ಅಸ್ಮೈ ವಜ್ರಮ್ ಏವ ಪ್ರಹರತಿ | ಯಜಮಾನನು ಈ ಶತ್ರುವಿನ ಮೇಲೆ ವಜ್ರಾಯುಧವನ್ನೇ ಪ್ರಹರಿಸಿದವನಾಗುತ್ತಾನೆ. |
| ಶರಮಯಮ್ ಬರ್‌ಹಿಃ | ಕಾಗೆಬಿದಿರಿನ ಬರ್‌ಹಿಸ್ಸನ್ನು ಹಾಕಬೇಕು. |
| ಏನಮ್ ಶೃಣಾತಿ ಏವ | ಇದರಿಂದ ಈ ಶತ್ರುವನ್ನು ಹಿಂಸಿಸಿದಂತಾಗುತ್ತದೆ. |
| ವೈಭೀದಕಃ ಇಧ್ಮಃ | ತಾರೆಮರದ ಇಧ್ಮವಾಗಬೇಕು. |
| ಏನಮ್ ಭಿನತ್ತಿ ಏವ | ಇದರಿಂದ ಶತ್ರುವನ್ನು ಭೇದಿಸುತ್ತಾನೆ. ಹೀಗೆ ಶತ್ರುನಾಶವಾಗುತ್ತದೆ. |

---

ಒಡನೆಯೇ ಯಜಮಾನನ ಇಷ್ಟಾರ್ಥಸಿದ್ಧಿಗೆ ಕಾರಣವಾಗುತ್ತದೆ.

ಈ ಯಾಗದಲ್ಲಿ ಅಷ್ಟಕೋನದ ಯೂಪದ ಬದಲು ಸ್ಫ್ಯಾಕೃತಿಯ (ಮರದ ಖಡ್ಗ) ಯೂಪವನ್ನು ಮಾಡಬೇಕು. ಇದರಿಂದ ಶತ್ರುವಿನ ಮೇಲೆ ವಜ್ರಾಯುಧವನ್ನು ಪ್ರಹರಿಸಿದಂತಾಗುತ್ತದೆ. ದರ್ಭೆಗಳ ಬದಲು ಕಾಗೆಬಿದಿರಿನ [ತೃಣವಿಶೇಷ] ಬರ್‌ಹಿಸ್ಸನ್ನು ಹಾಕಬೇಕು. ಇದರಿಂದ ವೈರಿಯನ್ನು ಕೊಂದೇ ಕೊಲ್ಲುತ್ತಾನೆ. ಈ ಯಾಗದ ಇಧ್ಮವು ತಾರೆಯ ಮರದ್ದಾಗಿರಬೇಕು. ಇದು ಶತ್ರುವನ್ನು ಭೇದಿಸುತ್ತದೆ. ✤

## ॥ ಅಷ್ಟಮೋಽನುವಾಕಃ ॥

ಅಸಾವಾದಿತ್ಯೋ ನ ವ್ಯರೋಚತ ತಸ್ಮೈ ದೇವಾಃ

---

ಅಸೌ । ಆದಿತ್ಯಃ । ನ । ವೀತಿ । ಅರೋಚತ । ತಸ್ಮೈ । ದೇವಾಃ ।

---

ಹಿಂದಿನ ಏಳನೆಯ ಅನುವಾಕದಲ್ಲಿ ಈ ಪಶುಯಾಗಗಳು ಹೇಳಲ್ಪಟ್ಟಿವೆ.

**ಬ್ರಹ್ಮತೇಜಃ ಪ್ರಜಾಂ ವೃಷ್ಟಿಮನ್ನಂ ಗ್ರಾಮಂ ತಥಾ ಪುನಃ ।**
**ಬ್ರಹ್ಮತೇಜೋಽಭಿಚಾರಂ ಚ ವಾಂಛತಾಂ ಪಶವಃ ಶ್ರುತಾಃ ॥**

ಬ್ರಹ್ಮತೇಜಸ್ಸು, ಪ್ರಜಾ, ವೃಷ್ಟಿ, ಅನ್ನ, ಗ್ರಾಮ, ಬ್ರಹ್ಮತೇಜಸ್ಸು ಮತ್ತು ಅಭಿಚಾರ ಇವುಗಳನ್ನು ಇಚ್ಛಿಸುವವರಿಗೆ ಕಾಮ್ಯಪಶುಯಾಗಗಳು ಹೇಳಲ್ಪಟ್ಟವು.

ಈ ಎಂಟನೆಯ ಅನುವಾಕದಲ್ಲಿ ಬ್ರಹ್ಮವರ್ಚಸಾದಿಗಳನ್ನು ಬಯಸುವವರಿಗೆ ಪಶುಯಾಗಗಳು ಹೇಳಲ್ಪಟ್ಟಿವೆ.

---

### ಬ್ರಹ್ಮವರ್ಚಸಕಾಮನಿಗೆ ವಿಹಿತವಾದ ಸೌರಯಾಗವಿಧಿ; ಪ್ರಶಂಸೆ

| | |
|---|---|
| ಅಸೌ ಆದಿತ್ಯಃ ನ ವ್ಯರೋಚತ | *ಈ ಪ್ರಕಾಶಕನಾದ ಸೂರ್ಯನು ಒಂದು ಕಾಲದಲ್ಲಿ ಕಾಂತಿಹೀನನಾದನು. |
| ತಸ್ಮೈ ದೇವಾಃ | ದೇವತೆಗಳು ಸೂರ್ಯನಿಗಾಗಿ |

---

ಒಂದು ಕಾಲದಲ್ಲಿ ಸೂರ್ಯನು ಕಾಂತಿಹೀನನಾದನು. ದೇವತೆಗಳು ಇದರ ಪರಿಹಾರವನ್ನು ಯೋಚಿಸಿದರು.

---

* ಶ್ರುತಿಯಲ್ಲಿ ಹಲವೆಡೆ 'ಅಸಾವಾದಿತ್ಯೋ ನ ವ್ಯರೋಚತ' ಎಂದು ಪಠಿತವಾಗಿದೆ. ಕಲ್ಪಭೇದ ದಿಂದ ಅಥವಾ ಯುಗಭೇದದಿಂದ ಇದರ ವ್ಯವಸ್ಥೆ ಎಂದು ತಿಳಿಯಬೇಕು.

ಪ್ರಾಯಶ್ಚಿತ್ತಿಮೈಚ್ಛನ್ತಸ್ಮಾ ಏತಾಗ್ಂ ಸೌರೀಗ್ಂ ಶ್ವೇತಾಂ ವಶಾಮಾಽಲಭಂತ ತಯೈವಾಸ್ಮಿನ್ರುಚಮದಧುರ್ಯೋ ಬ್ರಹ್ಮವರ್ಚಸಕಾಮಃ ಸ್ಯಾತ್ತಸ್ಮಾ ಏತಾಗ್ಂ ಸೌರೀಗ್ಂ ಶ್ವೇತಾಂ

---

ಪ್ರಾಯಶ್ಚಿತ್ತಿಮ್ । ಐಚ್ಛನ್ನ್ । ತಸ್ಮೈ । ಏತಾಮ್ । ಸೌರೀಮ್ । ಶ್ವೇತಾಮ್ । ವಶಾಮ್ । ಏತಿ । ಅಲಭಂತ । ತಯಾ । ಏವ । ಅಸ್ಮಿನ್ನ್ । ರುಚಮ್ । ಅದಧುಃ । ಯಃ । ಬ್ರಹ್ಮ-ವರ್ಚಸಕಾಮ ಇತಿ ಬ್ರಹ್ಮವರ್ಚಸ-ಕಾಮಃ । ಸ್ಯಾತ್ । ತಸ್ಮೈ । ಏತಾಮ್ । ಸೌರೀಮ್ । ಶ್ವೇತಾಮ್ ।

---

| | |
|---|---|
| ಪ್ರಾಯಶ್ಚಿತ್ತಿಮ್ ಐಚ್ಛನ್ನ್ | ಇದರ ಪರಿಹಾರವನ್ನು ಬಯಸಿದರು. |
| ತಸ್ಮೈ ಏತಾಮ್ ಸೌರೀಮ್ ಶ್ವೇತಾಮ್ ವಶಾಮ್ ಆಲಭಂತ | ಆ ಸೂರ್ಯನಿಗಾಗಿ ಬಿಳಿಯ ಬಣ್ಣದ ಗೊಡ್ಡು ಹಸುವನ್ನು ಸೂರ್ಯದೇವತಾಕವಾಗಿ ಯಾಗ ಮಾಡಿದರು. |
| ತಯಾ ಏವ ಅಸ್ಮಿನ್ ರುಚಮ್ ಅದಧುಃ | ಅದರಿಂದಲೇ ಈ ಸೂರ್ಯನಲ್ಲಿ ಸ್ವಾಭಾವಿಕ ವಾದ ಕಾಂತಿಯನ್ನು ನೆಲೆಗೊಳಿಸಿದರು. |
| ಯಃ ಬ್ರಹ್ಮವರ್ಚಸಕಾಮಃ ಸ್ಯಾತ್ | ಯಾವನು ಬ್ರಹ್ಮವರ್ಚಸವನ್ನು ಅಪೇಕ್ಷಿಸು ವನೋ |
| ತಸ್ಮೈ ಏತಾಮ್ ಸೌರೀಮ್ ಶ್ವೇತಾಮ್ | ಆ ಯಜಮಾನನಿಗಾಗಿ ಬಿಳಿಯ ಬಣ್ಣದ ವಂಧ್ಯಪಶುವನ್ನು ಸೂರ್ಯದೇವನಿಗಾಗಿ |

---

ಅವರು ಸೂರ್ಯದೇವತಾಕವಾದ ಶ್ವೇತವಂಧ್ಯಾಪಶುಯಾಗವನ್ನು ಮಾಡಿದರು. ಈ ಯಾಗದ ಫಲವಾಗಿ ಸೂರ್ಯನಲ್ಲಿ ಸ್ವಾಭಾವಿಕತೇಜಸ್ಸನ್ನು ಉಂಟು ಮಾಡಿದರು. ಬ್ರಹ್ಮ ವರ್ಚಸವನ್ನು ಬಯಸುವವನು ಈ ಯಾಗವನ್ನು ಮಾಡಬೇಕು. ಇದರಿಂದ ಆದಿತ್ಯನು

ವಶಾಮಾಲಭೇತಾಮುಮೇವಾದಿತ್ಯಗ್ಂ ಸ್ವೇನ
ಭಾಗಧೇಯೇನೋಪಧಾವತಿ ಸ ಏವಾಸ್ಮಿನ್ಬ್ರಹ್ಮವರ್ಚಸಂ
ದಧಾತಿ ಬ್ರಹ್ಮವರ್ಚಸ್ಯೇವ ಭವತಿ ಬೈಲ್ವೋ ಯೂಪೋ

---

ವಶಾಮ್ । ಏತಿ । ಲಭೇತ । ಅಮುಮ್ । ಏವ । ಆದಿತ್ಯಮ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮಿನ್ನ್ । ಬ್ರಹ್ಮವರ್ಚಸಮಿತಿ ಬ್ರಹ್ಮ–ವರ್ಚಸಮ್ । ದಧಾತಿ । ಬ್ರಹ್ಮವರ್ಚಸೀತಿ ಬ್ರಹ್ಮ–ವರ್ಚಸೀ । ಏವ । ಭವತಿ । ಬೈಲ್ವಃ । ಯೂಪಃ ।

---

| | |
|---|---|
| ವಶಾಮ್ ಆಲಭೇತ | ಯಾಗ ಮಾಡಬೇಕು. |
| ಅಮುಮ್ ಏವ ಆದಿತ್ಯಮ್ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಪಶುಯಾಗದಿಂದ ಆದಿತ್ಯನ ಭಾಗವನ್ನು ಕೊಟ್ಟು ಸೇವಿಸಿದವನಾಗುತ್ತಾನೆ. |
| ಸಃ ಏವ ಅಸ್ಮಿನ್ ಬ್ರಹ್ಮವರ್ಚಸಮ್ ದಧಾತಿ | ತುಷ್ಟವಾದ ಆದಿತ್ಯದೇವನು ಈ ಯಜಮಾನನಲ್ಲಿ ಬ್ರಹ್ಮವರ್ಚಸವನ್ನುಂಟು ಮಾಡುತ್ತಾನೆ. |
| ಬ್ರಹ್ಮವರ್ಚಸೀ ಭವತಿ ಏವ | ಯಜಮಾನನು ಬ್ರಹ್ಮವರ್ಚಸವನ್ನು ಪಡೆದವನೇ ಆಗುತ್ತಾನೆ. |

**ಯೂಪವಿಶೇಷವಿಧಾನ; ಪ್ರಶಂಸೆ**

| | |
|---|---|
| ಬೈಲ್ವಃ ಯೂಪಃ ಭವತಿ | ಬಿಲ್ವವೃಕ್ಷದ ಯೂಪವಾಗಬೇಕು. [ವಿಧಿ] |

---

ತನ್ನ ಭಾಗವನ್ನು ಹೊಂದಿ ಸುಪ್ರೀತನಾಗಿ ಯಜಮಾನನಿಗೆ ಬ್ರಹ್ಮತೇಜಸ್ಸನ್ನು ಕೊಡುತ್ತಾನೆ. ಯಜಮಾನನು ಬ್ರಹ್ಮವರ್ಚಸಿಯಾಗುತ್ತಾನೆ.

ಈ ಯಾಗದಲ್ಲಿ ಖಾದಿರಯೂಪದ ಬದಲು ಬಿಲ್ವವೃಕ್ಷದ ಯೂಪವನ್ನು ಬಳಸಬೇಕು.

ಭವತ್ಯಸೌ [೧] ವಾ ಆದಿತ್ಯೋ ಯತೋಽಜಾಯತ

ತತೋ ಬಿಲ್ವ ಉದತಿಷ್ಠತ್ಸಯೋನ್ಯೇವ

ಬ್ರಹ್ಮವರ್ಚಸಮವರುಂಧೇ

---

ಭವತಿ । ಅಸೌ । ವೈ । ಆದಿತ್ಯಃ । ಯತಃ । ಅಜಾಯತ । ತತಃ । ಬಿಲ್ವಃ । ಉದಿತಿ । ಅತಿಷ್ಠತ್ । ಸಯೋನೀತಿ ಸ-ಯೋನಿ । ಏವ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ಅವೇತಿ । ರುಂಧೇ ।

---

| | |
|---|---|
| ಅಸೌ ವೈ ಆದಿತ್ಯ: ಯತ: ಅಜಾಯತ | ಈ ಸೂರ್ಯನು ಎಲ್ಲಿಂದ ಹುಟ್ಟಿದನೋ |
| ತತ: ಬಿಲ್ವ: ಉದತಿಷ್ಠತ್ | ಅಲ್ಲಿಂದಲೇ ಬಿಲ್ವವೃಕ್ಷವು ಉತ್ಪನ್ನವಾಗಿದೆ. |
| ಸಯೋನಿ ಏವ ಬ್ರಹ್ಮವರ್ಚಸಮ್ ಅವರುಂಧೇ | ಈ ಬಿಲ್ವವೃಕ್ಷದ ಯೂಪದಲ್ಲಿ ಸೌರ್ಯ ಪಶುವನ್ನು ಕಟ್ಟುವುದರಿಂದ ಸಮಾನಸ್ಥಾನದಲ್ಲಿ ಹುಟ್ಟಿದ ಪ್ರಕಾಶಾತ್ಮಕಬ್ರಹ್ಮವರ್ಚಸವನ್ನು ಯಜಮಾನನು ಪಡೆಯುತ್ತಾನೆ. |

---

ಸೂರ್ಯನು ಹುಟ್ಟಿದ ಸ್ಥಾನದಲ್ಲಿಯೇ ಬಿಲ್ವವೂ ಹುಟ್ಟಿದೆ. ಶ್ರೀಸೂಕ್ತದಲ್ಲಿ **'ಆದಿತ್ಯವರ್ಣೇ'** ಎಂಬ ಋಕ್ಕಿನಲ್ಲಿ 'ಸೂರ್ಯಪ್ರಕಾಶವುಳ್ಳ ಓ ಲಕ್ಷ್ಮಿಯೇ! ಸೂರ್ಯನ ಪ್ರಕಾಶವು ಹುಟ್ಟಿದ ಮೇಲೆ ನಿನಗೆ ಪ್ರಿಯವಾದ ಬಿಲ್ವವೃಕ್ಷವು ಹುಟ್ಟಿತು' ಎಂದು ಹೇಳಿದೆ. ಹೀಗಾಗಿ ಸೂರ್ಯನು ಹುಟ್ಟಿದ ಸ್ಥಾನದಲ್ಲಿಯೇ ಬಿಲ್ವವೂ ಉತ್ಪನ್ನವಾದಂತಾಯಿತು. ಪಿತೃಪಿತಾಮಹಾದಿಗಳ ವೇದಶಾಖೆಯನ್ನು ಅಧ್ಯಯನ ಮಾಡುವುದರಿಂದ ಉಂಟಾಗುವ ಬ್ರಹ್ಮವರ್ಚಸವೂ ಸಮಾನಸ್ಥಾನದಲ್ಲಿ ಹುಟ್ಟಿದುದೇ ಆಗಿದೆ. ಈ ಸಮಾನಸ್ಥಾನಜನ್ಮವು ಫಲಸಮೃದ್ಧಿಗೆ ಕಾರಣವಾಗುತ್ತದೆ. ಆದರಿಂದ ಯಜಮಾನನು ಶೀಘ್ರವಾಗಿ ಬ್ರಹ್ಮವರ್ಚಸವನ್ನು ಪಡೆಯುತ್ತಾನೆ.

ಬ್ರಾಹ್ಮಣಸ್ಪತ್ಯಾಂ ಬಭ್ರುಕರ್ಣೀಮಾಲಭೇತಾಭಿಚರನ್ವಾ

ರುಣಂ ದಶಕಪಾಲಂ ಪುರಸ್ತಾನ್ನಿರ್ವಪೇದ್ವರುಣೇನೈವ

ಭ್ರಾತೃವ್ಯಂ ಗ್ರಾಹಯಿತ್ವಾ ಬ್ರಹ್ಮಣಾ ಸ್ತೃಣುತೇ ಬಭ್ರುಕರ್ಣೀ

---

**ಬ್ರಾಹ್ಮಣಸ್ಪತ್ಯಾಮಿತಿ ಬ್ರಾಹ್ಮಣಃ-ಪತ್ಯಾಮ್** । ಬಭ್ರುಕರ್ಣೀಮಿತಿ ಬಭ್ರು-ಕರ್ಣೀಮ್ । ಏತಿ । ಲಭೇತ । ಅಭಿಚರನ್ನಿತ್ಯಭಿ-ಚರನ್ । ವಾರುಣಮ್ । ದಶಕಪಾಲಮಿತಿ ದಶ-ಕಪಾಲಮ್ । ಪುರಸ್ತಾತ್ । ನಿರಿತಿ । ವಪೇತ್ । ವರುಣೇನ । ಏವ । ಭ್ರಾತೃವ್ಯಮ್ ಗ್ರಾಹಯಿತ್ವಾ । ಬ್ರಹ್ಮಣಾ । ಸ್ತೃಣುತೇ । ಬಭ್ರುಕರ್ಣೀತಿ ಬಭ್ರು-ಕರ್ಣೀ ।

---

**ಶತ್ರುವಧಕಾಮನಿಗೆ ವಿಹಿತವಾದ ಪಶು-ಇಷ್ಟಿ ಯಾಗಗಳು; ಪ್ರಶಂಸೆ**

| | |
|---|---|
| ಅಭಿಚರನ್ ಬ್ರಾಹ್ಮಣಸ್ಪತ್ಯಾಮ್ ಬಭ್ರುಕರ್ಣೀಮ್ ಆಲಭೇತ | ವೈರಿಮಾರಣವನ್ನು ಬಯಸುವವನು ಬ್ರಹ್ಮಣಸ್ಪತಿದೇವನಿಗಾಗಿ ಗೋರೋಚನ ಬಣ್ಣದ ಕಿವಿಗಳುಳ್ಳ ಪಶುವನ್ನು ಯಾಗ ಮಾಡಬೇಕು. |
| ವಾರುಣಮ್ ದಶಕಪಾಲಮ್ ಪುರಸ್ತಾತ್ ನಿರ್ವಪೇತ್ | ಪಶುಯಾಗಕ್ಕೆ ಮೊದಲು ವರುಣ ದೇವನಿಗಾಗಿ ದಶಕಪಾಲ ಪುರೋಡಾಶ ಯಾಗವನ್ನು ಮಾಡಬೇಕು. |
| ವರುಣೇನ ಏವ ಭ್ರಾತೃವ್ಯಮ್ ಗ್ರಾಹಯಿತ್ವಾ ಬ್ರಹ್ಮಣಾ ಸ್ತೃಣುತೇ ಬಭ್ರುಕರ್ಣೀ ಭವತಿ | ವರುಣದೇವನಿಂದ ಶತ್ರುವನ್ನು ಬಂಧಿಸಿ ಬ್ರಹ್ಮಣಸ್ಪತಿಯಿಂದ ಹಿಂಸಿಸಿ ಕೊಲ್ಲುತ್ತಾನೆ. ಕಿವಿಯಲ್ಲಿ ಕೆಂಪು ಬೆರೆತ ಹಳದಿ ಬಣ್ಣವುಳ್ಳ ಪಶುವಾಗಿದೆ. |

ಭವತ್ಯೇತದ್ವೈ ಬ್ರಹ್ಮಣೋ ರೂಪಗ್ಂ ಸಮೃದ್ಧ್ಯೈ ಸ್ಫ್ಯೋ

ಯೂಪೋ ಭವತಿ ವಜ್ರೋ ವೈ ಸ್ಫ್ಯೋ

ವಜ್ರಮೇವಾಸ್ಮೈ ಪ್ರಹರತಿ

---

ಭವತಿ । ಏತತ್ । ವೈ । ಬ್ರಹ್ಮಣಃ । ರೂಪಮ್ । ಸಮೃದ್ಧ್ಯಾ ಇತಿ ಸಮ್–ಋದ್ಧ್ಯೈ । ಸ್ಫ್ಯಃ ।

ಯೂಪಃ । ಭವತಿ । ವಜ್ರಃ । ವೈ । ಸ್ಫ್ಯಃ ॥ ವಜ್ರಮ್ । ಏವ । ಅಸ್ಮೈ । ಪ್ರೇತಿ । ಹರತಿ ।

---

| | |
|---|---|
| ಏತತ್ ವೈ ಬ್ರಹ್ಮಣಃ ರೂಪಮ್ ಸಮೃದ್ಧ್ಯೈ | ಇದು ಬ್ರಹ್ಮಣಸ್ಪತಿದೇವನ ರೂಪವಾಗಿದೆ. [ಆದುದರಿಂದ] ಇಷ್ಟಾರ್ಥಸಿದ್ಧಿಗೆ ಕಾರಣವಾಗುತ್ತದೆ. |

**ಯೂಪವಿಶೇಷವಿಧಾನ; ಪ್ರಶಂಸೆ**

| | |
|---|---|
| ಸ್ಫ್ಯಃ ಯೂಪಃ ಭವತಿ | ದಾರುಖಡ್ಗಾಕಾರದ ಯೂಪವಾಗಬೇಕು. |
| ವಜ್ರಃ ವೈ ಸ್ಫ್ಯಃ | ಸ್ಫ್ಯವು ಶತ್ರುಹಿಂಸಕವಾದ ವಜ್ರಾಯುಧವೇ ಆಗಿದೆ. |
| ಅಸ್ಮೈ ವಜ್ರಮ್ ಏವ ಪ್ರಹರತಿ | ಈ ಶತ್ರುವಿನ ಮೇಲೆ ಯಜಮಾನನು ವಜ್ರಾಯುಧವನ್ನೇ ಪ್ರಹರಿಸುತ್ತಾನೆ. |

---

ಅಭಿಚಾರದಿಂದ ಶತ್ರುವನ್ನು ನಾಶ ಮಾಡಬೇಕೆಂದು ಬಯಸುವವನು ಬ್ರಹ್ಮಣಸ್ಪತಿ ದೇವನಿಗೆ ಕೆಂಪು–ಹಳದಿ ಬಣ್ಣದ ಕಿವಿಗಳುಳ್ಳ ಪಶುವನ್ನು ಯಾಗಮಾಡಬೇಕು. ಅದಕ್ಕೆ ಮೊದಲು ವರುಣದೇವನಿಗಾಗಿ ಹತ್ತು ಕಪಾಲಗಳಲ್ಲಿ ಸಂಸ್ಕೃತವಾದ ಪುರೋಡಾಶದ ಯಾಗವನ್ನು ಮಾಡಬೇಕು. ವರುಣನಿಂದ ಶತ್ರುವನ್ನು ಬಂಧಿಸಿ, ಬ್ರಹ್ಮಣಸ್ಪತಿಯಿಂದ ಶತ್ರುವನ್ನು ನಾಶಪಡಿಸುತ್ತಾನೆ. ಬಭ್ರುವರ್ಣದ ಕಿವಿಗಳುಳ್ಳ ಪಶುವು ಯಾಗಪಶುವಾಗಿದೆ.

ಶರಮಯಂ ಬರ್ಹಿಶ್ಶೃಣಾ [ಶೃಣಾತಿ (೨) ಏವೈನಂ]
ತ್ಯೇವೈನಂ ವೈಭೀದಕ ಇಧ್ಮೋ ಭಿನತ್ತ್ಯೇವೈನಂ ವೈಷ್ಣವಂ
ವಾಮನಮಾಲಭೇತ ಯಂ ಯಜ್ಞೋ

---

ಶರಮಯಮಿತಿ ಶರ–ಮಯಮ್ । ಬರ್ಹಿಃ । ಶೃಣಾತಿ । ಏವ । ಏನಮ್ । ವೈಭೀದಕಃ । ಇಧ್ಮಃ । ಭಿನತ್ತಿ । ಏವ । ಏನಮ್ । **ವೈಷ್ಣವಮ್** । ವಾಮನಮ್ । ಏತಿ । ಲಭೇತ । ಯಮ್ । ಯಜ್ಞಃ ।

---

| | |
|---|---|
| ಶರಮಯಮ್ ಬರ್ಹಿಃ | ಬರ್ಹಿಸ್ಸುಗಳು ಕಾಗೆಬಿದಿರುಗಳಾಗಿವೆ [ಶರ]. |
| ಏನಮ್ ಶೃಣಾತಿ ಏವ | ಇದರಿಂದ ಶತ್ರುವನ್ನು ಹಿಂಸಿಸಿದವನಾಗುತ್ತಾನೆ. |
| ವೈಭೀದಕಃ ಇಧ್ಮಃ | ತಾರೇಗಿಡದ ಇಧ್ಮವಾಗಿದೆ. |
| ಏನಮ್ ಭಿನತ್ತಿ ಏವ | ಇದರಿಂದ ಶತ್ರುವನ್ನು ಭೇದಿಸುತ್ತಾನೆ. |

**ಯಜ್ಞವನ್ನು ಮಾಡಬೇಕೆನ್ನುವವನಿಗೆ ವೈಷ್ಣವಯಾಗದ ವಿಧಿ ; ಪ್ರಶಂಸೆ**

| | |
|---|---|
| ಯಮ್ ಯಜ್ಞಃ ನ ಉಪನಮೇತ್ | ಯಾವನನ್ನು ಅಗ್ನಿಷ್ಟೋಮಾದಿ ಯಾಗಗಳು ಹೊಂದುವುದಿಲ್ಲವೋ |

---

ಇದು ಬ್ರಹ್ಮಣಸ್ಪತಿಯ / ಚತುರ್ಮುಖಬ್ರಹ್ಮದೇವನ ರೂಪವಾದುದರಿಂದ ಇಷ್ಟಸಿದ್ಧಿಯು ಶೀಘ್ರವಾಗಿ ಆಗುತ್ತದೆ.

ಈ ಯಾಗದಲ್ಲಿ ಸ್ಫ್ಯಾಕೃತಿಯ ಯೂಪವಿರುತ್ತದೆ. ಸ್ಫ್ಯವು ವಜ್ರದಂತೆ. ಈ ಯೂಪದಿಂದ ಶತ್ರುವಿನ ಮೇಲೆ ವಜ್ರಾಯುಧಪ್ರಯೋಗ ಮಾಡಿದಂತೆ ಆಗುತ್ತದೆ. ಶರಗಳೇ ದರ್ಭದ ಸ್ಥಾನದಲ್ಲಿ ಬರ್ಹಿಸ್ಸು. ಇದೂ ಶತ್ರುಹಿಂಸಕವಾಗುತ್ತದೆ. ಈ ಯಾಗದ ತಾರೇಮರದ ಇಧ್ಮವು ಶತ್ರುಭೇದಕವಾಗುತ್ತದೆ. ಹೀಗೆ ಶತ್ರುನಾಶವಾಗುತ್ತದೆ.

ನೋಪನಮೇದ್ವಿಷ್ಣುರ್ವೈ ಯಜ್ಞೋ ವಿಷ್ಣುಮೇವ ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮೈ ಯಜ್ಞಂ ಪ್ರಯಚ್ಛತ್ಯುಪೈನಂ ಯಜ್ಞೋ ನಮತಿ ವಾಮನೋ ಭವತಿ

---

ನ। ಉಪನಮೇದಿತ್ಯುಪ–ನಮೇತ್। ವಿಷ್ಣುಃ। ವೈ। ಯಜ್ಞಃ। ವಿಷ್ಣುಮ್। ಏವ। ಸ್ವೇನ। ಭಾಗಧೇಯೇನೇತಿ ಭಾಗ–ಧೇಯೇನ। ಉಪೇತಿ। ಧಾವತಿ। ಸಃ। ಏವ। ಅಸ್ಮೈ। ಯಜ್ಞಮ್। ಪ್ರೇತಿ। ಯಚ್ಛತಿ। ಉಪೇತಿ। ಏನಮ್। ಯಜ್ಞಃ। ನಮತಿ। ವಾಮನಃ। ಭವತಿ।

---

| | |
|---|---|
| [ಸಃ] ವೈಷ್ಣವಮ್ ವಾಮನಮ್ ಆಲಭೇತ | ಅವನು ಯಜ್ಞವಿಘ್ನಪರಿಹಾರಕ್ಕಾಗಿ ವಿಷ್ಣುವಿಗಾಗಿ ವಾಮನ (ಕುಳ್ಳ) ಪಶುವನ್ನು ಯಾಗ ಮಾಡಬೇಕು. |
| ವಿಷ್ಣುಃ ವೈ ಯಜ್ಞಃ ವಿಷ್ಣುಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ವಿಷ್ಣುವೇ ಯಜ್ಞಸ್ವರೂಪನಾಗಿರುತ್ತಾನೆ. [ಈ ಯಾಗದಿಂದ ಯಜಮಾನನು] ವಿಷ್ಣುವಿಗೆ ಪ್ರಿಯವಾದ ಹವಿರ್ಭಾಗವನ್ನಿತ್ತು ಸೇವಿಸಿದವನಾಗುತ್ತಾನೆ. |
| ಸಃ ಏವ ಅಸ್ಮೈ ಯಜ್ಞಮ್ ಪ್ರಯಚ್ಛತಿ | ಆ ವಿಷ್ಣುವೇ ಈ ಯಜಮಾನನಿಗೆ ಯಜ್ಞವನ್ನು ಕೊಡುತ್ತಾನೆ. |
| ಏನಮ್ ಯಜ್ಞಃ ಉಪನಮತಿ | ಈ ಯಜಮಾನನನ್ನು ಯಜ್ಞವು ಹೊಂದುತ್ತದೆ. |

**ವಾಮನಪಶುವಿನ ಪ್ರಶಂಸೆ**

| | |
|---|---|
| ವಾಮನಃ ಭವತಿ | ಈ ಯಾಗಪಶುವು ಗಿಡ್ಡವಾಗಿದೆ. |

---

ಯಾವನನ್ನು ಅಗ್ನಿಷ್ಟೋಮಾದಿಯಾಗಗಳು ಹೊಂದುವುದಿಲ್ಲವೋ, ಅವನು ಯಜ್ಞದ ವಿಘ್ನಪರಿಹಾರಕ್ಕಾಗಿ ವಿಷ್ಣುದೇವತಾಕವಾದ ಗಿಡ್ಡ ಪಶುವಿನ ಯಾಗವನ್ನು ಮಾಡಬೇಕು. ವಿಷ್ಣುವು ಯಜ್ಞಸ್ವರೂಪನಾಗಿದ್ದಾನೆ. ಆ ವಿಷ್ಣುವನ್ನು ಅವನ ಹವಿರ್ಭಾಗವನ್ನಿತ್ತು ಯಜಮಾನನು ಸೇವಿಸುವುದರಿಂದ ತೃಪ್ತನಾದ ವಿಷ್ಣುವು ಯಜಮಾನನಿಗೆ ಯಜ್ಞವು ಒದಗುವಂತೆ ಮಾಡುತ್ತಾನೆ. ವಿಘ್ನಗಳು ದೂರವಾಗಿ ಯಜಮಾನನು ಅಗ್ನಿಷ್ಟೋಮಾದಿ ಯಾಗಗಳನ್ನು ಅನುಷ್ಠಿಸುತ್ತಾನೆ.

ವೈಷ್ಣವೋ ಹ್ಯೇಷ ದೇವತಯಾ ಸಮೃದ್ಧ್ಯೈ ತ್ವಾಷ್ಟ್ರಂ

ವಡಬಮಾಲಭೇತ ಪಶುಕಾಮಸ್ತ್ವಷ್ಟಾ ವೈ ಪಶೂನಾಂ

ಮಿಥುನಾನಾಂ [೩] ಪ್ರಜನಯಿತಾ

---

ವೈಷ್ಣವಃ । ಹಿ । ಏಷಃ । ದೇವತಯಾ । ಸಮೃದ್ಧ್ಯಾ ಇತಿ ಸಮ್–ಋದ್ಧ್ಯೈ । **ತ್ವಾಷ್ಟ್ರಮ್ ।**

ವಡಬಮ್ । ಏತಿ । ಲಭೇತ । ಪಶುಕಾಮ ಇತಿ ಪಶು–ಕಾಮಃ । ತ್ವಷ್ಟಾ । ವೈ ।

ಪಶೂನಾಮ್ । ಮಿಥುನಾನಾಮ್ । ಪ್ರಜನಯಿತೇತಿ ಪ್ರ–ಜನಯಿತಾ ।

---

| | |
|---|---|
| ಏಷಃ ದೇವತಯಾ ವೈಷ್ಣವಃ ಹಿ ಸಮೃದ್ಧ್ಯೈ | ವಾಮನಪಶುವು ವಿಷ್ಣುದೇವತಾಕವಾಗಿದೆ. ಆದುದರಿಂದ ಇಷ್ಟಸಿದ್ಧಿಗೆ ಕಾರಣ ವಾಗುತ್ತದೆ. |

**ಪಶುಕಾಮನಿಗೆ ವಡಬಾಶ್ವಯಾಗವಿಧಿ; ಪ್ರಶಂಸೆ**

| | |
|---|---|
| ಪಶುಕಾಮಃ ತ್ವಾಷ್ಟ್ರಮ್ ವಡಬಮ್ ಆಲಭೇತ | ಪಶುಸಮೃದ್ಧಿಯನ್ನು ಬಯಸುವವನು ವಡಬಾಶ್ವವನ್ನು (ಹೆಣ್ಣು ಕುದುರೆಯಂತೆ ಕಾಣುವ ಗಂಡುಕುದುರೆ) ತ್ವಷ್ಟೃದೇವತೆಗಾಗಿ ಯಾಗ ಮಾಡಬೇಕು. |
| ತ್ವಷ್ಟಾ ವೈ ಮಿಥುನಾನಾಮ್ ಪಶೂನಾಮ್ ಪ್ರಜನಯಿತಾ | ತ್ವಷ್ಟೃದೇವನೇ ಪಶುಗಳಲ್ಲಿ ಸ್ತ್ರೀಪುರುಷ ಯುಗ್ಮಗಳನ್ನು ಉಂಟು ಮಾಡುತ್ತಾನೆ. |

---

ಈ ವೈಷ್ಣವಯಾಗದಲ್ಲಿ ವಾಮನಪಶುವಿರುತ್ತದೆ. ರಾಜಸೂಯದಲ್ಲಿ **'ವೈಷ್ಣವಂ ತ್ರಿಕಪಾಲಂ ವಾಮನೋ ದಕ್ಷಿಣಾ'** ಎಂದಿರುವುದರಿಂದ ವಾಮನಪಶುವು ವಿಷ್ಣುದೇವತಾಕವಾಗಿದೆ. ಅದು ವಿಷ್ಣುವಿಗೆ ಪ್ರೀತಿಕರವಾಗಿರುವುದರಿಂದ ಶೀಘ್ರವಾಗಿ ಫಲಸಿದ್ಧಿಗೆ ಕಾರಣವಾಗುತ್ತದೆ.

ತ್ವಷ್ಟಾರಮೇವ ಸ್ವೇನ ಭಾಗಧೇಯೇನೋಪಧಾವತಿ ಸ

ಏವಾಸ್ಮೈ ಪಶೂನ್ಮಿಥುನಾನ್ಪ್ರ ಜನಯತಿ

ಪ್ರಜಾ ಹಿ ವಾ ಏತಸ್ಮಿನ್ಪಶವಃ ಪ್ರವಿಷ್ಟಾ

---

ತ್ವಷ್ಟಾರಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮೈ । ಪಶೂನ್ । ಮಿಥುನಾನ್ । ಪ್ರೇತಿ । ಜನಯತಿ । ಪ್ರಜೇತಿ ಪ್ರ–ಜಾ । ಹಿ । ವೈ । ಏತಸ್ಮಿನ್ನ್ । ಪಶವಃ । ಪ್ರವಿಷ್ಟಾ ಇತಿ ಪ್ರ–ವಿಷ್ಟಾಃ ।

---

| | |
|---|---|
| ತ್ವಷ್ಟಾರಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ತ್ವಷ್ಟೃವಿಗೆ ಅವನದಾದ ಭಾಗವನ್ನರ್ಪಿಸಿ ಯಜಮಾನನು ಆರಾಧಿಸುತ್ತಾನೆ. |
| ಸಃ ಏವ ಅಸ್ಮೈ ಪಶೂನ್ ಮಿಥುನಾನ್ ಪ್ರಜನಯತಿ | ಆ ತ್ವಷ್ಟೃದೇವನು ಈ ಯಜಮಾನನಿಗೆ ಜೋಡಿಯಾದ ಪಶುಗಳನ್ನು ಉಂಟು ಮಾಡುತ್ತಾನೆ. |

**ವಡಬಪಶುಪ್ರಶಂಸೆ**

| | |
|---|---|
| ಪ್ರಜಾ ಹಿ ವೈ ಏತಸ್ಮಿನ್ ಪಶವಃ ಪ್ರವಿಷ್ಟಾಃ | ಈ ವಡಬದ ವಿಷಯದಲ್ಲಿ ಪ್ರಜೆಗಳೂ, ಪಶುಗಳೂ ಭ್ರಾಂತಿಯಿಂದ ಪಶೂತ್ಪತ್ತಿಗಾಗಿ ಯತ್ನಿಸುತ್ತಾರೆ. |

---

ಪಶುಕಾಮನು ತ್ವಷ್ಟೃದೇವತೆಗೆ *ವಡಬಾಶ್ವಯಾಗವನ್ನು ಮಾಡಬೇಕು. ತ್ವಷ್ಟದೇವನು ಪಶುಗಳ ಜೋಡಿಯನ್ನು ಉತ್ಪತ್ತಿಮಾಡಿ ಪಶುವೃದ್ಧಿಗೆ ಕಾರಣನಾಗುತ್ತಾನೆ. ಈ ಯಾಗದಿಂದ ತ್ವಷ್ಟೃದೇವನು ತನ್ನ ಭಾಗವನ್ನು ಪಡೆದು ಸುಪ್ರೀತನಾಗಿ ಈ ಯಜಮಾನನಿಗಾಗಿ ಪಶುಗಳ ಜೋಡಿಗಳ ಉತ್ಪತ್ತಿಗೆ ಕಾರಣನಾಗಿ ಪಶುಸಂಪತ್ತಿಯನ್ನು ಉಂಟುಮಾಡುತ್ತಾನೆ.

---

* **'ವಡಬಾ' ಎಂದರೆ ಹೆಣ್ಣು ಕುದುರೆ. ಆದುದರಿಂದ 'ವಡಬ' ಎಂಬ ಶಬ್ದಕ್ಕೆ ಹೆಣ್ಣು ಕುದುರೆಯಂತೆ ಕಾಣುವ ಗಂಡು ಕುದುರೆ ಎಂದು ಅರ್ಥ ಮಾಡಿರುತ್ತಾರೆ. ಮನುಷ್ಯರಲ್ಲಿಯೂ ಸ್ತ್ರೀಯಂತೆ ಕಾಣುವ ಪುರುಷರಿರುವುದುಂಟು.**

ಅಥೈಷ ಪುಮಾನ್ತ್ಸನ್ವಡಬಸ್ಸಾಕ್ಷಾದೇವ ಪ್ರಜಾಂ

ಪಶೂನವರುಂಧೇ ಮೈತ್ರಗ್ಗ್ಂ ಶ್ವೇತಮಾಲಭೇತ

ಸಂಗ್ರಾಮೇ ಸಂಯತ್ತೇ ಸಮಯಕಾಮೋ

---

ಅಥ । ಏಷಃ । ಪುಮಾನ್ । ಸನ್ । ವಡಬಃ । ಸಾಕ್ಷಾದಿತಿ ಸ–ಅಕ್ಷಾತ್ । ಏವ । ಪ್ರಜಾಮಿತಿ ಪ್ರ–ಜಾಮ್ । ಪಶೂನ್ । ಅವೇತಿ । ರುಂಧೇ । ಮೈತ್ರಮ್ । ಶ್ವೇತಮ್ । ಏತಿ । ಲಭೇತ । ಸಂಗ್ರಾಮ ಇತಿ ಸಮ್–ಗ್ರಾಮೇ । ಸಂಯತ್ತ ಇತಿ ಸಮ್–ಯತ್ತೇ । ಸಮಯಕಾಮ ಇತಿ ಸಮಯ–ಕಾಮಃ ।

---

| | |
|---|---|
| ಅಥ ಏಷಃ ಪುಮಾನ್ ಸನ್ ವಡಬಃ | ಹೀಗಾಗಿ ಈ ಕುದುರೆಯು ಗಂಡಾದರೂ ಸ್ತ್ರೀವಾಚಿಯಾದ ವಡಬಶಬ್ದವಾಚ್ಯವಾಗುತ್ತದೆ. |
| ಸಾಕ್ಷಾತ್ ಏವ ಪ್ರಜಾವ್ ಪಶೂನ್ ಅವರುಂಧೇ | [ಈ ಯಾಗದಿಂದ] ಯಜಮಾನನು ಒಡನೆಯೇ ಪಶುಗಳನ್ನೂ ಪ್ರಜೆಗಳನ್ನೂ ಹೊಂದುತ್ತಾನೆ. |

**ಮೈತ್ರಪಶುಯಾಗವಿಧಿ; ವಿಶೇಷವಿಧಿ; ಪ್ರಶಂಸೆ**

| | |
|---|---|
| ಸಂಗ್ರಾಮೇ ಸಂಯತ್ತೇ ಸಮಯಕಾಮಃ | ಯುದ್ಧವು ಒದಗಿದಾಗ ಈ ರೀತಿಯ ಸಾಹಸ ಕಾರ್ಯವನ್ನು ಮಾಡುವೆನೆಂದು ಪ್ರತಿಜ್ಞೆಮಾಡುವವನು ಅಥವಾ ಸಂಧಿ ಮಾಡಲು ಯತ್ನಿಸುವವನು |
| ಮೈತ್ರಮ್ ಶ್ವೇತಮ್ ಆಲಭೇತ | ಮಿತ್ರದೇವನಿಗಾಗಿ ಬಿಳಿಯ ಬಣ್ಣದ ಪಶುವನ್ನು ಯಾಗ ಮಾಡಬೇಕು. |

ಮಿತ್ರಮೇವ ಸ್ವೇನ ಭಾಗಧೇಯೇನೋಪಧಾವತಿ ಸ

ಏವೈನಂ ಮಿತ್ರೇಣ ಸಂನಯತಿ (೪) ವಿಶಾಲೋ ಭವತಿ

---

ಮಿತ್ರಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

ಸಃ । ಏವ । ಏನಮ್ । ಮಿತ್ರೇಣ । ಸಮಿತಿ । ನಯತಿ । ವಿಶಾಲ ಇತಿ ವಿ–ಶಾಲಃ । ಭವತಿ ।

---

| | |
|---|---|
| ಮಿತ್ರಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದಿಂದ ಮಿತ್ರದೇವನಿಗೆ ತಕ್ಕ ಭಾಗವನ್ನು ಕೊಟ್ಟು, ಸೇವಿಸುತ್ತಾನೆ. |
| ಸಃ ಏವ ಏನಮ್ ಮಿತ್ರೇಣ ಸಂನಯತಿ | ಆ ಮಿತ್ರದೇವನೇ ಈ ಯಜಮಾನನನ್ನು ಮಿತ್ರರೊಡನೆ ಸೇರಿಸುತ್ತಾನೆ. |
| ವಿಶಾಲಃ ಭವತಿ | ಈ ಯಾಗದಲ್ಲಿ ಯೂಪವು ವಿಶಾಲವಾಗಿರಬೇಕು/**ಪಶುವು ವಿಶಾಲವಾದ ಕೊಂಬುಗಳಿಂದ ಕೂಡಿರಬೇಕು.** |

---

ಪ್ರಜೆಗಳು ಈ ರೀತಿಯ ಗಂಡುಕುದುರೆಯನ್ನು ಹೆಣ್ಣು ಕುದುರೆಯೆಂದು ಭ್ರಮಿಸಿ, ಅದರ ಸಂತತಿಗಾಗಿ ಗಂಡು ಕುದುರೆಯ ಮೂಲಕವಾಗಿ ಯತ್ನಿಸುತ್ತಾರೆ. ಬೇರೆಯ ಗಂಡು ಕುದುರೆಗಳೂ ತಾವೇ ಯತ್ನಿಸುತ್ತವೆ. ಇದು ಗಂಡು ಕುದುರೆಯಾಗಿದ್ದರೂ ಹೆಣ್ಣು ಕುದುರೆಯ ಲಕ್ಷಣಗಳನ್ನು ಹೊಂದಿರುವುದರಿಂದ 'ವಡಬ' ಎನ್ನಿಸಿಕೊಳ್ಳುತ್ತದೆ. ಇದು ಯಾಗಪಶುವಾಗುವುದರಿಂದ ಯಜಮಾನನು ಒಡನೆಯೇ ಪ್ರಜೆಗಳನ್ನೂ, ಪಶುಗಳನ್ನೂ ಪಡೆಯುತ್ತಾನೆ.

ಯುದ್ಧವು ಒದಗಿದಾಗ ಜಯಿಸಬೇಕೆಂದು ಪ್ರತಿಜ್ಞೆ ಮಾಡುವವನು ಅಥವಾ ಸಂಧಿಯಾಗಬೇಕೆಂದು ಆಶಿಸುವವನು ಶ್ವೇತವರ್ಣದ ಪಶುವನ್ನು ಮಿತ್ರದೇವನಿಗಾಗಿ ಯಾಗ ಮಾಡಬೇಕು. ಇದರಿಂದ ತೃಪ್ತನಾದ ಮಿತ್ರದೇವನು ಯಜಮಾನನೊಡನೆ ಕಾರ್ಯಸಾಧಕರಾದ ಸಹಾಯಕರನ್ನು ಜೋಡಿಸಿಕೊಡುತ್ತಾನೆ. ಸಂಧಿಯು ಏರ್ಪಡುವಂತೆ ಮಾಡುತ್ತಾನೆ.

ಈ ಯಾಗದಲ್ಲಿ ಯೂಪವು ಯಜಮಾನನ ಎತ್ತರಕ್ಕಿಂತಲೂ ಹೆಚ್ಚಾಗಿರಬೇಕು/ಯಾಗಪಶುವಿನ ಶೃಂಗವು ವಿಶಾಲವಾಗಿರಬೇಕು. ಅದರಿಂದ ಯಜಮಾನನು ಧೈರ್ಯದಿಂದ

ವ್ಯವಸಾಯಯತ್ಯೇವೈನಂ ಪ್ರಾಜಾಪತ್ಯಂ ಕೃಷ್ಣಮಾಲಭೇತ

ವೃಷ್ಟಿಕಾಮಃ ಪ್ರಜಾಪತಿರ್ವೈ ವೃಷ್ಟ್ಯಾ ಈಶೇ

ಪ್ರಜಾಪತಿಮೇವ ಸ್ವೇನ ಭಾಗಧೇಯೇನೋಪಧಾವತಿ

ಸ ಏವಾಸ್ಮೈ ಪರ್ಜನ್ಯಂ ವರ್ಷಯತಿ

---

ವ್ಯವಸಾಯಯತೀತಿ ವಿ–ಅವಸಾಯಯತಿ । ಏವ । ಏನಮ್ । ಪ್ರಾಜಾಪತ್ಯಮಿತಿ ಪ್ರಾಜಾ–ಪತ್ಯಮ್ । ಕೃಷ್ಣಮ್ । ಏತಿ । ಲಭೇತ । ವೃಷ್ಟಿಕಾಮ ಇತಿ ವೃಷ್ಟಿ–ಕಾಮಃ । ಪ್ರಜಾಪತಿರಿತಿ ಪ್ರಜಾ–ಪತಿಃ । ವೈ । ವೃಷ್ಟ್ಯಾಃ । ಈಶೇ । ಪ್ರಜಾಪತಿಮಿತಿ ಪ್ರಜಾ–ಪತಿಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮೈ । ಪರ್ಜನ್ಯಮ್ । ವರ್ಷಯತಿ ।

---

| | |
|---|---|
| ಏನಮ್ ವ್ಯವಸಾಯಯತಿ ಏವ | [ಹೀಗಿರುವುದರಿಂದ] ಯಜಮಾನನು ಧೈರ್ಯದಿಂದ ಕಾಯತತ್ಪರನಾಗುವಂತೆ ಆಗುತ್ತದೆ. |

**ವೃಷ್ಟಿಕಾಮನಿಗೆ ಪ್ರಾಜಾಪತ್ಯಕೃಷ್ಣ ಪಶುಯಾಗವಿಧಿ; ಪ್ರಶಂಸೆ**

| | |
|---|---|
| ವೃಷ್ಟಿಕಾಮಃ ಪ್ರಾಜಾಪತ್ಯಮ್ ಕೃಷ್ಣಮ್ ಆಲಭೇತ | ಮಳೆಯನ್ನು ಅಪೇಕ್ಷಿಸುವವನು ಕೃಷ್ಣ ವರ್ಣದ ಪಶುವನ್ನು ಪ್ರಜಾಪತಿಗೆ ಯಾಗ ಮಾಡಬೇಕು. |
| ಪ್ರಜಾಪತಿಃ ವೈ ವೃಷ್ಟ್ಯಾಃ ಈಶೇ | ಸರ್ವಸ್ರಷ್ಟನಾದ ಪ್ರಜಾಪತಿಯು ಮಳೆಯನ್ನು ಕೊಡಲು ಸಮರ್ಥನಾಗಿರುತ್ತಾನೆ. |
| ಪ್ರಜಾಪತಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಪ್ರಜಾಪತಿಗೆ ಬೇಕಾದ ಹವಿರ್ಭಾಗವನ್ನು ಕೊಟ್ಟು ಉಪಚರಿಸುತ್ತಾನೆ. |
| ಸಃ ಏವ ಅಸ್ಮೈ ಪರ್ಜನ್ಯಮ್ ವರ್ಷಯತಿ | ತುಷ್ಟನಾದ ಪ್ರಜಾಪತಿಯು ಈ ಯಜಮಾನನಿಗಾಗಿ ಮಳೆಗರೆಯುತ್ತಾನೆ. |

ಕೃಷ್ಣೋ ಭವತ್ಯೇತದ್ವೈ ವೃಷ್ಟ್ಯೈ ರೂಪಗ್ಂ ರೂಪೇಣೈವ

ವೃಷ್ಟಿಮವರುಂಧೇ ಶಬಲೋ ಭವತಿ ವಿದ್ಯುತಮೇವಾಸ್ಮೈ

ಜನಯಿತ್ವಾ ವರ್‌ಷಯತ್ಯವಾಶ್ಯಂಗೋ ಭವತಿ

---

ಕೃಷ್ಣಃ। ಭವತಿ। ಏತತ್। ವೈ। ವೃಷ್ಟ್ಯೈ। ರೂಪವಮ್। ರೂಪೇಣ। ಏವ। ವೃಷ್ಟಿವಮ್।
ಅವೇತಿ। ರುಂಧೇ। ಶಬಲಃ। ಭವತಿ। ವಿದ್ಯುತಮಿತಿ ವಿ–ದ್ಯುತವಮ್। ಏವ। ಅಸ್ಮೈ।
ಜನಯಿತ್ವಾ। ವರ್‌ಷಯತಿ। ಅವಾಶ್ಯಂಗಃ। ಭವತಿ।

---

**ಈ ಪಶುವಿನ ವಿಶೇಷವಿಧಾನ; ಪ್ರಶಂಸೆ**

| | |
|---|---|
| ಕೃಷ್ಣಃ ಭವತಿ | ಪಶುವು ಕಪ್ಪು ಬಣ್ಣದ್ದಾಗಿರಬೇಕು. |
| ಏತತ್ ವೈ ವೃಷ್ಟ್ಯೈ ರೂಪವಮ್ | ಕಪ್ಪು ಬಣ್ಣವು ಮಳೆಯ ರೂಪವಾಗಿದೆ. |
| ರೂಪೇಣ ಏವ ವೃಷ್ಟಿವಮ್ ಅವರುಂಧೇ | ಯಜಮಾನನು ಈ ರೂಪಸಾಮ್ಯದಿಂದ ಮಳೆಯನ್ನು ಹೊಂದುತ್ತಾನೆ. |
| ಶಬಲಃ ಭವತಿ | ಈ ಕಪ್ಪುಬಣ್ಣದ ಹಸುವು ಕೆಳಭಾಗದಲ್ಲಿ ಬೆಳ್ಳಗಿರುತ್ತದೆ. |
| ಅಸ್ಮೈ ವಿದ್ಯುತವಮ್ ಏವ ಜನಯಿತ್ವಾ ವರ್‌ಷಯತಿ | ಇದರಿಂದ ಮಿಂಚನ್ನುಂಟುಮಾಡಿ ಮಳೆಗರೆದಂತಾಗುತ್ತದೆ. |
| ಅವಾಶ್ಯಂಗಃ ಭವತಿ | ಪಶುವು ಕಿವಿಗಳ ಹತ್ತಿರ ಬಾಗಿದ ಕೊಂಬುಳ್ಳದ್ದಾಗಿರಬೇಕು. |

---

ಕಾರ್ಯತತ್ಪರನಾಗುವಂತೆ ಆಗುತ್ತದೆ.

ಮಳೆ ಬೇಕೆನ್ನುವವನು ಪ್ರಜಾಪತಿದೇವತಾಕವಾದ ಕೃಷ್ಣಪಶುವನ್ನು ಯಾಗ ಮಾಡಬೇಕು. ಎಲ್ಲವನ್ನೂ ಸೃಷ್ಟಿಸುವ ಪ್ರಜಾಪತಿಯು ಮಳೆಯನ್ನು ಸುರಿಸಲೂ

ವೃಷ್ಟಿಮೇವಾಸ್ಮೈ ನಿಯಚ್ಛತಿ ॥೫೨–8॥

[ಅಸೌ ಶೃಣಾತಿ ಮಿಥುನಾನಾಂ ನಯತಿ ಯಚ್ಛತಿ ।]

---

ವೃಷ್ಟಿಮ್ । ಏವ । ಅಸ್ಮೈ । ನೀತಿ । ಯಚ್ಛತಿ ॥8॥

---

ವೃಷ್ಟಿಮ್ ಏವ ಅಸ್ಮೈ ನಿಯಚ್ಛತಿ — ಇದರಿಂದ ಮಳೆಯನ್ನು ಕೆಳಕ್ಕೆ ಸುರಿಸಿದಂತಾಗುತ್ತದೆ.

---

ಸಮರ್ಥನು. ಈ ಯಾಗದಿಂದ ಪ್ರಜಾಪತಿಗೆ ತನ್ನ ಭಾಗವು ಸಿಕ್ಕಿದಂತಾಗುತ್ತದೆ. ತೃಪ್ತಿ ಹೊಂದಿದ ಪ್ರಜಾಪತಿಯು ಮಳೆಯನ್ನು ಸುರಿಸುತ್ತಾನೆ. ಈ ಪಶುವೂ ಕಪ್ಪು. ಮೋಡವು ಆವರಿಸುವಾಗ ಕತ್ತಲೆಯಾಗುವುದರಿಂದ ಮಳೆಯೂ ಕಪ್ಪುಬಣ್ಣದ್ದಾಗಿರುತ್ತದೆ. ಈ ಸಾರೂಪ್ಯವು ಮಳೆಗೆ ಕಾರಣವಾಗುತ್ತದೆ.

ಪಶುವಿಗೆ ಕೆಳಭಾಗದಲ್ಲಿ ಮಾತ್ರ ಬಿಳಿಯ ಬಣ್ಣವಿರಬೇಕು. ಇದರಿಂದ ಮಿಂಚನ್ನು ಉಂಟು ಮಾಡಿ ಮಳೆಯನ್ನು ಸುರಿಸಿದಂತಾಗುತ್ತದೆ. ಪಶುವಿನ ಕೊಂಬುಗಳು ಕಿವಿಯ ಹತ್ತಿರದಲ್ಲಿ ಕೆಳಕ್ಕೆ ಬಾಗಿರಬೇಕು. ಇದರಿಂದ ಕೆಳಕ್ಕೆ ಅಂದರೆ ಭೂಮಿಯ ಮೇಲೆ ಮಳೆಯನ್ನು ಸುರಿಸಿದಂತಾಗುತ್ತದೆ.

* * *

## ॥ ನವಮೋಽನುವಾಕಃ ॥

ವರುಣಗ್ಂ ಸುಷುವಾಣಮನ್ನಾದ್ಯಂ

ನೋಪಾನಮತ್ಸ ಏತಾಂ

---

**ವರುಣಮ್** । ಸುಷುವಾಣಮ್ । ಅನ್ನಾದ್ಯಮಿತ್ಯನ್ನ – ಅದ್ಯಮ್ । ನ । ಉಪೇತಿ । ಅನಮತ್ । ಸಃ । ಏತಾಮ್ ।

---

ಹಿಂದಿನ ಎಂಟನೆಯ ಅನುವಾಕದಲ್ಲಿ ಈ ಪಶುಯಾಗಗಳು ಹೇಳಲ್ಪಟ್ಟಿವೆ.

**ಬ್ರಹ್ಮತೇಜೋಽಭಿಚಾರಂ ಚ ಯಜ್ಞಪ್ರಾಪ್ತಿಂ ತಥಾ ಪಶೂನ್ ।**
**ಸಮಯಂ ಚ ತಥಾ ವೃಷ್ಟಿಂ ವಾಂಛತಾಂ ಪಶವಃ ಸ್ಮೃತಾಃ ॥**

[ಬ್ರಹ್ಮತೇಜಸ್ಸನ್ನು ಬಯಸುವವನು, ಆಭಿಚಾರಿಕಕೃತ್ಯವನ್ನೆಸಗುವವನು, ಯಜ್ಞದ ಪ್ರಾಪ್ತಿಯನ್ನು ಇಚ್ಛಿಸುವವನು, ಪಶುಗಳನ್ನು ಹೊಂದಬಯಸುವವನು, ಯುದ್ಧದಲ್ಲಿ ಸಾಹಸ ಅಥವಾ ಸಂಧಿಯನ್ನು ಇಚ್ಛಿಸುವವನು, ಮಳೆಯ ಬಯಕೆಯುಳ್ಳವನು – ಇವರಿಗೆ ಪಶುಯಾಗಗಳು ಹೇಳಲ್ಪಟ್ಟವು.]

ಈ ಒಂಬತ್ತನೆಯ ಅನುವಾಕದಲ್ಲಿ ಅನ್ನಾದ್ಯಕಾಮನೇ ಮೊದಲಾದವರಿಗೆ ಪಶುಯಾಗಗಳು ವಿಹಿತವಾಗಿವೆ.

---

**ವಾರುಣಪಶುಯಾಗದ ಪ್ರಸ್ತುತಿ; ಉಪಾಖ್ಯಾನ**

| | |
|---|---|
| ವರುಣಮ್ ಸುಷುವಾಣಮ್ | ಸೋಮಯಾಗವನ್ನು ಮಾಡಿದ ವರುಣನಿಗೆ |
| ಅನ್ನಾದ್ಯಮ್ ನ ಉಪಾನಮತ್ | ತಿನ್ನಲು ಮೃಷ್ಟಾನ್ನವು ಒದಗಲಿಲ್ಲ |
| ಸಃ ಏತಾಮ್ | ಆ ವರುಣನು ವರುಣದೇವತಾಕವಾದ |

---

ಒಂದು ಕಾಲದಲ್ಲಿ ವರುಣನು ಸೋಮಯಾಗವನ್ನು ಮಾಡಿದನು. ಅವನಿಗೆ

ವಾರುಣೀಂ ಕೃಷ್ಣಾಂ ವಶಾಮುಪಶ್ಯತ್ತಾಗ್ಂ ಸ್ವಾಯೈ
ದೇವತಾಯಾ ಆಽಲಭತ ತತೋ ವೈ ತಮನ್ನಾದ್ಯಮುಪಾನ
ಮದ್ಯಮಲಮನ್ನಾದ್ಯಾಯ ಸಂತಮನ್ನಾದ್ಯಂ ನೋಪನಮೇತ್ಸ

---

ವಾರುಣೀವಮ್ । ಕೃಷ್ಣಾವಮ್ । ವಶಾವಮ್ । ಅಪಶ್ಯತ್ । ತಾವಮ್ । ಸ್ವಾಯೈ ।
ದೇವತಾಯೈ । ಏತಿ । ಅಲಭತ । ತತಃ । ವೈ । ತಮ್ । ಅನ್ನಾದ್ಯಮಿತ್ಯನ್ನ – ಅದ್ಯಮ್।
ಉಪೇತಿ । ಅನಮತ್ । ಯಮ್ । ಅಲಮ್ । ಅನ್ನಾದ್ಯಾಯೇತ್ಯನ್ನ – ಅದ್ಯಾಯ ।
ಸಂತಮ್ । ಅನ್ನಾದ್ಯಮಿತ್ಯನ್ನ–ಅದ್ಯಮ್ । ನ । ಉಪನಮೇದಿತ್ಯುಪ – ನಮೇತ್ । ಸಃ ।

---

| | |
|---|---|
| ವಾರುಣೀವಮ್ ಕೃಷ್ಣಾವಮ್ ವಶಾವಮ್ ಅಪಶ್ಯತ್ | ಕರಿಯ ಬಣ್ಣದ ಗೊಡ್ಡು ಹಸುವನ್ನು ನೋಡಿದನು. |
| ತಾವಮ್ ಸ್ವಾಯೈ ದೇವತಾಯೈ ಆಲಭತ | ಅದನ್ನು ತನಗಾಗಿಯೇ [ವರುಣದೇವತೆಗಾಗಿ] ಯಾಗ ಮಾಡಿದನು. |
| ತತಃ ವೈ ತಮ್ ಅನ್ನಾದ್ಯಮ್ ಉಪಾನಮತ್ | ಅನಂತರ ಆ ವರುಣನನ್ನು ಮೃಷ್ಟಾನ್ನವು ಹೊಂದಿತು. |

### ವಾರುಣಪಶುಯಾಗದ ವಿಧಿ

| | |
|---|---|
| ಅನ್ನಾದ್ಯಾಯ ಅಲಮ್ ಸಂತಮ್ ಯಮ್ ಅನ್ನಾದ್ಯಮ್ ನ ಉಪನಮೇತ್ ಸಃ | ಉತ್ತಮಾನ್ನವನ್ನು ತಿನ್ನಲು ಯೋಗ್ಯನಾದ ಯಾವನನ್ನು ಉತ್ತಮವಾದ ಅನ್ನವು ಹೊಂದದಿರುವುದೋ ಅವನು |

---

ಶಾಲ್ಯನ್ನ, ಪಾಯಸಾದಿಮೃಷ್ಟಾನ್ನವು ಪ್ರಾಪ್ತವಾಗಲೇ ಇಲ್ಲ. ಅವನು ವರುಣದೇವತಾಕವಾದ ಕರಿಯ ಗೊಡ್ಡು ಪಶುವನ್ನು ನೋಡಿದನು. ಅದನ್ನು ತನಗಾಗಿಯೇ ಯಾಗ ಮಾಡಿದನು. ಬಳಿಕ ವರುಣನನ್ನು ಮೃಷ್ಟಾನ್ನವು/ ಉತ್ತಮಭಕ್ಷ್ಯಭೋಜ್ಯಾದಿಗಳು ಹೊಂದಿದವು. ಅವನಿಗೆ ಉತ್ತಮಾನ್ನವು ಪ್ರಾಪ್ತಿಯಾಯಿತು.

ಏತಾಂ ವಾರುಣೀಂ ಕೃಷ್ಣಾಂ ವಶಾಮಾಲಭೇತ ವರುಣ

ಮೇವ ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮಾ

ಅನ್ನಂ ಪ್ರಯಚ್ಛತ್ಯನ್ನಾದ [...ನ್ನಾದಃ [೧]] ಏವ ಭವತಿ

---

ಏತಾಮ್ । ವಾರುಣೀಮ್ । ಕೃಷ್ಣಾಮ್ । ವಶಾಮ್ । ಏತಿ । ಲಭೇತ । ವರುಣಮ್ ।

ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ ।

ಅಸ್ಮೈ । ಅನ್ನಮ್ । ಪ್ರೇತಿ । ಯಚ್ಛತಿ । ಅನ್ನಾದ ಇತ್ಯನ್ನ – ಅದಃ । ಏವ । ಭವತಿ ।

---

| | |
|---|---|
| ಏತಾಮ್ ವಾರುಣೀಮ್ ಕೃಷ್ಣಾಮ್ ವಶಾಮ್ ಆಲಭೇತ | ವರುಣದೇವತೆಗಾಗಿ ಕಪ್ಪು ಬಣ್ಣದ ಗೊಡ್ಡು ಹಸುವನ್ನು ಯಾಗ ಮಾಡಬೇಕು. **[ವಿಧಿ]** |
| ವರುಣಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಯಜಮಾನನು] ಈ ಕೃಷ್ಣಪಶುವಿನಿಂದ ವರುಣನಿಗೆ ಬೇಕಾದ ಹವಿರ್ಭಾಗವನ್ನಿತ್ತು ಸೇವಿಸುತ್ತಾನೆ. |
| ಸಃ ಏವ ಅಸ್ಮೈ ಅನ್ನಮ್ ಪ್ರಯಚ್ಛತಿ | ಆ ವರುಣನೇ ಈ ಯಜಮಾನನಿಗೆ ಅನ್ನವನ್ನು ಒದಗಿಸುತ್ತಾನೆ. |
| ಅನ್ನಾದಃ ಏವ ಭವತಿ | ಯಜಮಾನನು ಉತ್ತಮವಾದ ಅನ್ನವನ್ನು ತಿನ್ನುವವನಾಗುತ್ತಾನೆ. |

---

ಉತ್ತಮವಾದ ಅನ್ನವನ್ನು ತಿನ್ನಲು ಅನುಕೂಲ್ಯವಿದ್ದರೂ ಕಾರಣಾಂತರಗಳಿಂದ ಅದನ್ನು ಪಡೆಯದವನು ವರುಣದೇವನಿಗಾಗಿ ಕಪ್ಪುಬಣ್ಣದ ಬಂಜೆ ಹಸುವನ್ನು ಯಾಗ ಮಾಡಬೇಕು.

ಯಜಮಾನನು ವರುಣನಿಗೆ ಈ ಕೃಷ್ಣಪಶುವಿನಿಂದ ಯಾಗವನ್ನು ಮಾಡುವುದರಿಂದ ವರುಣನಿಗೆ ನೀಡಬೇಕಾದ ಹವಿಸ್ಸಿನ ಭಾಗವನ್ನು ಕೊಟ್ಟು ಅವನನ್ನು ಸೇವಿಸಿದಂತಾಗುತ್ತದೆ. ಈ ವಾರುಣಯಾಗವು ವರುಣನನ್ನು ತೃಪ್ತಿಪಡಿಸುತ್ತದೆ. ತೃಪ್ತನಾದ

ಕೃಷ್ಣಾ ಭವತಿ ವಾರುಣೀ ಹ್ಯೇಷಾ ದೇವತಯಾ ಸಮೃದ್ಧ್ಯೈ

ಮೈತ್ರಗ್ಂ ಶ್ವೇತಮಾಲಭೇತ ವಾರುಣಂ ಕೃಷ್ಣಮಪಾಂ

ಚೌಷಧೀನಾಂ ಚ ಸಂಧಾವನ್ನಕಾಮೋ

---

ಕೃಷ್ಣಾ। ಭವತಿ। ವಾರುಣೀ। ಹಿ। ಏಷಾ। ದೇವತಯಾ। ಸಮೃದ್ಧ್ಯಾ ಇತಿ ಸಮ್-ಋದ್ಧ್ಯೈ।

ಮೈತ್ರಮ್। ಶ್ವೇತಮ್। ಏತಿ। ಲಭೇತ। ವಾರುಣಮ್। ಕೃಷ್ಣಮ್। ಅಪಾಮ್।

ಚ। ಓಷಧೀನಾಮ್। ಚ। ಸಂಧಾವಿತಿ ಸಮ್-ಧೌ। ಅನ್ನಕಾಮ ಇತ್ಯನ್ನ-ಕಾಮಃ।

---

**ಪಶುವಿನ ವರ್ಣದ ಪ್ರಶಂಸೆ**

| | |
|---|---|
| ಕೃಷ್ಣಾ ಭವತಿ | ಈ ವಾರುಣಪಶುವು ಕಪ್ಪು ವರ್ಣವಾಗಿದೆ. |
| ವಾರುಣೀ ಹಿ ಏಷಾ ದೇವತಯಾ ಸಮೃದ್ಧ್ಯೈ | ವರುಣನೂ ಕೃಷ್ಣವರ್ಣನಾಗಿರುತ್ತಾನೆ. ಈ ವರ್ಣಸಮಾನತೆಯು ವೃಷ್ಟಿಸಮೃದ್ಧಿಗೆ ಕಾರಣವಾಗುತ್ತದೆ. |

**ಅನ್ನಕಾಮನಿಗೆ ವಿಹಿತವಾದ ಯಾಗದ್ವಯ; ಪ್ರಶಂಸೆ**

| | |
|---|---|
| ಅನ್ನಕಾಮಃ ಅಪಾಮ್ ಚ ಓಷಧೀನಾಮ್ ಚ ಸಂಧೌ | ಅನ್ನದ ಸಮೃದ್ಧಿಯನ್ನು ಬಯಸುವವನು ವರ್ಷಾಕಾಲದ ಮತ್ತು ಶರತ್ಕಾಲದ ಅಥವಾ ನದಿ ಮತ್ತು ಹೊಲಗದ್ದೆಗಳ ಮಧ್ಯದಲ್ಲಿ |
| ಮೈತ್ರಮ್ ಶ್ವೇತಮ್ ಆಲಭೇತ | ಬಿಳಿಯ ಬಣ್ಣದ ಪಶುವನ್ನು ಮಿತ್ರ ದೇವನಿಗಾಗಿ ಯಾಗ ಮಾಡಬೇಕು. |
| ವಾರುಣಮ್ ಕೃಷ್ಣಮ್ **ಆಲಭೇತ** | ಕೃಷ್ಣಪಶುವನ್ನು ವರುಣನಿಗಾಗಿಯೂ ಯಾಗ ಮಾಡಬೇಕು. |

---

ವರುಣನು ಮಳೆಯನ್ನು ಸುರಿಸಿ, ಸಸ್ಯಾಭಿವೃದ್ಧಿಯನ್ನು ಮಾಡಿ ಯಜಮಾನನಿಗೆ ಅನ್ನವನ್ನು ಕೊಡುತ್ತಾನೆ. ಯಜಮಾನನು ಉತ್ತಮಾನ್ನಭೋಗಿಯಾಗುತ್ತಾನೆ.

ಈ ಯಾಗದ ಪಶುವೂ ಕಪ್ಪು. ವರುಣನು ಮಳೆಯನ್ನು ಸುರಿಸುವಾಗ ಸೂರ್ಯನ

ಮೈತ್ರೀರ್ವಾ ಓಷಧಯೋ ವಾರುಣೀರಾಪೋಽಪಾಂ ಚ

ಖಲು ವಾ ಓಷಧೀನಾಂ ಚ ರಸಮುಪಜೀವಾಮೋ

ಮಿತ್ರಾವರುಣಾವೇವ ಸ್ವೇನ ಭಾಗಧೇಯೇನೋಪಧಾವತಿ

---

ಮೈತ್ರೀಃ । ವೈ । ಓಷಧಯಃ । ವಾರುಣೀಃ । ಆಪಃ । ಅಪಾಮ್ । ಚ । ಖಲು । ವೈ । ಓಷಧೀನಾಮ್ । ಚ । ರಸಮ್ । ಉಪೇತಿ । ಜೀವಾಮಃ । ಮಿತ್ರಾವರುಣಾವಿತಿ ಮಿತ್ರಾ–ವರುಣೌ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಮೈತ್ರೀಃ ವೈ ಓಷಧಯಃ<br>ವಾರುಣೀಃ ಆಪಃ | ಸಸ್ಯಗಳು ಮಿತ್ರದೇವತಾಕವಾದವುಗಳು.<br>ನೀರುಗಳು ವರುಣದೇವತಾಕವಾದವು. |
| ಅಪಾಮ್ ಚ ಓಷಧೀನಾಮ್ ಚ<br>ರಸಮ್ ಉಪಜೀವಾಮಃ ಖಲು | ನೀರು ಮತ್ತು ಸಸ್ಯಗಳ ರಸವನ್ನು ಉಪಯೋಗಿಸಿಕೊಂಡು ನಾವು ಜೀವಿಸುತ್ತೇವಷ್ಟೆ. |
| ಮಿತ್ರಾವರುಣೌ ಏವ ಸ್ವೇನ<br>ಭಾಗಧೇಯೇನ ಉಪಧಾವತಿ | ಈ ಯಾಗಗಳಿಂದ ಯಜಮಾನನು ಮಿತ್ರನನ್ನೂ, ವರುಣನನ್ನೂ ಸಂತೋಷಪಡಿಸುತ್ತಾನೆ. |

---

ಪ್ರಕಾಶವಿಲ್ಲದಂತೆ ಮಾಡುವುದರಿಂದ ವರುಣನೂ ಕಪ್ಪು. ಆದುದರಿಂದ ಕೃಷ್ಣ ಪಶುವು ಆತನಿಗೆ ಪ್ರಿಯವಾಗಿದೆ. ಇದು ಅಧಿಕವೃಷ್ಟಿಗೆ ಕಾರಣವಾಗಿ ಅನ್ನಸಮೃದ್ಧಿಯಾಗುತ್ತದೆ.

ಅನ್ನಕಾಮನಾದವನು ವರ್ಷರ್ತು–ಶರದೃತುಗಳ ಸಂಧಿಕಾಲದಲ್ಲಿ ಅಥವಾ ನದಿ–ಹೊಲಗದ್ದೆಗಳ ಮಧ್ಯಭಾಗದಲ್ಲಿ ಮಿತ್ರದೇವನಿಗೆ ಶ್ವೇತಪಶುವನ್ನೂ, ವರುಣದೇವನಿಗೆ ಕೃಷ್ಣಪಶುವನ್ನೂ ಯಾಗ ಮಾಡಬೇಕು. ನೀರುಗಳು ಜಲಾಧಿಪತಿಯಾದ ವರುಣನಿಗೆ ಸಂಬಂಧಿಸಿವೆ. ಸಸ್ಯಗಳು ಸೂರ್ಯನ ಪ್ರಕಾಶದಿಂದ ಬೆಳೆಯುವುದರಿಂದ ಮಿತ್ರದೇವನಿಗೆ ಸಂಬಂಧಿಸಿವೆ. ನಾವು ಜೀವಿಸಲು ಸಸ್ಯಗಳೂ, ನೀರೂ ಅವಶ್ಯಕ. ಈ ಯಾಗಗಳಿಂದ

ತಾವೇವಾಸ್ಮಾ ಅನ್ನಂ ಪ್ರಯಚ್ಛತೋಽನ್ನಾದ ಏವ

ಭವತ್ಯಪಾಂ [.... ಭವತಿ (೨) ಅಪಾಂ] ಚೌಷಧೀನಾಂ ಚ

ಸಂಧಾವಾಲಭತ

---

ತೌ । ಏವ । ಅಸ್ಮೈ । ಅನ್ನವ್ । ಪ್ರೇತಿ । ಯಚ್ಛತಃ । ಅನ್ನಾದ ಇತ್ಯನ್ನ–ಅದಃ । ಏವ । ಭವತಿ । ಅಪಾವ್ । ಚ । ಓಷಧೀನಾವ್ । ಚ । ಸಂಧಾವಿತಿ ಸವ್–ಧೌ । ಏತಿ । ಲಭತೇ ।

---

| | |
|---|---|
| ತೌ ಏವ ಅಸ್ಮೈ ಅನ್ನವ್ ಪ್ರಯಚ್ಛತಃ | ಅವರಿಬ್ಬರೂ ಈ ಯಜಮಾನನಿಗೆ ಅನ್ನವನ್ನು ಕೊಡುತ್ತಾರೆ. |
| ಅನ್ನಾದಃ ಏವ ಭವತಿ | ಯಜಮಾನನು ಉತ್ತಮವಾದ ಅನ್ನವನ್ನು ಊಟ ಮಾಡುವವನಾಗುತ್ತಾನೆ. |

**ಯಾಗಗಳ ಕಾಲ–ದೇಶಗಳ ಪ್ರಶಂಸೆ**

| | |
|---|---|
| ಅಪಾವ್ ಚ ಓಷಧೀನಾವ್ ಚ ಸಂಧೌ ಆಲಭತೇ | ಮಳೆಗಾಲ–ಶರತ್ಕಾಲಗಳ ಸಂಧಿಕಾಲದಲ್ಲಿ, ನದಿ–ಹೊಲಗದ್ದೆಗಳ ಮಧ್ಯದಲ್ಲಿ ಪಶುಯಾಗಗಳನ್ನು ಮಾಡುತ್ತಾನೆ. |

---

ತೃಪ್ತರಾದ ಮಿತ್ರಾವರುಣರು ಯಜಮಾನನಿಗೆ ಅನ್ನವನ್ನು ಕೊಡುತ್ತಾರೆ. ಯಜಮಾನನಿಗೆ ಉತ್ತಮವಾದ ಅನ್ನವು ಲಭಿಸುತ್ತದೆ.

ಈ ಯಾಗಗಳನ್ನು ಮಳೆಗಾಲ–ಶರತ್ಕಾಲದ ಸಂಧಿಕಾಲದಲ್ಲಿ ಅಥವಾ ನದಿ–ಹೊಲಗದ್ದೆಗಳ ಸಂಧಿದೇಶದಲ್ಲಿ ಅನುಷ್ಠಿಸುವುದರಿಂದ ನೀರು ಮತ್ತು ಸಸ್ಯಗಳೆರಡರ ಪ್ರಾಪ್ತಿಯೂ ಆಗುತ್ತದೆ.

ಉಭಯಸ್ಯಾವರುದ್ಧ್ಯೈ ವಿಶಾಖೋ ಯೂಪೋ ಭವತಿ

ದ್ವೇ ಹ್ಯೇತೇ ದೇವತೇ ಸಮೃದ್ಧ್ಯೈ ಮೈತ್ರಗ್ಂ ಶ್ವೇತ

ಮಾಲಭೇತ ವಾರುಣಂ ಕೃಷ್ಣಂ ಜ್ಯೋಗಾಮಯಾವೀ

---

ಉಭಯಸ್ಯ । ಅವರುದ್ಧ್ಯಾ ಇತ್ಯವ-ರುದ್ಧ್ಯೈ । ವಿಶಾಖ ಇತಿ ವಿ-ಶಾಖಃ । ಯೂಪಃ । ಭವತಿ । ದ್ವೇ ಇತಿ । ಹಿ । ಏತೇ ಇತಿ । ದೇವತೇ ಇತಿ । ಸಮೃದ್ಧ್ಯಾ ಇತಿ ಸಮ್-ಋದ್ಧ್ಯೈ । **ಮೈತ್ರಮ್** । ಶ್ವೇತಮ್ । ಏತಿ । ಲಭೇತ । ವಾರುಣಮ್ । ಕೃಷ್ಣಮ್ । ಜ್ಯೋಗಾಮಯಾವೀತಿ ಜ್ಯೋಕ್-ಆಮಯಾವೀ ।

---

| | |
|---|---|
| ಉಭಯಸ್ಯ ಅವರುದ್ಧ್ಯೈ | ಇದು ನೀರು-ಸಸ್ಯಗಳೆರಡರ ಪ್ರಾಪ್ತಿಗೆ ಕಾರಣವಾಗುತ್ತದೆ. |

**ಯೂಪವಿಶೇಷವಿಧಿ; ಪ್ರಶಂಸೆ**

| | |
|---|---|
| ವಿಶಾಖಃ ಯೂಪಃ ಭವತಿ | ರಶನೆಯ ಮೇಲೆ ವಿವಿಧ ಶಾಖೆಗಳುಳ್ಳ ಅಥವಾ ಬುಡದಿಂದ ಮೇಲೆ ಎರಡು ಅಷ್ಟಾಶ್ರಿಗಳುಳ್ಳ ಯೂಪವಿರಬೇಕು. |
| ದ್ವೇ ಹಿ ಏತೇ ದೇವತೇ ಸಮೃದ್ಧ್ಯೈ | ಮಿತ್ರ-ವರುಣರೆಂಬ ಇಬ್ಬರು ದೇವತೆಗಳಿರುವುದರಿಂದ ಇಂತಹ ಯೂಪವು ಫಲಸಮೃದ್ಧಿಗೆ ಕಾರಣವಾಗುತ್ತದೆ. |

**ದೀರ್ಘರೋಗಿಗೆ ಮೈತ್ರಾವರುಣಯಾಗವಿಧಿ; ಪ್ರಶಂಸೆ**

| | |
|---|---|
| ಜ್ಯೋಗಾಮಯಾವೀ ಮೈತ್ರಮ್ ಶ್ವೇತಮ್ ವಾರುಣಮ್ ಕೃಷ್ಣಮ್ ಆಲಭೇತ | ದೀರ್ಘರೋಗಿಯಾದವನು ಮಿತ್ರದೇವತೆಗೆ ಬಿಳಿಯ ಪಶುವನ್ನೂ ವರುಣದೇವತೆಗೆ ಕಪ್ಪು ಹಸುವನ್ನೂ ಯಾಗ ಮಾಡಬೇಕು. |

---

ಈ ಯಾಗಕ್ಕೆ ಯೂಪವು ರಶನೆಯ ಮೇಲೆ ವಿವಿಧ ಶಾಖೆಗಳುಳ್ಳದ್ದಾಗಿರಬೇಕು. ಅಥವಾ ಬುಡದಿಂದ ಮೇಲೆ ಎರಡು ಎಂಟು ಮೂಲೆಗಳುಳ್ಳದ್ದಾಗಿರಬೇಕು. ಈ ಯಾಗಕ್ಕೆ ಮಿತ್ರ-ವರುಣರೆಂಬ ಇಬ್ಬರು ದೇವತೆಗಳಿರುವುದರಿಂದ ಇಂತಹ ಯೂಪವು ಫಲಸಮೃದ್ಧಿಗೆ ಕಾರಣವಾಗುತ್ತದೆ.

## ಯನ್ಮೈತ್ರೋ ಭವತಿ ಮಿತ್ರೇಣೈವಾಸ್ಮೈ ವರುಣಗ್ಂ ಶಮಯತಿ ಯದ್ವಾರುಣಃ ಸಾಕ್ಷಾದೇವೈನಂ ವರುಣ ಪಾಶಾನ್ಮುಂಚತ್ಯುತ ಯದೀತಾಸುರ್ಭವತಿ ಜೀವತ್ಯೇವ

---

ಯತ್ । ಮೈತ್ರಃ । ಭವತಿ । ಮಿತ್ರೇಣ । ಏವ । ಅಸ್ಮೈ । ವರುಣಮ್ । ಶಮಯತಿ । ಯತ್ । ವಾರುಣಃ । ಸಾಕ್ಷಾದಿತಿ ಸ-ಅಕ್ಷಾತ್ । ಏವ । ಏನಮ್ । ವರುಣಪಾಶಾದಿತಿ ವರುಣ-ಪಾಶಾತ್ । ಮುಂಚತಿ । ಉತ । ಯದಿ । ಇತಾಸುರಿತೀತ-ಅಸುಃ । ಭವತಿ । ಜೀವತಿ । ಏವ ।

---

| | |
|---|---|
| ಯತ್ ಮೈತ್ರಃ ಭವತಿ | ಯಾಗವು ಮಿತ್ರದೇವತಾಕವಾದುದರಿಂದ ಅದು |
| ಮಿತ್ರೇಣ ಏವ ಅಸ್ಮೈ ವರುಣಮ್ ಶಮಯತಿ | ಮಿತ್ರದೇವತೆಯಿಂದಲೇ ಈ ಯಜಮಾನನ ವಿಷಯದಲ್ಲಿ ವರುಣನು ಶಾಂತನಾಗುವಂತೆ ಮಾಡುತ್ತದೆ. |
| ಯತ್ ವಾರುಣಃ | ವರುಣದೇವತಾಕವಾದ ಪಶುಯಾಗವೆಂಬುದು |
| ಸಾಕ್ಷಾತ್ ಏವ ಏನಮ್ ವರುಣಪಾಶಾತ್ ಮುಂಚತಿ | [ವರುಣನನ್ನು ಸಂತೋಷಪಡಿಸಿ] ತಾನಾಗಿಯೇ ವರುಣಪಾಶದಿಂದ ಬಿಡಿಸುವಂತೆ ಮಾಡುತ್ತದೆ. |
| ಉತ ಯದಿ ಇತಾಸುಃ ಭವತಿ ಜೀವತಿ ಏವ | ಯಜಮಾನನು ಪ್ರಾಣೋತ್ಕ್ರಮಣಸ್ಥಿತಿಯಲ್ಲಿದ್ದರೂ ಬದುಕಿಯೇ ಬದುಕುತ್ತಾನೆ. |

---

ದೀರ್ಘರೋಗಿಯಾದವನು ಮಿತ್ರದೇವತೆಗೆ ಶ್ವೇತಪಶುವನ್ನೂ, ವರುಣದೇವತೆಗೆ ಕೃಷ್ಣಪಶುವನ್ನೂ ಯಾಗ ಮಾಡಬೇಕು. ಶ್ವೇತಪಶುಯಾಗದ ದೇವತೆಯಾದ ಮಿತ್ರನು ವರುಣನನ್ನು ಶಾಂತಗೊಳಿಸುತ್ತಾನೆ. ಕೃಷ್ಣಪಶುಯಾಗದ ದೇವತೆಯಾದ ವರುಣನು ಪ್ರಸನ್ನನಾಗಿ ಯಜಮಾನನನ್ನು ವರುಣಪಾಶದಿಂದ ಬಿಡಿಸುತ್ತಾನೆ. ಹೀಗೆ ಮಿತ್ರಾವರುಣರ ಅನುಗ್ರಹದಿಂದ ಯಜಮಾನನು ಪ್ರಾಣೋತ್ಕ್ರಮಣಸ್ಥಿತಿಯಲ್ಲಿದ್ದರೂ ಬದುಕುತ್ತಾನೆ.

ದೇವಾ ವೈ ಪುಷ್ಟಿಂ ನಾವಿಂದನ್ತಾಂ [ನಾವಿಂದನ್ (೩)

ತಾಂ] ಮಿಥುನೇಽಪಶ್ಯನ್ತಸ್ಯಾಂ ನ ಸಮರಾಧಯನ್ತಾವಶ್ವಿನಾವ

ಬ್ರೂತಾಮಾವಯೋರ್ವಾ ಏಷಾ ಮೈತಸ್ಯಾಂ ವದಧ್ವಮಿತಿ

---

ದೇವಾಃ । ವೈ । ಪುಷ್ಟಿಮ್ । ನ । ಅವಿಂದನ್ । ತಾಮ್ । ಮಿಥುನೇ । ಅಪಶ್ಯನ್ ।

ತಸ್ಯಾಮ್ । ನ । ಸಮಿತಿ । ಅರಾಧಯನ್ । ತೌ । ಅಶ್ವಿನೌ । ಅಬ್ರೂತಾಮ್ ।

ಆವಯೋಃ । ವೈ । ಏಷಾ । ಮಾ । ಏತಸ್ಯಾಮ್ । ವದಧ್ವಮ್ । ಇತಿ ।

---

**ಪುಷ್ಟಿಕಾಮನಿಗೆ ವಿಹಿತವಾದ ಪಶುಯಾಗ**

| | |
|---|---|
| ದೇವಾಃ ವೈ ಪುಷ್ಟಿಮ್ ನ ಅವಿಂದನ್ | ಒಂದು ಕಾಲದಲ್ಲಿ ದೇವತೆಗಳು ಪ್ರಜಾಪಶು ಸಮೃದ್ಧಿರೂಪವಾದ ಪುಷ್ಟಿಯನ್ನು ಪಡೆಯಲಿಲ್ಲ. |
| ತಾಮ್ ಮಿಥುನೇ ಅಪಶ್ಯನ್ | ಆ ಪುಷ್ಟಿಯನ್ನು ಪ್ರಜಾಪಶುಗಳ ಜೋಡಿಯಲ್ಲಿ ಕಂಡುಕೊಂಡರು. |
| ತಸ್ಯಾಮ್ ನ ಸಮರಾಧಯನ್ | ಆದರೂ ಅವರು ಪುಷ್ಟಿಯನ್ನು ಹೊಂದಲಿಲ್ಲ. |
| ತೌ ಅಶ್ವಿನೌ | ಆಗ ಅಶ್ವಿನೀ ದೇವತೆಗಳು |
| ಏಷಾ ಆವಯೋಃ ವೈ | [ದೇವತೆಗಳಿಗೆ ''ಎಲೈ ದೇವತೆಗಳೇ!] ಈ ಪುಷ್ಟಿಯು ನಮ್ಮದಾಗಿದೆ. |
| ಏತಸ್ಯಾಮ್ ಮಾ ವದಧ್ವಮ್ ಇತಿ ಅಬ್ರೂತಾಮ್ | ಈ ಪುಷ್ಟಿಯ ವಿಷಯದಲ್ಲಿ ನಮ್ಮಿಬ್ಬರನ್ನೂ ಬಿಟ್ಟು ಬೇರೆ ಯಾರೊಡನೆಯೂ ಮಾತನಾಡಬೇಡಿ'' ಎಂದು ಹೇಳಿದರು. |

---

ಒಂದು ಕಾಲದಲ್ಲಿ ದೇವತೆಗಳು ಪ್ರಜಾವೃದ್ಧಿಯನ್ನು ಪಡೆಯಲಿಲ್ಲ. ಇದಕ್ಕೆ ಅವರು ಉಪಾಯವನ್ನು ಚಿಂತಿಸಿದರು. ಆ ಪುಷ್ಟಿಯನ್ನು ಪ್ರಜಾ–ಪಶುಗಳ ಜೋಡಿಯಲ್ಲಿ ಕಂಡು ಕೊಂಡರು. ಆದರೂ ಅವರು ಪುಷ್ಟಿಯನ್ನು ಹೊಂದಲಿಲ್ಲ. ಆಗ ಅಶ್ವಿನೀದೇವತೆಗಳು ದೇವತೆಗಳಿಗೆ 'ಈ ಪುಷ್ಟಿಯು ನಮ್ಮ ಅಧೀನವಾಗಿದೆ. ನಾವೇ ಪುಷ್ಟಿಗೆ ಕಾರಣರು. ಹೀಗಾಗಿ ಈ ವಿಷಯದಲ್ಲಿ ಬೇರೆಯವರೊಡನೆ ಮಾತನಾಡುವುದು ವ್ಯರ್ಥ' ಎಂದು ಹೇಳಿದರು.

# ಸಾಽಶ್ವಿನೋರೇವಾಭವದ್ಯಃ ಪುಷ್ಟಿಕಾಮಃ ಸ್ಯಾತ್ಸ
# ಏತಾಮಾಶ್ವಿನೀಂ ಯಮೀಂ ವಶಾಮಾಲಭೇತಾಶ್ವಿನಾವೇವ
# ಸ್ವೇನ ಭಾಗಧೇಯೇನೋಪಧಾವತಿ

---

ಸಾ । ಅಶ್ವಿನೋಃ । ಏವ । ಅಭವತ್ । ಯಃ । ಪುಷ್ಟಿಕಾಮ ಇತಿ ಪುಷ್ಟಿ–ಕಾಮಃ । ಸ್ಯಾತ್ ।

ಸಃ । ಏತಾಮ್ । ಆಶ್ವಿನೀಮ್ । ಯಮೀಮ್ । ವಶಾಮ್ । ಏತಿ । ಲಭೇತ । ಅಶ್ವಿನೌ ।

ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಸಾ ಅಶ್ವಿನೋಃ ಏವ ಅಭವತ್ | ಹೀಗೆ ಆ ಪುಷ್ಟಿಯು ಅಶ್ವಿನೀದೇವತೆಗಳ ಅಧೀನವಾಯಿತು. |
| ಯಃ ಪುಷ್ಟಿಕಾಮಃ ಸ್ಯಾತ್ ಸಃ ಏತಾಮ್ ಆಶ್ವಿನೀಮ್ ಯಮೀಮ್ ವಶಾಮ್ ಆಲಭೇತ | ಯಾವನು ಪ್ರಜಾಪಶುವೃದ್ಧಿಯನ್ನು ಅಪೇಕ್ಷಿಸುವನೋ ಅವನು ಅವಳಿಯಾಗಿ ಹುಟ್ಟಿದ ಹೆಣ್ಣು ಬಂಜೆ ಕರುವನ್ನು ಅಶ್ವಿನೀದೇವತೆಗಳಿಗಾಗಿ ಯಾಗ ಮಾಡಬೇಕು. |
| ಅಶ್ವಿನೌ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದಿಂದ ಅಶ್ವಿನೀ ದೇವತೆಗಳಿಗೆ ಅವರ ಭಾಗವನ್ನು ಕೊಟ್ಟು ಸಂತೋಷಪಡಿಸುತ್ತಾನೆ. |

---

ಹೀಗೆ ಪುಷ್ಟಿಯು ಅಶ್ವಿನೀದೇವತೆಗಳ ಅಧೀನವಾಯಿತು. ಪ್ರಜಾಪಶುವೃದ್ಧಿಯನ್ನು ಬಯಸುವವನು ಅವಳಿಯಾಗಿ ಹುಟ್ಟಿರುವ ಪಶುಗಳಲ್ಲಿ ಬಂಜೆಯಾದ ಹೆಣ್ಣು ಪಶುವನ್ನು ಅಶ್ವಿನೀದೇವತೆಗಳಿಗಾಗಿ ಯಾಗ ಮಾಡಬೇಕು. ಇದರಿಂದ ಯಜಮಾನನು ಅಶ್ವಿನೀ ದೇವತೆಗಳಿಗೆ ಅವರ ಹವಿರ್ಭಾಗವನ್ನಿತ್ತು ಸಂತೋಷಪಡಿಸಿದಂತಾಗುತ್ತದೆ. ಸಂತುಷ್ಟರಾದ

ತಾವೇವಾಸ್ಮಿನ್ಪುಷ್ಟಿಂ ಧತ್ತಃ ಪುಷ್ಯತಿ

ಪ್ರಜಯಾ ಪಶುಭಿಃ ||೫೬–9||

[ಅನ್ನಾದೋಽನ್ನಾದ ಏವ ಭವತ್ಯೇಕಂದನ್ಪಂಚಚತ್ವಾರಿಗ್ಂಶಚ್ಚ ||]

---

ತೌ । ಏವ । ಅಸ್ಮಿನ್ನ್ । ಪುಷ್ಟಿಮ್ । ಧತ್ತಃ । ಪುಷ್ಯತಿ । ಪ್ರಜಯೇತಿ ಪ್ರ–ಜಯಾ ।

ಪಶುಭಿರಿತಿ ಪಶು–ಭಿಃ ||

---

| | |
|---|---|
| ತೌ ಏವ ಅಸ್ಮಿನ್ ಪುಷ್ಟಿಮ್ ಧತ್ತಃ | ಅವರು ಈ ಯಜಮಾನನಲ್ಲಿ ಪುಷ್ಟಿಯನ್ನುಂಟುಮಾಡುತ್ತಾರೆ. |
| ಪ್ರಜಯಾ ಪಶುಭಿಃ ಪುಷ್ಯತಿ | ಯಜಮಾನನು ಪ್ರಜಾ–ಪಶುಗಳ ಸಮೃದ್ಧಿಯನ್ನು ಪಡೆಯುತ್ತಾನೆ. |

---

ಅಶ್ವಿನೀದೇವತೆಗಳು ಯಜಮಾನನಿಗೆ ಪ್ರಜಾಪಶುವೃದ್ಧಿಯನ್ನು ನೀಡುತ್ತಾರೆ. ಯಜಮಾನನು ಅದರಿಂದ ಪ್ರಜಾಪಶುಸಂಪನ್ನನಾಗುತ್ತಾನೆ.

* * *

## ॥ ದಶಮೋಽನುವಾಕಃ ॥

ಆಶ್ವಿನಂ ಧೂಮ್ರಲಲಾಮಮಾಲಭೇತ ಯೋ

ದುರ್ಬ್ರಾಹ್ಮಣಃ

---

**ಆಶ್ವಿನಮ್** । ಧೂಮ್ರಲಲಾಮಮಿತಿ ಧೂಮ್ರ–ಲಲಾಮಮ್ । ಏತಿ । ಲಭೇತ । ಯಃ ।

ದುರ್ಬ್ರಾಹ್ಮಣ ಇತಿ ದುಃ – ಬ್ರಾಹ್ಮಣಃ ।

---

ಹಿಂದಿನ ಒಂಬತ್ತನೆಯ ಅನುವಾಕದಲ್ಲಿ ಈ ಪಶುಯಾಗಗಳು ಹೇಳಲ್ಪಟ್ಟಿವೆ.

**ಅನ್ನಾದ್ಯಮನ್ನಮಾತ್ರಂ ಚ ವಾಂಛಂತೌ ದೀರ್ಘರೋಗವಾನ್ ।**
**ಪುಷ್ಟಿಕಾಮಶ್ಚ ನವಮ ಏತೇಷಾಂ ಪಶವಃ ಶ್ರುತಾಃ ॥**

[ಉತ್ತಮಾನ್ನವನ್ನು ಬಯಸುವವನು, ಅನ್ನದ ಸಮೃದ್ಧಿಯನ್ನು ಬಯಸುವವನು, ದೀರ್ಘರೋಗದಿಂದ ಮುಕ್ತನಾಗಲು ಬಯಸುವವನು, ಪ್ರಜಾಪಶುಸಮೃದ್ಧಿರೂಪವಾದ ಪುಷ್ಟಿಯನ್ನು ಬಯಸುವವನು–ಇವರಿಗೆ ಪಶುಯಾಗಗಳು ಹೇಳಲ್ಪಟ್ಟವು.]

ಈ ಹತ್ತನೆಯ ಅನುವಾಕದಲ್ಲಿ ನೈಮಿತ್ತಿಕಪಶುಗಳು ಹೇಳಲ್ಪಟ್ಟಿವೆ.

---

### ದುರ್ಬ್ರಾಹ್ಮಣನಿಮಿತ್ತವಾದ ಆಶ್ವಿನಪಶುಯಾಗದ ವಿಧಿ

| | |
|---|---|
| ಯಃ ದುರ್ಬ್ರಾಹ್ಮಣಃ | ಯಾವ ದುರ್ಬ್ರಾಹ್ಮಣನು ಅಂದರೆ ಮೂರು ತಲೆಮಾರಿನಿಂದ ವೇದಾಧ್ಯಯನ ಹಾಗೂ ಯಜ್ಞಗಳ ಅನುಷ್ಠಾನವಿಲ್ಲದವನು |

---

ದೇವತೆಗಳಲ್ಲಿ ಅಶ್ವಿನೀದೇವತೆಗಳಿಗೆ ಸೋಮಪಾನವಿರಲಿಲ್ಲ. ಅವರು ಯಜ್ಞದ

ಸೋಮಂ ಪಿಪಾಸೇದಶ್ವಿನೌ ವೈ ದೇವಾನಾಮ-
ಸೋಮಪಾವಾಸ್ತಾಂ ತೌ ಪಶ್ಚಾ ಸೋಮಪೀಥಂ
ಪ್ರಾಪ್ನುತಾಮಶ್ವಿನಾವೇತಸ್ಯ ದೇವತಾ

---

ಸೋಮಮ್ । ಪಿಪಾಸೇತ್ । ಅಶ್ವಿನೌ । ವೈ । ದೇವಾನಾಮ್ । ಅಸೋಮಪಾವಿತ್ಯ
ಸೋಮ-ಪೌ । ಆಸ್ತಾಮ್ । ತೌ । ಪಶ್ಚಾ । ಸೋಮಪೀಥಮಿತಿ ಸೋಮ-ಪೀಥಮ್ ।
ಪ್ರೇತಿ । ಆಪ್ನುತಾಮ್ । ಅಶ್ವಿನೌ । ವೈ । ಏತಸ್ಯ । ದೇವತಾ ।

---

ಸೋಮಮ್ ಪಿಪಾಸೇತ್ — ಶ್ರದ್ಧೆಯಿಂದ ಸೋಮಪಾನವನ್ನು ಮಾಡ ಬಯಸುತ್ತಾನೆಯೋ

[ಸಃ] ಆಶ್ವಿನಮ್ ಧೂಮ್ರಲಲಾಮಮ್ ಆಲಭೇತ — ಹಣೆಯಲ್ಲಿ ಶ್ವೇತವರ್ಣದ ಚಿಹ್ನವಿರುವ ಶರೀರದ ಉಳಿದೆಡೆ ಧೂಮ್ರವರ್ಣವಿರುವ ಪಶುವನ್ನು ಅಶ್ವಿನೀದೇವತೆಗಳಿಗಾಗಿ ಯಾಗ ಮಾಡಬೇಕು.

**ಆಶ್ವಿನಪಶುಯಾಗದ ಉಪಾಖ್ಯಾನ**

ಅಶ್ವಿನೌ ವೈ ದೇವಾನಾಮ್ ಅಸೋಮಪೌ ಆಸ್ತಾಮ್ — ದೇವತೆಗಳಲ್ಲಿ ಅಶ್ವಿನೀದೇವತೆಗಳು ಮೊದಲು ಸೋಮಪಾನಕ್ಕೆ ಅರ್ಹರಾಗಿರಲಿಲ್ಲ.

ತೌ ಪಶ್ಚಾ ಸೋಮಪೀಥಮ್ ಪ್ರಾಪ್ನುತಾಮ್ — ಅವರು ಅನಂತರ ಸೋಮಪಾನದ ಅರ್ಹತೆಯನ್ನು ಪಡೆದರು.

---

ಶಿರಸ್ಸನ್ನು ಕೂಡಿಸಿದ ನಂತರ ಸೋಮಪಾನವನ್ನು ಪಡೆದರು.* ಆದುದರಿಂದ ಅಶ್ವಿನೀ

---

* ಈ ವಿಷಯವು ತೈತ್ತಿರೀಯಸಂಹಿತಾಗ್ರಂಥದ ಆರನೆಯ ಕಾಂಡದಲ್ಲಿ 'ಯಜ್ಞಸ್ಯ ಶಿರೋಽಚ್ಛಿದ್ಯತ' ಎಂಬ ಅನುವಾಕದಲ್ಲಿದೆ. [6.4.9.]

* ಮಹಾಭಾರತದಲ್ಲಿ 'ಚ್ಯವನಮಹರ್ಷಿಯು ಅಶ್ವಿನೀದೇವತೆಗಳಿಂದ ಕಣ್ಣುಗಳನ್ನೂ ಯೌವನವನ್ನೂ ಪಡೆದು ಅದಕ್ಕೆ ಪ್ರತಿಫಲವಾಗಿ ಸೋಮಪಾನಾರ್ಹತೆಯನ್ನು ಅವರಿಗೆ ಗಳಿಸಿಕೊಟ್ಟನು' ಎಂಬ ಉಪಾಖ್ಯಾನವು ಬರುತ್ತದೆ.

ಯೋ ದುರ್ಬ್ರಾಹ್ಮಣಃ ಸೋಮಂ ಪಿಪಾಸತ್ಯಶ್ವಿನಾವೇವ

ಸ್ವೇನ ಭಾಗಧೇಯೇನೋಪಧಾವತಿ ತಾವೇವಾಸ್ಮೈ

ಸೋಮಪೀಥಂ ಪ್ರಯಚ್ಛತ ಉಪೈನಗ್ಂ

ಸೋಮಪೀಥೋ ನಮತಿ

---

ಯಃ । ದುರ್ಬ್ರಾಹ್ಮಣ ಇತಿ ದುಃ-ಬ್ರಾಹ್ಮಣಃ । ಸೋಮಮ್ । ಪಿಪಾಸತಿ । ಅಶ್ವಿನೌ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ತೌ । ಏವ । ಅಸ್ಮೈ । ಸೋಮಪೀಥಮಿತಿ ಸೋಮ-ಪೀಥಮ್ । ಪ್ರೇತಿ । ಯಚ್ಛತಃ । ಉಪೇತಿ । ಏನಮ್ । ಸೋಮಪೀಥ ಇತಿ ಸೋಮ-ಪೀಥಃ । ನಮತಿ ।

---

| | |
|---|---|
| ಯಃ ದುರ್ಬ್ರಾಹ್ಮಣಃ ಸೋಮಮ್ ಪಿಪಾಸತಿ | ಯಾವ ದುರ್ಬ್ರಾಹ್ಮಣನು ಶ್ರದ್ಧಾವಂತನಾಗಿ ಸೋಮಪಾನವನ್ನು ಮಾಡಬಯಸುವವನೋ |
| ಏತಸ್ಯ ಅಶ್ವಿನೌ ದೇವತಾ | ಈತನಿಗೆ ಅಶ್ವಿನೀದೇವತೆಗಳೇ [ಸೋಮಪಾನಾರ್ಹತೆಯನ್ನು ಕೊಡುವ] ದೇವತೆಗಳಾಗಿದ್ದಾರೆ. |
| ಅಶ್ವಿನೌ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದಿಂದ ಅಶ್ವಿನೀ ದೇವತೆಗಳನ್ನು ತೃಪ್ತಿಪಡಿಸುತ್ತಾನೆ. |
| ತೌ ಏವ ಅಸ್ಮೈ ಸೋಮಪೀಥಮ್ ಪ್ರಯಚ್ಛತಃ | ಅಶ್ವಿನೀದೇವತೆಗಳೇ ಈ ದುರ್ಬ್ರಾಹ್ಮಣನಿಗೆ ಸೋಮಪಾನವನ್ನು ಅನುಗ್ರಹಿಸುತ್ತಾರೆ. |
| ಏನಮ್ ಸೋಮಪೀಥಃ ಉಪನಮತಿ | ಸೋಮಪಾನವು ಈತನಿಗೆ ಪ್ರಾಪ್ತವಾಗುತ್ತದೆ. |

ಯದ್ಧೂಮ್ರೋ ಭವತಿ ಧೂಮ್ರಿಮಾಣಮೇವಾಸ್ಮಾ-

ದಪಹಂತಿ ಲಲಾಮೋ [..ಲಲಾಮಃ (೧) ಭವತಿ]

ಭವತಿ ಮುಖತ ಏವಾಸ್ಮಿನ್ತೇಜೋ ದಧಾತಿ

---

ಯತ್ । ಧೂಮ್ರಃ । ಭವತಿ । ಧೂಮ್ರಿಮಾಣಮ್ । ಏವ । ಅಸ್ಮಾತ್ । ಅಪೇತಿ । ಹಂತಿ ।

ಲಲಾಮಃ । ಭವತಿ । ಮುಖತಃ । ಏವ । ಅಸ್ಮಿನ್ । ತೇಜಃ । ದಧಾತಿ ।

---

**ಪಶುವಿನ ವರ್ಣದ ಪ್ರಶಂಸೆ**

| | |
|---|---|
| ಯತ್ ಧೂಮ್ರಃ ಭವತಿ | ಪಶುವು ಮಾಸಲು ಬಣ್ಣವಾಗಿರುವುದೆಂಬುದು ಯಾವುದುಂಟೋ ಅದು |
| ಅಸ್ಮಾತ್ ಧೂಮ್ರಿಮಾಣಮ್ ಏವ ಅಪಹಂತಿ | ದೌರ್ಬ್ರಾಹ್ಮಣ್ಯರೂಪವಾದ ಮಾಲಿನ್ಯವನ್ನು ಈ ಯಜಮಾನನಲ್ಲಿ ಹೋಗಲಾಡಿಸುತ್ತದೆ. |
| ಲಲಾಮಃ ಭವತಿ | ಪಶುವು ಹಣೆಯಲ್ಲಿ ಬಿಳಿಯ ಬಣ್ಣವನ್ನು ಹೊಂದಿರುವುದು. |
| ಅಸ್ಮಿನ್ ಮುಖತಃ ಏವ ತೇಜಃ ದಧಾತಿ | ಅದು ಈತನ ಮುಖದಲ್ಲಿ ಬ್ರಹ್ಮವರ್ಚಸರೂಪವಾದ ತೇಜಸ್ಸನ್ನು ಉಂಟುಮಾಡುವುದು. |

---

ದೇವತೆಗಳು ದುರ್ಬ್ರಾಹ್ಮಣನಿಗೆ ಸೋಮಪಾನವನ್ನು ಮಾಡಿಸಲು ತಕ್ಕ ದೇವತೆಗಳಾಗಿರುತ್ತಾರೆ. ಅಶ್ವಿನೀದೇವತೆಗಳು ಈ ಪಶುಯಾಗದಿಂದ ತೃಪ್ತರಾಗಿ ಸೋಮಪಾನವನ್ನು ಮಾಡಬೇಕೆಂದಿರುವ ಈ ದುರ್ಬ್ರಾಹ್ಮಣನಿಗೆ ಸೋಮಪಾನವನ್ನು ಅನುಗ್ರಹಿಸುತ್ತಾರೆ. ಯಜಮಾನನು ಸೋಮಪೀಥಿಯಾಗುತ್ತಾನೆ.

ಈ ಯಾಗದಲ್ಲಿ ಪಶುವು ಮಾಸಲು ಬಣ್ಣವಾಗಿರುವುದು. ಅದು ಯಜಮಾನನ ದೌರ್ಬ್ರಾಹ್ಮಣ್ಯರೂಪವಾದ ಮಾಲಿನ್ಯವನ್ನು ದೂರ ಮಾಡುವುದು.

ಪಶುವಿನ ಹಣೆಯಲ್ಲಿ ಶ್ವೇತವರ್ಣವಿರುವುದರಿಂದ ಅದು ಯಜಮಾನನ ಮುಖದಲ್ಲಿ ಬ್ರಹ್ಮವರ್ಚಸವನ್ನೀಯುತ್ತದೆ.

ವಾಯವ್ಯಂ ಗೋಮೃಗಮಾಲಭೇತ ಯಮಜಘ್ನಿವಾಗ್ಂ

ಸಮಭಿಶಗ್ಂಸೇಯುರಪೂತಾ ವಾ ಏತಂ ವಾಗೃಚ್ಛತಿ

---

ವಾಯವ್ಯಮ್ । ಗೋಮೃಗಮಿತಿ ಗೋ–ಮೃಗಮ್ । ಏತಿ । ಲಭೇತ । ಯಮ್ ।

ಅಜಘ್ನಿವಾಗ್ಂಸಮ್ । ಅಭಿಶಗ್ಂಸೇಯುರಿತ್ಯಭಿ–ಶಗ್ಂಸೇಯುಃ । ಅಪೂತಾ । ವೈ ।

ಏತಮ್ । ವಾಕ್ । ಋಚ್ಛತಿ ।

---

**ವೃಥಾಪವಾದಕ್ಕೆ ಗುರಿಯಾದವನಿಗೆ ವಿಹಿತಪಶುಯಾಗ; ಪ್ರಶಂಸೆ**

| | |
|---|---|
| ಯಮ್ ಅಜಘ್ನಿವಾಗ್ಂಸಮ್ ಅಭಿಶಗ್ಂಸೇಯುಃ | ಬ್ರಾಹ್ಮಣಗವಾದಿಹತ್ಯೆಯನ್ನು ಮಾಡದಿದ್ದರೂ ಯಾವನನ್ನು 'ಬ್ರಹ್ಮಹಾ' ಮೊದಲಾಗಿ ನಿಂದಿಸುತ್ತಾರೆಯೋ |
| [ಸಃ] ವಾಯವ್ಯಮ್ ಗೋಮೃಗಮ್ ಆಲಭೇತ | ವಾಯುದೇವತಾಕವಾಗಿ ಗೋಮೃಗವನ್ನು ಯಾಗ ಮಾಡಬೇಕು. |

---

ಮಿಥ್ಯಾಪವಾದಕ್ಕೆ ಗುರಿಯಾದವನು ವಾಯುವಿಗಾಗಿ ಗೋಮೃಗವನ್ನು ಯಾಗ ಮಾಡಬೇಕು. ಗೋಬ್ರಾಹ್ಮಣಹತ್ಯೆಯನ್ನು ಮಾಡದಿದ್ದರೂ ಯಾವನನ್ನು ಜನರು 'ಬ್ರಹ್ಮಹಾ' ಎಂದು ಮೊದಲಾಗಿ ನಿಂದಿಸುತ್ತಾರೆಯೋ ಅದೇ ಮಿಥ್ಯಾಪವಾದ.

ಇವನು ಕೊಲೆಯನ್ನು ಮಾಡದಿದ್ದರೂ ಕೊಲೆಗಾರನೆಂಬ ಅಪವಿತ್ರ ಮಾತು ಇವನಿಗೆ ಒದಗುತ್ತದೆ.

---

* ಗೋಮೃಗವೆಂದರೆ ಕಾಡಿಗೆ ಮೇಯಲು ಹೋದ ವೃಷಭದಿಂದ ಮೃಗಿಯಲ್ಲಿ ಜನಿಸಿದ ಮೃಗ.

* ಕ್ರೂರಪ್ರಾಣಿಯಂತೆ ಬೇರೆಯ ಪಶುಗಳನ್ನು ಹಿಂಸಿಸುವ ಗ್ರಾಮದಲ್ಲಿರುವ ವೃಷಭವೇ ಗೋಮೃಗ. (ಭ.ಭಾ.ಭಾ.)

ಯಮಜಘ್ನಿವಾಗ್ಂಸಮಭಿಶಗ್ಂಸಂತಿ ನೈಷ ಗ್ರಾಮ್ಯಃ

ಪಶುರ್ನಾರಣ್ಯೋ ಯದ್ಗೋಮೃಗೋ ನೇವೈಷ ಗ್ರಾಮೇ

ನಾರಣ್ಯೇ ಯಮಜಘ್ನಿವಾಗ್ಂಸಮಭಿಶಗ್ಂಸಂತಿ

---

ಯಮ್ । ಅಜಘ್ನಿವಾಗ್ಂಸಮ್ । ಅಭಿಶಗ್ಂಸಂತೀತ್ಯಭಿ–ಶಗ್ಂಸಂತಿ । ನ । ಏಷಃ । ಗ್ರಾಮ್ಯಃ । ಪಶುಃ । ನ । ಆರಣ್ಯಃ । ಯತ್ । ಗೋಮೃಗ ಇತಿ ಗೋ–ಮೃಗಃ । ನ । ಇವ । ಏಷಃ । ಗ್ರಾಮೇ । ನ । ಅರಣ್ಯೇ । ಯಮ್ । ಅಜಘ್ನಿವಾಗ್ಂಸಮ್ । ಅಭಿಶಗ್ಂಸಂತೀತ್ಯಭಿ–ಶಗ್ಂಸಂತಿ ।

---

| | |
|---|---|
| ಯಮ್ ಅಜಘ್ನಿವಾಗ್ಂಸಮ್ ಅಭಿಶಗ್ಂಸಂತಿ | ಕೊಲೆಪಾತಕನಾಗದಿದ್ದರೂ ಕೊಲೆಗಾರನೆಂದು ಯಾವನನ್ನು ನಿಂದಿಸಿ ಬಹಿಷ್ಕರಿಸುತ್ತಾರೆಯೋ |
| ಏತಮ್ ಅಪೂತಾ ವಾಕ್ ಋಚ್ಛತಿ ವೈ | ಈ ವ್ಯಕ್ತಿಯನ್ನು ಅಪವಿತ್ರವಾದ ಮಾತು ಹೊಂದುತ್ತದೆ. |

**ವಾಯವ್ಯಪಶುಯಾಗದ ಯುಕ್ತತೆ : ವಿವರಣೆ**

| | |
|---|---|
| ಯತ್ ಗೋಮೃಗಃ | ಗೋಮೃಗವೆಂಬುದು ಯಾವುದಿದೆಯೋ |
| ಏಷಃ ನ ಗ್ರಾಮ್ಯಃ ಪಶುಃ ನ ಆರಣ್ಯಃ | ಇದು ಗ್ರಾಮ್ಯಪಶುವೂ ಅಲ್ಲ; ಆರಣ್ಯಪಶುವೂ ಅಲ್ಲ. |
| ಯಮ್ ಅಜಘ್ನಿವಾಗ್ಂಸಮ್ ಅಭಿಶಗ್ಂಸಂತಿ | (ಹಾಗೆಯೇ) ಯಾವ ಕೊಲೆಗಾರನಲ್ಲದವನನ್ನು ನಿಂದಿಸುತ್ತಾರೆಯೋ |
| ನ ಏಷಃ ಗ್ರಾಮೇ ಇವ ನ ಆರಣ್ಯೇ | ಅವನು ಗ್ರಾಮ್ಯವ್ಯಕ್ತಿಯೂ ಅಲ್ಲ; ಆರಣ್ಯವ್ಯಕ್ತಿಯೂ ಅಲ್ಲ. |

ವಾಯುರ್ವೈ ದೇವಾನಾಂ ಪವಿತ್ರಂ ವಾಯುಮೇವ ಸ್ವೇನ ಭಾಗಧೇಯೇನೋಪಧಾವತಿ ಸ ಏವೈನಂ ಪವಯತಿ ಪರಾಚೀ ವಾ ಏತಸ್ಮೈ ವ್ಯುಚ್ಛಂತೀ ವ್ಯುಚ್ಛತಿ ತಮಃ ಪಾಪ್ಮಾನಂ ಪ್ರವಿಶತಿ ಯಸ್ಯಾಶ್ವಿನೇ ಶಸ್ಯಮಾನೇ ಸೂರ್ಯೋ ನಾವಿರ್ಭವತಿ

---

ವಾಯುಃ । ವೈ । ದೇವಾನಾಮ್ । ಪವಿತ್ರಮ್ । ವಾಯುಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಏನಮ್ । ಪವಯತಿ । ಪರಾಚೀ । ವೈ । ಏತಸ್ಮೈ । ವ್ಯುಚ್ಛಂತೀತಿ ವಿ–ಉಚ್ಛಂತೀ । ವೀತಿ । ಉಚ್ಛತಿ । ತಮಃ । ಪಾಪ್ಮಾನಮ್ । ಪ್ರೇತಿ । ವಿಶತಿ । ಯಸ್ಯ । ಆಶ್ವಿನೇ । ಶಸ್ಯಮಾನೇ । ಸೂರ್ಯಃ । ನ । ಆವಿಃ । ಭವತಿ ।

---

| | |
|---|---|
| ವಾಯುಃ ವೈ ದೇವಾನಾಮ್ ಪವಿತ್ರಮ್ | ದೇವತೆಗಳಲ್ಲಿ ವಾಯುದೇವನು ಎಲ್ಲರನ್ನೂ ಪರಿಶುದ್ಧಗೊಳಿಸುವವನು. |
| ವಾಯುಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ವಾಯುವನ್ನು ಗೋಮೃಗ ಯಾಗದಿಂದ ಸೇವಿಸಿದವನಾಗುತ್ತಾನೆ. |
| ಸಃ ಏವ ಏನಮ್ ಪವಯತಿ | ಆ ವಾಯುದೇವನೇ ಇವನನ್ನು ಪರಿಶುದ್ಧ ಗೊಳಿಸುತ್ತಾನೆ. |

**ಸೌರ್ಯಪಶುಯಾಗದ ವಿಧಿ; ಪ್ರಶಂಸೆ**

| | |
|---|---|
| ಯಸ್ಯ ಆಶ್ವಿನೇ ಶಸ್ಯಮಾನೇ ಸೂರ್ಯಃ ನ ಆವಿರ್ಭವತಿ | ಯಾವ ಯಜಮಾನನ ಅತಿರಾತ್ರಯಾಗ ದಲ್ಲಿ ಆಶ್ವಿನಶಸ್ತ್ರವು ಹೇಳಲ್ಪಟ್ಟರೂ ಸೂರ್ಯನು ಉದಯಿಸಿ ಪ್ರಕಾಶಿಸುವುದಿಲ್ಲವೋ |
| ಏತಸ್ಮೈ ಪರಾಚೀ ವ್ಯುಚ್ಛಂತೀ ವ್ಯುಚ್ಛತಿ ವೈ | ರಾತ್ರಿಯು ಕಳೆದು ಉದಯವಾದರೂ ಪರಾಙ್ಮುಖವಾದಂತೆ ಆಗುತ್ತದೆ. |
| ತಮಃ ಪಾಪ್ಮಾನಮ್ ಪ್ರವಿಶತಿ | ಯಜಮಾನನು ಕತ್ತಲೆಯನ್ನೂ, ಪಾಪ ವನ್ನೂ ಪ್ರವೇಶಿಸಿದವನಾಗುತ್ತಾನೆ. |

# ಸೌರ್ಯಂ ಬಹುರೂಪಮಾಲಭೇತಾಮುಮೇವಾದಿತ್ಯಗ್ಂ ಸ್ವೇನ ಭಾಗಧೇಯೇನೋಪಧಾವತಿ

**ಸೌರ್ಯಮ್** । ಬಹುರೂಪಮಿತಿ ಬಹು-ರೂಪಮ್ । ಏತಿ । ಲಭೇತ । ಅಮುಮ್ । ಏವ । ಆದಿತ್ಯಮ್ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ ।

| | |
|---|---|
| ಸೌರ್ಯಮ್ ಬಹುರೂಪಮ್ ಆಲಭೇತ | ಚಿತ್ರವರ್ಣವುಳ್ಳ ಪಶುವನ್ನು ಸೂರ್ಯ ದೇವನಿಗಾಗಿ ಯಾಗ ಮಾಡಬೇಕು. |
| ಅಮುಮ್ ಏವ ಆದಿತ್ಯಮ್ ಸ್ವೇನ ಭಾಗಧೇಯೇನ ಉಪಧಾವತಿ | ಈ ಆದಿತ್ಯ (ಸೂರ್ಯ)ನನ್ನು ಯಜಮಾನನು ಸ್ವೀಯಭಾಗವನ್ನರ್ಪಿಸಿ ಸೇವಿಸಿದವನಾಗುತ್ತಾನೆ. |

ಗೋಮೃಗವೆಂಬುದು ಅರಣ್ಯದ ಮೃಗಿಯಲ್ಲಿ ಜನಿಸಿದುದರಿಂದ ಅದು ಗ್ರಾಮ್ಯಪಶುವೂ ಅಲ್ಲ; ಗ್ರಾಮದ ವೃಷಭದಿಂದ ಜನಿಸಿದುದರಿಂದ ಆರಣ್ಯಪಶುವೂ ಅಲ್ಲ; ವೃಥಾಪವಾದಕ್ಕೆ ಗುರಿಯಾದ ವ್ಯಕ್ತಿಯು ಜನರೊಡನೆ ವ್ಯವಹಾರಕ್ಕೆ ಸೇರದೇ ಇರುವುದರಿಂದ ಗ್ರಾಮ್ಯವ್ಯಕ್ತಿಯೂ ಅಲ್ಲ; ವಾನಪ್ರಸ್ಥನಲ್ಲದುದರಿಂದ ಆರಣ್ಯವ್ಯಕ್ತಿಯೂ ಅಲ್ಲ [ಗ್ರಾಮದ ವೃಷಭವು ಹಿಂಸ್ರವಾದುದರಿಂದ ಅದು ಗ್ರಾಮ್ಯವಲ್ಲ; ಗ್ರಾಮದಲ್ಲಿಯೇ ಸಂಚರಿಸುತ್ತಿರುವುದರಿಂದ ಆರಣ್ಯಕಪಶುವೂ ಅಲ್ಲ. [**ಭ.ಭಾ.ಭಾ.**]

*ದೇವತೆಗಳಲ್ಲಿ ವಾಯುದೇವನು ಅಪವಿತ್ರವಾದುದನ್ನು ಶುದ್ಧಗೊಳಿಸುವ ದೇವತೆ. ಈ ಯಾಗದಿಂದ ತೃಪ್ತನಾಗಿ ವಾಯುವು ಯಜಮಾನನನ್ನು ಶುದ್ಧಿಗೊಳಿಸಿ ಜನರ ಬಹಿಷ್ಕಾರ ದಿಂದ ದೂರಮಾಡುತ್ತಾನೆ. ಈತನು ತಪ್ಪು ಮಾಡದಿರುವುದರಿಂದ ಪಾಪನಿಮಿತ್ತವಾದ

---

* **ಯಾಜ್ಞವಲ್ಕ್ಯಸ್ಮೃತಿಯಲ್ಲಿ**

ರಥ್ಯಾಕರ್ದಮತೋಯಾನಿ ಸ್ಪೃಷ್ಟಾನ್ಯಂತ್ಯಶ್ವವಾಯಸೈಃ ।
ಮರುತಾರ್ಕೇಣ ಶುದ್ಧ್ಯಂತಿ ಪಕ್ವೇಷ್ಟಕಚಿತಾನಿ ಚ ॥

ಬೀದಿಯ ನೀರೂ, ಇಟ್ಟಿಗೆಯ ಕಟ್ಟಡಗಳೂ ವಾಯುವಿನಿಂದಲೂ, ಸೂರ್ಯನಿಂದಲೂ ಸ್ಪರ್ಶಿಸಲ್ಪಟ್ಟು ಶುದ್ಧವಾಗುತ್ತವೆ ಎಂದು ಹೇಳಿದೆ.

**(ಯಾಜ್ಞವಲ್ಕ್ಯಸ್ಮೃತಿ 1.197)**

ಸ ಏವಾಸ್ಮಾತ್ತಮಃ ಪಾಪ್ಮಾನಮಪಹಂತಿ ಪ್ರತೀಚ್ಯಸ್ಮೈ

ವ್ಯುಚ್ಛಂತೀ ವ್ಯುಚ್ಛತ್ಯಪ ತಮಃ ಪಾಪ್ಮಾನಗ್ಂ

ಹತೇ ॥ ೫೯ – 10॥

[ಲಲಾಮಃ ಸ ಏವ ಷಟ್ಚತ್ವಾರಿಗ್ಂಶಚ್ಚ ।]

---

ಸಃ । ಏವ । ಅಸ್ಮಾತ್ । ತಮಃ । ಪಾಪ್ಮಾನಮ್ । ಅಪೇತಿ । ಹಂತಿ । ಪ್ರತೀಚೀ । ಅಸ್ಮೈ ।

ವ್ಯುಚ್ಛಂತೀತಿ ವಿ–ಉಚ್ಛಂತೀ । ವೀತಿ । ಉಚ್ಛತಿ । ಅಪೇತಿ । ತಮಃ । ಪಾಪ್ಮಾನಮ್ ।

ಹತೇ ॥೧೦॥

---

| | |
|---|---|
| ಸಃ ಏವ ಅಸ್ಮಾತ್ ತಮಃ ಪಾಪ್ಮಾನಮ್ ಅಪಹಂತಿ | ಆ ಆದಿತ್ಯನು ಸೂರ್ಯನು ಪ್ರಕಾಶಿಸುವಂತೆ ಮಾಡಿ ಕತ್ತಲೆಯನ್ನೂ ಪಾಪವನ್ನೂ ದೂರ ಮಾಡುತ್ತಾನೆ. |
| ಅಸ್ಮೈ ಪ್ರತೀಚೀ ವ್ಯುಚ್ಛಂತೀ ವ್ಯುಚ್ಛತಿ | ರಾತ್ರಿಯು ಕಳೆದು ಉಷಃಕಾಲವು ಈ ಯಜಮಾನನ ವಿಷಯದಲ್ಲಿ ಅನುರಾಗ ದಿಂದ ಕೂಡಿ ಉದಿಸುತ್ತದೆ. |
| ತಮಃ ಪಾಪ್ಮಾನಮ್ ಅಪ ಹತೇ | ಪಾಪವನ್ನೂ ಕತ್ತಲೆಯನ್ನೂ ಹೋಗ ಲಾಡಿಸುತ್ತದೆ. |

[ಇನ್ನೊಂದು ರೀತಿಯ ಅನ್ವಯದಿಂದ ಅರ್ಥವು ಹೀಗಾಗುತ್ತದೆ]

| | |
|---|---|
| [ರಾತ್ರಿಃ] ಪರಾಚೀ ವ್ಯುಚ್ಛಂತೀ ಏತಸ್ಮೈ ವ್ಯುಚ್ಛತಿ | ಯಜಮಾನನ ವಿಷಯದಲ್ಲಿ ರಾತ್ರಿಯು ಪ್ರೀತಿಯಿಲ್ಲದಿರುವಂತೆ ದೂರಾಗುತ್ತದೆ. ಚೆನ್ನಾಗಿ ಕಳೆಯುವುದಿಲ್ಲ, ಆದುದರಿಂದ ಪ್ರಕಾಶಮಾನವಾದ ಬೆಳಗು ಆಗದು. |
| [ಯಾಗದ ಅನುಷ್ಠಾನದಿಂದ] [ರಾತ್ರಿಃ] ಪ್ರತೀಚೀ ಅಸ್ಮೈ ವ್ಯುಚ್ಛಂತೀ ವ್ಯುಚ್ಛತಿ | ಯಜಮಾನನ ವಿಷಯದಲ್ಲಿ ರಾತ್ರಿಯು ತುಂಬ ಪ್ರೀತಿಯುಳ್ಳದ್ದಾಗಿರುತ್ತದೆ. ಹೀಗಾಗಿ ರಾತ್ರಿಯು ಚೆನ್ನಾಗಿ ಕಳೆದು ಸ್ವಚ್ಛವಾದ ಬೆಳಗು ಆಗುತ್ತದೆ. |

ನರಕವು ಬರುವುದಿಲ್ಲ. ಆದರೂ ಸಮಾಜಬಹಿಷ್ಕಾರರೂಪವಾದ ದೋಷವೂ ಈ ಯಾಗದಿಂದ ಪರಿಹಾರವಾಗುತ್ತದೆ. ವೃಥಾಪವಾದವು ದೂರಾಗುವುದು.

ಸೌರ್ಯಪಶುಯಾಗವು ಒಂದು ನೈಮಿತ್ತಿಕವಾದ ಪಶುಯಾಗ. ಅತಿರಾತ್ರ ಸೋಮಯಾಗದಲ್ಲಿ ರಾತ್ರಿಯು ಕಳೆದ ಮೇಲೆ ಬೆಳಗಿನ ಜಾವದಲ್ಲಿ ಯಾಗವು ಮೊದಲಾಗುತ್ತದೆ. ಅದಕ್ಕೆ ಸಂಬಂಧಿಸಿದಂತೆ ಹೋತೃವರ್ಗದವರು **'ಅಗ್ನಿರ್ ಹೋತಾ ಗೃಹಪತಿಃ ಸ ರಾಜಾ' [ಋ.ಸಂ.4.1.15]** ಎಂದು ಪ್ರಾರಂಭಗೊಳ್ಳುವ ಸಾವಿರಕ್ಕಿಂತಲೂ ಹೆಚ್ಚು ಋಕ್‌ಗಳಿಂದ ಕೂಡಿದ ಆಶ್ವಿನಶಸ್ತ್ರವನ್ನು ಹೇಳುವರು. ಅದು ಮುಗಿದರೂ ಸೂರ್ಯನು ಪ್ರಕಾಶಿಸದಿದ್ದರೆ ಆ ಯಜಮಾನನಿಗೆ ಉಷಃಕಾಲವು ಪರಾಙ್ಮುಖವಾದಂತಾಗುತ್ತದೆ. ಆ ಯಜಮಾನನು ಕತ್ತಲೆಯನ್ನೂ, ಯಾಗವಿಘ್ನನಿಮಿತ್ತವಾದ ಪಾಪವನ್ನೂ ಹೊಂದುತ್ತಾನೆ.

ಹೀಗೆ ಸೂರ್ಯನ ಪ್ರಕಾಶವು ಕಾಣದಿರುವಾಗ ಸೌರ್ಯಪಶುಯಾಗವನ್ನು ಮಾಡಬೇಕು. ಇದರಿಂದ ಸೂರ್ಯನು ಸುಪ್ರೀತನಾಗುತ್ತಾನೆ. ರಾತ್ರಿಯು ಕಳೆದೊಡನೆಯೇ ಸೂರ್ಯನೂ ಬೆಳಗುತ್ತಾನೆ. ಕತ್ತಲೆಯೂ, ಪಾಪವೂ ದೂರಾಗುತ್ತವೆ.

* * *

# ಅನುವಾಕದ ವಿಶೇಷವಿಷಯಗಳು

## ಅ) ಅನುವಾಕದ ವಿನಿಯೋಗ ಸಂಗ್ರಹ

ಈ ಹತ್ತನೆಯ ಅನುವಾಕದಲ್ಲಿ

**ದೌರ್ಬ್ರಾಹ್ಮಣ್ಯಾಭಿಶಾಪೌ ಚ ಸೂರ್ಯಾವಿರ್ಭಾವವರ್ಜನಮ್ ।**
**ನಿಮಿತ್ತೀಕೃತ್ಯ ದಶಮೋ ಪಶವಃ ಸಮುದೀರಿತಾಃ ॥**

ದುರ್ಬ್ರಾಹ್ಮಣತ್ವದ ನಿವೃತ್ತಿಯನ್ನು ಬಯಸುವವನಿಗಾಗಿಯೂ, ವೃಥಾಪವಾದವನ್ನು ಕಳೆದುಕೊಳ್ಳಲು ಇಚ್ಛಿಸುವವನಿಗಾಗಿಯೂ, ಕಾಲದಲ್ಲಿ ಒಳ್ಳೆಯ ಬೆಳಗನ್ನು ಬಯಸುವವನಿಗಾಗಿಯೂ ಪಶುಯಾಗಗಳು ಹೇಳಲ್ಪಟ್ಟಿವೆ.

## ಆ) ದೇವತಾವಿಗ್ರಹವಿಚಾರ

ಆಶ್ವಿನಶಸ್ತ್ರವು ಪೂರ್ಣಗೊಂಡರೂ ಚೆನ್ನಾದ ಬೆಳಗಾಗದಿದ್ದರೆ ವಿಹಿತವಾದ ಸೌರ್ಯಪಶುಯಾಗದ ವಿಧಿವಾಕ್ಯದಲ್ಲಿ **'ಸೌರ್ಯಂ ಬಹುರೂಪಮಾಲಭೇತ'** ಎಂದು ಸೂರ್ಯಶಬ್ದವಿದೆ. ಅದರ ಅರ್ಥವಾದದ **'ಅಮುಮ್ ಏವ ಆದಿತ್ಯಮ್ ಸ್ವೇನ ಭಾಗಧೇಯೇನ ಉಪಧಾವತಿ'** ಎಂಬ ವಾಕ್ಯದಲ್ಲಿ **'ಆದಿತ್ಯ'** ಶಬ್ದವಿದೆ. ಸಾಮಾನ್ಯವಾಗಿ ವಿಧಿವಾಕ್ಯಗಳಲ್ಲಿರುವ ದೇವತಾವಾಚಕವಾದ ಶಬ್ದವೇ ಅರ್ಥವಾದದಲ್ಲಿಯೂ ಇರಬೇಕು. ಇಲ್ಲಿನ ತಾತ್ಪರ್ಯವೇನು?

ಪೂರ್ವಮೀಮಾಂಸಾಶಾಸ್ತ್ರದ ಸಿದ್ಧಾಂತದಂತೆ ದೇವತೆಯು ಶಬ್ದಾತ್ಮಕವಾದುದು. ಚತುರ್ಥೀವಿಭಕ್ತ್ಯಂತವಾದ ಶಬ್ದವೇ ದೇವತೆ. ಶಬ್ದವೇ ದೇವತೆಯಾದರೆ ವಿಧಿವಾಕ್ಯದಲ್ಲಿರುವ ಶಬ್ದವೇ ಅರ್ಥವಾದವಾಕ್ಯದಲ್ಲಿಯೂ ಇರಬೇಕಾಗಿತ್ತು. ಶ್ರುತಿಯಲ್ಲಿ ಬೇರೆ ಶಬ್ದವು ಇರುವುದರಿಂದ ಶಬ್ದದಿಂದ ಹೇಳಲ್ಪಡುವ ಅರ್ಥವು ದೇವತೆ ಎಂದು ತಿಳಿಯುತ್ತದೆ. ಆ ದೇವತಾಪದಾರ್ಥವು ಶರೀರಾದಿಗಳುಳ್ಳದ್ದು ಎಂದು ಉತ್ತರಮೀಮಾಂಸಾಶಾಸ್ತ್ರದ ಸಿದ್ಧಾಂತ. ಈ ಸಿದ್ಧಾಂತಕ್ಕೆ ಈ ಶ್ರುತಿಯು ಸೂಚನೆಯಂತಿದೆ.

ಕಲ್ಪಸೂತ್ರಕಾರರಿಗೂ ದೇವತೆಗಳಿಗೆ ವಿಗ್ರಹವಿದೆ ಎಂದು ಅಭಿಮತ. ಈ ವಿಷಯವನ್ನು ಆಪಸ್ತಂಬ ಗೃಹ್ಯಸೂತ್ರಗಳ ವ್ಯಾಖ್ಯಾನ ಮಾಡಿರುವ ಸುದರ್ಶನಾಚಾರ್ಯರು **'ಅಗ್ನಿರ್ದೇವತಾ ಸ್ವಾಹಾಕಾರಪ್ರದಾನಃ' [ಆಪ.ಗೃ.ಸೂ.3.7.5]** ಎಂಬ ಸೂತ್ರದಲ್ಲಿ ತಿಳಿಸಿದ್ದಾರೆ. ಆಗ್ನೇಯಸ್ಥಾಲೀಪಾಕಪ್ರಕರಣದಲ್ಲಿ **'ಅಗ್ನಯೇ ಜುಹೋತಿ'** ಎಂದು ಹೇಳುವ ಬದಲು **'ಅಗ್ನಿರ್ದೇವತಾ'** ಎಂಬ ಆಪಸ್ತಂಬಮಹರ್ಷಿಗಳ ನಿರ್ದೇಶವು ಅರ್ಥವೇ ದೇವತೆ ಎಂಬುದನ್ನು ತಿಳಿಸುವುದಕ್ಕಾಗಿ ಎಂದಿದ್ದಾರೆ. ಶಬ್ದವೇ ದೇವತೆಯಾಗಿದ್ದರೆ ಸ್ಥಾಲೀಪಾಕಕರ್ಮವನ್ನು ಅನುಷ್ಠಿಸಲು ಅರ್ಹವಾಗುವಂತೆ ಚತುರ್ಥ್ಯಂತವಾಗಿ

**'ಅಗ್ನಯೇ'** ಎಂದು ನಿರ್ದೇಶಿಸಬೇಕಾಗಿತ್ತು. ಕರ್ಮಾನುಷ್ಠಾನದ ಸಮಯದಲ್ಲಿ ಪ್ರಯೋಗಿಸಲು ಆಗದ ಪ್ರಥಮಾವಿಭಕ್ತಿಯಿಂದ ಮಾಡಿರುವ ನಿರ್ದೇಶವು ಅರ್ಥವೇ ದೇವತೆ ಎಂಬುದನ್ನು ಸೂಚಿಸುತ್ತದೆ. ಅರ್ಥವೇ ದೇವತೆಯಾದರೂ ಅದನ್ನು ತಿಳಿಸುವುದು ಶಬ್ದದಿಂದಲೇ ಆದುದರಿಂದ ಅನುಷ್ಠಾನದಲ್ಲಿ ಯಾವ ವಿಶೇಷವೂ ಇರುವುದಿಲ್ಲ ಎಂದು ಶಂಕಿಸಿ, ಚತುರ್ಥ್ಯಂತವಾದ ಶಬ್ದವನ್ನು ಉಚ್ಚರಿಸುವುದು ಮಾತ್ರವಲ್ಲದೆ, ದೇವತಾ ಸ್ವರೂಪವನ್ನು ಧ್ಯಾನಿಸುವ ವಿಶೇಷವಿರುತ್ತದೆ ಎಂದು ತಿಳಿಸಿರುತ್ತಾರೆ.

ಹೀಗಾಗಿ ಉತ್ತರಮೀಮಾಂಸಕರ ಸಿದ್ಧಾಂತದಂತೆಯೇ ಕಲ್ಪಸೂತ್ರಕಾರರ ಮತದಲ್ಲಿಯೂ ದೇವತೆಯು ವಿಗ್ರಹಾದಿಗಳುಳ್ಳದ್ದು, ಅರ್ಥವೇ ದೇವತೆ ಎಂದು ಸಿದ್ಧವಾಗುವುದು.

* * *

## ॥ ಏಕಾದಶೋಽನುವಾಕಃ ॥

# *ಇಂದ್ರಂ ವೋ ವಿಶ್ವತಸ್ಪರೀಂದ್ರಂ ನರೋ*

॥ವೈ॥ ಇಂದ್ರಮ್ । ವಃ । ವಿಶ್ವತಃ । ಪರೀತಿ । ಇಂದ್ರಮ್ । ನರಃ ।

ಈ ಪ್ರಪಾಠಕದ ಹಿಂದಿನ ಹತ್ತು ಅನುವಾಕಗಳಲ್ಲಿ ಕಾಮ್ಯಪಶುಬಂಧಯಾಗಗಳನ್ನು ಹೇಳಲಾಯಿತು.

ಈ ಹನ್ನೊಂದನೆಯ ಅನುವಾಕವು ಕಾಂಡಪಾಠದಂತೆ ವೈಶ್ವದೇವಕಾಂಡಕ್ಕೆ ಸೇರಿದುದಾಗಿದೆ. ಇದರಲ್ಲಿ ಕಾಮ್ಯೇಷ್ಟಿಗಳ ಯಾಜ್ಯಾ-ಪುರೋಽನುವಾಕ್ಯಗಳು ಹೇಳಲ್ಪಟ್ಟಿವೆ.

ಕಾಮ್ಯೇಷ್ಟಿಕಾಂಡದಲ್ಲಿ ಸೋಮಾರೌದ್ರಚರುಯಾಗದ ನಂತರ ದ್ವಿಹವಿಷ್ಕವಾದ ಒಂದು ಇಷ್ಟಿಯು ಹೇಳಲ್ಪಟ್ಟಿದೆ. ಆ ಇಷ್ಟಿಯ ಯಾಜ್ಯಾ-ಪುರೋಽನುವಾಕ್ಯಗಳು ಮೊದಲು ಹೇಳಲ್ಪಟ್ಟಿವೆ.

### ಐಂದ್ರ ಏಕಾದಶಕಪಾಲ - ಮಾರುತ ಸಪ್ತಕಪಾಲಗಳ ಇಷ್ಟಿ

*ಇಂದ್ರಂ ವೋ ವಿಶ್ವತಸ್ಪರಿ ಹವಾಮಹೇ ಜನೇಭ್ಯಃ । ಅಸ್ಮಾಕಮಸ್ತು ಕೇವಲಃ ॥

| ಮಂತ್ರ | ವಿನಿಯೋಗ |
|---|---|
| ಇಂದ್ರಂ ವೋ.... ಕೇವಲಃ ॥ | ಐಂದ್ರಯಾಗದ ಪುರೋಽನುವಾಕ್ಯೆ |

*ಇಂದ್ರಂ ನರೋ ನೇಮಧಿತಾ ಹವಂತೇ
ಯತ್ಪಾರ್ಯಾ ಯುನಜತೇ ಧಿಯಸ್ತಾಃ ।
ಶೂರೋ ನೃಷಾತಾ ಶವಸಶ್ಚಕಾನ
ಆ ಗೋಮತಿ ವ್ರಜೇ ಭಜಾ ತ್ವಂ ನಃ ॥

| | |
|---|---|
| *ಇಂದ್ರಂ.... ನಃ ॥ | ಐಂದ್ರಯಾಗದ ಯಾಜ್ಯಾನುವಾಕ್ಯೆ |

* ಇಂದ್ರಂ ವಃ [ತೈ.ಸಂ.1.6.12] ಎಂಬ ಅನುವಾಕದಲ್ಲಿ ಮೊದಲು ಪಠಿತವಾದ ಎರಡು ಮಂತ್ರಗಳ ಪ್ರತೀಕಗ್ರಹಣ ಇಲ್ಲಿದೆ. ಈ ಮಂತ್ರಗಳ ವಿವರಣೆಯು ಹಿಂದೆ ಬಂದಿದೆ. [**ಸಂಪುಟ 3 ಪುಟ 163**] ಇಲ್ಲಿ ಸಂಗ್ರಹವಾಗಿ ನೀಡಲಾಗಿದೆ.

# *ಮರುತೋ ಯದ್ಧ ವೋ *ದಿವೋ

**ಮರುತಃ ।** ಯತ್ । ಹ । ವಃ । ದಿವಃ ।

***ಮರುತೋ ಯದ್ಧ ವೋ ದಿವಃ ಸುಮ್ನಾಯಂತೋ ಹವಾಮಹೇ । ಆ ತೂ ನ ಉಪಗಂತನ ॥**

| ಮಂತ್ರ | ವಿನಿಯೋಗ |
| --- | --- |
| **ಮರುತೋ....ಗಂತನ ॥** | ಮಾರುತಯಾಗದ ಪುರೋನುವಾಕ್ಯೆ |

**ಪದಶಃ ಅರ್ಥ** :– (ಎಲೈ ಋತ್ವಿಗ್ಯಜಮಾನರೇ!) **ವಃ** = ನಿಮಗಾಗಿ; **ವಿಶ್ವತಃ ಜನೇಭ್ಯಃ ಪರಿ** = ಎಲ್ಲ ಜನರಿಗಿಂತಲೂ ಮೇಲಾಗಿ; **ಇಂದ್ರಂ ಹವಾಮಹೇ** = ಇಂದ್ರನನ್ನು ಆಹ್ವಾನಿಸುತ್ತೇವೆ; (ಆತನು) **ಅಸ್ಮಾಕಮ್ ಕೇವಲಃ ಅಸ್ತು**= ನಮಗೆ ಸ್ವಾಮಿಯಾಗಲಿ.

❖ **ಯತ್ ಪಾರ್ಯಾಃ ತಾಃ ಧಿಯಃ ಯುನಜತೇ** [ತದಾ] **ನರಃ** = ಯಾವಾಗ ದುಃಖ ಪರಿಹಾರಕವಾದ [ಕರ್ಮವನ್ನು] ಮನುಷ್ಯರು ಆರಂಭಿಸುತ್ತಾರೆಯೋ ಆಗ; **ನೇಮಧಿತಾ ಇಂದ್ರಮ್ ಹವಂತೇ** = ಎಲ್ಲ ದೇವತೆಗಳ ಹವಿಸ್ಸುಗಳಲ್ಲಿಯೂ ಅರ್ಧಭಾಗಕ್ಕೆ ಅರ್ಹನಾದ ಇಂದ್ರನನ್ನು ಆಹ್ವಾನಿಸುತ್ತಾರೆ. **ಶೂರಃ ನೃಷಾತಾ ಶವಸಃ ಚಕಾನಃ** (ಸಃ) **ತ್ವಮ್** = ಶೂರನಾಗಿಯೂ, ಮನುಷ್ಯರಿಂದ ಸೇವಿಸಲ್ಪಡುವವನಾಗಿಯೂ, ಬಲದಿಂದ ತೃಪ್ತನೂ ಆಗಿರುವ ಇಂದ್ರನೇ! ನೀನು; **ನಃ ಗೋಮತಿ ವ್ರಜೇ ಆ ಭಜ** = ನಮ್ಮನ್ನು ಹಸುಗಳಿಂದ ತುಂಬಿರುವ ಕೊಟ್ಟಿಗೆಗೆ ಸ್ವಾಮಿಗಳನ್ನಾಗಿ ಮಾಡು; ❖ **ಮರುತಃ** = ಎಲೈ ! ಮರುದ್ದೇವತೆಗಳೇ! **ಸುಮ್ನಾಯಂತಃ** = ಸುಖವನ್ನು ಬಯಸುವ ನಾವು **ಯತ್** = ಯಾವ ಕಾರಣದಿಂದ; **ದಿವಃ** = ದ್ಯುಲೋಕದಿಂದ ಬರುವಂತೆ; **ವಃ** = ನಿಮ್ಮನ್ನು ;

**ತಾತ್ಪರ್ಯ** – ಎಲೈ! ಋತ್ವಿಗ್ಯಜಮಾನರೇ! ನಿಮಗಾಗಿ ಎಲ್ಲರಿಗಿಂತಲೂ ಶ್ರೇಷ್ಠನಾಗಿರುವ ಇಂದ್ರನನ್ನು ಆಮಂತ್ರಿಸುತ್ತೇವೆ. ಆತನು ನಮಗೆ ಒಡೆಯನಾಗಲಿ.

ಯಾಗಾದಿಕರ್ಮಗಳನ್ನು ಆರಂಭಿಸುವ ಮನುಷ್ಯರು ಎಲ್ಲ ಹವಿಸ್ಸುಗಳ ಅರ್ಧ ಭಾಗಕ್ಕೆ ಅರ್ಹನಾದ ಇಂದ್ರನನ್ನು ಆಹ್ವಾನಿಸುತ್ತಾರೆ. ಶೂರನೂ, ಮನುಷ್ಯರಿಂದ ಸೇವಿಸಲ್ಪಡುವವನೂ ಬಲಿಷ್ಠನೂ ಆದ ಇಂದ್ರನೇ! ನೀನು ನಮ್ಮನ್ನು ಗೋಸಂಪತ್ತಿಗೆ ಒಡೆಯರನ್ನಾಗಿ ಮಾಡು.

* **ವೈಶ್ವಾನರಃ [ತೈ.ಸಂ. 1.5.11]** ಎಂಬ ಅನುವಾಕದಲ್ಲಿರುವ ಎರಡು ಮಂತ್ರಗಳ ಪ್ರತೀಕಗಳು.

# ಯಾ ವಃ ಶರ್ಮ ॥

ಯಾ । ವಃ । ಶರ್ಮ ॥

*ಯಾ ವಃ ಶರ್ಮ ಶಶಮಾನಾಯ ಸಂತಿ ತ್ರಿಧಾತೂನಿ ದಾಶುಷೇ ಯಚ್ಛತಾಧಿ ।
ಅಸ್ಮಭ್ಯಂ ತಾನಿ ಮರುತೋ ವಿಯಂತ ರಯಿಂ ನೋ ಧತ್ತ ವೃಷಣಸ್ಸುವೀರಮ್ ॥

| ಮಂತ್ರ | ವಿನಿಯೋಗ |
|---|---|
| ಯಾ ವಃ.... ಸುವೀರಮ್ ॥ | ಮಾರುತಯಾಗದ ಯಾಜ್ಯಾನುವಾಕ್ಯೆ |

**ಹವಾಮಹೇ** = ಆಹ್ವಾನಿಸುತ್ತೇವೆಯೋ; [ಆದರಿಂದ] **ತು** = ಶೀಘ್ರವಾಗಿ; **ನಃ** = ನಮ್ಮ ಬಳಿಗೆ; **ಆ ಉಪಗಂತನ** = ಆಗಮಿಸಿರಿ. ❖ **ಮರುತಃ** = ಮರುದ್ದೇವತೆಗಳೇ ! **ಯಾ ವಃ ಶರ್ಮ ಸಂತಿ** = ಯಾವ ನಿಮ್ಮ ಸುಖಗಳಿವೆಯೋ; **ತಾನಿ ತ್ರಿಧಾತೂನಿ** = ತ್ರಿಲೋಕಗಳಲ್ಲಿರುವ ಆ ಸುಖಗಳನ್ನು; **ಶಶಮಾನಾಯ** = ನಿಮ್ಮನ್ನು ಸೇವಿಸುವ **ದಾಶುಷೇ** = ಹವಿಸ್ಸುಗಳನ್ನು ಸಮರ್ಪಿಸುವ ಯಜಮಾನನಿಗೆ ; **ಅಧಿ ಯಚ್ಛತ** = ಅಧಿಕವಾಗಿ ಕೊಡಿರಿ; [ತಾನಿ] **ಅಸ್ಮಭ್ಯಮ್ ವಿಯಂತ** = ನಮಗೂ ಆ ಸುಖಗಳನ್ನು ವಿಶೇಷವಾಗಿ ಕೊಡಿರಿ; **ವೃಷಣಃ** = ಸುಖಗಳನ್ನು ಸುರಿಸುವ ಮರುತರೇ!; **ಸುವೀರಮ್ ರಯಿಮ್ ನಃ ಧತ್ತ** = ಸತ್ಪುತ್ರರೇ ಮೊದಲಾದ ಐಶ್ವರ್ಯವನ್ನು ನಮಗೂ ನೀಡಿರಿ.

ಎಲೈ ! ಮರುದ್ದೇವತೆಗಳೇ! ಸುಖಾಪೇಕ್ಷೆಯಿಂದ ನಾವು ನಿಮ್ಮನ್ನು ದ್ಯುಲೋಕದಿಂದ ಬರುವಂತೆ ಆಹ್ವಾನಿಸುತ್ತೇವೆ. ನೀವು ಬೇಗನೇ ನಮ್ಮ ಬಳಿ ಬನ್ನಿರಿ.

ಹೇ! ಮರುದ್ದೇವತೆಗಳೇ! ನಿಮ್ಮಲ್ಲಿರುವ ಆ ತ್ರೈಲೋಕ್ಯಸುಖಗಳನ್ನು ನಿಮ್ಮನ್ನು ಆರಾಧಿಸುವ ಯಜಮಾನನಿಗೆ ಹೆಚ್ಚಾಗಿ ನೀಡಿರಿ. ನಮಗೂ ಸತ್ಪುತ್ರರೇ ಮೊದಲಾದ ಐಶ್ವರ್ಯವನ್ನು ಕೊಡಮಾಡಿರಿ.

**ಭರೇಷ್ವಿಂದ್ರಗ್ಂ ಸುಹವಗ್ಂ ಹವಾಮಹೇಽಗ್ಂ ಹೋಮುಚಗ್ಂ ಸುಕೃತಂ ದೈವ್ಯಂ ಜನವ್ । ಅಗ್ನಿಂ ಮಿತ್ರಂ ವರುಣಗ್ಂ ಸಾತಯೇ ಭಗಂ ದ್ಯಾವಾಪೃಥಿವೀ ಮರುತಃ ಸ್ವಸ್ತಯೇ ॥**

---

**ಭರೇಷು** । ಇಂದ್ರವ್ । ಸುಹವಮಿತಿ ಸು–ಹವವ್ । ಹವಾಮಹೇ । ಅಗ್ಂಹೋಮುಚಮಿತ್ಯಗ್ಂಹಃ–ಮುಚವ್ । ಸುಕೃತಮಿತಿ ಸು–ಕೃತವ್ । ದೈವ್ಯವ್ । ಜನವ್ ॥ ಅಗ್ನಿವ್ । ಮಿತ್ರವ್ । ವರುಣವ್ । ಸಾತಯೇ । ಭಗವ್ । ದ್ಯಾವಾಪೃಥಿವೀ ಇತಿ ದ್ಯಾವಾ–ಪೃಥಿವೀ । ಮರುತಃ । ಸ್ವಸ್ತಯೇ ॥

---

| ಮಂತ್ರ | ವಿನಿಯೋಗ |
|---|---|
| **ಭರೇಷು....ಸ್ವಸ್ತಯೇ ॥*** | ಐಂದ್ರವೈಶ್ವದೇವೇಷ್ಟಿಯ ಪುರೋನುವಾಕ್ಯೆ |

---

❖ **ಭರೇಷು** = ಹವಿಸ್ಸುಗಳನ್ನು ಸಿದ್ಧಪಡಿಸುತ್ತಿರುವಾಗ / **ಯುದ್ಧಗಳಲ್ಲಿ; ಸುಹವವ್** = ಸುಲಭವಾಗಿ ಕರೆಯಬಹುದಾದ/ **ಒಳ್ಳೆಯ ಯುದ್ಧವುಳ್ಳ; ಅಗ್ಂಹೋಮುಚವ್** = ಪಾಪಗಳನ್ನು ಹೋಗಲಾಡಿಸುವ; **ಸುಕೃತವ್** = ಯಜಮಾನನಿಗೆ ಒಳ್ಳೆಯದನ್ನು ಮಾಡುವ/**ಪುಣ್ಯಕರ್ಮನಾದ; ದೈವ್ಯವ್** = ದೇವಲೋಕದಲ್ಲಿರುವ; **ಜನವ್** = ಮಳೆಯನ್ನು ಸುರಿಸಿ ಸಸ್ಯಾದಿಗಳನ್ನು ಉತ್ಪತ್ತಿಮಾಡುವ / **ದೇವಲೋಕದ ಇತರ ದೇವತೆಗಳನ್ನು; ಇಂದ್ರವ್** = ಇಂದ್ರದೇವನನ್ನು; **ಹವಾಮಹೇ** = (ಹವಿಃಸ್ವೀಕಾರಕ್ಕಾಗಿ) ಆಹ್ವಾನಿಸುತ್ತೇವೆ; (ಹಾಗೆಯೇ) **ಅಗ್ನಿವ್** = ಅಗ್ನಿಯನ್ನೂ ; **ಮಿತ್ರವ್** = ಮಿತ್ರದೇವನನ್ನೂ ; **ವರುಣವ್** = ವರುಣನನ್ನೂ ; **ಭಗವ್** = ಭಗನನ್ನೂ ; **ದ್ಯಾವಾಪೃಥಿವೀ** = ಭೂಮಿ, ದ್ಯುಲೋಕದೇವತೆಗಳನ್ನೂ ; **ಮರುತಃ** = ಮರುತರನ್ನೂ ; **ಸಾತಯೇ** = ಹವಿಸ್ಸನ್ನು ಸ್ವೀಕರಿಸಲು; **ಸ್ವಸ್ತಯೇ** = ಯಜಮಾನನ ಯೋಗ–ಕ್ಷೇಮಗಳಿಗಾಗಿಯೂ;

ಹವಿಸ್ಸುಗಳನ್ನು ಸಿದ್ಧಪಡಿಸುವಾಗ ಇಂದ್ರನನ್ನು ಹವಿಸ್ಸಿನ ಸ್ವೀಕಾರಕ್ಕಾಗಿ ಆಹ್ವಾನಿಸುತ್ತೇವೆ. ಆತನು ಸುಲಭವಾಗಿ ಕರೆಯಲು ಶಕ್ಯನು. ಪಾಪಪರಿಹಾರಕನು. ಯಜಮಾನನಿಗೆ

* ಈ ಮಂತ್ರದಲ್ಲಿ ಮೊದಲನೆಯ ಅರ್ಧರ್ಚವು ಇಂದ್ರಪರವಾಗಿದೆ. ಎರಡನೆಯ ಅರ್ಧರ್ಚವು ಇತರದೇವತಾಪರವಾಗಿದೆ.

# ಮಮತ್ತು ನಃ ಪರಿಜ್ಮಾ ವಸರ್‌ಹಾ ಮಮತ್ತು ವಾತೋ

# ಅಪಾಂ ವೃಷಣ್ವಾನ್ ।

ಮಮತ್ತು । ನಃ । ಪರಿಜ್ಮೇತಿ ಪರಿ–ಜ್ಮಾ । ವಸರ್‌ಹಾ । ಮಮತ್ತು । ವಾತಃ । ಅಪಾಮ್ ।

ವೃಷಣ್ವಾನಿತಿ ವೃಷಣ್–ವಾನ್ ।

| ಮಂತ್ರ | ವಿನಿಯೋಗ |
|---|---|
| ಮಮತ್ತು...ದೇವಾಃ । | ಐಂದ್ರವೈಶ್ವದೇವೇಷ್ಟಿಯ ಯಾಜ್ಯೆ |

**ಹವಾಮಹೇ** = ಆಹ್ವಾನಿಸುತ್ತೇವೆ; ❖ **ಪರಿಜ್ಮಾ** = ಸರ್ವಭಕ್ಷಕನಾದ ಅಗ್ನಿಯು; **ನಃ** = ನಮ್ಮನ್ನು ; **ಮಮತ್ತು** = ಸಂತೋಷಪಡಿಸಲಿ. **ವಸರ್‌ಹಾ** = ದಿನದ ಕೊನೆಯನ್ನುಂಟುಮಾಡುವ ಸೂರ್ಯನೂ; **ಮಮತ್ತು** = ಇಷ್ಟವನ್ನಿತ್ತು ಸಂತೋಷ ಪಡಿಸಲಿ; **ಅಪಾಮ್ ವೃಷಣ್ವಾನ್** = ಮಳೆಯನ್ನು ಸುರಿಸುವ ಪರ್ಜನ್ಯದೇವನು/**ಪರ್ಜನ್ಯಯುಕ್ತನಾದ; ವಾತಃ** = ವಾಯುದೇವನೂ; ಮಮತ್ತು = ಸಂತೋಷ ಪಡಿಸಲಿ.

ಹಿತಕಾರಿಯಾದವನು. ಮಳೆಯನ್ನು ಸುರಿಸಿ, ಸಸ್ಯಾದಿಗಳನ್ನು ಉತ್ಪತ್ತಿ ಮಾಡುವವನು. ದೇವಲೋಕಸ್ವಾಮಿಯು. ಇವನೊಡನೆ ಅಗ್ನಿ, ಮಿತ್ರ, ವರುಣ, ಭಗ, ದ್ಯಾವಾಪೃಥಿವೀ, ಮರುತರೂ ಮೊದಲಾದ ವಿಶ್ವೇದೇವರನ್ನೂ ಹವಿಸ್ವೀಕಾರಕ್ಕಾಗಿಯೂ, ಯಜಮಾನವ ಶ್ರೇಯಸ್ಸಿಗಾಗಿಯೂ ಆಹ್ವಾನಿಸುತ್ತೇವೆ.

ಸರ್ವಭಕ್ಷಕನಾದ ಅಗ್ನಿ, ದಿವಸವನ್ನು ಕೊನೆಗೊಳಿಸುವ ಸೂರ್ಯ, ಮಳೆಯನ್ನು ಸುರಿಸುವ ಪರ್ಜನ್ಯದೇವ / **ಅವನೊಡಗೂಡಿದ** ವಾಯುದೇವ ಇವರೆಲ್ಲರೂ ಇಷ್ಟಪ್ರದಾನದಿಂದ ನಮ್ಮನ್ನು ಸಂತೋಷಪಡಿಸಲಿ.

**ಶಿಶೀತಮಿಂದ್ರಾಪರ್ವತಾ ಯುವಂ ನ ಸ್ತನ್ನೋ ವಿಶ್ವೇ ವರಿವಸ್ಯಂತು ದೇವಾಃ॥ ಪ್ರಿಯಾ ವೋ ನಾಮ [(೧) ಹುವೇ] ಹುವೇ ತುರಾಣಾವ್ ।**

---

ಶಿಶೀತಮ್ । ಇಂದ್ರಾಪರ್ವತೇತೀಂದ್ರಾ – ಪರ್ವತಾ । ಯುವಮ್ । ನಃ । ತತ್ । ನಃ । ವಿಶ್ವೇ । ವರಿವಸ್ಯಂತು । ದೇವಾಃ ॥ **ಪ್ರಿಯಾ** । ವಃ । ನಾಮ । ಹುವೇ । ತುರಾಣಾಮ್ ॥

---

| ಮಂತ್ರ | ವಿನಿಯೋಗ |
|---|---|
| **ಪ್ರಿಯಾ.....ವಾವಶಾನಾಃ ॥** | ಮಾರುತಯಾಗದ ದ್ವಿಪದಪುರೋನುವಾಕ್ಯೆ |

---

**ಇಂದ್ರಾಪರ್ವತಾ** = ಇಂದ್ರ ಮತ್ತು ಪರ್ವತದೇವತೆಗಳೇ! / **ಸಂವತ್ಸರ ದೇವತೆಗಳೇ! ಯುವವ್** = ನೀವಿಬ್ಬರು; **ನಃ** = ನಮ್ಮನ್ನು; **ಶಿಶೀತವ್** = [ಪಾಪವನ್ನು ಹೋಗಲಾಡಿಸಿ] ಪರಿಶುದ್ಧರನ್ನಾಗಿ ಮಾಡಿರಿ. **ನಃ** = ನಮ್ಮ; **ತತ್** = ಆ ಹವಿಃಪ್ರದಾನದಿಂದ; **ವಿಶ್ವೇದೇವಾಃ** = ಇತರ ದೇವತೆಗಳೂ; **ವರಿವಸ್ಯಂತು** = ದಯಾದೃಷ್ಟಿಯಿಂದ ನೋಡಲಿ / **ನಮ್ಮ ಇಷ್ಟಾರ್ಥವನ್ನು ನೀಡಬಯಸಲಿ.**

---

ಇಂದ್ರನೂ, ಪರ್ವತವೂ/ಹಿಮವಂತನೂ ನಮ್ಮ ಪಾಪವನ್ನು ಹೋಗಲಾಡಿಸಿ ಶುದ್ಧರನ್ನಾಗಿ ಮಾಡಲಿ. ಎಲ್ಲ ದೇವತೆಗಳೂ ನಮ್ಮನ್ನು ಅನುಗ್ರಹದೃಷ್ಟಿಯಿಂದ ನೋಡಲಿ. ನಾವು ಅವರಿಗೆ ನೀಡುವ ಹವಿಸ್ಸನ್ನು ಸ್ವೀಕಾರ ಮಾಡಿ, ನಮ್ಮ ಇಷ್ಟಾರ್ಥವನ್ನು ನೀಡಲು ಬಯಸಲಿ.

**ಆ ಯತ್ತೃಪನ್ಮರುತೋ ವಾವಶಾನಾಃ ॥ ಶ್ರಿಯಸೇ ಕಂ ಭಾನುಭಿಃ ಸಂ ಮಿಮಿಕ್ಷಿರೇ ತೇ ರಶ್ಮಿಭಿಸ್ತ ಋಕ್ವಭಿಃ ಸುಖಾದಯಃ ।**

---

ಏತಿ । ಯತ್ । ತೃಪತ್ । ಮರುತಃ । ವಾವಶಾನಾಃ ॥ **ಶ್ರಿಯಸೇ ।** ಕಮ್ । ಭಾನುಭಿರಿತಿ ಭಾನು–ಭಿಃ । ಸಮಿತಿ । ಮಿಮಿಕ್ಷಿರೇ । ತೇ । ರಶ್ಮಿಭಿರಿತಿ ರಶ್ಮಿ–ಭಿಃ । ತೇ । ಋಕ್ವಭಿರಿತ್ಯೃಕ್ವ–ಭಿಃ । ಸುಖಾದಯ ಇತಿ ಸು–ಖಾದಯಃ ॥

---

| ಮಂತ್ರ | ವಿನಿಯೋಗ |
|---|---|
| **ಶ್ರೀ ಯಸೇ....ಧಾವ್ನಃ ॥** | ಮಾರುತಯಾಗದ ಯಾಜ್ಯಾನುವಾಕ್ಯೆ |

---

❖ **ಮರುತಃ** = ಮರುದ್ದೇವತೆಗಳೇ ! **ಯತ್** = ಯಾವ ಕಾರಣದಿಂದ; **ತೃಪತ್** = ತೃಪ್ತಿಯನ್ನು ; **ವಾವಶಾನಾಃ** = ಬಯಸುವವರಾಗಿದ್ದೀರೋ; [ಅದರಿಂದ] **ತುರಾಣಾಮ್** = [ಹವಿಃಸ್ವೀಕಾರಕ್ಕಾಗಿ] ತ್ವರೆ ಪಡುತ್ತಿರುವ; **ವಃ** = ನಿಮ್ಮ; **ಪ್ರಿಯಾ ನಾಮ** = ಪ್ರಿಯವಾದ ನಾಮಧೇಯಗಳಿಂದ; **ಆ ಹುವೇ** = [ನಿಮ್ಮನ್ನು] ಆಹ್ವಾನಿಸುತ್ತೇವೆ; ❖ **ತೇ** = ಪುರೋವಾತರೂಪರಾದ ಆ ಮರುದ್ದೇವತೆಗಳು; **ಕಮ್ ಶ್ರಿಯಸೇ** = ಸುಖವನ್ನು ಆಶ್ರಯಿಸುವುದಕ್ಕಾಗಿ [ಹೊಂದುವುದಕ್ಕಾಗಿ] / ಕಮ್ = ಜಲವನ್ನು ಹೊಂದಲು; **ಭಾನುಭಿಃ** = ಪ್ರಕಾಶಮಾನವಾದ ; **ರಶ್ಮಿಭಿಃ** = ಸೂರ್ಯನ ಕಿರಣಗಳಿಂದ ಕೂಡಿಕೊಂಡು; **ಸಮ್ ಮಿಮಿಕ್ಷಿರೇ** = [ಭೂಮಿಯನ್ನು] ಮಳೆಯಿಂದ ತೋಯಿಸಲು ಇಚ್ಛಿಸಿದರು.

---

ಮರುದ್ದೇವತೆಗಳೇ! ನೀವು ತೃಪ್ತಿಯನ್ನು ಬಯಸಿ, ಹವಿಸ್ಸನ್ನು ಸ್ವೀಕರಿಸಲು ತ್ವರೆಪಡುತ್ತಿರುವಿರಿ. ಪ್ರಿಯವಾದ ನಾಮಧೇಯಗಳಿಂದ ನಿಮ್ಮನ್ನು ಹವಿಸ್ಸ್ವೀಕಾರಕ್ಕಾಗಿ ಆಹ್ವಾನಿಸುತ್ತೇವೆ.

**ತೇ ವಾಶೀಮಂತ ಇಷ್ಮಿಣೋ ಅಭೀರವೋ ವಿದ್ರೇ ಪ್ರಿಯಸ್ಯ ಮಾರುತಸ್ಯ ಧಾಮ್ನಃ॥ ಅಗ್ನಿಃ ಪ್ರಥಮೋ**

---

ತೇ । ವಾಶೀಮಂತ ಇತಿ ವಾಶಿ–ಮಂತಃ । ಇಷ್ಮಿಣಃ । ಅಭೀರವಃ । ವಿದ್ರೇ । ಪ್ರಿಯಸ್ಯ । ಮಾರುತಸ್ಯ । ಧಾಮ್ನಃ ॥ **ಅಗ್ನಿಃ** । ಪ್ರಥಮಃ ।

---

| ಮಂತ್ರ | ವಿನಿಯೋಗ |
|---|---|
| ಅಗ್ನಿಃ .... ಶಿಶಾತು । | ಪರಸ್ಪರವಿರೋಧಪರಿಹಾರಕ್ಕಾಗಿ ಮಾಡುವ ಸಂಜ್ಞಾನೀಷ್ಟಿಯ ಪುರೋನುವಾಕ್ಯೆ |

---

**ತೇ** = ಆ ಮರುದ್ದೇವತೆಗಳು; **ಋಕ್ವಭಿಃ** = [ಯಾಜ್ಯಾಪುರೋನುವಾಕ್ಯಾರೂಪವಾದ] ಋಕ್ಕುಗಳಿಂದ [ಸ್ತುತರಾದರು]; **ತೇ** = ಅವರು; **ಸುಖಾದಯಃ** = ಹವಿಸ್ಸನ್ನು ಚೆನ್ನಾಗಿ ಭಕ್ಷಿಸಿದವರಾದರು; **ತೇ** = ಅವರು; **ವಾಶೀಮಂತಃ** = ಹರ್ಷಧ್ವನಿಯಿಂದ ಕೂಡಿದವ ರಾಗಿ; **ಇಷ್ಮಿಣಃ** = ತಮ್ಮ ಸ್ಥಾನಕ್ಕೆ ಹಿಂದಿರುಗಲು ಅಪೇಕ್ಷಿಸಿದವರಾಗಿ; **ಅಭೀರವಃ** = (ಅಸುರಾದಿಬಾಧೆಯಿಂದ) ಹೆದರದವರಾಗಿ; **ಮಾರುತಸ್ಯ ಪ್ರಿಯಸ್ಯ ಧಾಮ್ನಃ** = ಮರುತರಿಗೆ ಪ್ರಿಯವಾದ ಸ್ಥಾನವನ್ನು; **ವಿದ್ರೇ** = ಹೊಂದಿದವರಾದರು; ❖ **ಅಗ್ನಿಃ ಪ್ರಥಮಃ** = ದೇವತೆಗಳ ಮೊದಲನೆಯ ಸಂಘದ ನಾಯಕನಾದ ಅಗ್ನಿಯು;

---

ಪುರೋವಾತರೂಪರಾದ ಮರುತ್ತುಗಳು – ಪ್ರಾಣಿಗಳು ಸುಖವನ್ನು ಹೊಂದಲು, ಪ್ರಕಾಶಮಾನವಾದ ಸೂರ್ಯಕಿರಣಗಳಿಂದ ಕೂಡಿ – ಮಳೆಯಿಂದ ಭೂಮಿಯನ್ನು ತೋಯಿಸಲು ಇಚ್ಛಿಸಿದರು. ಅವರು ಋಕ್ಕುಗಳಿಂದ ಸ್ತುತರಾಗಿ ಹವಿಸ್ಸುಗಳನ್ನು ಭಕ್ಷಿಸಿದರು. ತೃಪ್ತಿಯ ಹರ್ಷಧ್ವನಿಯನ್ನು ಮಾಡಿದರು. ತಮ್ಮ ಸ್ಥಾನಕ್ಕೆ ಹಿಂದಿರುಗಲು ಇಚ್ಛಿಸಿ, ತಮಗೆ ಪ್ರಿಯವಾದ ಸ್ಥಾನವನ್ನು ಹೊಂದಿದರು.

# ವಸುಭಿರ್ನೋಽ ಅವ್ಯಾತ್ಸೋಮೋ ರುದ್ರೇಭಿರಭಿ ರಕ್ಷತು ತ್ಮನಾ । ಇಂದ್ರೋ ಮರುದ್ಭಿರ್ ಋತುಧಾ ಕೃಣೋತ್ವಾದಿತ್ಯೈರ್ನೋ ವರುಣಃ ಸಗ್ಂಶಿಶಾತು ॥

---

ವಸುಭಿರಿತಿ ವಸು–ಭಿಃ । ನಃ । ಅವ್ಯಾತ್ । ಸೋಮಃ । ರುದ್ರೇಭಿಃ । ಅಭೀತಿ । ರಕ್ಷತು । ತ್ಮನಾ ॥ ಇಂದ್ರಃ । ಮರುದ್ಭಿರಿತಿ ಮರುತ್–ಭಿಃ । ಋತುಧೇತ್ಯೃತು–ಧಾ । ಕೃಣೋತು । ಆದಿತ್ಯೈಃ । ನಃ । ವರುಣಃ । ಸಮಿತಿ । ಶಿಶಾತು ॥

---

**ವಸುಭಿಃ ನಃ ಅವ್ಯಾತ್** = ವಸುಗಳಿಂದ ಕೂಡಿ ನಮ್ಮನ್ನು ರಕ್ಷಿಸಲಿ. **ಸೋಮಃ ರುದ್ರೇಭಿಃ** = ಎರಡನೆಯ ಗುಂಪಿಗೆ ಮುಖ್ಯನಾದ ಸೋಮನು ರುದ್ರನೊಡನೆ ; **ತ್ಮನಾ** = ತಾನಾಗಿಯೇ ಪ್ರೀತಿಪೂರ್ವಕವಾಗಿ; **ಅಭಿ ರಕ್ಷತು** = ರಕ್ಷಿಸಲಿ. **ಇಂದ್ರಃ ಮರುದ್ಭಿಃ** = ಮೂರನೆಯ ಗುಂಪಿಗೆ ನಾಯಕನಾದ ಇಂದ್ರನು ಮರುದ್ದೇವತೆಗಳೊಡನೆ ; **ಋತುಧಾ ಕೃಣೋತು** = ಆಯಾ ಋತುಗಳ ಸುಖವನ್ನು ಅನುಭವಿಸುವಂತೆ ಮಾಡಲಿ. **ವರುಣಃ ಆದಿತ್ಯೈಃ** = ನಾಲ್ಕನೆಯ ಗುಂಪಿಗೆ ಮುಖ್ಯನಾದ ವರುಣನು ಆದಿತ್ಯರೊಡನೆ **ನಃ ಸಮ್ ಶಿಶಾತು** = ನಮ್ಮನ್ನು ವ್ರತವನ್ನು ಚೆನ್ನಾಗಿ ಆಚರಿಸಿದವರನ್ನಾಗಿ ಮಾಡಲಿ.

---

ದೇವತೆಗಳಲ್ಲಿ ನಾಲ್ಕು ಗುಂಪುಗಳಾಗಿ ತಮ್ಮತಮ್ಮಲ್ಲಿಯೇ ಶ್ರೇಷ್ಠತೆಗಾಗಿ ಜಗಳವಾಡುತ್ತಿದ್ದಾಗ ಒಂದು ಗುಂಪಿನ ಮುಖ್ಯಸ್ಥನಾದ ಇಂದ್ರನು ಪ್ರಜಾಪತಿಯನ್ನು ಆಶ್ರಯಿಸಿದನು. ಪ್ರಜಾಪತಿಯು ಇಂದ್ರನಿಂದ ಸಂಜ್ಞಾನೀಷ್ಟಿಯನ್ನು ಮಾಡಿಸಿದನು. ಆಗ ಇಂದ್ರನು ದೇವತೆಗಳಲ್ಲಿ ಶ್ರೇಷ್ಠನಾದನು. ಆ ದೇವತೆಗಳ ಸ್ತೋತ್ರರೂಪವಾದ ಪುರೋನುವಾಕ್ಯೆಯಿದು.

ದೇವತೆಗಳಲ್ಲಿ ಮೊದಲನೆಯವನಾದ ಅಗ್ನಿಯು ವಸುಗಳೊಡನೆ ಕೂಡಿದವನಾಗಿ ನಮ್ಮನ್ನು ರಕ್ಷಿಸಲಿ. ಸೋಮದೇವನು ರುದ್ರರೊಡಗೂಡಿ ತಾನೇ ಪ್ರೀತಿಪೂರ್ವಕವಾಗಿ ನಮ್ಮನ್ನು ರಕ್ಷಿಸಲಿ. ಇಂದ್ರನು ಮರುತ್ತುಗಳೊಡಗೂಡಿ ಆಯಾ ಋತುಗಳಲ್ಲಿ

# ಸಂ ನೋ ದೇವೋ ವಸುಭಿರಗ್ನಿಸ್ಸಗ್ಂ [....ಸವ್ (೨)] ಸೋಮಸ್ತನೂಭೀ ರುದ್ರಿಯಾಭಿಃ। ಸಮಿಂದ್ರೋ ಮರುದ್ಭಿರ್ಯಜ್ಞಿಯೈಃ

**ಸಮಿತಿ ।** ನಃ । ದೇವಃ । ವಸುಭಿರಿತಿ ವಸು–ಭಿಃ । ಅಗ್ನಿಃ । ಸಮಿತಿ । ಸೋಮಃ । ತನೂಭಿಃ । ರುದ್ರಿಯಾಭಿಃ ॥ ಸಮಿತಿ । ಇಂದ್ರಃ । ಮರುದ್ಭಿರಿತಿ ಮರುತ್–ಭಿಃ । ಯಜ್ಞಿಯೈಃ ।

| ಮಂತ್ರ | ವಿನಿಯೋಗ |
|---|---|
| **ಸಂ ನೋ....ಅಜಿಜ್ಞಿಪತ್ ।** | ಸಂಜ್ಞಾನೀಷ್ಟಿಯ ಯಾಜ್ಯ |

❖ **ಅಗ್ನಿಃ ದೇವಃ** = ಪ್ರಥಮಸಂಘಾಧಿಪತಿಯಾದ ಅಗ್ನಿದೇವನು; **ವಸುಭಿಃ** = ಅಷ್ಟವಸುಗಳೊಡಗೂಡಿ ; **ನಃ ಸಮ್ ಅಜಿಜ್ಞಿಪತ್** = [ಯಾಗಾನುಷ್ಠಾನವು ಚೆನ್ನಾಗಿ ಆಗುವಂತೆ ಮಾಡಿ], ನಮ್ಮಲ್ಲಿ ಪರಸ್ಪರ ಪ್ರೀತಿಯುಂಟಾಗುವಂತೆ ಮಾಡಲಿ ; **ಸೋಮಃ** = ಸೋಮದೇವನೂ; **ರುದ್ರಿಯಾಭಿಃ ತನೂಭಿಃ** = ಏಕಾದಶ ರುದ್ರರಿಂದೊಡಗೂಡಿ; ನಃ **ಸಮ್** ಅಜಿಜ್ಞಿಪತ್ = ನಮ್ಮನ್ನು ಒಟ್ಟುಗೂಡಿಸಲಿ. **ಇಂದ್ರಃ** = ಇಂದ್ರದೇವನು; **ಯಜ್ಞಿಯೈಃ ಮರುದ್ಭಿಃ** = ಯಜ್ಞಾರ್ಹರಾದ ಸಪ್ತಮರುತ್ತುಗಳೊಡನೆ; **ಸಮ್** ಅಜಿಜ್ಞಿಪತ್ = ನಮ್ಮನ್ನು ಒಟ್ಟುಗೂಡಿ ಇರುವಂತೆ ಮಾಡಲಿ.

ಅನುಭವಿಸಬೇಕಾದ ಸುಖಗಳನ್ನು ಉಂಟು ಮಾಡಲಿ. ವರುಣನು ಆದಿತ್ಯರೊಡನೆ ನಮ್ಮ ಅನುಷ್ಠಾನವು ಸರಿಯಾಗಿ ಇರುವಂತೆ ಮಾಡಲಿ. ಹೀಗೆ ನಾಲ್ಕು ದೇವಸಂಘಗಳೂ ಒಟ್ಟುಗೂಡಿ ನಮ್ಮಲ್ಲಿ ಐಕಮತ್ಯವನ್ನು ಉಂಟುಮಾಡಲಿ. ನನ್ನನ್ನು ಉಳಿದವರು ಗೌರವಿಸುವಂತೆ ಶ್ರೇಷ್ಠನನ್ನಾಗಿ ಮಾಡಲಿ.

**ಸಮಾದಿತ್ಯೈರ್ನೋ ವರುಣೋ ಅಜಿಜ್ಞಿಪತ್ ॥**

**ಯಥಾಽಽದಿತ್ಯಾ ವಸುಭಿಃ ಸಂಬಭೂವುರ್ಮರುದ್ಭಿಃ**

**ರುದ್ರಾಸ್ಸಮಜಾನತಾಭಿ ।**

---

ಸಮಿತಿ । ಆದಿತ್ಯೈಃ । ನಃ । ವರುಣಃ । ಅಜಿಜ್ಞಿಪತ್ ॥ **ಯಥಾ** । ಆದಿತ್ಯಾಃ । ವಸುಭಿರಿತಿ ವಸು-ಭಿಃ । ಸಂಬಭೂವುರಿತಿ ಸಮ್-ಬಭೂವುಃ । ಮರುದ್ಭಿರಿತಿ ಮರುತ್-ಭಿಃ । ರುದ್ರಾಃ । ಸಮಜಾನತೇತಿ ಸಮ್-ಅಜಾನತ । ಅಭಿ ॥

---

| ಮಂತ್ರ | ವಿನಿಯೋಗ |
|---|---|
| ಯಥಾ .... ಭವಂತು । | ಸಂಜ್ಞಾನೀಷ್ಟಿಯ ವಿಕಲ್ಪಿತ ಯಾಜ್ಯೆ |

---

**ವರುಣಃ** = ವರುಣನು; **ಆದಿತ್ಯೈಃ** = ದ್ವಾದಶಾದಿತ್ಯರೊಡನೆ ; ನಃ **ಸಮ್** ಅಜಿಜ್ಞಿಪತ್ = (ಯಾಗದಿಂದ ತೃಪ್ತರಾಗಿ) ನಮ್ಮನ್ನು ಏಕಮತ್ಯದಿಂದಿರುವಂತೆ ಮಾಡಲಿ ; ❖ **ಯಥಾ** = ಯಾವ ರೀತಿಯಲ್ಲಿ; **ಆದಿತ್ಯಾಃ** = ಆದಿತ್ಯರು; **ವಸುಭಿಃ ಸಮ್ ಬಭೂವುಃ** = ವಸುಗಳೊಡನೆ ಸೇರಿಕೊಂಡರೋ; **ರುದ್ರಾಃ** = ರುದ್ರರು ; **ಮರುದ್ಭಿಃ ಅಭಿ ಸಮಜಾನತ** = ಮರುತ್ತುಗಳೊಡನೆ ಅಭಿಮುಖರಾಗಿ ಒಟ್ಟಾದರೋ;

---

ಅಗ್ನಿದೇವನು ಅಷ್ಟವಸುಗಳೊಡನೆಯೂ, ಸೋಮನು ಏಕಾದಶರುದ್ರರೊಡನೆಯೂ, ಇಂದ್ರನು ಯಜ್ಞಭಾಗಿಗಳಾದ ಮರುತ್ತುಗಳೊಡನೆಯೂ, ವರುಣನು ದ್ವಾದಶಾದಿತ್ಯರೊಡನೆಯೂ ಕೂಡಿಕೊಂಡು ಈ ಯಜ್ಞವು ಚೆನ್ನಾಗಿ ನಡೆಯುವಂತೆ ಮಾಡಿ, ನಮ್ಮನ್ನು ಒಟ್ಟಾಗಿರುವಂತೆ ಮಾಡಿ, ನನ್ನ ನಾಯಕತ್ವವನ್ನು ಬೇರೆಯವರು ಅಂಗೀಕರಿಸುವಂತೆ ಮಾಡಲಿ.

**ಏವಾ ತ್ರಿಣಾಮನ್ನಹೃಣೀಯಮಾನಾ ವಿಶ್ವೇ ದೇವಾಸ್ಸ**

**ಮನಸೋ ಭವಂತು ॥ ಕುತ್ರಾ ಚಿದ್ಯಸ್ಯ ಸಮೃತೌ ರಣ್ವಾ**

**ನರೋ ನೃಷದನೇ ।**

---

ಏವಾ । ತ್ರಿಣಾಮನ್ನಿತಿ ತ್ರಿ-ನಾಮನ್ । ಅಹೃಣೀಯಮಾನಾಃ । ವಿಶ್ವೇ । ದೇವಾಃ । ಸಮನಸ ಇತಿ ಸ-ಮನಸಃ । ಭವಂತು ॥ **ಕುತ್ರ** । **ಚಿತ್** । ಯಸ್ಯ । ಸಮೃತಾವಿತಿ ಸಮ್-ಋತೌ । ರಣ್ವಾಃ । ನರಃ । ನೃಷದನ ಇತಿ ನೃ-ಸದನೇ ॥

---

| ಮಂತ್ರ | ವಿನಿಯೋಗ |
|---|---|
| **ಕುತ್ರಾ ಚಿದ್ಯಸ್ಯ....ಜಂತವಃ ॥** | *ಹಿಂದಿನ ಯಾಗದಲ್ಲಿ ಸ್ವಿಷ್ಟಕೃದ್ಯಾಗದ ಪುರೋಽನುವಾಕ್ಯೆ |

---

**ಏವಾ** = ಹೀಗೆಯೇ; **ತ್ರಿಣಾಮನ್** = ಮೂರು ಹೆಸರುಳ್ಳ ಅಗ್ನಿಯೇ! [ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿ ಅಥವಾ ಹವ್ಯವಾಹನ, ಕವ್ಯವಾಹನ; ಸಹರಕ್ಷ] **ಅಹೃಣೀಯಮಾನಾಃ** = ವೈರಿಗಳಿಗೆ ಅಧೀನರಾಗದಿರುವ; **ವಿಶ್ವೇ ದೇವಾಃ** = ಎಲ್ಲ ದೇವತೆಗಳೂ; **ಸಮನಸಃ ಭವಂತು** = ಸಮಾನಮನಸ್ಕರಾಗಲಿ; ❖ **ಯಸ್ಯ ಸಮೃತೌ** = ಯಾವ ಸ್ವಿಷ್ಟಕೃದ್ದೇವನ ಸಮ್ಮತಿಯಾಗಲು; **ನರಃ** = ಯಜಮಾನಾದಿ ಮಾನವರು; **ನೃಷದನೇ** = ಗ್ರಾಮಗೃಹಾದಿಗಳಲ್ಲಿ; **ಕುತ್ರಾಚಿತ್** = ಎಲ್ಲಿಯೂ; **ರಣ್ವಾಃ** = ಸಂತೋಷದಿಂದ ವಿಹರಿಸುತ್ತಾರೆಯೋ;

---

ಈ ಯಾಗದ ಪ್ರಭಾವದಿಂದ ದೇವತೆಗಳ ನಾಲ್ಕು ಗುಂಪುಗಳೂ ಒಂದಾಗುತ್ತವೆ. ಆದಿತ್ಯರು ವಸುಗಳೊಡನೆ ಒಂದಾದಂತೆ ಮರುತ್ತುಗಳೊಡನೆ ರುದ್ರರೂ ಏಕೀಭವಿಸಿದರು.

---

* ಇಲ್ಲಿ ನಾಲ್ಕು ಹವಿಸ್ಸುಗಳು ಇದ್ದರೂ ಯಾಜ್ಯಾ-ಪುರೋಽನುವಾಕ್ಯಗಳು ಸಮಾನವೇ. ಬೇರೆಬೇರೆಯಲ್ಲ.

**ಅರ್ಹಂತಶ್ಚಿದ್ಯಮಿಂಧತೇ ಸಂಜನಯಂತಿ ಜಂತವಃ॥ ಸಂ**

**ಯದಿಷೋ ವನಾಮಹೇ ಸಗ್ಂ ಹವ್ಯಾ ಮಾನುಷಾಣಾಮ್ ।**

**ಉತ ದ್ಯುಮ್ನಸ್ಯ ಶವಸ [ಶವಸಃ (೩)] ಋತಸ್ಯ ರಶ್ಮಿಮಾದದೇ॥**

---

ಅರ್ಹಂತಃ । ಚಿತ್ । ಯಮ್ । ಇಂಧತೇ । ಸಂಜನಯಂತೀತಿ ಸಮ್–ಜನಯಂತಿ ।

ಜಂತವಃ ॥ **ಸಮಿತಿ** । ಯತ್ । ಇಷಃ । ವನಾಮಹೇ । ಸಮಿತಿ । ಹವ್ಯಾ । ಮಾನುಷಾಣಾಮ್ ॥

ಉತ । ದ್ಯುಮ್ನಸ್ಯ । ಶವಸಃ । ಋತಸ್ಯ । ರಶ್ಮಿಮ್ । ಏತಿ । ದದೇ ॥

---

| ಮಂತ್ರ | ವಿನಿಯೋಗ |
|---|---|
| **ಸಂ ಯದಿಷೋ...ಆದದೇ ॥** | ಸ್ವಿಷ್ಟಕೃದ್ಯಾಗದ ಯಾಜ್ಯಾನುವಾಕ್ಯೆ |

---

**ಯಮ್** = ಯಾವ ಸ್ವಿಷ್ಟಕೃದ್ದೇವನನ್ನು ; **ಅರ್ಹಂತಃ ಚಿತ್** = [ಮಂತ್ರಾದಿಗಳಿಂದ] ಪೂಜಿಸುತ್ತಾ; **ಇಂಧತೇ** = ಪ್ರಜ್ವಲಿಸುವಂತೆ ಮಾಡುತ್ತಾರೆಯೋ; [ಯಾವ ಸ್ವಿಷ್ಟಕೃದ್ದೇವನ ಅನುಗ್ರಹದಿಂದ] **ಜಂತವಃ** = ಯಜಮಾನರು; **ಸಂಜನಯಂತಿ** = ತಮಗೆ ಬೇಕಾದ ಫಲವನ್ನು ಪಡೆಯುತ್ತಾರೆಯೋ (ಆ ಸ್ವಿಷ್ಟಕೃದ್ದೇವನು ನಮಗೆ ಪ್ರಸನ್ನನಾಗಲಿ). ❖ **ಯತ್** = ಯಾವ ಕಾರಣದಿಂದ; **ಇಷಃ** = ಅನ್ನಗಳನ್ನು; **ಸಮ್ ವನಾಮಹೇ** = ಚೆನ್ನಾಗಿ ಹೊಂದುತ್ತೇವೆಯೋ; **ಹವ್ಯಾ** = (ದೇವತೆಗಳಿಗೆ ಕೊಡತಕ್ಕ) ಹವಿರ್ಭಾಗಗಳನ್ನು; **ಸಮ್** ವನಾಮಹೇ = ಚೆನ್ನಾಗಿ ಹೊಂದುತ್ತೇವೆಯೋ; **ಉತ** = ಮತ್ತು; **ದ್ಯುಮ್ನಸ್ಯ** = ಧನದ; **ಶವಸಃ** = ಬಲದ; **ಋತಸ್ಯ** = ಯಜ್ಞದ; **ರಶ್ಮಿಮ್** = ಬೆಳಕನ್ನು / **ಉತ್ಕರ್ಷವನ್ನು ; ಆದದೇ** = ಸ್ವೀಕರಿಸುತ್ತೇವೆಯೋ (ಆ ಕಾರಣದಿಂದ ಸ್ವಿಷ್ಟಕೃದ್ದೇವನನ್ನು ಸೇವಿಸುತ್ತೇವೆ).

---

ಹಾಗೆಯೇ ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿಗಳೆಂಬ ಅಥವಾ ಹವ್ಯವಾಹನ, ಕವ್ಯವಾಹನ ಮತ್ತು ಸಹರಕ್ಷರೆಂಬ ಮೂರು ಹೆಸರುಳ್ಳ ಅಗ್ನಿದೇವನೇ! ಶತ್ರುಗಳಿಂದ

**ಯಜ್ಞೋ ದೇವಾನಾಂ ಪ್ರತ್ಯೇತಿ ಸುಮ್ನಮಾದಿತ್ಯಾಸೋ ಭವತಾ ಮೃಡಯಂತಃ। ಆ ವೋಽರ್ವಾಚೀ ಸುಮತಿರ್ವವೃತ್ಯಾದಗ್ಂಹೋಶ್ಚಿದ್ಯಾ ವರಿವೋವಿತ್ತರಾಽಸತ್ ॥**

---

**ಯಜ್ಞಃ** । ದೇವಾನಾಮ್ । ಪ್ರತೀತಿ । ಏತಿ । ಸುಮ್ನಮ್ । ಆದಿತ್ಯಾಸಃ । ಭವತ । ಮೃಡಯಂತಃ ॥ ಏತಿ । ವಃ । ಅರ್ವಾಚೀ । ಸುಮತಿರಿತಿ ಸು–ಮತಿಃ । ವವೃತ್ಯಾತ್ । ಅಗ್ಂಹೋಃ । ಚಿತ್ । ಯಾ । ವರಿವೋವಿತ್ತರೇತಿ ವರಿವೋವಿತ್–ತರಾ । ಅಸತ್ ।

---

| ಮಂತ್ರ | ವಿನಿಯೋಗ |
| --- | --- |
| **ಯಜ್ಞೋ....ಅಸತ್ ।** | *ಭೂತಿಕಾಮನಿಗೆ ವಿಹಿತವಾಗಿರುವ ಇಷ್ಟಿಯ ಪುರೋನುವಾಕ್ಯೆ |

---

❖ **ಯಜ್ಞಃ** = [ಅನುಷ್ಠಾನ ಮಾಡುತ್ತಿರುವ] ಈ ಯಜ್ಞವು; **ದೇವಾನಾಮ್** = ದೇವತೆಗಳ; **ಸುಮ್ನಮ್ ಪ್ರತಿ ಏತಿ** = ಸುಖಕ್ಕಾಗಿ ಪ್ರವೃತ್ತವಾಗಿದೆ; **ಆದಿತ್ಯಾಸಃ** = ಎಲೈ ! ಆದಿತ್ಯರೇ! **ಮೃಡಯಂತಃ ಭವತ** = ನಮ್ಮನ್ನು ಸುಖಪಡಿಸುವವರಾಗಿರಿ; **ವಃ** = ನಿಮ್ಮ; **ಸುಮತಿಃ**= ಅನುಗ್ರಹಬುದ್ಧಿಯು; **ಅರ್ವಾಚೀ** = ಅರ್ವಾಚೀನರಾದ (ಈಗಿನವರಾದ) ನಮ್ಮ ಮೇಲೆ; **ಆ ವವೃತ್ಯಾತ್** = ಮತ್ತೆ ಮತ್ತೆ ಪ್ರವರ್ತಿಸಲಿ. **ಯಾ** = ಯಾವ ನಿಮ್ಮ ಅನುಗ್ರಹಬುದ್ಧಿಯು; **ಅಗ್ಂಹೋಃ ಚಿತ್** = ಪಾಪನಾಶಕವಾಗಿ ಮತ್ತೆ ಮತ್ತೆ ಪ್ರವೃತ್ತವಾಗುತ್ತದೆಯೋ; (ಆ ಬುದ್ಧಿಯು); **ವರಿವೋವಿತ್ತರಾ ಅಸತ್** = ನಮ್ಮ ಪರಿಚರ್ಯೆಯನ್ನು ಮನಸ್ಸಿಗೆ ತಂದುಕೊಂಡು ಅನುಗ್ರಹಿಸಲಿ.

---

* ಈ ಇಷ್ಟಿಯು '**ಆದಿತ್ಯೇಭ್ಯೋ ಭುವದ್ವದ್ಭ್ಯಃ**' ಎಂಬ ವಿಧಿವಾಕ್ಯದಿಂದ ವಿಹಿತವಾಗಿದೆ. ಇಲ್ಲಿಯ ಯಾಜ್ಯಾ – ಪುರೋನುವಾಕ್ಯೆಗಳಲ್ಲಿ '**ಭವತಿ**' '**ಭವತ**' ಎಂಬ '**ಭೂ**' ಧಾತುವಿನಿಂದ ಆದ ಶಬ್ದಗಳಿರುವುದರಿಂದ, ಸ್ತುತಿಸಲ್ಪಡುವ ಆದಿತ್ಯರೂ ಭುವದ್ವಂತರು. '**ವಾಯವೇ ನಿಯುತ್ವತೇ**' ಮೊದಲಾದೆಡೆಯಲ್ಲಿಯೂ ಹೀಗೆಯೇ ತಿಳಿಯಬೇಕು.

**ಶುಚಿರಪಸ್ಸೂಯವಸಾ ಅದಬ್ಧ ಉಪಕ್ಷೇತಿ ವೃದ್ಧವಯಾ ಸ್ಸುವೀರಃ। ನಕಿಷ್ಟಂ ೨ ಘ್ನಂತ್ಯಂತಿತೋ ನ ದೂರಾದ್ಯ**

---

**ಶುಚಿಃ** । ಅಪಃ । ಸೂಯವಸಾ ಇತಿ ಸು–ಯವಸಾಃ । ಅದಬ್ಧಃ । ಉಪೇತಿ। ಕ್ಷೇತಿ । ವೃದ್ಧವಯಾ ಇತಿ ವೃದ್ಧ–ವಯಾಃ । ಸುವೀರ ಇತಿ ಸು–ವೀರಃ ॥ ನಕಿಃ । ತಮ್ । ಘ್ನಂತಿ । ಅಂತಿತಃ । ನ । ದೂರಾತ್ । ಯಃ ।

---

| **ಮಂತ್ರ** | **ವಿನಿಯೋಗ** |
|---|---|
| **ಶುಚಿರಪಃ .... ಪ್ರಣೀತೌ ॥** | ಹಿಂದಿನ ಇಷ್ಟಿಯ ಯಾಜ್ಯಾನುವಾಕ್ಯೆ |

---

❖ **ಸೂಯವಸಾಃ** = ತೃಣಧಾನ್ಯಾದಿ ಅನ್ನಗಳಿಂದ ಪೂರ್ಣನಾದ / **ಒಳ್ಳೆಯ ಅನ್ನಸಮೃದ್ಧಿಯುಳ್ಳ ; ಅದಬ್ಧಃ** = ಯಾರಿಂದಲೂ ಹಿಂಸಿಸಲ್ಪಡದ; **ವೃದ್ಧವಯಾಃ** = ದೀರ್ಘಾಯುಷ್ಮಂತನಾದ; **ಸುವೀರಃ** = ಒಳ್ಳೆಯ ಪುತ್ರ–ಭೃತ್ಯಾದಿಗಳುಳ್ಳ ಈ ಯಜಮಾನನು; **ಶುಚಿಃ** = ಶುದ್ಧನಾಗಿ; ಸೂಯವಸಾಃ = ಅನ್ನಸಮೃದ್ಧಿಯುಳ್ಳ; **ಅಪಃ** = ದೇವಪ್ರೀತಿಕರವಾದ ಈ ಯಜ್ಞಾದಿಕರ್ಮಗಳನ್ನು ; **ಉಪಕ್ಷೇತಿ** = ಸಮೀಪಕಾಲದಲ್ಲಿಯೇ ಮಾಡುತ್ತಿದ್ದಾನೆ ; **ಯಃ** = ಯಾವ ಯಜಮಾನನು;

---

ಪರಾಜಿತರಾಗದ ಇತರ ದೇವತೆಗಳೂ ಸಮಾನಮನಸ್ಕರಾಗಲಿ. ಆ ದೇವತೆಗಳ ಅನುಗ್ರಹದಿಂದ ನಾವೂ ಒಟ್ಟಾಗಿರುವಂತಾಗಲಿ.

ಆ ಸ್ವಿಷ್ಟಕೃದ್ದೇವನ ಅನುಗ್ರಹದಿಂದ ಯಜಮಾನಾದಿಗಳು ಸಮಾನಮನಸ್ಕರಾಗಿ ಗ್ರಾಮಗಳಲ್ಲಿಯೂ ಮತ್ತು ಎಲ್ಲೆಡೆಯಲ್ಲಿಯೂ ಸಂತೋಷವಾಗಿ ಬಾಳುತ್ತಾರೆ. ಆ ದೇವನನ್ನು ಮಂತ್ರಹವಿರ್ಭಾಗಾದಿಗಳಿಂದ ಪೂಜಿಸುತ್ತಾ, ಪ್ರಜ್ವಲಗೊಳಿಸುತ್ತಾರೆ. ಆತನ ಅನುಗ್ರಹದಿಂದ ಫಲವನ್ನು ಪಡೆಯುತ್ತಾರೆ. ಆ ದೇವನು ನಮಗೆ ಪ್ರಸನ್ನನಾಗಲಿ.

ಸ್ವಿಷ್ಟಕೃದ್ದೇವನು ನಮಗೆ ಅನ್ನವನ್ನೂ ದೇವತೆಗಳಿಗೆ ಕೊಡುವ ಹವಿಸ್ಸುಗಳನ್ನೂ ಕೊಡತಕ್ಕವನು. ಹಾಗೆಯೇ ನಮಗೆ ಬೇಕಾದ ಧನವನ್ನೂ, ಜಲವನ್ನೂ – ಯಜ್ಞಾದಿ ಸತ್ಕಾರ್ಯಗಳನ್ನು ಬೆಳಗುವಂತೆ – ಹೆಚ್ಚಾಗಿ ಕೊಡುತ್ತಾನೆ. ಆ ಕಾರಣದಿಂದ ಸ್ವಿಷ್ಟಕೃದ್ದೇವನನ್ನು ಯಾಗದಿಂದ ಆರಾಧಿಸುತ್ತೇವೆ. ಆತನು ಪ್ರಸನ್ನನಾಗಲಿ.

**ಆದಿತ್ಯಾನಾಂ ಭವತಿ ಪ್ರಣೇತೌ। ಧಾರಯಂತ ಆದಿತ್ಯಾಸೋ ಜಗತ್ಸ್ಥಾದೇವಾ ವಿಶ್ವಸ್ಯ ಭುವನಸ್ಯ ಗೋಪಾಃ। ದೀರ್ಘಾಧಿಯೋ ರಕ್ಷಮಾಣಾ [....ರಕ್ಷಮಾಣಾಃ (೪)]**

---

ಆದಿತ್ಯಾನಾಮ್ । ಭವತಿ । ಪ್ರಣೇತಾವಿತಿ ಪ್ರ–ನೀತೌ ॥ **ಧಾರಯಂತಃ ।** ಆದಿತ್ಯಾಸಃ । ಜಗತ್ । ಸ್ಥಾಃ । ದೇವಾಃ । ವಿಶ್ವಸ್ಯ । ಭುವನಸ್ಯ । ಗೋಪಾ ಇತಿ ಗೋ–ಪಾಃ ॥ ದೀರ್ಘಾಧಿಯ ಇತಿ ದೀರ್ಘ–ಧಿಯಃ । ರಕ್ಷಮಾಣಾಃ ।

---

| **ಮಂತ್ರ** | **ವಿನಿಯೋಗ** |
| --- | --- |
| ಧಾರಯಂತ....ಋಣಾನಿ । | *ಧಾರಯದ್ವದಿಷ್ಟಿಯ ಪುರೋನುವಾಕ್ಯೆ |

---

**ಆದಿತ್ಯಾನಾಮ್ ಪ್ರಣೀತೌ** = ಆದಿತ್ಯಪ್ರೀತಿಕರವಾದ ಯಜ್ಞಕರ್ಮದಲ್ಲಿ; **ಭವತಿ** = ಪ್ರವೃತ್ತನಾಗುತ್ತಾನೆಯೋ; **ತಮ್** = ಅವನನ್ನು ; **ಅಂತಿತಃ** = ಸಮೀಪದಲ್ಲಿ; **ನಕಿಃ ಘ್ನಂತಿ** = (ಶತ್ರುಗಳು) ಹಿಂಸಿಸಲಾರರು; **ದೂರಾತ್** = ದೂರದಿಂದಲೂ; **ನ ಘ್ನಂತಿ** = ವಿನಾಶಗೊಳಿಸಲಾರರು; ❖ **ಧಾರಯಂತಃ** = ರಾಜ್ಯಭ್ರಷ್ಟನಾದವನನ್ನು ರಾಜ್ಯದಲ್ಲಿ ಸ್ಥಾಪಿಸಬಲ್ಲ/ **[ಜಗತ್ ಧಾರಯಂತಃ = ಜಗತ್ತನ್ನು ಧರಿಸಿರುವ]; ಜಗತ್ ಸ್ಥಾಃ** = ಜಗತ್ತು ಸ್ಥಿರವಾಗಿರುವಂತೆ ಮಾಡುವ; **ವಿಶ್ವಸ್ಯ ಭುವನಸ್ಯ ಗೋಪಾಃ** = ವಿಶ್ವವೆಲ್ಲವನ್ನೂ ವೃಷ್ಟಿಪ್ರಕಾಶಾದಿಗಳಿಂದ ಪೋಷಿಸುವ; **ದೀರ್ಘಾಧಿಯಃ** = ಅವಿಚ್ಛಿನ್ನವಾದ ಉದಯಾಸ್ತಗಳಿಂದ ಜಗತ್ತನ್ನು ಧರಿಸುತ್ತಿರುವ / **ಅವಿಚ್ಛಿನ್ನಕಾರ್ಯಗಳುಳ್ಳ ; ಅಸುರ್ಯಮ್ ರಕ್ಷಮಾಣಾಃ** = ಯಜಮಾನನ ಹಿತವನ್ನು ರಕ್ಷಿಸುವ / **ಯಜಮಾನನ ಶತ್ರುಗಳನ್ನು ನಾಶಗೊಳಿಸಿ ಯಜಮಾನನನ್ನು ರಕ್ಷಿಸುವ;**

---

* ಇದರ ಪುರೋನುವಾಕ್ಯೆ–ಯಾಜ್ಯೆಗಳಲ್ಲಿ '**ಧಾರಯಂತಃ**' '**ಧಾರಯವ್**' ಎಂಬ ಶಬ್ದಗಳಿರುವುದರಿಂದ ದೇವತೆಗಳಾದ ಆದಿತ್ಯರು ಧಾರಯದ್ವಂತರು.

**ಅಸುರ್ಯ್ರವ್ಯೃತಾವಾನಶ್ಚಯಮಾನಾ ಋಣಾನಿ ॥**

**ತಿಸ್ರೋ ಭೂಮೀರ್ಧಾರಯನ್ತ್ರೀಗ್^ಂ ರುತ ದ್ಯೂನ್ತ್ರೀಣಿ**

**ವ್ರತಾ ವಿದಥೇ ಅಂತರೇಷಾವ್ । ಋತೇನಾಽಽದಿತ್ಯಾ**

---

ಅಸುರ್ಯ್ರಮ್ । ಋತಾವಾನ ಇತ್ಯೃತ–ವಾನಃ । ಚಯಮಾನಾಃ । ಋಣಾನಿ ॥ **ತಿಸ್ರಃ** ।
ಭೂಮೀಃ । ಧಾರಯನ್ನ್ । ತ್ರೀನ್ । ಉತ । ದ್ಯೂನ್ । ತ್ರೀಣಿ । ವ್ರತಾ । ವಿದಥೇ ।
ಅಂತಃ । ಏಷಾಮ್ ॥ ಋತೇನ । ಆದಿತ್ಯಾಃ ।

---

| ಮಂತ್ರ | ವಿನಿಯೋಗ |
| --- | --- |
| **ತಿಸ್ರೋ .... ಚಾರು ॥** | ಧಾರಯದ್ವದಾದಿತ್ಯೇಷ್ಟಿಯ ಯಾಜ್ಯೆ |

---

**ಋತಾವಾನಃ** = ಸತ್ಯವಂತರಾದ; **ಋಣಾನಿ ಚಯಮಾನಾಃ** = [ಶತ್ರುರಾಜನ] ಸಾಲಗಳನ್ನು ಅಧಿಕಗೊಳಿಸಿ [ಅವನನ್ನು ನಾಶಪಡಿಸುವ] / **[ವೃಷ್ಟ್ಯಾದಿಗಳಿಂದ ಯಜಮಾನನನ್ನು ಧನವಂತನನ್ನಾಗಿ ಮಾಡಿ ಅವನ ಸಾಲಗಳನ್ನು ದೂರ ಮಾಡುವ];** **ಆದಿತ್ಯಾಸಃ ದೇವಾಃ** = ಪ್ರಕಾಶಮಾನರಾದ ಆದಿತ್ಯರು [ಪ್ರಸನ್ನರಾಗಿ ರಾಜ್ಯಭ್ರಷ್ಟನಿಗೆ ಮತ್ತೆ ರಾಜ್ಯವನ್ನು ಕೊಡಿಸಲಿ] ❖ **ಅರ್ಯಮನ್** = ಅರ್ಯಮನೇ! **ವರುಣ** = ವರುಣನೇ! **ಮಿತ್ರ** = ಮಿತ್ರನೇ! [ದ್ವಾದಶಾದಿತ್ಯರೇ!] [ನೀವು] **ತಿಸ್ರಃ ಭೂಮೀಃ ಧಾರಯನ್** = [ಸ್ವರ್ಗ, ಮರ್ತ್ಯಲೋಕ ಮತ್ತು ಪಾತಾಳಗಳೆಂಬ] ಮೂರು ಲೋಕಗಳನ್ನೂ ಧರಿಸಿರುತ್ತೀರಿ; **ಉತ** = ಮತ್ತು; **ತ್ರೀನ್ ದ್ಯೂನ್** = ಸೂರ್ಯ, ಚಂದ್ರ, ಅಗ್ನಿರೂಪ [ಪ್ರಕಾಶಕರೂ ಆಗಿದ್ದೀರಿ] / **ಬೇರೆಯ ಪ್ರಕಾಶಮಾನವಾದ ಲೋಕಗಳನ್ನೂ ಧರಿಸಿರುತ್ತೀರಿ ; ಏಷಾಮ್ ಅಂತಃ** = ಈ ಯಜಮಾನರ ಯಾಗಗಳ ಒಳಗಿರುವ; **ತ್ರೀಣಿ ವ್ರತಾ** = ಮನೋವಾಕ್ಕಾಯಕರ್ಮಗಳನ್ನು / ನಿತ್ಯನೈಮಿತ್ತಿಕ ಕರ್ಮಗಳನ್ನು; **ಋತೇನ ವಿದಥೇ** = ಸತ್ಯವಚನದಿಂದ ಧರಿಸಿರುತ್ತೀರಿ; (ಇಂತಹ)

---

ಯಜ್ಞವು ದೇವತೆಗಳ ತೃಪ್ತ್ಯರ್ಥವಾಗಿದೆ. ಓ! ಆದಿತ್ಯರೇ! ನೀವು ತೃಪ್ತರಾಗಿ

**ಮಹಿ ವೋ ಮಹಿತ್ವಂ ತದರ್ಯಮನ್ವರುಣ ಮಿತ್ರ ಚಾರು॥**

**ತ್ಯಾನ್ನು ಕ್ಷತ್ರಿಯಾಗ್‌ಂ ಅವ ಆದಿತ್ಯಾನ್,**

**ಯಾಚಿಷಾಮಹೇ। ಸುಮೃಡೀಕಾಗ್‌ಂ ಅಭಿಷ್ಟಯೇ॥**

---

ಮಹಿ । ವಃ । ಮಹಿತ್ವಮಿತಿ ಮಹಿ–ತ್ವಮ್ । ತತ್ । ಅರ್ಯಮನ್ನ್ । ವರುಣ । ಮಿತ್ರ । ಚಾರು ॥ **ತ್ಯಾನ್** । ನು । ಕ್ಷತ್ರಿಯಾನ್ । ಅವಃ । ಆದಿತ್ಯಾನ್ । ಯಾಚಿಷಾಮಹೇ ॥ ಸುಮೃಡೀಕಾನಿತಿ ಸು–ಮೃಡೀಕಾನ್ । ಅಭಿಷ್ಟಯೇ ॥

---

| ಮಂತ್ರ | ವಿನಿಯೋಗ |
|---|---|
| ತ್ಯಾನ್ನು....ಅಭಿಷ್ಟಯೇ ॥ | *ಅಪರುಧ್ಯಮಾನನಿಗೆ ವಿಹಿತವಾದ ಆದಿತ್ಯೇಷ್ಟಿಯ ಪುರೋನುವಾಕ್ಯೆ |

---

**ಆದಿತ್ಯಾಃ** = ದ್ವಾದಶಾದಿತ್ಯರೇ! **ವಃ** = ನಿಮ್ಮ; **ತತ್ ಮಹಿತ್ವಮ್** = ಆ ಮಹಿಮೆಯು; **ಮಹಿ** = ಅಧಿಕವಾಗಿದೆ; **ಚಾರು** = ಮನೋಹರವಾಗಿದೆ. ❖ (ವಯಮ್ = ನಾವು) **ಅಭಿಷ್ಟಯೇ** = ದೇವತೆಗಳನ್ನು ಒಲಿಸಿಕೊಳ್ಳಲು ಮಾಡಬೇಕಾದ ಇಷ್ಟಿಸಿದ್ಧಿಗಾಗಿ; **ಸುಮೃಡೀಕಾನ್** = ಚೆನ್ನಾಗಿ ಸುಖವನ್ನುಂಟುಮಾಡುವ; **ಕ್ಷತ್ರಿಯಾನ್ ನು** = ಕ್ಷತ್ರಿಯರಂತೆ ಬಲಿಷ್ಠರಾದ/ **ನಾಶದಿಂದ ರಕ್ಷಣೆ ನೀಡುವವರಾದ***; **ತ್ಯಾನ್** = ಆ ಪ್ರಸಿದ್ಧ ಮಹಿಮಾಶಾಲಿಗಳಾದ; **ಆದಿತ್ಯಾನ್** = ಆದಿತ್ಯರನ್ನು ; **ಅವಃ** = ರಕ್ಷಣೆಗಾಗಿ; **ಯಾಚಿಷಾಮಹೇ** = ಕೇಳಿಕೊಳ್ಳುತ್ತೇವೆ.

---

ನಮ್ಮನ್ನು ಸುಖಪಡಿಸಿರಿ. ನಿಮ್ಮ ಒಳ್ಳೆಯ ಬುದ್ಧಿಯು ನಮ್ಮ ಮೇಲೆ ಮತ್ತೆ ಮತ್ತೆ ಪ್ರವೃತ್ತವಾಗಲಿ. ನಮ್ಮ ಪಾಪಗಳನ್ನು ಹೋಗಲಾಡಿಸಲು ಪ್ರವೃತ್ತವಾಗಲಿ. ನಮ್ಮ ಸೇವೆಯನ್ನು ಮನಗಾಣಲಿ. ನೀವು ನಮಗೆ ಐಶ್ವರ್ಯವನ್ನು ಕೊಡಿರಿ.

---

* ರಾಜ್ಯಭ್ರಂಶಗೊಳಿಸಲು ಶತ್ರುಗಳ ಆಕ್ರಮಣಕ್ಕೆ ಒಳಗಾದವನು.

* **ಕ್ಷತಾತ್ ತ್ರಾಯತೇ ಇತಿ-ಕ್ಷತ್ರಿಯಃ ।**

# ನ ದಕ್ಷಿಣಾ ವಿಚಿಕಿತೇ ನ ಸವ್ಯಾ ನ ಪ್ರಾಚೀನಮಾದಿತ್ಯಾ ನೋತ ಪಶ್ಚಾ ।

ನ । ದಕ್ಷಿಣಾ । ವೀತಿ । ಚಿಕಿತೇ । ನ । ಸವ್ಯಾ । ನ । ಪ್ರಾಚೀನಮ್ । ಆದಿತ್ಯಾಃ । ನ । ಉತ । ಪಶ್ಚಾ ॥

| ಮಂತ್ರ | ವಿನಿಯೋಗ |
|---|---|
| ನ ದಕ್ಷಿಣಾ....ಅಶ್ಯಾಮ್ ॥ | ಆದಿತ್ಯೇಷ್ಟಿಯ ಯಾಜ್ಯಾನುವಾಕ್ಯೆ |

❖ **ವಸವಃ ಆದಿತ್ಯಾಃ** = ರಾಜ್ಯದಲ್ಲಿ ಸ್ಥಿರವಾಗಿ ವಾಸಗೊಳಿಸಲು ಸಮರ್ಥರಾದ ಆದಿತ್ಯರೇ! **ದಕ್ಷಿಣಾ ನ ವಿಚಿಕಿತೇ** = [ಶತ್ರುಗಳ ಆಕ್ರಮಣಕ್ಕೆ ಗುರಿಯಾದ] ನಾನು ಮೂಢನಾಗಿ ಬಲಗಡೆ ಯಾವುದೆಂದು ಚೆನ್ನಾಗಿ ತಿಳಿದಿಲ್ಲ; **ನ ಸವ್ಯಾ** = ಎಡಗಡೆ ಯಾವುದೆಂದು ತಿಳಿದಿಲ್ಲ; **ನ ಪ್ರಾಚೀನಮ್** = ಪೂರ್ವವನ್ನೂ ತಿಳಿದಿಲ್ಲ; **ಉತ ನ ಪಶ್ಚಾ** [ವಿಚಿಕಿತೇ] = ಪಶ್ಚಿಮವು ಯಾವುದೆಂದು ತಿಳಿದಿಲ್ಲ;

ದೇವತೆಗಳ ಅನುಗ್ರಹಬಲದಿಂದ ಯಾರಿಂದಲೂ ಹಿಂಸಿಸಲಾಗದ ಅನ್ನಸಮೃದ್ಧಿಯುಳ್ಳ , ಚಿರಜೀವಿಯಾದ, ಒಳ್ಳೆಯ ಪುತ್ರ – ಭೃತ್ಯಾದಿಗಳುಳ್ಳ ಈ ಯಜಮಾನನು ಶುದ್ಧವಾಗಿ ಈ ಯಾಗದಲ್ಲಿ ತೊಡಗಿರುತ್ತಾನೆ. ಹೀಗೆ ಆದಿತ್ಯರ ಪ್ರೀತ್ಯರ್ಥವಾಗಿ ಯಾಗಪ್ರವೃತ್ತನಾದ ಯಜಮಾನನನ್ನು ಶತ್ರುಗಳು ಸಮೀಪದಲ್ಲಿಯೂ ಹಿಂಸಿಸಲಾರರು. ದೂರದಿಂದಲೂ ನಾಶಗೊಳಿಸಲಾರರು. [ರಾಜ್ಯಭ್ರಷ್ಟನೂ, ಯಾರನ್ನು ಶತ್ರುಗಳು ರಾಜ್ಯಭ್ರಷ್ಟನನ್ನಾಗಿ ಮಾಡಬೇಕೆಂದು ಆಕ್ರಮಿಸಿರುತ್ತಾರೆಯೋ ಅವನು ಮಾಡಬೇಕಾದ ಇಷ್ಟಿಯಿದು].

ಆದಿತ್ಯರು ಜಗತ್ತನ್ನು ಧರಿಸಿದವರು. ವೃಷ್ಟ್ಯಾದಿಗಳನ್ನು ಸ್ಥಿರವಾಗಿರುವಂತೆ ಮಾಡಿ ಪೋಷಿಸತಕ್ಕವರು. ಅವಿಚ್ಛಿನ್ನವಾದ ಉದಯಾಸ್ತಗಳಿಂದ ಲೋಕವ್ಯವಹಾರಕ್ಕೆ ಕಾರಣರು. ಶತ್ರುರಾಜನಿಗೆ ಋಣವನ್ನು ಹೆಚ್ಚು ಮಾಡಿ, ಅವನು ಸೋಲುವಂತೆ ಮಾಡುವರು. ಅವರು ಯಜಮಾನನಿಗೆ ಹಿತವನ್ನು ಮಾಡಿ ರಕ್ಷಿಸಲಿ. ಮತ್ತೆ ರಾಜ್ಯವನ್ನು ಅವನು ಪಡೆಯುವಂತೆ ಮಾಡಲಿ.

ಎಲೈ ! ಅರ್ಯಮ, ಮಿತ್ರ, ವರುಣ ಮೊದಲಾದ ದ್ವಾದಶಾದಿತ್ಯರೇ! ನೀವು ಮೂರು ಲೋಕಗಳನ್ನೂ ವೃಷ್ಟ್ಯಾದಿಗಳಿಂದ ಧರಿಸಿರುತ್ತೀರಿ.

**ಪಾಕ್ಯಾ ಚಿದ್ವಸವೋ ಧೀರ್ಯಾ [ಚಿತ್ (ಶಿ)]**

**ಚಿದ್ಯುಷ್ಮಾನೀತೋ ಅಭಯಂ ಜ್ಯೋತಿರಶ್ಯಾವ್ ॥**

**ಆದಿತ್ಯಾನಾಮವಸಾ ನೂತನೇನ**

---

ಪಾಕ್ಯಾ । ಚಿತ್ । ವಸವಃ । ಧೀರ್ಯಾ । ಚಿತ್ । ಯುಷ್ಮಾನೀತಃ । ಅಭಯಮ್ । ಜ್ಯೋತಿಃ । ಅಶ್ಯಾಮ್ ॥ **ಆದಿತ್ಯಾನಾಮ್** । ಅವಸಾ । ನೂತನೇನ ।

---

| ಮಂತ್ರ | ವಿನಿಯೋಗ |
| --- | --- |
| **ಆದಿತ್ಯಾನಾಮ್....ಶ್ರೋಷಮಾಣಾಃ ॥** | ಆದಿತ್ಯೇಷ್ಟಿಯ ಇನ್ನೊಂದು ಯಾಜ್ಯಾನುವಾಕ್ಯೆ |

---

**ಪಾಕ್ಯಾ ಚಿತ್** = ಪರಿಪಕ್ವಬುದ್ಧಿಯನ್ನು ಹೊಂದಬೇಕಾಗಿರುವ; **ಧೀರ್ಯಾ ಚಿತ್** = ಹೆದರಿದವನಾಗಿ ಧೈರ್ಯವನ್ನು ಪಡೆಯಬೇಕಾದ ನಾನು; **ಯುಷ್ಮಾನೀತಃ** = ನಿಮ್ಮಿಂದ ಒಳ್ಳೆಯ ಮಾರ್ಗದಲ್ಲಿ ಒಯ್ಯಲ್ಪಟ್ಟವನಾಗಿ; **ಅಭಯಮ್ ಜ್ಯೋತಿಃ** = ಭಯರಹಿತ ವಾದ ವಿವೇಕವನ್ನೂ, ಪ್ರಜಾನುರಾಗವನ್ನೂ ; **ಅಶ್ಯಾಮ್** = ಹೊಂದುವೆನು. ❖ [ನಾವು] **ಆದಿತ್ಯಾನಾಮ್** = ಆದಿತ್ಯದೇವತೆಗಳ ; **ನೂತನೇನ** = ಹೊಸದಾದ;

---

ಸೂರ್ಯ, ಚಂದ್ರ, ಅಗ್ನಿ ಮೊದಲಾದ ಪ್ರಕಾಶಕರೂ ನೀವೇ. ಮನೋವಾಕ್ಕಾಯ ಕರ್ಮಗಳಿಗೂ, ನಿತ್ಯ–ನೈಮಿತ್ತಿಕ – ಕಾಮ್ಯಕರ್ಮಗಳಿಗೂ ಪ್ರವರ್ತಕರೇ ನೀವು. ಈ ಯಜಮಾನರ ಯಜ್ಞಕರ್ಮಗಳ ಒಳಗೆ ಸನ್ನಿಹಿತರಾಗಿರಿ. ನಿಮ್ಮ ಮಹಿಮೆಯು ಅಪರಿಮಿತ ವಾದುದು. ಮನೋಹರವಾದುದು. ನೀವು ಸತ್ಯವಚನರು. ನಿಮ್ಮ ಅನುಗ್ರಹದಿಂದ ಯಜಮಾನನು ರಾಜ್ಯವನ್ನು ಪಡೆಯಲಿ. ಮತ್ತೆ ರಾಜ್ಯಭ್ರಷ್ಟನಾಗದಿರಲಿ.

ರಾಜ್ಯದಿಂದ ಭ್ರಷ್ಟನನ್ನಾಗಿ ಮಾಡಲು ಶತ್ರುಗಳು ಯಾರನ್ನು ಆಕ್ರಮಿಸಿರು ತ್ತಾರೆಯೋ ಅವನು ಆದಿತ್ಯೇಷ್ಟಿ, ವಾರುಣೇಷ್ಟಿಗಳನ್ನು ಮಾಡಬೇಕು. ಇದರಲ್ಲಿ ಆದಿತ್ಯೇಷ್ಟಿಯನ್ನು ಮಾಡಲು ಚರುವು ಹವಿಸ್ಸಾಗಿರುತ್ತದೆ.

**ಸಕ್ಷೀಮಹಿ ಶರ್ಮಣಾ ಶಂತಮೇನ। ಅನಾಗಾಸ್ತ್ವೇ ಅದಿತಿತ್ವೇ ತುರಾಸ ಇಮಂ ಯಜ್ಞಂ ದಧತು ಶ್ರೋಷಮಾಣಾಃ।**

---

ಸಕ್ಷೀಮಹಿ। ಶರ್ಮಣಾ। ಶಂತಮೇನೇತಿ ಶಮ್‌–ತಮೇನ॥ ಅನಾಗಾಸ್ತ್ವ ಇತ್ಯನಾಗಾಃ–ತ್ವೇ। ಅದಿತಿತ್ವ ಇತ್ಯದಿತಿ–ತ್ವೇ। ತುರಾಸಃ। ಇಮಮ್‌। ಯಜ್ಞಮ್‌। ದಧತು। ಶ್ರೋಷಮಾಣಾಃ॥

---

**ಶಂತಮೇನ ಅವಸಾ** = [ಉಪದ್ರವಗಳಿಲ್ಲದಿರುವುದರಿಂದ] ಅತಿಶಾಂತವಾದ; **ಶರ್ಮಣಾ** = ಸುಖದಿಂದ; **ಸಕ್ಷೀಮಹಿ** = ಕೂಡಿದವರಾಗುತ್ತೇವೆ. [ಆ ಆದಿತ್ಯರು] **ಅನಾಗಾಸ್ತ್ವೇ** [ನಿಮಿತ್ತೇ] = ನಮ್ಮ ನಿರಪರಾಧಿತ್ವನಿಮಿತ್ತವಾಗಿ; **ಅದಿತಿತ್ವೇ** = ಅಖಂಡಿತವಾದ ಭಕ್ತಿಯ ನಿಮಿತ್ತವಾಗಿ; **ತುರಾಸಃ** = ತ್ವರೆ ಪಡುವವರಾಗಿ; **ಶ್ರೋಷಮಾಣಾಃ** = ನಮ್ಮ ಸ್ತುತಿಯನ್ನು ಕೇಳುವವರಾಗಿ ; **ಇಮಮ್ ಯಜ್ಞಮ್ ದಧತು** = ನಮ್ಮ ಯಜ್ಞವನ್ನು ಫಲಪ್ರದವಾಗುವಂತೆ ಮಾಡಲಿ.

---

ಇದಕ್ಕಾಗಿ ವಿಶೇಷವನ್ನು ಹೇಳಲಾಗಿದೆ. ಸಭೆಯ ಹೊರಗಡೆ ರಾಜನಿಗೆ ಗ್ರಾಮಹಿತವನ್ನು ತಿಳಿಸುವ ಮಂತ್ರಿಯ ಮನೆಯಿಂದ ಬಿಳಿಯ ಮತ್ತು ಕರಿಯ ಬಣ್ಣದ ಭತ್ತವನ್ನು ತರಬೇಕು. ಅದರಲ್ಲಿ ಬಿಳಿಯ ಬಣ್ಣದ ಭತ್ತದಿಂದ ಚರುವನ್ನು ಶ್ರಪಣ ಮಾಡಿ ಈ ಇಷ್ಟಿಯನ್ನು ಮಾಡಬೇಕು.

ಯಜಮಾನರಾದ ನಾವು ದೇವತೆಗಳ ಅನುಗ್ರಹದಿಂದ ಯಾಗವನ್ನು ಪೂರ್ಣಗೊಳಿಸಿ ಫಲವನ್ನು ಪಡೆಯಲೂ – ಸುಖವನ್ನು ಚೆನ್ನಾಗಿ ಕೊಡುವ, ಕ್ಷತ್ರಿಯರಂತೆ ರಕ್ಷಿಸುವ, ಅತಿ ಪ್ರಸಿದ್ಧರಾದ ಆದಿತ್ಯರನ್ನು – ರಕ್ಷಣೆಯಾಗಿಯೂ ಪ್ರಾರ್ಥಿಸುತ್ತೇವೆ.

ಸ್ಥಿರನಿವಾಸವನ್ನು ಕೊಡಬಲ್ಲ ಆದಿತ್ಯರೇ! ಶತ್ರುಗಳ ಆಕ್ರಮಣಕ್ಕೆ ಗುರಿಯಾದ ನಾನು ಕರ್ತವ್ಯಮೂಢನಾಗಿ ಇದು ಬಲ, ಇದು ಎಡ, ಇದು ಪೂರ್ವ, ಇದು ಪಶ್ಚಿಮ ಎಂದು ತಿಳಿಯಲು ಅಸಮರ್ಥನಾಗಿರುತ್ತೇನೆ. ಪರಿಪಕ್ವವಾದ ಬುದ್ಧಿಯನ್ನು ಹೊಂದಬೇಕಾದ

**ಇಮಂ ಮೇ ವರುಣ ಶ್ರುಧೀ ಹವಮದ್ಯಾ ಚ ಮೃಡಯ । ತ್ವಾಮವಸ್ಯುರಾಚಕೇ ॥ ತತ್ತ್ವಾಯಾಮಿ ಬ್ರಹ್ಮಣಾ ವಂದಮಾನಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ ।**

---

**ಇಮಮ್** । ಮೇ । ವರುಣ । ಶ್ರುಧಿ । ಹವಮ್ । ಅದ್ಯ । ಚ । ಮೃಡಯ ॥ ತ್ವಾಮ್ । ಅವಸ್ಯುಃ । ಆ । ಚಕೇ ॥ **ತತ್** । ತ್ವಾ । ಯಾಮಿ । ಬ್ರಹ್ಮಣಾ । ವಂದಮಾನಃ । ತತ್ । ಆ । ಶಾಸ್ತೇ । ಯಜಮಾನಃ । ಹವಿರ್ಭಿರಿತಿ ಹವಿಃ–ಭಿಃ ॥

---

| ಮಂತ್ರ | ವಿನಿಯೋಗ |
|---|---|
| **ಇಮಮ್ .... ಆ ಚಕೇ ॥** | ಅಪರಾಧ್ಯಮಾನನಿಗೆ ವಿಹಿತವಾದ ವಾರುಣೇಷ್ಟಿಯ ಪುರೋನುವಾಕ್ಯೆ |
| **ತತ್ತ್ವಾ ....ಪ್ರಮೋಷೀಃ ॥** | ವಾರುಣೇಷ್ಟಿಯ ಯಾಜ್ಯಾನುವಾಕ್ಯೆ |

---

❖ **ವರುಣ** = ಎಲೈ ! ವರುಣದೇವನೇ! **ಇಮಮ್ ಮೇ ಹವಮ್** = ಈ ನನ್ನ ಆಹ್ವಾನವನ್ನು ; **ಶ್ರುಧಿ** = ಕೇಳು; **ಅದ್ಯ ಚ ಮೃಡಯ** = ಈಗಲೇ ನಮ್ಮನ್ನು ಸುಖಪಡಿಸು. [ನಾನು] **ಅವಸ್ಯುಃ** = ರಕ್ಷಣೆಯನ್ನು ಬಯಸುವವನಾಗಿ; **ತ್ವಾಮ್** = ನಿನ್ನನ್ನು; **ಆ ಚಕೇ** = ಅಧಿಕವಾಗಿ ಪ್ರಾರ್ಥಿಸುವೆನು. ❖ **ಬ್ರಹ್ಮಣಾ ವಂದಮಾನಃ** = ಮಂತ್ರದಿಂದ ಸ್ತುತಿಸುತ್ತಾ; **ತತ್** = ಆ ರಕ್ಷಣೆಗಾಗಿ; **ತ್ವಾ ಯಾಮಿ** = ನಿನ್ನನ್ನು ಆಶ್ರಯಿಸುತ್ತೇನೆ. **ಯಜಮಾನಃ** = ಯಜಮಾನನು; **ಹವಿರ್ಭಿಃ** = ಹವಿಸ್ಸುಗಳಿಂದ; **ತತ್** = ಆ ರಕ್ಷಣೆಯನ್ನು ; **ಆಶಾಸ್ತೇ** = ಕೋರುತ್ತಾನೆ.

---

ಹುಡುಗನಂತೆ ಅಂಜುಬುರುಕನಾಗಿ, ಧೈರ್ಯವನ್ನು ತಾಳಬೇಕಾದ ಹುಡುಗನಂತೆಯೂ ಇದ್ದೇನೆ. ನನ್ನನ್ನು ನೀವು ಒಳ್ಳೆಯ ಮಾರ್ಗದಲ್ಲಿ ನಡೆಸಿರಿ. ನಾನು ನಿಮ್ಮ ಅನುಗ್ರಹದಿಂದ ಅಭಯವನ್ನು ಪಡೆದು ವಿವೇಕದಿಂದ ಪ್ರಜಾಸುಖಾಗವನ್ನು ಗಳಿಸುವಂತಾಗಲಿ.

ಆದಿತ್ಯದೇವತೆಗಳು ನಮಗೆ ನೂತನವಾದ ರಕ್ಷಣೆಯನ್ನು ಕೊಟ್ಟಿರುತ್ತಾರೆ. ಇದು ಉಪದ್ರವಗಳಿಲ್ಲದೆ ಅತಿಶಾಂತವಾದ ಸುಖವನ್ನು ಕೊಡುವಂತಹದಾಗಿದೆ. ನಾವು ಹೀಗೆ

# ಅಹೇಡಮಾನೋ ವರುಣೇಹ ಬೋಧ್ಯುರುಶಗ್ಂಸ ಮಾ ನ ಆಯುಃ ಪ್ರಮೋಷೀಃ ॥ ೬೫– 11॥

[ನಾಮಾಗ್ನಿಸ್ಸಗ್ಂ ಶವಸೋ ರಕ್ಷಮಾಣಾ ಧೀಯಾಚಿದೇಕಾನ್ನ ಪಂಚಾಶಚ್ಚ ।]

---

ಅಹೇಡಮಾನಃ । ವರುಣ । ಇಹ । ಬೋಧಿ । ಉರುಶಗ್ಂಸೇತ್ಯುರು–ಶಗ್ಂಸ । ಮಾ । ನಃ । ಆಯುಃ । ಪ್ರೇತಿ । ಮೋಷೀಃ ॥

---

**ವರುಣ** = ಓ! ವರುಣದೇವನೇ! **ಅಹೇಡಮಾನಃ** = ಕೋಪವಿಲ್ಲದವನಾಗಿ; **ಇಹ** = ಈ ಯಜ್ಞಕರ್ಮದಲ್ಲಿ; **ಬೋಧಿ** = [ನಮ್ಮ ಬಿನ್ನಹವನ್ನು] ತಿಳಿದುಕೋ. **ಉರುಶಗ್ಂಸ** = ಎಲ್ಲರಿಂದಲೂ ಹೆಚ್ಚಾಗಿ ಹೊಗಳಲ್ಪಡುವವನೇ! **ನಃ ಆಯುಃ** = ನಮ್ಮ ಆಯುಸ್ಸನ್ನು; **ಮಾ ಪ್ರಮೋಷೀಃ** = ಕಡಿಮೆ ಮಾಡಬೇಡ.

---

ರಕ್ಷಣೆಯಿಂದ ಯುಕ್ತರಾಗಿ ಆದಿತ್ಯರನ್ನು ಇಷ್ಟಾರ್ಥಸಿದ್ಧಿಗಾಗಿ ಪ್ರಾರ್ಥಿಸುತ್ತೇವೆ. ಅವರು ನಮ್ಮ ನಿರಪರಾಧಿತ್ವವನ್ನೂ , ಅವಿಚ್ಛಿನ್ನವಾದ ಭಕ್ತಿಯನ್ನೂ ಮನಗಾಣಲಿ. ತ್ವರೆಯಿಂದ ನಮ್ಮ ಯಜ್ಞವು ಸಫಲವಾಗುವಂತೆ ಮಾಡಲಿ. ಶತ್ರುಭಯವನ್ನು ದೂರ ಮಾಡಲಿ.

(ರಾಜ್ಯಭ್ರಂಶವನ್ನು ಮಾಡಲು ಯಾರನ್ನು ಶತ್ರುಗಳು ಆಕ್ರಮಿಸಿರುತ್ತಾರೆಯೋ ಅವನು ವಾರುಣೇಷ್ಟಿಯನ್ನು ಅನುಷ್ಠಿಸಬೇಕು. ಇದರಲ್ಲಿ ಚರುವು ಹವಿಸ್ಸಾಗಿರುತ್ತದೆ. ಇದಕ್ಕಾಗಿ ವಿಶೇಷವನ್ನು ಹೇಳಲಾಗಿದೆ. ಮಂತ್ರಿಯ ಮನೆಯಿಂದ ತರುವ ಕಪ್ಪು ಬಣ್ಣದ ಬತ್ತದಿಂದ ಆದ ಚರುವನ್ನು ಶ್ರಪಣ ಮಾಡಿ ಈ ಇಷ್ಟಿಯನ್ನು ಅನುಷ್ಠಿಸಬೇಕು.)

ಎಲೈ! ವರುಣದೇವನೇ! ನಮ್ಮ ಆಹ್ವಾನವನ್ನು ಕೇಳು. ನಾವು ನೀಡುವ ಹವಿಸ್ಸನ್ನು ಸ್ವೀಕರಿಸಿ, ಈಗಲೇ ನಮಗೆ ಸುಖವನ್ನು ಕೊಡು. ನಾನು ರಕ್ಷಣೆಗಾಗಿ ನಿನ್ನನ್ನು ಪ್ರಾರ್ಥಿಸುತ್ತೇನೆ.

ವಾಯವ್ಯಂ ಪ್ರಜಾಪತಿಸ್ತ್ವಾ ವರುಣಂ ದೇವಾಸುರಾ ಏಷ್ವಸಾವಾದಿತ್ಯೋ ದಶರ್ಷಭಾಮಿಂದ್ರೋ ವಲಸ್ಯ ಬಾರ್ಹಸ್ಪತ್ಯಂ ವಷಟ್ಕಾರೋಽಸೌ ಸೌರೀಂ ವರುಣ ಮಾಶ್ವಿನಮಿಂದ್ರಂ ವೋ ನರ ಏಕಾದಶ ||11||

ವಾಯವ್ಯಮಾಗ್ನೇಯಂ ಕೃಷ್ಣಗ್ರೀವೀಮಸಾವಾದಿತ್ಯೋ ವಾ ಅಹೋರಾತ್ರಾಣಿ ವಷಟ್ಕಾರಃ ಪ್ರಜನಯಿತಾ ಹುವೇ ತುರಾಣಾಂ ಪಂಚಷಷ್ಟಿಃ ||65||

ವಾಯವ್ಯಂ ಪ್ರವೋಷೀಃ ||

ಹರಿಃ ಓಂ

ಶ್ರೀ ಕೃಷ್ಣಾರ್ಪಣಮಸ್ತು

ಇತಿ ದ್ವಿತೀಯಕಾಂಡೇ ಪ್ರಥಮಃ ಪ್ರಶ್ನಃ

— ಓಂ ತತ್ಸತ್ —

---

ಮಂತ್ರಗಳಿಂದ ಸ್ತುತಿಸುತ್ತಾ ರಕ್ಷಣೆಗಾಗಿ ನಿನ್ನ ಮೊರೆ ಹೋಗುತ್ತೇವೆ. ಯಜಮಾನನು ಹವಿಸ್ಸುಗಳನ್ನು ಸಮರ್ಪಿಸಿ, ರಕ್ಷಣೆಗಾಗಿಯೂ ಪ್ರಾರ್ಥಿಸುತ್ತಾನೆ. ನಿನ್ನನ್ನು ಎಲ್ಲರೂ ಹೊಗಳುತ್ತಾರೆ. ನೀನು ಈ ಯಜ್ಞದಲ್ಲಿ ನಮ್ಮ ಪ್ರಾರ್ಥನೆಯನ್ನು ಮನಸ್ಸಿಗೆ ತಂದುಕೋ. ನಮ್ಮ ಆಯುಸ್ಸು ಕ್ಷೀಣವಾಗದಂತೆ ಮಾಡು. ಪ್ರಜಾನುರಾಗವನ್ನೂ, ರಾಜ್ಯದ ಒಡೆತನ ವನ್ನೂ ಸ್ಥಿರವಾಗಿರುವಂತೆ ಮಾಡು.

ಈ ಆದಿತ್ಯೇಷ್ಟಿ ಮತ್ತು ವಾರುಣೇಷ್ಟಿಗಳ ಅನುಷ್ಠಾನದಿಂದ ಆದಿತ್ಯನು ಪ್ರಜಾನುರಾಗವನ್ನು ಗಳಿಸಿಕೊಡುತ್ತಾನೆ. ವರುಣದೇವನು ರಾಷ್ಟ್ರಾಧಿಪತ್ಯವನ್ನು ಕೊಟ್ಟು ಶತ್ರುಭಯವನ್ನು ಹೋಗಲಾಡಿಸುತ್ತಾನೆ.

* * *

## ವಿನಿಯೋಗಸಂಗ್ರಹ

ಐಂದ್ರಯಾಗೇ ತ್ವಿಂದ್ರಮಿಂದ್ರಂ[1-2] ಮರುದ್ವಾನ್ಯವೇತಿ[3-4] ಮಾರುತೇ ।
[5]ಭರೇಷು ವೈಶ್ವದೇವೇಂದ್ರೇ ಪ್ರಿಯಾ ಪ್ರೈಯಂಗವೇ ಚರೌ ॥
ಅಗ್ನಿರ್ವಸುಮದಾದೀನಾಂ ಚತುರ್ಣಾಂ ಹಿ ಸಮೂಹಕೇ ।
ಯಥಾ ವಿಕಲ್ಪಿತಾ ಯಾಜ್ಯಾ ಕುತ್ರ ಸ್ವಿಷ್ಟಕೃತೋ ದ್ವಯಮ್ ।
ಯಜ್ಞೋ ಭುವದ್ವತಿ ಚರೌ ಧಾರಯನ್ ಧಾರಯದ್ವತಿ ॥
ತ್ಯಾನ್ನು ತ್ರಯಂ ಶುಕ್ಲಚರಾವಿಮಂ ಕೃಷ್ಣಚರೌ ಯಥಾ ।
ಏಕಾದಶೇಽನುವಾಕೇಽಸ್ಮಿನ್ ಮಂತ್ರಾ ದ್ವಾವಿಂಶತಿರೀರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ – 22

* * *



# ತೈತ್ತಿರೀಯ ಸಂಹಿತಾ

## ದ್ವಿತೀಯಕಾಂಡಃ ದ್ವಿತೀಯಃ ಪ್ರಶ್ನಃ

**ಹರಿಃ ಓಂ**

ಪ್ರಜಾಪತಿಃ ಪ್ರಜಾ ಅಸೃಜತ ತಾಸ್ಸೃಷ್ಟಾ

ಇಂದ್ರಾಗ್ನೀ ಅಪಾಗೂಹತಾಗ್ಂ

---

**ಪ್ರಜಾಪತಿರಿತಿ ಪ್ರಜಾ–ಪತಿಃ** । ಪ್ರಜಾ ಇತಿ ಪ್ರ–ಜಾಃ । ಅಸೃಜತ । ತಾಃ । ಸೃಷ್ಟಾಃ ।

ಇಂದ್ರಾಗ್ನೀ ಇತೀಂದ್ರ–ಅಗ್ನೀ । ಅಪೇತಿ । ಅಗೂಹತಾಮ್ ।

---

**ದ್ವಿತೀಯಕಾಂಡದ ಮೊದಲನೆಯ ಪ್ರಪಾಠಕದಲ್ಲಿ ಕಾಮ್ಯಪಶುಗಳು ಹೇಳಲ್ಪಟ್ಟಿವೆ. ಎರಡನೆಯ, ಮೂರನೆಯ ಮತ್ತು ನಾಲ್ಕನೆಯ ಪ್ರಪಾಠಕಗಳಲ್ಲಿ ಕಾಮ್ಯೇಷ್ಟಿಗಳೇ ಅಧಿಕವಾಗಿ ಹೇಳಲ್ಪಟ್ಟಿವೆ.**

ಆದ್ಯೇ ಪ್ರಪಾಠಕೇ ಕಾಮ್ಯಾಃ ಪಶವಃ ಸಮುದೀರಿತಾಃ ।
ದ್ವಿತೀಯಾದಿತ್ರಯೇ ಕಾಮ್ಯಾ ವಕ್ತವ್ಯಾ ಇಷ್ಟಯೋಽಖಿಲಾಃ ॥

**ನೈಮಿತ್ತಿಕವಾಗಿ ಇರುವ ಜಾತೇಷ್ಟ್ಯಾದಿಗಳೂ ಕೆಲವು ಹೇಳಲ್ಪಟ್ಟಿವೆ.**

---

| **ಬ್ರಾಹ್ಮಣಭಾಗ** | **ವಿವರಣೆ** |
| --- | --- |
| ಪ್ರಜಾಪತಿಃ ಪ್ರಜಾಃ ಅಸೃಜತ | ಪ್ರಜಾಪತಿಬ್ರಹ್ಮನು ಪ್ರಜೆಗಳನ್ನು ಸೃಷ್ಟಿಸಿದನು. |
| ಸೃಷ್ಟಾಃ ತಾಃ | [ಬ್ರಹ್ಮನು] ಸೃಷ್ಟಿಸಿದ ಆ ಪ್ರಜೆಗಳನ್ನು |
| ಇಂದ್ರಾಗ್ನೀ ಅಪಾಗೂಹತಾಮ್ | ಇಂದ್ರಾಗ್ನಿಗಳು ಬಚ್ಚಿಟ್ಟರು. |

---

**ತಾತ್ಪರ್ಯ** : ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿದನು. ಆ ಪ್ರಜೆಗಳನ್ನು ಇಂದ್ರಾಗ್ನಿಗಳು ಬಚ್ಚಿಟ್ಟರು.

ಸೋಽಚಾಯತ್ಪ್ರಜಾಪತಿರಿಂದ್ರಾಗ್ನೀ ವೈ ಮೇ ಪ್ರಜಾ
ಅಪಾಘುಕ್ಷತಾಮಿತಿ ಸ ಏತಮೈಂದ್ರಾಗ್ನಮೇಕಾದಶ
ಕಪಾಲಮಪಶ್ಯತ್ತಂ ನಿರವಪತ್ತಾವಸ್ಮೈ

---

ಸಃ। ಅಚಾಯತ್। ಪ್ರಜಾಪತಿರಿತಿ ಪ್ರಜಾ–ಪತಿಃ। ಇಂದ್ರಾಗ್ನೀ ಇತೀಂದ್ರ–ಅಗ್ನೀ। ವೈ। ಮೇ। ಪ್ರಜಾ ಇತಿ ಪ್ರ–ಜಾಃ। ಅಪೇತಿ। ಅಘುಕ್ಷತಾಮ್। ಇತಿ। ಸಃ। ಏತಮ್। ಐಂದ್ರಾಗ್ನಮಿತ್ಯೈಂದ್ರ–ಅಗ್ನಮ್। ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್। ಅಪಶ್ಯತ್। ತಮ್। ನಿರಿತಿ। ಅವಪತ್। ತೌ। ಅಸ್ಮೈ।

---

| | |
|---|---|
| ಸಃ ಪ್ರಜಾಪತಿಃ | ಆ ಪ್ರಜಾಪತಿಯು |
| ಇಂದ್ರಾಗ್ನೀ ವೈ ಮೇ ಪ್ರಜಾಃ ಅಪಾಘುಕ್ಷತಾಮ್ ಇತಿ ಅಚಾಯತ್ | ಇಂದ್ರಾಗ್ನಿಗಳು ತನ್ನ ಪ್ರಜೆಗಳನ್ನು ಬಚ್ಚಿಟ್ಟರೆಂಬುದಾಗಿ ತಿಳಿದನು. |
| ಸಃ ಏತಮ್ ಐಂದ್ರಾಗ್ನಮ್ ಏಕಾದಶಕಪಾಲಮ್ ಅಪಶ್ಯತ್ | [ಅವನು ಪರಿಹಾರೋಪಾಯವನ್ನಾಗಿ] ಇಂದ್ರಾಗ್ನಿದೇವತಾಕವಾದ ಏಕಾದಶ ಕಪಾಲಪುರೋಡಾಶಯಾಗವನ್ನು ತಿಳಿದನು. |
| ತಮ್ ನಿರವಪತ್ | ಬಳಿಕ ಹವಿರ್ನಿರ್ವಾಪವನ್ನು ಮಾಡಿ ಆ ಯಾಗವನ್ನು ಮಾಡಿದನು. |
| ತೌ ಅಸ್ಮೈ | ಆ ಇಂದ್ರಾಗ್ನಿಗಳು ಪ್ರಜಾಪತಿಗೆ |

---

ಪ್ರಜಾಪತಿಯು ಇಂದ್ರಾಗ್ನಿಗಳು ಪ್ರಜೆಗಳನ್ನು ಮುಚ್ಚಿಟ್ಟಿರುವರೆಂದು ತಿಳಿದನು. ಇಂದ್ರಾಗ್ನಿಗಳನ್ನು ತೃಪ್ತಿಪಡಿಸಲು ಏಕಾದಶಕಪಾಲಪುರೋಡಾಶಯಾಗವನ್ನು ಸಾಧನವನ್ನಾಗಿ ತಿಳಿದನು ಮತ್ತು ಆ ಯಾಗವನ್ನು ಅನುಷ್ಠಿಸಿದನು. ಇದರಿಂದ ತೃಪ್ತರಾದ ಇಂದ್ರಾಗ್ನಿಗಳು ಈ ಪ್ರಜಾಪತಿಗೆ ಪ್ರಜೆಗಳನ್ನು ಸಮರ್ಪಿಸಿದರು.

ಪ್ರಜಾಃ ಪ್ರಾಸಾಧಯತಾಮಿಂದ್ರಾಗ್ನೀ ವಾ ಏತಸ್ಯ
ಪ್ರಜಾಮಪಗೂಹತೋ ಯೋಽಲಂ ಪ್ರಜಾಯ್ಯೈ
ಸನ್ಪ್ರಜಾಂ ನ ವಿಂದತ ಐಂದ್ರಾಗ್ನಮೇಕಾದಶಕಪಾಲಂ
ನಿರ್ವಪೇತ್ಪ್ರಜಾಕಾಮಃ

---

ಪ್ರಜಾ ಇತಿ ಪ್ರ–ಜಾಃ। ಪ್ರೇತಿ। ಅಸಾಧಯತಾಮ್। ಇಂದ್ರಾಗ್ನೀ ಇತೀಂದ್ರ–ಅಗ್ನೀ। ವೈ। ಏತಸ್ಯ। ಪ್ರಜಾಮಿತಿ ಪ್ರ–ಜಾಮ್। ಅಪೇತಿ। ಗೂಹತಃ। ಯಃ। ಅಲಮ್। ಪ್ರಜಾಯಾ ಇತಿ ಪ್ರ–ಜಾಯ್ಯೈ। ಸನ್ತ್। ಪ್ರಜಾಮಿತಿ ಪ್ರ–ಜಾಮ್। ನ। ವಿಂದತೇ। ಐಂದ್ರಾಗ್ನಮಿತ್ಯೈಂದ್ರ–ಅಗ್ನಮ್। ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್। ನಿರಿತಿ। ವಪೇತ್। ಪ್ರಜಾಕಾಮ ಇತಿ ಪ್ರಜಾ–ಕಾಮಃ।

---

| | |
|---|---|
| ಪ್ರಜಾಃ ಪ್ರಾಸಾಧಯತಾಮ್ | ಪ್ರಜೆಗಳನ್ನು ಸಮರ್ಪಿಸಿದರು. |

**ಪುರೋಡಾಶಯಾಗದ ಪ್ರಶಂಸೆ**

| | |
|---|---|
| ಯಃ ಪ್ರಜಾಯ್ಯೈ ಅಲಂ ಸನ್ ಪ್ರಜಾಮ್ ನ ವಿಂದತೇ | ಯಾವನು ಮಕ್ಕಳನ್ನು ಪಡೆಯಲು ಸಮರ್ಥನಾಗಿದ್ದರೂ ಮಕ್ಕಳನ್ನು ಪಡೆಯುವುದಿಲ್ಲವೋ |
| ಏತಸ್ಯ ಪ್ರಜಾಮ್ ಇಂದ್ರಾಗ್ನೀ ವೈ ಅಪಗೂಹತಃ | ಈತನಿಗೆ ಮಕ್ಕಳಾಗದಂತೆ ಇಂದ್ರಾಗ್ನಿದೇವತೆಗಳು ಪ್ರತಿಬಂಧಕರಾಗಿರುತ್ತಾರೆ. |

**ಐಂದ್ರಾಗ್ನಯಾಗದ ವಿಧಿ; ಪ್ರಶಂಸೆ**

| | |
|---|---|
| ಪ್ರಜಾಕಾಮಃ ಐಂದ್ರಾಗ್ನಮ್ ಏಕಾದಶಕಪಾಲಮ್ ನಿರ್ವಪೇತ್ | ಮಕ್ಕಳನ್ನು ಬಯಸುವವನು ಇಂದ್ರಾಗ್ನಿದೇವತೆಗಳಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು. [ವಿಧಿ] |

ಇಂದ್ರಾಗ್ನೀ [೧] ಏವ ಸ್ವೇನ ಭಾಗಧೇಯೇನೋಪ-

ಧಾವತಿ ತಾವೇವಾಸ್ಮೈ ಪ್ರಜಾಂ ಪ್ರಸಾಧಯತೋ

ವಿಂದತೇ ಪ್ರಜಾಮೈಂದ್ರಾಗ್ನಮೇಕಾದಶಕಪಾಲಂ

ನಿರ್ವಪೇತ್ಸ್ಪರ್ಧಮಾನಃ ಕ್ಷೇತ್ರೇ ವಾ

---

ಇಂದ್ರಾಗ್ನೀ ಇತೀಂದ್ರ-ಅಗ್ನೀ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ತೌ । ಏವ । ಅಸ್ಮೈ । ಪ್ರಜಾಮಿತಿ ಪ್ರ-ಜಾಮ್ । ಪ್ರೇತಿ । ಸಾಧಯತಃ । ವಿಂದತೇ । ಪ್ರಜಾಮಿತಿ ಪ್ರ-ಜಾಮ್ । **ಐಂದ್ರಾಗ್ನಮಿತ್ಯೈಂದ್ರ-ಅಗ್ನಮ್** । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ । ನಿರಿತಿ । ವಪೇತ್ । ಸ್ಪರ್ಧಮಾನಃ । ಕ್ಷೇತ್ರೇ । ವಾ ।

---

| | |
|---|---|
| ಇಂದ್ರಾಗ್ನೀ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಯಜಮಾನನು ಈ ಇಷ್ಟಿಯಿಂದ] ಇಂದ್ರಾಗ್ನಿದೇವತೆಗಳಿಗೆ ಅವರ ಭಾಗವನ್ನಿತ್ತು ಸೇವಿಸಿದವನಾಗುತ್ತಾನೆ. |
| ತೌ ಏವ ಅಸ್ಮೈ ಪ್ರಜಾಮ್ ಪ್ರಸಾಧಯತಃ | ಆ ಇಂದ್ರಾಗ್ನಿಗಳೇ ಈ ಯಜಮಾನನಿಗೆ ಪ್ರಜಾಸಂಪತ್ತಿಯನ್ನು ಕರುಣಿಸುತ್ತಾರೆ. |
| ಪ್ರಜಾಮ್ ವಿಂದತೇ | [ಯಜಮಾನನು] ಮಕ್ಕಳನ್ನು ಪಡೆಯುತ್ತಾನೆ. |

**ಇತರರೊಡನೆ ಸ್ಪರ್ಧಿಸಿ ಗೆಲ್ಲಬೇಕೆನ್ನುವವನಿಗೆ ವಿಹಿತವಾಗಿರುವ ಐಂದ್ರಾಗ್ನಯಾಗವಿಧಿ; ಪ್ರಶಂಸೆ**

| | |
|---|---|
| ಕ್ಷೇತ್ರೇ ವಾ ಸಜಾತೇಷು ವಾ ಸ್ಪರ್ಧಮಾನಃ ಐಂದ್ರಾಗ್ನಮ್ ಏಕಾದಶಕಪಾಲಮ್ ನಿರ್ವಪೇತ್ | ಭೂಮಿಯ ವಿಷಯದಲ್ಲಿಯಾಗಲೀ, ಸಮಾನರಾದ ಜ್ಞಾತಿಗಳಲ್ಲಿಯಾಗಲೀ ಸ್ಪರ್ಧಿಸಿ ಗೆಲ್ಲಬೇಕೆಂದಿರುವವನು ಇಂದ್ರಾಗ್ನಿ ದೇವತೆಗಳಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. |

ಸಜಾತೇಷು ವೇಂದ್ರಾಗ್ನೀ ಏವ ಸ್ವೇನ ಭಾಗಧೇಯೇನೋಪ

ಧಾವತಿ ತಾಭ್ಯಾಮೇವೇಂದ್ರಿಯಂ ವೀರ್ಯಂ ಭ್ರಾತೃವ್ಯಸ್ಯ

ವೃಂಕ್ತೇ ವಿ ಪಾಪ್ಮನಾ ಭ್ರಾತೃವ್ಯೇಣ ಜಯತೇಽಪ

---

ಸಜಾತೇಷ್ವಿತಿ ಸ–ಜಾತೇಷು । ವಾ । ಇಂದ್ರಾಗ್ನೀ ಇತೀಂದ್ರ–ಅಗ್ನೀ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ತಾಭ್ಯಾಮ್ । ಏವ । ಇಂದ್ರಿಯಮ್ । ವೀರ್ಯಮ್ । ಭ್ರಾತೃವ್ಯಸ್ಯ । ವೃಂಕ್ತೇ । ವೀತಿ । ಪಾಪ್ಮನಾ । ಭ್ರಾತೃವ್ಯೇಣ । ಜಯತೇ । **ಅಪೇತಿ ।**

---

| | |
|---|---|
| ಇಂದ್ರಾಗ್ನೀ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಯಜಮಾನನು ಈ ಯಾಗದಿಂದ] ಇಂದ್ರಾಗ್ನಿದೇವತೆಗಳನ್ನು ಅವರದಾದ ಹವಿರ್ಭಾಗದಿಂದ ಸೇವಿಸುತ್ತಾನೆ. |
| ತಾಭ್ಯಾಮ್ ಏವ ಭ್ರಾತೃವ್ಯಸ್ಯ ಇಂದ್ರಿಯಮ್ ವೀರ್ಯಮ್ ವೃಂಕ್ತೇ | ಆ ಇಂದ್ರಾಗ್ನಿದೇವತೆಗಳಿಂದಲೇ ಪ್ರತಿಸ್ಪರ್ಧಿಯ ಇಂದ್ರಿಯಶಕ್ತಿಯನ್ನೂ, ಶತ್ರುಜಯಸಾಮರ್ಥ್ಯವನ್ನೂ ನಾಶಪಡಿಸುತ್ತಾನೆ. |
| ಪಾಪ್ಮನಾ ಭ್ರಾತೃವ್ಯೇಣ ವಿಜಯತೇ | ಯಜಮಾನನು ಶಕ್ತಿಹೀನನಾದ ಅವನ ಪ್ರತಿಸ್ಪರ್ಧಿಯನ್ನು ಗೆಲ್ಲುತ್ತಾನೆ. |

---

ಯಾವನು ಮಕ್ಕಳನ್ನು ಪಡೆಯಲು ಸಮರ್ಥನಾಗಿದ್ದರೂ ಮಕ್ಕಳನ್ನು ಪಡೆಯುವುದಿಲ್ಲವೋ, ಅವನಿಗೆ ಇಂದ್ರಾಗ್ನಿಗಳೇ ಮಕ್ಕಳಾಗದಂತೆ ಪ್ರತಿಬಂಧಕರಾಗಿರುತ್ತಾರೆ. ಅವನು ಐಂದ್ರಾಗ್ನಪುರೋಡಾಶಯಾಗವನ್ನು ಮಾಡಿ, ಇಂದ್ರಾಗ್ನಿಗಳಿಗೆ ಅವರ ಹವಿಸ್ಸನ್ನು ಸಲ್ಲಿಸಿದ ನಂತರ ಅವರ ಅನುಗ್ರಹದಿಂದ ಮಕ್ಕಳನ್ನು ಪಡೆಯುತ್ತಾನೆ.

ಭೂಮಿಯ ನಿಮಿತ್ತವಾಗಿ ಅಥವಾ ಜೊತೆಗಾರರ ಮಧ್ಯದಲ್ಲಿ ತಾನು ಗೆಲ್ಲಬೇಕೆನ್ನುವವನು ಇಂದ್ರಾಗ್ನಿದೇವತೆಗಳಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು. ಇಂದ್ರಾಗ್ನಿಗಳು ತಮ್ಮ ಹವಿರ್ಭಾಗವನ್ನು ಪಡೆದು ತೃಪ್ತರಾಗುತ್ತಾರೆ.

ವಾ ಏತಸ್ಮಾದಿಂದ್ರಿಯಂ ವೀರ್ಯಂ ಕ್ರಾಮತಿ ಯಸ್ಸಂಗ್ರಾಮ

ಮುಪಪ್ರಯಾತ್ಯೈಂದ್ರಾಗ್ನಮೇಕಾದಶಕಪಾಲಂ [..ನಿಃ (೨)

ವಪೇತ್....] ನಿರ್ವಪೇತ್ಸಂಗ್ರಾಮಮುಪ –

---

ವೈ। ಏತಸ್ಮಾತ್। ಇಂದ್ರಿಯಮ್। ವೀರ್ಯಮ್। ಕ್ರಾಮತಿ। ಯಃ। ಸಂಗ್ರಾಮಮಿತಿ ಸಮ್–ಗ್ರಾಮಮ್। ಉಪಪ್ರಯಾತೀತ್ಯುಪ–ಪ್ರಯಾತಿ। ಐಂದ್ರಾಗ್ನಮಿತ್ಯೈಂದ್ರ– ಅಗ್ನಮ್। ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್। ನಿರಿತಿ। ವಪೇತ್। ಸಂಗ್ರಾಮಮಿತಿ ಸಮ್–ಗ್ರಾಮಮ್। ಉಪಪ್ರಯಾಸ್ಯನ್ನಿತ್ಯುಪ–ಪ್ರಯಾಸ್ಯನ್। 

---

**ಶತ್ರುಜಯಕ್ಕಾಗಿ ಯುದ್ಧರಂಗಕ್ಕೆ ಹೋಗುವವನು ಮಾಡಬೇಕಾದ ಐಂದ್ರಾಗ್ನೇಷ್ಟಿ; ಪ್ರಶಂಸೆ**

| | |
|---|---|
| ಯಃ | ಯಾವನು |
| ಸಂಗ್ರಾಮಮ್ ಉಪಪ್ರಯಾತಿ | ಯುದ್ಧರಂಗಕ್ಕೆ ಹೋಗುತ್ತಾನೆಯೋ |
| ಏತಸ್ಮಾತ್ ಇಂದ್ರಿಯಮ್ ವೀರ್ಯಮ್ ಅಪಕ್ರಾಮತಿ | ಈತನಿಂದ ಇಂದ್ರಿಯಸಾಮರ್ಥ್ಯವೂ ಪರಾಕ್ರಮವೂ ದೂರಾಗುತ್ತದೆ. |
| ಸಂಗ್ರಾಮಮ್ ಉಪಪ್ರಯಾಸ್ಯನ್ | [ಇಂದ್ರಿಯವೀರ್ಯಕಾಮನು] ಯುದ್ಧರಂಗಕ್ಕೆ ಹೋಗುತ್ತಿರುವವನಾಗಿ |
| ಐಂದ್ರಾಗ್ನಮ್ ಏಕಾದಶಕಪಾಲಮ್ ನಿರ್ವಪೇತ್ | ಇಂದ್ರಾಗ್ನಿದೇವತೆಗಳಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು. |

---

ಇಂದ್ರಾಗ್ನಿಗಳು ಪ್ರತಿಸ್ಪರ್ಧಿಯ ಇಂದ್ರಿಯಶಕ್ತಿಯನ್ನೂ ಶತ್ರುಜಯಸಾಧನವಾದ ಇತರಸಾಮರ್ಥ್ಯವನ್ನೂ ನಾಶಪಡಿಸುತ್ತಾರೆ. ಹೀಗೆ ಶತ್ರುವು ಶಕ್ತಿಹೀನನಾಗುವುದರಿಂದ ಯಜಮಾನನು ವಿಜಯವನ್ನು ಪಡೆಯುತ್ತಾನೆ.

ಪ್ರಯಾಸ್ಯನ್ನಿಂದ್ರಾಗ್ನೀ ಏವ ಸ್ವೇನ ಭಾಗಧೇಯೇನೋಪ

ಧಾವತಿ ತಾವೇವಾಸ್ಮಿನ್ನಿಂದ್ರಿಯಂ ವೀರ್ಯಂ

ಧತ್ತಸ್ಸಹೇಂದ್ರಿಯೇಣ ವೀರ್ಯೇಣೋಪಪ್ರಯಾತಿ

ಜಯತಿ ತಗ್ಂ ಸಂಗ್ರಾಮಂ

---

ಇಂದ್ರಾಗ್ನೀ ಇತೀಂದ್ರ– ಅಗ್ನೀ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।ತೌ । ಏವ । ಅಸ್ಮಿನ್ನ್ । ಇಂದ್ರಿಯಮ್ । ವೀರ್ಯಮ್ । ಧತ್ತಃ । ಸಹ । ಇಂದ್ರಿಯೇಣ । ವೀರ್ಯೇಣ । ಉಪ । ಪ್ರೇತಿ । ಯಾತಿ । ಜಯತಿ । ತಮ್ । ಸಂಗ್ರಾಮಮಿತಿ ಸಮ್– ಗ್ರಾಮಮ್ ।

---

| | |
|---|---|
| ಇಂದ್ರಾಗ್ನೀ ಏವ ಸ್ವೇನ ಭಾಗಧೇಯೇನ ಉಪಧಾವತಿ | (ಈ ಯಾಗದಿಂದ) ಯಜಮಾನನು ಇಂದ್ರಾಗ್ನಿಗಳಿಗೆ ಅವರ ಹವಿರ್ಭಾಗಗಳನ್ನು ಸಮರ್ಪಿಸಿ ತೃಪ್ತಿಪಡಿಸುತ್ತಾನೆ. |
| ತೌ ಏವ ಅಸ್ಮಿನ್ ಇಂದ್ರಿಯಮ್ ವೀರ್ಯಮ್ ಧತ್ತಃ | ಆ ಇಂದ್ರಾಗ್ನಿಗಳು ಈ ಯಜಮಾನನಿಗೆ ಇಂದ್ರಿಯಶಕ್ತಿಯನ್ನೂ ವೀರ್ಯವನ್ನೂ ಕೊಡುತ್ತಾರೆ. |
| ಇಂದ್ರಿಯೇಣ ವೀರ್ಯೇಣ ಸಹ ಉಪ ಪ್ರಯಾತಿ | ಹೊಸ ಇಂದ್ರಿಯ ವೀರ್ಯಗಳನ್ನು ಹೊಂದಿ ಯಜಮಾನನು ಯುದ್ಧರಂಗಕ್ಕೆ ಹೋಗುತ್ತಾನೆ. |
| ತಮ್ ಸಂಗ್ರಾಮಮ್ ಜಯತಿ | ಆ ಯುದ್ಧವನ್ನು ಗೆಲ್ಲುತ್ತಾನೆ. |

---

ಯುದ್ಧರಂಗಕ್ಕೆ ಹೋಗುವವನು ಭೀತಿಯಿಂದ ಇಂದ್ರಿಯ ವೀರ್ಯಗಳನ್ನು ಕಳೆದು ಕೊಳ್ಳುತ್ತಾನೆ. ಆತನು ಐಂದ್ರಾಗ್ನಪುರೋಡಾಶಯಾಗವನ್ನು ಮಾಡಬೇಕು. ಇಂದ್ರಾಗ್ನಿಗಳು ತೃಪ್ತರಾಗುತ್ತಾರೆ. ಯಜಮಾನನಿಗೆ ಇಂದ್ರಿಯ ವೀರ್ಯಗಳನ್ನು ಕೊಡುತ್ತಾರೆ. ಹೀಗೆ ಇಂದ್ರಿಯವೀರ್ಯಸಂಪನ್ನನಾದ ಯಜಮಾನನು ಯುದ್ಧರಂಗದಲ್ಲಿ ಶತ್ರುಗಳನ್ನು ಜಯಿಸುತ್ತಾನೆ.

ವಿ ವಾ ಏಷ ಇಂದ್ರಿಯೇಣ ವೀರ್ಯೇಣರ್ಧ್ಯತೇ

ಯಸ್ಸಂಗ್ರಾಮಂ ಜಯತ್ಯೈಂದ್ರಾಗ್ನಮೇಕಾದಶ

ಕಪಾಲಂ ನಿರ್ವಪೇತ್ಸಂಗ್ರಾಮಂ ಜಿತ್ವೇಂದ್ರಾಗ್ನೀ ಏವ

ಸ್ವೇನ ಭಾಗಧೇಯೇನೋಪಧಾವತಿ

---

**ವೀತಿ** । ವೈ । ಏಷಃ । ಇಂದ್ರಿಯೇಣ । ವೀರ್ಯೇಣ । ಋದ್ಧ್ಯತೇ । ಯಃ । ಸಂಗ್ರಾಮಮಿತಿ ಸಮ್-ಗ್ರಾಮಮ್ । ಜಯತಿ । ಐಂದ್ರಾಗ್ನಮಿತ್ಯೈಂದ್ರ- ಅಗ್ನಮ್ । ಏಕಾದಶಕಪಾಲ-ಮಿತ್ಯೇಕಾದಶ-ಕಪಾಲಮ್ । ನಿರಿತಿ । ವಪೇತ್ । ಸಂಗ್ರಾಮಮಿತಿ ಸಮ್-ಗ್ರಾಮಮ್ । ಜಿತ್ವಾ । ಇಂದ್ರಾಗ್ನೀ ಇತೀಂದ್ರ-ಅಗ್ನೀ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ ।

---

**ಯುದ್ಧದಲ್ಲಿ ಗೆದ್ದವನಿಗೆ ವಿಹಿತವಾದ ಐಂದ್ರಾಗ್ನೇಷ್ಟಿ**

| | |
|---|---|
| ಯಃ ಸಂಗ್ರಾಮಮ್ ಜಯತಿ | ಯಾವನು ಯುದ್ಧದಲ್ಲಿ ಗೆಲ್ಲುತ್ತಾನೆಯೋ |
| ಏಷಃ ಇಂದ್ರಿಯೇಣ ವೀರ್ಯೇಣ ವ್ಯೃಧ್ಯತೇ ವೈ | ಈತನು ಇಂದ್ರಿಯ ವೀರ್ಯಶಕ್ತಿಹೀನನಾಗುತ್ತಾನೆ. [ಆದುದರಿಂದ] |
| ಸಂಗ್ರಾಮಮ್ ಜಿತ್ವಾ ಐಂದ್ರಾಗ್ನಮ್ ಏಕಾದಶಕಪಾಲಮ್ ನಿರ್ವಪೇತ್ | ಯುದ್ಧದಲ್ಲಿ ಜಯಶೀಲನಾದವನು ಇಂದ್ರಾಗ್ನಿದೇವತೆಗಳಿಗಾಗಿ ಏಕಾದಶ ಕಪಾಲಪುರೋಡಾಶಯಾಗವನ್ನು ಮಾಡಬೇಕು. |
| ಇಂದ್ರಾಗ್ನೀ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಯಜಮಾನನು] ಈ ಯಾಗದಿಂದ ಇಂದ್ರಾಗ್ನಿಗಳನ್ನು ತೃಪ್ತಿಪಡಿಸುತ್ತಾನೆ. |

ತಾವೇವಾಸ್ಮಿನ್ನಿಂದ್ರಿಯಂ ವೀರ್ಯಂ [... ವೀರ್ಯಮ್

(೩) ಧತ್ತೋ] ಧತ್ತೋ ನೇಂದ್ರಿಯೇಣ ವೀರ್ಯೇಣ

ವ್ಯೃಧ್ಯತೇಽಪ ವಾ ಏತಸ್ಮಾದಿಂದ್ರಿಯಂ ವೀರ್ಯಂ

ಕ್ರಾಮತಿ ಯ ಏತಿ

---

ತೌ । ಏವ । ಅಸ್ಮಿನ್ । ಇಂದ್ರಿಯಮ್ । ವೀರ್ಯಮ್ । ಧತ್ತಃ । ನ । ಇಂದ್ರಿಯೇಣ । ವೀರ್ಯೇಣ । ವೀತಿ । ಋಧ್ಯತೇ । ಅಪೇತಿ । ವೈ । ಏತಸ್ಮಾತ್ । ಇಂದ್ರಿಯಮ್ । ವೀರ್ಯಮ್ । ಕ್ರಾಮತಿ । ಯಃ । ಏತಿ ।

---

| | |
|---|---|
| ತೌ ಏವ ಅಸ್ಮಿನ್ ಇಂದ್ರಿಯಮ್ ವೀರ್ಯಮ್ ಧತ್ತಃ | ಅವರಿಬ್ಬರೂ ಈ ಯಜಮಾನನಿಗೆ ಇಂದ್ರಿಯ ಶಕ್ತಿಯನ್ನು ಕೊಡುತ್ತಾರೆ. |
| ಇಂದ್ರಿಯೇಣ ವೀರ್ಯೇಣ ನ ವ್ಯೃಧ್ಯತೇ | ಇಂದ್ರಿಯಪಾಟವದಿಂದಲೂ ಬಲದಿಂದಲೂ ಹೀನನಾಗುವುದಿಲ್ಲ. |

**ವಾದಜಯಕ್ಕಾಗಿ ಜನಸಭೆಗೆ ಹೋಗುವವನಿಗೆ ವಿಹಿತವಾದ ಐಂದ್ರಾಗ್ನೇಷ್ಟಿ**

| | |
|---|---|
| ಯಃ ಜನತಾಮ್ ಏತಿ | ಯಾವನು ವಾದ-ವಿವಾದಗಳಲ್ಲಿ ಗೆಲುವನ್ನು ಪಡೆಯಲು ಜನಸಭೆಗೆ ಹೋಗುತ್ತಾನೆಯೋ |

---

ಯುದ್ಧದಲ್ಲಿ ಗೆದ್ದವನು ಇಂದ್ರಿಯಬಲಾದಿಗಳನ್ನು ಕಳೆದುಕೊಂಡು ಶಕ್ತಿಹೀನ ನಾಗುತ್ತಾನೆ.* ಅಂತಹವನು ಐಂದ್ರಾಗ್ನ ಏಕಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು. ಇದರಿಂದ ಅವನು ಇಂದ್ರಾಗ್ನಿದೇವತೆಗಳನ್ನು ಅವರಿಗೆ ಬೇಕಾದ ಹವಿಸ್ಸನ್ನಿತ್ತು ತೃಪ್ತಿಪಡಿಸಿದಂತಾಗುತ್ತದೆ. ಇಂದ್ರನು ಇಂದ್ರಿಯಶಕ್ತಿಯನ್ನು ಕೊಡುತ್ತಾನೆ. ಅಗ್ನಿಯು ಪ್ರಜಾಕಾರಣವಾದ ವೀರ್ಯಶಕ್ತಿಯನ್ನು ನೀಡುತ್ತಾನೆ. ಹೀಗೆ ಇಂದ್ರಾಗ್ನಿಗಳ

* 'ಯುದ್ಧದಲ್ಲಿ ಗೆದ್ದವನು ಸೋತ; ಸೋತವನು ಸತ್ತ' ಎಂಬ ಗಾದೆಯೇ ಇದೆ.

ಜನತಾಮ್ಯೆಂದ್ರಾಗ್ನಮೇಕಾದಶಕಪಾಲಂ

ನಿರ್ವಪೇಜ್ಜನತಾಮೇಷ್ಯನ್ನಿಂದ್ರಾಗ್ನೀ ಏವ ಸ್ವೇನ

ಭಾಗಧೇಯೇನೋಪಧಾವತಿ

---

ಜನತಾವಮ್ । ಐಂದ್ರಾಗ್ನಮಿತ್ಯೈಂದ್ರ–ಅಗ್ನವಮ್ । ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್ । ನಿರಿತಿ । ವಪೇತ್ । ಜನತಾವಮ್ । ಏಷ್ಯನ್ನ್ । ಇಂದ್ರಾಗ್ನಿ ಇತೀಂದ್ರ–ಅಗ್ನೀ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಯಃ ಜನತಾವಮ್ ಏತಿ | ಯಾವನು [ವಾದವಿವಾದಗಳಲ್ಲಿ ಗೆಲುವನ್ನು ಪಡೆಯಲು] ಜನಸಭೆಗೆ ಹೋಗುತ್ತಾನೆಯೋ |
| ಏತಸ್ಮಾತ್ ಇಂದ್ರಿಯಮ್ ವೀರ್ಯಮ್ ಅಪಕ್ರಾಮತಿ | ಈತನಿಂದ ಇಂದ್ರಿಯಸಾಮರ್ಥ್ಯವೂ ಶಕ್ತಿಯೂ ದೂರವಾಗುತ್ತದೆ. |
| ಜನತಾವಮ್ ಏಷ್ಯನ್ ಐಂದ್ರಾಗ್ನಮ್ ಏಕಾದಶ ಕಪಾಲವಮ್ ನಿರ್ವಪೇತ್ | ಜನಸಭೆಗೆ [ವಿಜಯಕ್ಕಾಗಿ] ಹೋಗುವವನು ಇಂದ್ರಾಗ್ನಿದೇವತೆಗಳಿಗಾಗಿ ಏಕಾದಶ ಕಪಾಲಪುರೋಡಾಶಯಾಗವನ್ನು ಮಾಡ ಬೇಕು. |
| ಇಂದ್ರಾಗ್ನೀ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಹವಿಃಪ್ರದಾನದಿಂದ ಇಂದ್ರಾಗ್ನಿಗಳನ್ನು ತೃಪ್ತಿಪಡಿಸುತ್ತಾನೆ. |

---

ಅನುಗ್ರಹದಿಂದ ಇನ್ನೊಮ್ಮೆ ಇಂದ್ರಿಯವೀರ್ಯಸಂಪನ್ನನಾದ ಯಜಮಾನನು ಮತ್ತೆ ಬಲವಂತನಾಗುತ್ತಾನೆ.

ಜನಸಭೆಗೆ ವಿಜಯಕ್ಕಾಗಿ ಹೋಗುವವನು ಸಭಾಕಂಪದಿಂದಲೂ, ಸೋಲಿನ ಹೆದರಿಕೆ ಯಿಂದಲೂ ಶಕ್ತಿಯನ್ನು ಕಳೆದುಕೊಳ್ಳುತ್ತಾನೆ. ಅಂತಹ ಯಜಮಾನನು ಇಂದ್ರಾಗ್ನಿ ದೇವತೆ ಗಳಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು. ಇಂದ್ರಾಗ್ನಿಗಳು

ತಾವೇವಾಸ್ಮಿನ್ನಿಂದ್ರಿಯಂ ವೀರ್ಯಂ

ಧತ್ತಸ್ಸಹೇಂದ್ರಿಯೇಣ ವೀರ್ಯೇಣ ಜನತಾಮೇತಿ

ಪೌಷ್ಣಂ ಚರುಮನು ನಿರ್ವಪೇತ್ಪೂಷಾ ವಾ

ಇಂದ್ರಿಯಸ್ಯ ವೀರ್ಯಸ್ಯಾನುಪ್ರದಾತಾ

---

ತೌ । ಏವ । ಅಸ್ಮಿನ್ನ್ । ಇಂದ್ರಿಯಮ್ । ವೀರ್ಯಮ್ । ಧತ್ತಃ । ಸಹ । ಇಂದ್ರಿಯೇಣ । ವೀರ್ಯೇಣ । ಜನತಾಮ್ । ಏತಿ । **ಪೌಷ್ಣಮ್** । ಚರುಮ್ । ಅನು । ನಿರಿತಿ । ವಪೇತ್ । ಪೂಷಾ । ವೈ । ಇಂದ್ರಿಯಸ್ಯ । ವೀರ್ಯಸ್ಯ । ಅನುಪ್ರದಾತೇತ್ಯನು–ಪ್ರದಾತಾ ।

---

| | |
|---|---|
| ತೌ ಏವ ಅಸ್ಮಿನ್ ಇಂದ್ರಿಯಮ್ ವೀರ್ಯಮ್ ಧತ್ತಃ | ಆ ಇಂದ್ರಾಗ್ನಿಗಳು ಈ ಯಜಮಾನನಲ್ಲಿ ಇಂದ್ರಿಯಶಕ್ತಿಯೂ ಪರಾಕ್ರಮವೂ ನೆಲೆಸುವಂತೆ ಮಾಡುತ್ತಾರೆ. |
| ಇಂದ್ರಿಯೇಣ ವೀರ್ಯೇಣ ಸಹ ಜನತಾಮ್ ಏತಿ | ಯಜಮಾನನು ಇಂದ್ರಿಯವೀರ್ಯಸಂಪನ್ನನಾಗಿ ಜನಸಭೆಗೆ ಹೋಗುತ್ತಾನೆ. |

**ಪ್ರಧಾನಯಾಗದ ನಂತರ ಪೌಷ್ಣಯಾಗವಿಧಿ; ಪ್ರಶಂಸೆ**

| | |
|---|---|
| ಪೌಷ್ಣಮ್ ಚರುಮ್ ಅನು ನಿರ್ವಪೇತ್ | ಐಂದ್ರಾಗ್ನಪ್ರಧಾನಯಾಗದ ಅನಂತರ ಪೂಷದೇವತೆಗಾಗಿ ಚರುಯಾಗವನ್ನು ಮಾಡಬೇಕು. |
| ಪೂಷಾ ವೈ ಇಂದ್ರಿಯಸ್ಯ ವೀರ್ಯಸ್ಯ ಅನುಪ್ರದಾತಾ | ಪೂಷದೇವನು ಇಂದ್ರಾಗ್ನಿಗಳನ್ನು ಅನುಸರಿಸಿ ಇಂದ್ರಿಯವೀರ್ಯಗಳನ್ನು ಕೊಡತಕ್ಕವನು. |

---

ತೃಪ್ತರಾಗಿ ಇಂದ್ರಿಯವೀರ್ಯಗಳನ್ನು ಕರುಣಿಸುತ್ತಾರೆ. ಹೀಗೆ ನವೀನಇಂದ್ರಿಯ ಸಾಮರ್ಥ್ಯದಿಂದ ಯಜಮಾನನು ಧೈರ್ಯದಿಂದ ಜನಸಭೆಗೆ ಹೋಗಿ ಜಯಶಾಲಿಯಾಗುತ್ತಾನೆ.

ಪೂಷಣಮೇವ [೪] ಸ್ವೇನ

ಭಾಗಧೇಯೇನೋಪಧಾವತಿ ಸ ಏವಾಸ್ಮಾ

ಇಂದ್ರಿಯಂ ವೀರ್ಯಮನು ಪ್ರಯಚ್ಛತಿ ಕ್ಷೈತ್ರಪತ್ಯಂ

ಚರುಂ ನಿರ್ವಪೇಜ್ಜನತಾಮಾಗತ್ಯೇಯಂ ವೈ ಕ್ಷೇತ್ರಸ್ಯ

---

ಪೂಷಣಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮೈ । ಇಂದ್ರಿಯಮ್ । ವೀರ್ಯಮ್ । ಅನು । ಪ್ರೇತಿ । ಯಚ್ಛತಿ । ಕ್ಷೈತ್ರಪತ್ಯಮಿತಿ ಕ್ಷೈತ್ರ-ಪತ್ಯಮ್ । ಚರುಮ್ । ನಿರಿತಿ । ವಪೇತ್ । ಜನತಾಮ್ । ಆಗತ್ಯೇತ್ಯಾ-ಗತ್ಯ । ಇಯಮ್ । ವೈ । ಕ್ಷೇತ್ರಸ್ಯ ।

---

| | |
|---|---|
| ಪೂಷಣಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಪೂಷದೇವನನ್ನು ಅವನ ಹವಿರ್ಭಾಗವನ್ನು ಕೊಟ್ಟು ಉಪಚರಿಸುತ್ತಾನೆ. |
| ಸಃ ಏವ ಅಸ್ಮೈ ಇಂದ್ರಿಯಮ್ ವೀರ್ಯಮ್ ಅನುಪ್ರಯಚ್ಛತಿ | ಆ ಪೂಷದೇವನೇ ಯಜಮಾನನಿಗೆ ಇಂದ್ರಿಯವನ್ನೂ ವೀರ್ಯವನ್ನೂ ಅನುಸರಿಸಿ ಕೊಡುತ್ತಾನೆ. |

**ಕ್ಷೈತ್ರಪತ್ಯಚರುಯಾಗವಿಧಿ; ಪ್ರಶಂಸೆ**

| | |
|---|---|
| ಜನತಾಮ್ ಆಗತ್ಯ ಕ್ಷೈತ್ರಪತ್ಯಮ್ ಚರುಮ್ ನಿರ್ವಪೇತ್ | ಜನಸಮೂಹದ ಬಳಿ ವಾದಕ್ಕಾಗಿ ಹೋಗಿ ಬಂದು ಕ್ಷೇತ್ರಪತಿಗಾಗಿ ಚರುಯಾಗವನ್ನು ಮಾಡಬೇಕು. |
| ಇಯಮ್ ವೈ ಕ್ಷೇತ್ರಸ್ಯ ಪತಿಃ | ಈ ಭೂಮಿಯೇ ಕ್ಷೇತ್ರಪತಿಯಾಗಿದೆ. |

---

ಐಂದ್ರಾಗ್ನೇಷ್ಟಿನಿರ್ವಾಪದ ಬಳಿಕ ಪೂಷದೇವನಿಗಾಗಿ ನಿರ್ವಾಪವನ್ನು ಮಾಡಿ ಚರುಯಾಗವನ್ನು ಮಾಡಬೇಕು. ಪುಷ್ಟಿಪ್ರದನಾದ ಪೂಷನೇ ಇಂದ್ರಿಯವೀರ್ಯಗಳನ್ನು ಅನುಸರಿಸಿ ಕೊಡತಕ್ಕವನು. ಈ ಯಾಗದ ಹವಿಸ್ಸನ್ನಿತ್ತು ಯಜಮಾನನು ಅವನನ್ನು

## ಪತಿರಸ್ಯಾಮೇವ ಪ್ರತಿತಿಷ್ಠತ್ಯೈಂದ್ರಾಗ್ನಮೇಕಾದಶಕಪಾಲ ಮುಪರಿಷ್ಟಾನ್ನಿರ್ವಪೇದಸ್ಯಾಮೇವ ಪ್ರತಿಷ್ಠಾಯೇಂದ್ರಿಯಂ ವೀರ್ಯಮುಪರಿಷ್ಟಾದಾತ್ಮನ್ಧತ್ತೇ ||೫–1||

**[ಪ್ರಜಾಕಾಮ ಇಂದ್ರಾಗ್ನೀ ಉಪಪ್ರಯಾತ್ಯೈಂದ್ರಾಗ್ನಮೇಕಾದಶಕಪಾಲಂ ನಿರ್ವೀರ್ಯಂ ಪೂಷಣಮೇವೈಕಾನ್ನ ಚತ್ವಾರಿಗ್ಂಶಚ್ಚ ||]**

---

ಪತಿಃ । ಅಸ್ಯಾಮ್ । ಏವ । ಪ್ರತೀತಿ । ತಿಷ್ಠತಿ । ಐಂದ್ರಾಗ್ನಮಿತ್ಯೈಂದ್ರ–ಅಗ್ನಮ್ । ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್ । ಉಪರಿಷ್ಟಾತ್ । ನಿರಿತಿ । ವಪೇತ್ । ಅಸ್ಯಾಮ್ । ಏವ । ಪ್ರತಿಷ್ಠಾಯೇತಿ ಪ್ರತಿ–ಸ್ಥಾಯ । ಇಂದ್ರಿಯಮ್ । ವೀರ್ಯಮ್ । ಉಪರಿಷ್ಟಾತ್ । ಆತ್ಮನ್ನ್ । ಧತ್ತೇ ||1||

---

| | |
|---|---|
| ಅಸ್ಯಾಮ್ ಏವ ಪ್ರತಿತಿಷ್ಠತಿ | (ಈ ಯಾಗಪ್ರಭಾವದಿಂದ) ಯಜಮಾನನು ಭೂಮಿಯಲ್ಲಿ ಪ್ರತಿಷ್ಠಿತನಾಗುತ್ತಾನೆ. |

**ಕ್ಷೈತ್ರಪತ್ಯಯಾಗದ ನಂತರ ಐಂದ್ರಾಗ್ನಯಾಗದ ವಿಧಾನ; ಪ್ರಶಂಸೆ**

| | |
|---|---|
| ಅಸ್ಯಾಮ್ ಏವ ಪ್ರತಿಷ್ಠಾಯ | ಕ್ಷೈತ್ರಪತ್ಯಯಾಗದ ಅನಂತರ ಸುಪ್ರತಿಷ್ಠಿತನಾದ ಯಜಮಾನನು |
| ಐಂದ್ರಾಗ್ನಮ್ ಏಕಾದಶಕಪಾಲಮ್ ಉಪರಿಷ್ಟಾತ್ ನಿರ್ವಪೇತ್ | ಬಳಿಕ ಐಂದ್ರಾಗ್ನ ಏಕಾದಶಕಪಾಲಯಾಗವನ್ನು ಮಾಡಬೇಕು. |
| ಇಂದ್ರಿಯಮ್ ವೀರ್ಯಮ್ ಉಪರಿಷ್ಟಾತ್ ಆತ್ಮನ್ ಧತ್ತೇ | ಯಾಗಾನಂತರ ಸರ್ವಕಾಲಗಳಲ್ಲಿಯೂ ಯಜಮಾನನು ಇಂದ್ರಿಯವೀರ್ಯಸಂಪನ್ನನಾಗುತ್ತಾನೆ. |

---

ತೃಪ್ತಿ ಪಡಿಸುತ್ತಾನೆ. ತೃಪ್ತನಾದ ಪೂಷನು ಇಂದ್ರಿಯವೀರ್ಯಗಳನ್ನು ಹೆಚ್ಚಾಗಿ ಕೊಡುತ್ತಾನೆ.

ಜನಸಭೆಗೆ ಹೋಗಿ ಬಂದವನು ಕ್ಷೈತ್ರಪತ್ಯಯಾಗವನ್ನು ಮಾಡಬೇಕು. ಈ ಭೂಮಿಯೇ ಕ್ಷೇತ್ರಪತಿಯಾಗಿರುವುದರಿಂದ ಯಜಮಾನನು ಯಾಗದ ಫಲವಾಗಿ ಸುಪ್ರತಿಷ್ಠಿತನಾಗುತ್ತಾನೆ.*

ಕ್ಷೈತ್ರಪತ್ಯಯಾಗಾನಂತರ ಐಂದ್ರಾಗ್ನಯಾಗವನ್ನು ಮಾಡಬೇಕು. ಇದರಿಂದ ಯಜಮಾನನು ಸರ್ವಕಾಲದಲ್ಲಿಯೂ ಇಂದ್ರಿಯವೀರ್ಯಸಂಪನ್ನನಾಗುತ್ತಾನೆ.

* * *

## ಪ್ರಥಮಾನುವಾಕ ವಿಷಯಸಂಗ್ರಹ

**ಅನುವಾಕಾ ದ್ವಾದಶ ಸ್ಯುರ್ದ್ವಿತೀಯೇಽರ್ಥಸ್ತು ವರ್ಣ್ಯತೇ ।**
**ಪ್ರಜಾಕಾಮಃ ಸ್ಪರ್ಧಮಾನೋ ಯುಯುತ್ಸುರ್ಜಿತಶತ್ರುಕಃ ॥**
**ಸಭಾಮೇಷ್ಯನ್ನಿಮೇ ಕುರ್ಯುಃ ಏಕಾದಶಕಪಾಲಕಮ್ ।**
**ಐಂದ್ರಾಗ್ನೇ ಪಂಚಮೇ ಪೌಷ್ಣಂ ಚರುಮೇಷೋಽನು ನಿರ್ವಪೇತ್ ॥**
**ಸಭಾಂ ಪ್ರಾಪ್ಯ ಕ್ಷೈತ್ರಪತ್ಯಂ ಚರುಂ ಕೃತ್ವೋರ್ಧ್ವಮಾಚರೇತ್ ।**
**ಐಂದ್ರಾಗ್ನಯಾಗಮಿತ್ಯೇತೇಽನುವಾಕೇ ಪ್ರಥಮೇ ಸ್ಥಿತಾಃ ॥**

ಎರಡನೆಯ ಪ್ರಶ್ನೆಯಲ್ಲಿ ಹನ್ನೆರಡು ಅನುವಾಕಗಳಿವೆ.

ಮೊದಲನೆಯ ಅನುವಾಕದಲ್ಲಿ ಪ್ರಜಾಕಾಮನಿಗೂ, ಸ್ಪರ್ಧಿಸುವವನಿಗೂ, ಶತ್ರುಗಳನ್ನು ಜಯಿಸಬೇಕೆಂದಿರುವವನಿಗೂ, ಶತ್ರುಗಳನ್ನು ಗೆದ್ದಿರುವವನಿಗೂ, ಸಭೆಗೆ ಹೋಗುವವನಿಗೂ ಏಕಾದಶಕಪಾಲವುಳ್ಳ ಐಂದ್ರಾಗ್ನೇಷ್ಟಿಯು ವಿಹಿತವಾಗಿದೆ.

ಸಭೆಗೆ ಹೋಗುವವನು ಪ್ರಧಾನಯಾಗದ ಅನಂತರ ಪೌಷ್ಣಯಾಗವನ್ನು ಮಾಡಬೇಕು. ಸಭೆಗೆ ಹೋದವನು ಕ್ಷೈತ್ರಪತ್ಯಯಾಗವನ್ನು ಮಾಡಿ ಅನಂತರ ಐಂದ್ರಾಗ್ನಯಾಗವನ್ನು ಮಾಡಬೇಕು. ಈ ಯಾಗಗಳು ಪ್ರಥಮಾನುವಾಕದ ವಿಷಯಗಳಾಗಿವೆ.

* ವಿಧಿವಾಕ್ಯದಲ್ಲಿ ಫಲವನ್ನು ಹೇಳದಿರುವುದರಿಂದ ಅರ್ಥವಾದವನ್ನು ಅನುಸರಿಸಿ ಪ್ರತಿಷ್ಠೆಯು ಈ ಯಾಗದ ಫಲವಾಗಿದೆ.

ಈ ಇಷ್ಟಿಯು ನೈಮಿತ್ತಿಕವಾಗಿದೆಯೆಂದು ಕೆಲವರ ಮತ.

## ॥ ದ್ವಿತೀಯೋಽನುವಾಕಃ ॥

ಅಗ್ನಯೇ ಪಥಿಕೃತೇ ಪುರೋಡಾಶಮಷ್ಟಾಕಪಾಲಂ ನಿರ್ವಪೇದ್ಯೋ ದರ್ಶಪೂರ್ಣಮಾಸಯಾಜೀ ಸನ್ನಮಾವಾಸ್ಯಾಂ ವಾ ಪೌರ್ಣಮಾಸೀಂ ವಾಽತಿಪಾದಯೇತ್ಪಥೋ

---

**ಅಗ್ನಯೇ** । ಪಥಿಕೃತ ಇತಿ ಪಥಿ–ಕೃತೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ । ನಿರಿತಿ । ವಪೇತ್ । ಯಃ । ದರ್ಶಪೂರ್ಣಮಾಸಯಾಜೀತಿ ದರ್ಶಪೂರ್ಣಮಾಸ–ಯಾಜೀ । ಸನ್ । ಅಮಾವಾಸ್ಯಾಮಿತ್ಯಮಾ–ವಾಸ್ಯಾಮ್ । ವಾ । ಪೌರ್ಣಮಾಸೀಮಿತಿ ಪೌರ್ಣ– ಮಾಸೀಮ್ । ವಾ । ಅತಿಪಾದಯೇದಿತ್ಯತಿ–ಪಾದಯೇತ್ । ಪಥಃ ।

---

**ಆದ್ಯೇ ಪ್ರಪಾಠಕೇ ಕಾಮ್ಯಾಃ ಪಶವಃ ಸಮುದೀರಿತಾಃ ।**
**ದ್ವಿತೀಯಾದಿತ್ರಯೇ ಕಾಮ್ಯಾ ವಕ್ತವ್ಯಾ ಇಷ್ಟಯೋಽಖಿಲಾಃ ॥**

**ಈ ಎರಡನೆಯ ಕಾಂಡದ ಮೊದಲನೆಯ ಪ್ರಶ್ನದಲ್ಲಿ ಕಾಮ್ಯಪಶುಗಳು ಹೇಳಲ್ಪಟ್ಟಿವೆ. ಎರಡನೆಯ, ಮೂರನೆಯ ಮತ್ತು ನಾಲ್ಕನೆಯ ಪ್ರಶ್ನೆಗಳಲ್ಲಿ ಕಾಮ್ಯೇಷ್ಟಿಗಳು ಹೇಳಲ್ಪಡುತ್ತವೆ.**

ಈ ಎರಡನೆಯ ಅನುವಾಕದಲ್ಲಿ ಪಾಥಿಕೃತೇಷ್ಟ್ಯಾದಿಗಳು ಹೇಳಲ್ಪಟ್ಟಿವೆ.

---

**ಪ್ರಾಯಶ್ಚಿತ್ತರೂಪವಾದ ಪಾಥಿಕೃತೇಷ್ಟಿಯ ವಿಧಿ ; ಪ್ರಶಂಸೆ**

| | |
|---|---|
| ಯಃ ದರ್ಶಪೂರ್ಣಮಾಸಯಾಜೀ ಸನ್ | ಯಾವನು ದರ್ಶ–ಪೂರ್ಣಮಾಸೇಷ್ಟಿಗಳನ್ನು ಅನುಷ್ಠಿಸುವವನಾಗಿ |
| ಅಮಾವಾಸ್ಯಾಮ್ ವಾ ಪೌರ್ಣಮಾಸೀಮ್ ವಾ | ಅಮಾವಾಸ್ಯಯಾಗವನ್ನಾಗಲೀ ಪೌರ್ಣಮಾಸೀಯಾಗವನ್ನಾಗಲೀ |
| ಅತಿಪಾದಯೇತ್ [ಸಃ] ಅಗ್ನಯೇ ಪಥಿಕೃತೇ ಪುರೋಡಾಶಮ್ | ಮಾಡಲು ತಪ್ಪುತ್ತಾನೆಯೋ [ಅವನು] ಪಥಿಕೃನ್ನಾಮಕನಾದ ಅಗ್ನಿಯನ್ನು ಉದ್ದೇಶಿಸಿ, |

---

ಆಹಿತಾಗ್ನಿಯಾಗಿ ದರ್ಶ–ಪೂರ್ಣಮಾಸಯಾಗಗಳನ್ನು ಅನುಷ್ಠಿಸುವವನು

ವಾ ಏಷೋಽಧ್ಯಪಥೇನೈತಿ ಯೋ

ದರ್ಶಪೂರ್ಣಮಾಸಯಾಜೀ ಸನ್ನಮಾವಾಸ್ಯಾಂ ವಾ

ಪೌರ್ಣಮಾಸೀಂ ವಾಽತಿಪಾದಯತ್ಯಗ್ನಿಮೇವ

---

ವೈ । ಏಷಃ । ಅಧೀತಿ । ಅಪಥೇನ । ಏತಿ । ಯಃ । ದರ್ಶಪೂರ್ಣಮಾಸಯಾಜೀತಿ ದರ್ಶಪೂರ್ಣಮಾಸ–ಯಾಜೀ । ಸನ್ । ಅಮಾವಾಸ್ಯಾಮಿತ್ಯಮಾ–ವಾಸ್ಯಾಮ್ । ವಾ । ಪೌರ್ಣಮಾಸೀಮಿತಿ ಪೌರ್ಣ–ಮಾಸೀಮ್ । ವಾ । ಅತಿಪಾದಯತೀತ್ಯತಿ – ಪಾದಯತಿ । ಅಗ್ನಿಮ್ । ಏವ ।

---

| | |
|---|---|
| ಅಷ್ಟಾಕಪಾಲಮ್ ನಿರ್ವಪೇತ್ | ಅಷ್ಟಾಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. |
| ಯಃ ದರ್ಶಪೂರ್ಣಮಾಸಯಾಜೀ ಸನ್ | ಯಾವನು ಆಹಿತಾಗ್ನಿಯಾಗಿ ದರ್ಶಪೌರ್ಣಮಾಸಯಾಗಗಳನ್ನು ಮಾಡುವವನಾಗಿದ್ದರೂ |
| ಅಮಾವಾಸ್ಯಾಮ್ ವಾ ಪೌರ್ಣಮಾಸೀಮ್ ವಾ | ಅಮಾವಾಸ್ಯಯಾಗವನ್ನಾಗಲೀ ಪೌರ್ಣಮಾಸೀಯಾಗವನ್ನಾಗಲೀ |
| ಅತಿಪಾದಯತಿ ಏಷಃ ವೈ | ಮಾಡಲು ತಪ್ಪುತ್ತಾನೆಯೋ, ಈತನಾದರೋ |
| ಪಥಃ ಅಪಥೇನ ಅಧಿ ಏತಿ | ಸನ್ಮಾರ್ಗವನ್ನು ಬಿಟ್ಟವನಾಗಿ ತಪ್ಪು ದಾರಿ ಯಲ್ಲಿ ನಡೆದವನಾಗುತ್ತಾನೆ. |

**ಈ ಯಾಗದ ಪ್ರಶಂಸೆ**

| | |
|---|---|
| ಪಥಿಕೃತಮ್ ಅಗ್ನಿಮ್ ಏವ | [ಈ ಇಷ್ಟಿಯಿಂದ ಯಜಮಾನನು] ಪಥಿಕೃತನಾದ |

---

ಯಾವುದಾದರೂ ಕಾರಣದಿಂದ ಅಮಾವಾಸ್ಯಾಯಾಗವನ್ನಾಗಲೀ, ಪೌರ್ಣಮಾಸೀ ಯಾಗವನ್ನಾಗಲೀ ಮಾಡಲು ತಪ್ಪಿದರೆ ಅವನು ಪ್ರಾಯಶ್ಚಿತ್ತರೂಪವಾಗಿ **'ಪಥಿಕೃತ್'** ಎಂಬ ಹೆಸರಿನ ಅಗ್ನಿದೇವನಿಗಾಗಿ ಅಷ್ಟಾಕಪಾಲಪುರೋಡಾಶಯಾಗವನ್ನು ಅನುಷ್ಠಿಸ ಬೇಕು. ದರ್ಶಪೂರ್ಣಮಾಸಯಾಗಗಳನ್ನು ಅನುಷ್ಠಿಸುತ್ತಿರುವವನು ಅವುಗಳನ್ನು ಮಾಡಲು

ಪಥಿಕೃತಗ್ಂ ಸ್ವೇನ ಭಾಗಧೇಯೇನೋಪಧಾವತಿ ಸ

ಏವೈನಮಪಥಾತ್ಪಂಥಾಮಪಿ ನಯತ್ಯನಡ್ವಾನ್ದಕ್ಷಿಣಾ

ವಹೀ ಹ್ಯೇಷ ಸಮೃದ್ಧ್ಯೈ

---

ಪಥಿಕೃತಮಿತಿ ಪಥಿ–ಕೃತಮ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಏನಮ್ । ಅಪಥಾತ್ । ಪಂಥಾಮ್ । ಅಪೀತಿ । ನಯತಿ । ಅನಡ್ವಾನ್ । ದಕ್ಷಿಣಾ । ವಹೀ । ಹಿ । ಏಷಃ । ಸಮೃದ್ಧ್ಯಾ ಇತಿ ಸಮ್–ಋದ್ಧ್ಯೈ ।

---

ಸ್ವೇನ ಭಾಗಧೇಯೇನ ಉಪಧಾವತಿ — ಅಗ್ನಿಗೆ ತಕ್ಕ ಹವಿರ್ಭಾಗವನ್ನರ್ಪಿಸಿ, ಸೇವಿಸಿದವನಾಗುತ್ತಾನೆ.

ಸಃ ಏವ ಏನಮ್ ಅಪಥಾತ್ ಪಂಥಾಮ್ ಅಪಿ ನಯತಿ — ಆ ಅಗ್ನಿದೇವನೇ ಈ ಯಜಮಾನನನ್ನು ತಪ್ಪು ದಾರಿಯಿಂದ ಸರಿದಾರಿಗೆ ತರುತ್ತಾನೆ.

**ದಕ್ಷಿಣಾವಿಧಿ; ಪ್ರಶಂಸೆ**

ಅನಡ್ವಾನ್ ದಕ್ಷಿಣಾ — ಭಾರವನ್ನು **ಹೊರಬಲ್ಲ** ಎತ್ತು ಈ ಯಾಗದ ದಕ್ಷಿಣೆಯಾಗಿದೆ.

ವಹೀ ಹಿ ಏಷಃ — ಈ ಎತ್ತು ಭಾರವನ್ನು ಹೊರಲು ಸಮರ್ಥವಾಗಿದೆ.

ಸಮೃದ್ಧ್ಯೈ — [ಅಗ್ನಿಯೂ ಪಾಪಭಾರವನ್ನು ಹೊರಲು ಸಮರ್ಥನಾದುದರಿಂದ] ಇದು ಫಲ ಸಮೃದ್ಧಿಗೆ ಕಾರಣವಾಗುತ್ತದೆ.

---

ತಪ್ಪಿದರೆ ಅವನು ಒಳ್ಳೆಯ ದಾರಿಯನ್ನು ಬಿಟ್ಟು ತಪ್ಪುದಾರಿಯಲ್ಲಿ ನಡೆದವನಾಗುತ್ತಾನೆ. ಅವನು ಪ್ರಾಯಶ್ಚಿತ್ತರೂಪವಾಗಿ **'ಪಥಿಕೃತ್'** ಎಂಬ ಹೆಸರಿನ ಅಗ್ನಿ ದೇವನಿಗಾಗಿ ಅಷ್ಟಾಕಪಾಲಪುರೋಡಾಶಯಾಗವನ್ನು ಮಾಡಬೇಕು. ಯಜಮಾನನು

ಅಗ್ನಯೇ ವ್ರತಪತಯೇ [೧] ಪುರೋಡಾಶಮಷ್ಟಾಕ

ಪಾಲಂ ನಿರ್ವಪೇದ್ಯ ಆಹಿತಾಗ್ನಿಃ ಸನ್ನವ್ರತ್ಯಮಿವ

ಚರೇದಗ್ನಿಮೇವ ವ್ರತಪತಿಗ್ಂ

---

**ಅಗ್ನಯೇ** । ವ್ರತಪತಯ ಇತಿ ವ್ರತ–ಪತಯೇ । ಪುರೋಡಾಶಮ್ । ಅಷ್ಟಾಕಪಾಲ

ಮಿತ್ಯಷ್ಟಾ–ಕಪಾಲಮ್ । ನಿರಿತಿ । ವಪೇತ್ । ಯಃ । ಆಹಿತಾಗ್ನಿರಿತ್ಯಾಹಿತ–ಅಗ್ನಿಃ । ಸನ್ನ್ ।

ಅವ್ರತ್ಯಮ್ । ಇವ । ಚರೇತ್ । ಅಗ್ನಿಮ್ । ಏವ । ವ್ರತಪತಿಮಿತಿ ವ್ರತ–ಪತಿಮ್ ।

---

**ಇನ್ನೊಂದು ಪ್ರಾಯಶ್ಚಿತ್ತೇಷ್ಟಿ; ಪ್ರಶಂಸೆ**

| | |
|---|---|
| **ಯಃ ಆಹಿತಾಗ್ನಿಃ ಸನ್ ಅವ್ರತ್ಯಮ್ ಇವ ಚರೇತ್** | ಯಾವನು ಆಹಿತಾಗ್ನಿಯಾಗಿದ್ದರೂ ಕೂಡ ವ್ರತವಿರುದ್ಧಕಾರ್ಯಗಳನ್ನು ಮಾಡುತ್ತಾನೆಯೋ |
| **[ಸಃ] ಅಗ್ನಯೇ ವ್ರತಪತಯೇ ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್** | ಅವನು ವ್ರತರಕ್ಷಕನಾದ ಅಗ್ನಿದೇವನಿಗೆ ಅಷ್ಟಾಕಪಾಲಪುರೋಡಾಶಯಾಗವನ್ನು ಮಾಡಬೇಕು. |
| **ಅಗ್ನಿಮ್ ವ್ರತಪತಿಮ್ ಏವ** | [ಯಜಮಾನನು ಈ ಯಾಗದಿಂದ] ವ್ರತಪತಿಯಾದ ಅಗ್ನಿಯನ್ನು |

---

ಈ ಯಾಗದಿಂದ ಪಥಿಕೃದಗ್ನಿಯನ್ನು ತೃಪ್ತಿಪಡಿಸುತ್ತಾನೆ. ಆ ಅಗ್ನಿಯು ತೃಪ್ತನಾಗಿ ಯಜಮಾನನು ಮಾಡಿದ ಅತಿಪಾದದೋಷವನ್ನು ಸರಿಪಡಿಸಿ ಒಳ್ಳೆಯ ದಾರಿಗೆ ತರುತ್ತಾನೆ. ಆ ದೋಷದಿಂದ ಉಂಟಾಗುವ ಪಾಪವನ್ನು ಹೋಗಲಾಡಿಸುತ್ತಾನೆ.

ಈ ಯಾಗದಲ್ಲಿ ಭಾರವನ್ನು ಹೊರಬಲ್ಲ ಎತ್ತು ದಕ್ಷಿಣೆ. ಅಗ್ನಿಯೂ ಪಾಪಭಾರವನ್ನು ವಹಿಸಿ ಅದರಿಂದಾಗುವ ದೋಷವನ್ನು ಬೇಗನೆ ದೂರ ಮಾಡಲು ಸಮರ್ಥನಾಗಿರುತ್ತಾನೆ. ಆದುದರಿಂದ ಇದು ಫಲಸಮೃದ್ಧಿಗೆ ಕಾರಣವಾಗುತ್ತದೆ.

ಸ್ವೇನ ಭಾಗಧೇಯೇನೋಪಧಾವತಿ ಸ ಏವೈನಂ ವ್ರತ-

ಮಾಲಂಭಯತಿ ವ್ರತ್ಯೋ ಭವತ್ಯಗ್ನಯೇ ರಕ್ಷೋಘ್ನೇ

ಪುರೋಡಾಶಮಷ್ಟಾಕಪಾಲಂ ನಿರ್ವಪೇದ್ಯಗ್ಂ ರಕ್ಷಾಗ್ಂಸಿ

---

ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ಸಃ । ಏವ । ಏನಮ್ । ವ್ರತಮ್ । ಏತಿ । ಲಂಭಯತಿ । ವ್ರತ್ಯಃ । ಭವತಿ । ಅಗ್ನಯೇ । ರಕ್ಷೋಘ್ನ ಇತಿ ರಕ್ಷಃ-ಘ್ನೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ನಿರಿತಿ । ವಪೇತ್ । ಯಮ್ । ರಕ್ಷಾಗ್ಂಸಿ ।

---

| | |
|---|---|
| ಸ್ವೇನ ಭಾಗಧೇಯೇನ ಉಪಧಾವತಿ | ಆರಾಧಿಸಿದವನಾಗುತ್ತಾನೆ. |
| ಸಃ ಏವ ಏನಮ್ ವ್ರತಮ್ ಆಲಂಭಯತಿ | ಆ ಅಗ್ನಿದೇವನೇ ಈ ಯಜಮಾನನನ್ನು ವ್ರತವನ್ನಾಚರಿಸಲು ಯೋಗ್ಯನನ್ನಾಗಿ ಮಾಡುತ್ತಾನೆ. |
| ವ್ರತ್ಯಃ ಭವತಿ | ಯಜಮಾನನು ವ್ರತಾರ್ಹನಾಗುತ್ತಾನೆ. |

**ರಕ್ಷೋಬಾಧಾಪರಿಹಾರಕೇಷ್ಟಿ ; ಪ್ರಶಂಸೆ**

| | |
|---|---|
| ಯಮ್ ರಕ್ಷಾಗ್ಂಸಿ ಸಚೇರನ್ | ಯಾವನನ್ನು ರಕ್ಷಸ್ಸುಗಳು ಬಾಧಿಸುತ್ತವೆಯೋ |
| [ಸಃ] ಅಗ್ನಯೇ ರಕ್ಷೋಘ್ನೇ ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್ | ಅವನು ರಕ್ಷೋನಾಶಕನಾದ ಅಗ್ನಿ ದೇವನಿಗಾಗಿ ಅಷ್ಟಾಕಪಾಲಪುರೋಡಾಶ ಯಾಗವನ್ನು ಮಾಡಬೇಕು. |

ಸಚೇರನ್ನಗ್ನಿಮೇವ ರಕ್ಷೋಹಣಗ್‌ಂ ಸ್ವೇನ

ಭಾಗಧೇಯೇನೋಪಧಾವತಿ ಸ

ಏವಾಸ್ಮಾದ್ರಕ್ಷಾಗ್‌ಂಸ್ಯಪಹಂತಿ

---

ಸಚೇರನ್ । ಅಗ್ನಿಮ್ । ಏವ । ರಕ್ಷೋಹಣಮಿತಿ ರಕ್ಷಃ-ಹನವ್ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮಾತ್ । ರಕ್ಷಾಗ್‌ಂಸಿ । ಅಪೇತಿ । ಹಂತಿ ।

---

| | |
|---|---|
| ರಕ್ಷೋಹಣಮ್ ಅಗ್ನಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಯಜಮಾನನು ಈ ಯಾಗದಿಂದ] ರಕ್ಷೋಹಾಗ್ನಿಗೆ ಹವಿರ್ಭಾಗವನ್ನು ಕೊಟ್ಟು ಅವನನ್ನು ತೃಪ್ತಿಪಡಿಸುತ್ತಾನೆ. |
| ಸಃ ಏವ ಅಸ್ಮಾತ್ ರಕ್ಷಾಗ್‌ಂಸಿ ಅಪಹಂತಿ | ಆ ರಕ್ಷೋಹದೇವನು ಈ ಯಜಮಾನನನ್ನು ಬಾಧಿಸುವ ರಾಕ್ಷಸರನ್ನು ನಾಶಪಡಿಸುತ್ತಾನೆ. |

---

ಯಜಮಾನನಿಗೆ **'ಆಹಿತಾಗ್ನಿಃ ನಾನೃತಂ ವದೇತ್'** ಅಂದರೆ ಆಹಿತಾಗ್ನಿಯು ಅನೃತವನ್ನು ನುಡಿಯಬಾರದು ಮೊದಲಾದ ನಿಯಮಗಳಿವೆ. ಈ ನಿಯಮವನ್ನು ಉಲ್ಲಂಘಿಸಿ ಸುಳ್ಳು ಹೇಳುವುದು ಮೊದಲಾದ ವ್ರತವಿರುದ್ಧ ಕಾರ್ಯಗಳನ್ನು ಮಾಡಿದವನು ವ್ರತರಕ್ಷಕನಾದ ಅಗ್ನಿದೇವನಿಗಾಗಿ ವ್ರಾತಪತ್ಯೇಷ್ಟಿಯನ್ನು ಮಾಡಬೇಕು. ಈ ಇಷ್ಟಿಯಲ್ಲಿ ಅಷ್ಟಾಕಪಾಲ ಪುರೋಡಾಶ ಹವಿಸ್ಸನ್ನು ಹೊಂದಿ ಸುಪ್ರೀತನಾದ ವ್ರತಪತಿಯಾದ ಅಗ್ನಿಯು ಈ ನಿಯಮಲೋಪದ ದೋಷವನ್ನು ಪರಿಹರಿಸುತ್ತಾನೆ. ಈ ಯಜಮಾನನು ವ್ರತಯೋಗ್ಯನಾಗುತ್ತಾನೆ.

ರಾಕ್ಷಸರಿಂದ ಬಾಧಿಸಲ್ಪಡುವ ಯಜಮಾನನು ರಕ್ಷೋನಾಶಕನಾದ ಅಗ್ನಿಗೆ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಈ ಯಾಗದಿಂದ ತೃಪ್ತನಾದ ರಕ್ಷೋಹಾಗ್ನಿಯು ಯಜಮಾನನನ್ನು ಬಾಧಿಸುವ ರಾಕ್ಷಸರನ್ನು ನಾಶಪಡಿಸುತ್ತಾನೆ.

ನಿಶಿತಾಯಾಂ [ನಿರ್ವಪೇತ್ [೨] ನಿಶಿತಾಯಾಗ್ಂ]

ನಿರ್ವಪೇನ್ನಿಶಿತಾಯಾಗ್ಂ ಹಿ ರಕ್ಷಾಗ್ಂಸಿ ಪ್ರೇರತೇ

ಸಂಪ್ರೇರ್ಣಾನ್ಯೇವೈನಾನಿ ಹಂತಿ ಪರಿಶ್ರಿತೇ

---

ನಿಶಿತಾಯಾಮಿತಿ ನಿ–ಶಿತಾಯಾಮ್ । ನಿರಿತಿ । ವಪೇತ್ । ನಿಶಿತಾಯಾಮಿತಿ ನಿ–ಶಿತಾಯಾಮ್ । ಹಿ । ರಕ್ಷಾಗ್ಂಸಿ । ಪ್ರೇರತ ಇತಿ ಪ್ರ–ಈರತೇ । ಸಂಪ್ರೇರ್ಣಾನೀತಿ ಸಮ್–ಪ್ರೇರ್ಣಾನಿ । ಏವ । ಏನಾನಿ । ಹಂತಿ । ಪರಿಶ್ರಿತ ಇತಿ ಪರಿ–ಶ್ರಿತೇ ।

---

**ಕಾಲವಿಶೇಷವಿಧಾನ; ಪ್ರಶಂಸೆ**

| | |
|---|---|
| ನಿಶಿತಾಯಾಮ್ ನಿರ್ವಪೇತ್ | ಅರ್ಧರಾತ್ರಿಯಲ್ಲಿ ಈ ಯಾಗವನ್ನು ಮಾಡಬೇಕು. |
| ನಿಶಿತಾಯಾಮ್ ರಕ್ಷಾಗ್ಂಸಿ ಪ್ರೇರತೇ ಹಿ | ರಾತ್ರಿಯಲ್ಲಿ ರಾಕ್ಷಸರು ಹೆಚ್ಚಾಗಿ ಸಂಚರಿಸುತ್ತಾರಷ್ಟೆ. |
| ಸಂಪ್ರೇರ್ಣಾನಿ ಏವ ಏನಾನಿ ಹಂತಿ | [ಈ ಯಾಗದಿಂದ] ರಾತ್ರಿಯಲ್ಲಿ ಸಂಚರಿಸುವ ರಾಕ್ಷಸರನ್ನು ಅಗ್ನಿದೇವನು ನಾಶಪಡಿಸುತ್ತಾನೆ. |

**ದೇಶಾದಿಗುಣವಿಧಾನ; ಪ್ರಶಂಸೆ**

| | |
|---|---|
| ಪರಿಶ್ರಿತೇ | ಎಲ್ಲ ಕಡೆಯಲ್ಲಿಯೂ ಸುತ್ತುವರೆಯಲ್ಪಟ್ಟ ಸುರಕ್ಷಿತಪ್ರದೇಶದಲ್ಲಿ |

---

ಮಧ್ಯರಾತ್ರಿಯಲ್ಲಿ ಈ ಯಾಗವನ್ನು ಮಾಡಬೇಕು. ಮಧ್ಯರಾತ್ರಿಯು ರಾಕ್ಷಸರು ಹೆಚ್ಚಾಗಿ ಸಂಚರಿಸುವ ಕಾಲ. ಆ ಕಾಲದಲ್ಲಿ ಯಾಗ ಮಾಡುವುದರಿಂದ ಪ್ರೀತನಾದ ಅಗ್ನಿದೇವನು ಸಂಚರಿಸುವ ರಾಕ್ಷಸರನ್ನು ಕೊಲ್ಲುತ್ತಾನೆ. ಇದರಿಂದ ರಾಕ್ಷಸರ ಬಾಧೆಯು ನಿವೃತ್ತಿಯಾಗುತ್ತದೆ. ಸುತ್ತಲೂ ಆವೃತವಾಗಿ ಸುರಕ್ಷಿತವಾಗಿರುವ ಪ್ರದೇಶದಲ್ಲಿ ಈ ಯಾಗವನ್ನು

ಯಾಜಯೇದ್ರಕ್ಷಸಾಮನನ್ವವಚಾರಾಯ ರಕ್ಷೋಘ್ನೀ

॥ ಯಾಜ್ಯಾನುವಾಕ್ಯೇ ಭವತೋ ರಕ್ಷಸಾಗ್ಂ ಸ್ತೃತ್ಯಾ

ಅಗ್ನಯೇ ರುದ್ರವತೇ ಪುರೋಡಾಶಮಷ್ಟಾಕಪಾಲಂ

---

ಯಾಜಯೇತ್ । ರಕ್ಷಸಾಮ್ । ಅನನ್ವವಚಾರಾಯೇತ್ಯನನು– ಅವಚಾರಾಯ । ರಕ್ಷೋಘ್ನಿ ಇತಿ ರಕ್ಷಃ–ಘ್ನೀ । ಯಾಜ್ಯಾನುವಾಕ್ಯೇ ಇತಿ ಯಾಜ್ಯಾ–ಅನುವಾಕ್ಯೇ । ಭವತಃ । ರಕ್ಷಸಾಮ್ । ಸ್ತೃತ್ಯೈ । ಅಗ್ನಯೇ । ರುದ್ರವತ ಇತಿ ರುದ್ರ–ವತೇ । ಪುರೋಡಾಶಮ್ । ಅಷ್ಟಾಕಪಾಲ– ಮಿತ್ಯಷ್ಟಾ–ಕಪಾಲಮ್ ।

---

| | |
|---|---|
| ಯಾಜಯೇತ್ | ಈ ಯಾಗವನ್ನು ಅನುಷ್ಠಿಸಬೇಕು. |
| ರಕ್ಷಸಾಮ್ ಅನನ್ವವಚಾರಾಯ | [ಇದು] ರಾಕ್ಷಸರು ಒಳಗೆ ಪ್ರವೇಶಿಸದಂತೆ ಮಾಡುತ್ತದೆ. |
| ರಕ್ಷೋಘ್ನೀ ಯಾಜ್ಯಾನುವಾಕ್ಯೇ ಭವತಃ | ರಕ್ಷೋಹದೇವತಾಕವಾದ ಎರಡು ಋಕ್‌ಗಳು ಪುರೋನುವಾಕ್ಯೆ ಮತ್ತು ಯಾಜ್ಯೆಗಳಾಗುತ್ತವೆ. |
| ರಕ್ಷಸಾಮ್ ಸ್ತೃತ್ಯೈ | ಇದು ರಾಕ್ಷಸರ ವಿನಾಶಕ್ಕೆ ಕಾರಣವಾಗುತ್ತದೆ. |

**ಶತ್ರುಮಾರಕವಾದ ಇಷ್ಟಿಯ ವಿಧಿ; ಪ್ರಶಂಸೆ**

| | |
|---|---|
| ಅಭಿಚರನ್ | ಶತ್ರುನಾಶವನ್ನು ಬಯಸುವವನು |
| ಅಗ್ನಯೇ ರುದ್ರವತೇ ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್ | ರುದ್ರನೆಂಬ ವಿಶೇಷಣವುಳ್ಳ ಅಗ್ನಿದೇವನಿಗಾಗಿ ಅಷ್ಟಾಕಪಾಲಪುರೋಡಾಶಯಾಗವನ್ನು ಮಾಡಬೇಕು. |

---

ಮಾಡಬೇಕು. ಇದರಿಂದ ರಾಕ್ಷಸರು ಒಳಕ್ಕೆ ಬಂದು ಯಾಗವನ್ನು ಕೆಡಿಸದಂತೆ ಆಗುತ್ತದೆ. **"'ರಕ್ಷೋಹಣಮ್' 'ವಿ ಜ್ಯೋತಿಷಾ'*** ಎಂಬ ಈ ಎರಡು ಋಕ್‌ಗಳು ಕ್ರಮವಾಗಿ ಈ ಯಾಗದಲ್ಲಿ ಪುರೋನುವಾಕ್ಯೆ – ಯಾಜ್ಯಾನುವಾಕ್ಯಗಳಾಗುತ್ತವೆ.

---

* ತೈ. ಸಂ. 1.2.14.

ನಿರ್ವಪೇದಭಿಚರನ್ನೇಷಾ ವಾ ಅಸ್ಯ ಘೋರಾ ತನೂರ್ಯ

ದ್ರುದ್ರಸ್ತಸ್ಮಾ ಏವೈನಮಾವೃಶ್ಚತಿ ತಾಜಗಾರ್ತಿಮಾರ್ಛ

ತ್ಯಗ್ನಯೇ ಸುರಭಿಮತೇ ಪುರೋಡಾಶಮಷ್ಟಾಕಪಾಲಂ

---

ನಿರಿತಿ । ವಪೇತ್ । ಅಭಿಚರನ್ನಿತ್ಯಭಿ–ಚರನ್ । ಏಷಾ । ವೈ । ಅಸ್ಯ । ಘೋರಾ । ತನೂಃ ।

ಯತ್ । ರುದ್ರಃ । ತಸ್ಮೈ । ಏವ । ಏನಮ್ । ಏತಿ । ವೃಶ್ಚತಿ । ತಾಜಕ್ । ಆರ್ತಿಮ್ ।

ಏತಿ । ಋಚ್ಛತಿ । **ಅಗ್ನಯೇ** । ಸುರಭಿಮತ ಇತಿ ಸುರಭಿ–ಮತೇ । ಪುರೋಡಾಶಮ್ ।

ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ ।

---

| | |
|---|---|
| ರುದ್ರಃ [ಇತಿ] ಯತ್ | ರುದ್ರನೆಂಬ ಹೆಸರುಳ್ಳ ಅಗ್ನಿಯ ಯಾವ ಸ್ವರೂಪವುಂಟೋ |
| ಏಷಾ ವೈ ಅಸ್ಯ ಘೋರಾ ತನೂಃ | ಈ ಸ್ವರೂಪವು ಈ ಅಗ್ನಿದೇವನ ಭಯಂಕರ ಸ್ವರೂಪವಾಗಿದೆ. |
| ತಸ್ಮೈ ಏವ ಏನಮ್ ಆವೃಶ್ಚತಿ | [ಈ ರುದ್ರಸ್ವರೂಪನಾದ ಅಗ್ನಿದೇವನು] ಆ ಯಜಮಾನನಿಗಾಗಿ ಈ ಶತ್ರುವನ್ನು ನಾಶ ಪಡಿಸುತ್ತಾನೆ. |
| ತಾಜಕ್ ಆರ್ತಿಮ್ ಆರ್ಚ್ಛತಿ | ಆ ಶತ್ರುವು ಕೂಡಲೇ ನಾಶವನ್ನು ಹೊಂದುತ್ತಾನೆ. |

---

ಶತ್ರುಸಂಹಾರವನ್ನು ಇಚ್ಛಿಸುವವನು ರುದ್ರವಂತನೆಂಬ ಅಗ್ನಿಯನ್ನುದ್ದೇಶಿಸಿ ಅಷ್ಟಾಕಪಾಲಪುರೋಡಾಶಯಾಗವನ್ನು ಅನುಷ್ಠಿಸಬೇಕು. ಈ ರುದ್ರನೆಂಬುದು *ಅಗ್ನಿಯ ಘೋರ ಶರೀರವಾಗಿದೆ. ಈ ಯಾಗದಿಂದ ತೃಪ್ತನಾದ ರುದ್ರವದಗ್ನಿದೇವನು ಯಜಮಾನನ ಹಗೆಯನ್ನು ನಾಶ ಮಾಡುತ್ತಾನೆ. ಯಜಮಾನನ ವೈರಿಯು ಒಡನೆಯೇ ನಾಶ ಹೊಂದುತ್ತಾನೆ.

---

* **'ತ್ವಮಗ್ನೇ ರುದ್ರಃ' 'ಆ ವಃ'** ಎಂಬ ಮಂತ್ರಗಳಲ್ಲಿ ಅಗ್ನಿಯನ್ನು ರುದ್ರನೆಂದು ಸ್ತುತಿಸಲಾಗಿದೆ. ಈ ಅಗ್ನಿಯು ರುದ್ರವಂತನಾಗಿರುತ್ತಾನೆ.

ನಿರ್ವಪೇದ್ಯಸ್ಯ ಗಾವೋ ವಾ ಪುರುಷಾ [ಪುರುಷಾಃ [೩] ವಾ ಪ್ರಮೀಯೇರನ್] ವಾ ಪ್ರಮೀಯೇರನ್, ಯೋ ವಾ

---

ನಿರಿತಿ । ವಪೇತ್ । ಯಸ್ಯ । ಗಾವಃ । ವಾ । ಪುರುಷಾಃ । ವಾ । ಪ್ರಮೀಯೇರನ್ನಿತಿ ಪ್ರ–ಮೀಯೇರನ್ । ಯಃ । ವಾ ।

---

**ಮನೆಯಲ್ಲಿ ಅಕಾಲಿಕ ಸಾವು ಸಂಭವಿಸಿದರೆ ಪರಿಹಾರವಾಗಿರುವ ಸುರಭಿಮದಗ್ನಿಯಾಗವಿಧಿ;**

| | |
|---|---|
| **ಯಸ್ಯ ಗಾವಃ ಪುರುಷಾಃ ವಾ ಪ್ರಮೀಯೇರನ್** | ಯಾವನ ಹಸುಗಳೇ ಮುಂತಾದ ಪ್ರಾಣಿಗಳಾಗಲೀ, ಭೃತ್ಯಾದಿಪುರುಷರಾಗಲೀ ಸಾಯುತ್ತಾರೆಯೋ ಅಥವಾ |
| **ಯಃ ವಾ ಬಿಭೀಯಾತ್** | ಯಾವನು ಅಪಮೃತ್ಯುವಿನಿಂದ ಭಯ ಪಡುತ್ತಾನೆಯೋ ಅವನು |
| **ಅಗ್ನಯೇ ಸುರಭಿಮತೇ ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್** | *ಸುರಭಿಮಂತನಾದ ಅಗ್ನಿಯನ್ನುದ್ದೇಶಿಸಿ ಅಷ್ಟಾಕಪಾಲಪುರೋಡಾಶವನ್ನು ಯಾಗ ಮಾಡಬೇಕು. |

---

ಯಾರ ಮನೆಯಲ್ಲಿ ಗವಾದಿಪ್ರಾಣಿಗಳಾಗಲೀ, ಸೇವಕರೇ ಮೊದಲಾದ ಪುರುಷರಾಗಲೀ ಸಾಯುತ್ತಾರೆಯೋ ಅಥವಾ ಯಾವನು ತನಗೆ ಅಪಮೃತ್ಯುವಿನಿಂದ ಸಾವು ಸಂಭವಿಸಬಹುದೆಂದು ಹೆದರುತ್ತಾನೆಯೋ ಅವನು ಸುರಭಿಮಂತನಾದ ಅಗ್ನಿಗಾಗಿ ಅಷ್ಟಾಕಪಾಲಪುರೋಡಾಶಯಾಗವನ್ನು ಮಾಡಬೇಕು.

---

* ಈ ಯಾಗದ ಯಾಜ್ಯಾ – ಪುರೋನುವಾಕ್ಯೆಯಲ್ಲಿ '**ಸುರಭಿ**' ಎಂಬ ಶಬ್ದವಿದೆ. ಹೀಗೆ ಅಗ್ನಿಯು ಸುರಭಿಮಂತನು. '**ಕ್ಷಾಮವತೇ**' ಮುಂತಾದ ಕಡೆಯಲ್ಲಿಯೂ ಹೀಗೆಯೇ ಇದೆ.

ಬಿಭೀಯಾದೇಷಾ ವಾ ಅಸ್ಯ ಭೇಷಜ್ಯಾ

ತನೂರ್ಯತ್ಸುರಭಿಮತೀ ತಯೈವಾಸ್ಮೈ ಭೇಷಜಂ ಕರೋತಿ

ಸುರಭಿಮತೇ ಭವತಿ ಪೂತೀಗಂಧಸ್ಯಾಪಹತ್ಯಾ

---

ಬಿಭೀಯಾತ್ । ಏಷಾ । ವೈ । ಅಸ್ಯ । ಭೇಷಜ್ಯಾ । ತನೂಃ । ಯತ್ । ಸುರಭಿಮತೀತಿ ಸುರಭಿ–ಮತೀ । ತಯಾ । ಏವ । ಅಸ್ಮೈ । ಭೇಷಜಮ್ । ಕರೋತಿ । ಸುರಭಿಮತ ಇತಿ ಸುರಭಿ–ಮತೇ । ಭವತಿ । ಪೂತೀಗಂಧಸ್ಯೇತಿ ಪೂತಿ–ಗಂಧಸ್ಯ । ಅಪಹತ್ಯಾ ಇತ್ಯಪ–ಹತ್ಯೈ ।

---

**ಸುರಭಿಮದ್ಯಾಗದ ಪ್ರಶಂಸೆ**

| | |
|---|---|
| ಯತ್ ಸುರಭಿಮತೀ | ಸುರಭಿಮಂತನೆಂಬ ಯಾವ ಸ್ವರೂಪವುಂಟೋ |
| ಏಷಾ ವೈ ಅಸ್ಯ ಭೇಷಜ್ಯಾ ತನೂಃ | ಈ ಶರೀರವು ರೋಗಭಯಪರಿಹಾರಕವಾದ ಚಿಕಿತ್ಸೆಯನ್ನು ಮಾಡುವ ಶಕ್ತಿಯುಳ್ಳ ಸ್ವರೂಪ ವಾಗಿದೆ. |
| ತಯಾ ಏವ ಅಸ್ಮೈ ಭೇಷಜಮ್ ಕರೋತಿ | ಅಗ್ನಿದೇವನು ತನ್ನ ಆ ಸ್ವರೂಪದಿಂದಲೇ ಈ ಯಜಮಾನನ ಕಷ್ಟಗಳಿಗೆ ಚಿಕಿತ್ಸೆಯನ್ನು ಮಾಡುತ್ತಾನೆ. |
| ಸುರಭಿಮತೇ ಭವತಿ ಪೂತೀಗಂಧಸ್ಯ ಅಪಹತ್ಯೈ | ಸುರಭಿಮಂತನಾದ ಅಗ್ನಿಗಾಗಿ ಮಾಡುವ ಈ ಯಾಗವು ಶವದ ದುರ್ಗಂಧವನ್ನು ನಿವಾರಿಸುತ್ತದೆ. |

---

ಸುರಭಿಮಂತನೆಂಬ ಸ್ವರೂಪದಿಂದ ಸ್ತುತನಾದ ಅಗ್ನಿದೇವನು ಯಜಮಾನನ ತೊಂದರೆಗಳಿಗೆ ತಕ್ಕ ಚಿಕಿತ್ಸೆಯನ್ನು ಮಾಡುತ್ತಾನೆ. ಮತ್ತೆ ಸಾವು ಸಂಭವಿಸದಂತೆ ಮಾಡುತ್ತಾನೆ. ಇದರಿಂದ ಶವದ ದುರ್ಗಂಧವನ್ನು ಅನುಭವಿಸಬೇಕಾಗುವುದಿಲ್ಲ. ದುರ್ಗಂಧಪರಿಹಾರವು ಇನ್ನೊಂದು ಫಲವೆಂದೂ ಹೇಳಬಹುದು.

ಅಗ್ನಯೇ ಕ್ಷಾಮವತೇ ಪುರೋಡಾಶಮಷ್ಟಾಕಪಾಲಂ

ನಿರ್ವಪೇತ್ಸಂಗ್ರಾಮೇ ಸಂಯತ್ತೇ

ಭಾಗಧೇಯೇನೈವೈನಗ್ಂ ಶಮಯಿತ್ವಾ

---

**ಅಗ್ನಯೇ** । ಕ್ಷಾಮವತ ಇತಿ ಕ್ಷಾಮ-ವತೇ । ಪುರೋಡಾಶವ್ । ಅಷ್ಟಾಕಪಾಲ ಮಿತ್ಯಷ್ಟಾ-ಕಪಾಲವ್ । ನಿರಿತಿ । ವಪೇತ್ । ಸಂಗ್ರಾಮ ಇತಿ ಸವ್-ಗ್ರಾಮೇ । ಸಂಯತ್ತ ಇತಿ ಸವ್-ಯತ್ತೇ । ಭಾಗಧೇಯೇನೇತಿ ಭಾಗ-ಧೇಯೇನ । ಏವ । ಏನವ್ । ಶಮಯಿತ್ವಾ ।

---

**ಯುದ್ಧದಲ್ಲಿ ಗೆಲ್ಲುವುದಕ್ಕಾಗಿ ಯಾಗದ ವಿಧಿ; ಪ್ರಶಂಸೆ**

| | |
|---|---|
| ಸಂಗ್ರಾಮೇ ಸಂಯತ್ತೇ | ಯುದ್ಧವು ಒದಗಿದಾಗ |
| ಅಗ್ನಯೇ ಕ್ಷಾಮವತೇ ಪುರೋಡಾಶವ್ ಅಷ್ಟಾಕಪಾಲವ್ ನಿರ್ವಪೇತ್ | ಕ್ಷಾಮವಂತನಾದ ಅಗ್ನಿಗೆ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| ಭಾಗಧೇಯೇನ ಏವ ಏನವ್ ಶಮಯಿತ್ವಾ | ಈ ಯಾಗದ ಹವಿಸ್ಸನ್ನಿತ್ತು ಅಗ್ನಿದೇವನನ್ನು ತನ್ನ ಮತ್ತು ತನ್ನವರ ವಿಷಯದಲ್ಲಿ ಶಾಂತಗೊಳಿಸಿ, |

---

ಯುದ್ಧವು ಒದಗಿದಾಗ ಕ್ಷಾಮವಂತನಾದ ಅಗ್ನಿದೇವನನ್ನು ಉದ್ದೇಶಿಸಿ, ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. ದಹನಶೀಲನಾದ ಅಗ್ನಿಯು ಕ್ಷಾಮವತೀಷ್ಟಿಯಿಂದ ಯಜಮಾನನ ವಿಷಯದಲ್ಲಿ ಶಾಂತನಾಗುತ್ತಾನೆ.

ಪರಾನಭಿ ನಿರ್ದಿಶತಿ ಯಮವರೇಷಾಂ ವಿಧ್ಯಂತಿ ಜೀವತಿ

ಸ ಯಂ ಪರೇಷಾಂ ಪ್ರ ಸ ಮೀಯತೇ ಜಯತಿ ತಗ್ಂ

[ಸಂಗ್ರಾಮಮ್ [೪] ಅಭಿ] ಸಂಗ್ರಾಮಮಭಿ

---

ಪರಾನ್ । ಅಭಿ । ನಿರಿತಿ । ದಿಶತಿ । ಯಮ್ । ಅವರೇಷಾಮ್ । ವಿಧ್ಯಂತಿ । ಜೀವತಿ । ಸಃ । ಯಮ್ । ಪರೇಷಾಮ್ । ಪ್ರೇತಿ । ಸಃ । ಮೀಯತೇ । ಜಯತಿ । ತಮ್ । ಸಂಗ್ರಾಮಮಿತಿ ಸಮ್-ಗ್ರಾಮಮ್ । **ಅಭೀತಿ** ।

---

| | |
|---|---|
| ಪರಾನ್ ಅಭಿ ನಿರ್ದಿಶತಿ | ಶತ್ರುಗಳನ್ನು ಅಗ್ನಿದೇವನಿಗೆ ನಾಶಪಡಿಸುವುದಕ್ಕಾಗಿ ಎದುರಾಗಿ ತೋರಿಸುತ್ತಾನೆ. |
| ಯಮ್ ಅವರೇಷಾಮ್ ವಿಧ್ಯಂತಿ ಸಃ ಜೀವತಿ | ತಮ್ಮವರಲ್ಲಿ ಶತ್ರುಗಳು ಯಾರನ್ನು ಹೊಡೆಯುತ್ತಾರೆಯೋ, ಅವನು ಅಗ್ನಿಯ ಅನುಗ್ರಹದಿಂದ ಬದುಕುತ್ತಾನೆ. |
| ಯಮ್ ಪರೇಷಾಮ್ **[ವಿಧ್ಯಂತಿ]** ಸಃ ಪ್ರಮೀಯತೇ | ತಮ್ಮವರು ಶತ್ರುಗಳಲ್ಲಿ ಯಾರನ್ನು ಹೊಡೆಯುತ್ತಾರೆಯೋ ಅವನು ಅಗ್ನಿಯ ಆಗ್ರಹಕ್ಕೆ ತುತ್ತಾಗಿ ಸಾಯುತ್ತಾನೆ. |
| ತಮ್ ಸಂಗ್ರಾಮಮ್ ಜಯತಿ | ಹೀಗೆ ಶತ್ರುನಾಶವಾಗಿ ಯಜಮಾನನು ಯುದ್ಧದಲ್ಲಿ ಗೆಲ್ಲುತ್ತಾನೆ. |

---

ಆ ಅಗ್ನಿದೇವನಿಗೆ ಯಜಮಾನನು ಶತ್ರುಗಳನ್ನು ನಾಶಗೊಳಿಸುವುದಕ್ಕಾಗಿ ತೋರಿಸುತ್ತಾನೆ. ಅಗ್ನಿಯ ಅನುಗ್ರಹದಿಂದ ಯಜಮಾನನು ಮತ್ತು ಅವನ ಕಡೆಯವರು ಶತ್ರುಗಳು ಹೊಡೆದರೂ ಸುರಕ್ಷಿತರಾಗಿರುತ್ತಾರೆ. ಶತ್ರುಗಳು ಅಗ್ನಿಯ ಆಗ್ರಹಕ್ಕೆ ತುತ್ತಾಗಿ ಸಾಯುತ್ತಾರೆ. ಹೀಗೆ ಯಜಮಾನನು ಯುದ್ಧದಲ್ಲಿ ಗೆಲ್ಲುತ್ತಾನೆ.

ವಾ ಏಷ ಏತಾನುಚ್ಛತಿ ಯೇಷಾಂ ಪೂರ್ವಾಪರಾ ಅನ್ವಂಚಃ

ಪ್ರಮೀಯಂತೇ ಪುರುಷಾಹುತಿರ್ಹ್ಯಸ್ಯ ಪ್ರಿಯತಮಾಽಗ್ನಯೇ

ಕ್ಷಾಮವತೇ ಪುರೋಡಾಶಮಷ್ಟಾಕಪಾಲಂ

---

ವೈ । ಏಷಃ । ಏತಾನ್ । ಉಚ್ಛತಿ । ಯೇಷಾಮ್ । ಪೂರ್ವಾಪರಾ ಇತಿ ಪೂರ್ವ-ಅಪರಾಃ । ಅನ್ವಂಚಃ । ಪ್ರಮೀಯಂತ ಇತಿ ಪ್ರ-ಮೀಯಂತೇ । ಪುರುಷಾಹುತಿರಿತಿ ಪುರುಷ-ಆಹುತಿಃ । ಹಿ । ಅಸ್ಯ । ಪ್ರಿಯತಮೇತಿ ಪ್ರಿಯ-ತಮಾ । **ಅಗ್ನಯೇ** । ಕ್ಷಾಮವತ ಇತಿ ಕ್ಷಾಮ-ವತೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ ।

---

**ಮತ್ತೊಂದು ಫಲಕ್ಕಾಗಿ ಇಷ್ಟಿಯ ವಿಧಾನ; ಉಪೋದ್ಘಾತ**

| | |
|---|---|
| **ಯೇಷಾಮ್ ಪೂರ್ವಾಪರಾಃ ಅನ್ವಂಚಃ ಪ್ರಮೀಯಂತೇ** | ಯಾರ ಮನೆಯಲ್ಲಿ ದೊಡ್ಡವರೂ, ಚಿಕ್ಕವರೂ ಒಂದೇ ಸಮನಾಗಿ ಸಾಯುತ್ತಾರೆಯೋ |
| **ಏಷಃ ಏತಾನ್ ಅಭಿ ವೈ ಉಚ್ಛತಿ** | ಅವರ ಆ ಬಂಧುಗಳನ್ನು ಅಗ್ನಿಯು ತನ್ನ ಆಹಾರಕ್ಕಾಗಿ ಹೊಂದುತ್ತಾನೆ. |
| **ಅಸ್ಯ ಪುರುಷಾಹುತಿಃ ಪ್ರಿಯತಮಾ ಹಿ** | ಅಗ್ನಿಗೆ ಪುರುಷಾಹುತಿಯು ಅತ್ಯಂತ ಪ್ರಿಯವಾದುದಷ್ಟೆ. |

**ಕ್ಷಾಮವತೀಷ್ಟಿಯ ವಿಧಿ; ಪ್ರಶಂಸೆ**

| | |
|---|---|
| ಕ್ಷಾಮವತೇ ಅಗ್ನಯೇ ಪುರೋಡಾಶಮ್ ಅಷ್ಟಾಕಪಾಲಮ್ | [ಮನೆಯಲ್ಲಿ ಆಕಸ್ಮಿಕ ಸಾವುಗಳು ಸಂಭವಿಸಿದಾಗ] ಕ್ಷಾಮವಂತನೆಂಬ ಅಗ್ನಿಗಾಗಿ ಅಷ್ಟಾಕಪಾಲಪುರೋಡಾಶಯಾಗವನ್ನು |

---

ಯಾರ ಮನೆಯಲ್ಲಾದರೂ ಹಿರಿಯರೂ, ಕಿರಿಯರೂ ಅವಿಚ್ಛಿನ್ನವಾಗಿ ಸಾಯುತ್ತಾರೆಯೋ ಅವರ ಸಾವಿಗೆ ಅಗ್ನಿಯು ತನ್ನ ಆಹಾರಕ್ಕಾಗಿ ಅವರನ್ನು ಸ್ವೀಕರಿಸುವುದೇ ಕಾರಣ. ಏಕೆಂದರೆ ಅಗ್ನಿದೇವನಿಗೆ ಪುರುಷರ ಆಹುತಿಯು ಅತ್ಯಂತ ಪ್ರಿಯವಾದುದು. ಹೀಗಾಗಿ ಮನೆಯಲ್ಲಿ ಆಕಸ್ಮಿಕ ಸಾವುಗಳು ಸಂಭವಿಸಿದರೆ ಅದರ ಪರಿಹಾರಕ್ಕಾಗಿ ಮನೆಯ

ನಿರ್ವಪೇದ್ಭಾಗಧೇಯೇನೈವೈನಗ್ಂ ಶಮಯತಿ ನೈಷಾಂ

ಪುರಾಽಽಯುಷೋಽಪರಃ ಪ್ರಮೀಯತೇಽಭಿ ವಾ ಏಷ

ಏತಸ್ಯ ಗೃಹಾನುಚ್ಯತಿ ಯಸ್ಯ ಗೃಹಾನ್ದಹತ್ಯಗ್ನಯೇ

---

ನಿರಿತಿ। ವಪೇತ್। ಭಾಗಧೇಯೇನೇತಿ ಭಾಗ–ಧೇಯೇನ। ಏವ। ಏನಮ್। ಶಮಯತಿ।

ನ। ಏಷಾಮ್। ಪುರಾ। ಆಯುಷಃ। ಅಪರಃ। ಪ್ರೇತಿ। ಮೀಯತೇ। **ಅಭೀತಿ**। ವೈ। ಏಷಃ।

ಏತಸ್ಯ। ಗೃಹಾನ್। ಉಚ್ಯತಿ। ಯಸ್ಯ। ಗೃಹಾನ್। ದಹತಿ। ಅಗ್ನಯೇ।

---

| | |
|---|---|
| ನಿರ್ವಪೇತ್ | ಮಾಡಬೇಕು. |
| ಭಾಗಧೇಯೇನ ಏವ ಏನಮ್ ಶಮಯತಿ | [ಈ ಯಾಗದಿಂದ ಯಜಮಾನನು] ಅಗ್ನಿಗೆ ಸಲ್ಲಬೇಕಾದ ಭಾಗವನ್ನು ಸಮರ್ಪಿಸಿ, ತನ್ನ ವಿಷಯದಲ್ಲಿ ಶಾಂತಗೊಳಿಸುತ್ತಾನೆ. |
| ಏಷಾಮ್ ಆಯುಷಃ ಪುರಾ ಅಪರಃ ನ ಪ್ರಮೀಯತೇ | ಯಜಮಾನನ ಸಂಬಂಧಿಗಳಲ್ಲಿ ಬೇರೆ ಯಾವನೊಬ್ಬನೂ ಪೂರ್ಣವಾದ ಆಯುಸ್ಸಿಗೆ ಮೊದಲು ಸಾಯುವುದಿಲ್ಲ. |

**ಅಗ್ನಿಯಿಂದ ಗೃಹದಾಹವಾದರೆ ಮಾಡಬೇಕಾದ ಇಷ್ಟಿ; ವಿಧಿ; ಪ್ರಶಂಸೆ**

| | |
|---|---|
| ಯಸ್ಯ ಗೃಹಾನ್ ದಹತಿ | ಅಗ್ನಿಯು ಯಾವ ಮನೆಯನ್ನು ಸುಡುತ್ತಾನೆಯೋ |
| ಏಷಃ ಏತಸ್ಯ ಗೃಹಾನ್ ಅಭಿ ಉಚ್ಯತಿ ವೈ | ಈ ಅಗ್ನಿಯು ಈ ಯಜಮಾನನ ಮನೆಯನ್ನು ಆಹುತಿಯಾಗಿ ಹೊಂದುತ್ತಾನೆ. |

---

ಯಜಮಾನನು ಕ್ಷಾಮವತೀಷ್ಟಿಯನ್ನು ಮಾಡಬೇಕು. ಇದರಿಂದ ಅಗ್ನಿಯು ತೃಪ್ತನಾಗಿ ಯಜಮಾನನ ವಿಷಯದಲ್ಲಿ ಶಾಂತನಾಗುತ್ತಾನೆ. ಯಜಮಾನನ ಬಂಧುಗಳನ್ನು ತನ್ನ ಆಹಾರಕ್ಕಾಗಿ ಅಪೇಕ್ಷಿಸುವುದಿಲ್ಲ. ಇದರಿಂದ ಯಜಮಾನನ ಮನೆಯಲ್ಲಿ ಎಲ್ಲರೂ ಪೂರ್ಣಾಯುಷ್ಮಂತರಾಗಿ ಬಾಳುತ್ತಾರೆ.

ಕ್ಷಾಮವತೇ ಪುರೋಡಾಶಮಷ್ಟಾಕಪಾಲಂ

ನಿರ್ವಪೇದ್ಭಾಗಧೇಯೇನೈವೈನಗ್ಂ ಶಮಯತಿ

ನಾಸ್ಯಾಪರಂ ಗೃಹಾನ್ದಹತಿ ||೧೦-2||

[ವ್ರತಪತಯೇ ನಿಶಿತಾಯಾಂ ನಿರ್ವಪೇತ್ಪುರುಷಾಸ್ಸಂಗ್ರಾಮಂ ನ ಚತ್ವಾರಿ ಚ ||]

---

ಕ್ಷಾಮವತ ಇತಿ ಕ್ಷಾಮ-ವತೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ನಿರಿತಿ । ವಪೇತ್ । ಭಾಗಧೇಯೇನೇತಿ ಭಾಗ-ಧೇಯೇನ । ಏವ । ಏನಮ್ । ಶಮಯತಿ । ನ । ಅಸ್ಯ । ಅಪರಮ್ । ಗೃಹಾನ್ । ದಹತಿ ||

---

| | |
|---|---|
| ಅಗ್ನಯೇ ಕ್ಷಾಮವತೇ ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್ | [ಯಜಮಾನನು ಮತ್ತೆ ಗೃಹದಾಹವಾಗದಂತೆ ಮಾಡಲು] ಕ್ಷಾಮವಂತನಾದ ಅಗ್ನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| ಭಾಗಧೇಯೇನ ಏವ ಏನಮ್ ಶಮಯತಿ | ಯಜಮಾನನು ಹವಿಸ್ಸನ್ನು ಸಮರ್ಪಿಸಿ ಅಗ್ನಿಯನ್ನು ತನ್ನ ವಿಷಯದಲ್ಲಿ ಶಾಂತನನ್ನಾಗಿ ಮಾಡುತ್ತಾನೆ. |
| ಅಸ್ಯ ಗೃಹಾನ್ ಅಪರಮ್ ನ ದಹತಿ | ತೃಪ್ತನಾದ ಅಗ್ನಿಯು ಮತ್ತೊಮ್ಮೆ ಯಜಮಾನನ ಮನೆಯನ್ನು ಸುಡುವುದಿಲ್ಲ. |

---

ಮನೆಯು ಸುಟ್ಟುಹೋದರೆ ಅಗ್ನಿಯು ಆತನ ಆ ಮನೆಯನ್ನು ತನ್ನ ಗ್ರಾಸ ಮಾಡಿಕೊಳ್ಳುವುದೇ ಕಾರಣ. ಯಜಮಾನನು ಕ್ಷಾಮವತೀಷ್ಟಿಯನ್ನು ಮಾಡಿದರೆ ಹವಿರ್ಭಾಗದಿಂದ ತೃಪ್ತನಾದ ಅಗ್ನಿಯು ಯಜಮಾನನ ವಿಷಯದಲ್ಲಿ ಶಾಂತನಾಗುತ್ತಾನೆ. ಮತ್ತೊಮ್ಮೆ ಆತನ ಮನೆಯನ್ನು ಸುಡುವುದಿಲ್ಲ.

# ದ್ವಿತೀಯಾನುವಾಕ ವಿಷಯ ಸಂಗ್ರಹ

**ದರ್ಶಾದ್ಯತಿಕ್ರಮೇಽಷ್ಟಾಕಪಾಲಃ ಪಥಿಕೃತೇಽಗ್ನಯೇ ।**
**ಅವ್ರತ್ಯಾಚರಣೇಽಷ್ಟಾಕಪಾಲಂ ವ್ರಾತಪತಂ ಚರೇತ್ ॥**

**ಏತದೀಯಾರ್ಕ್ಷರಾರ್ಥಸ್ತೂಭಾ ವಾಮಿತ್ಯತ್ರ ವರ್ಣಿತಃ ।**
**ಪಿಶಾಚಗ್ರಹಬಾಧೇ ತು ಯಜೇದ್ರಾಕ್ಷೋಘ್ನಕಂ ಹವಿಃ ॥**

**ಅರ್ಥವಾದಸ್ತ್ವೇತದೀಯಃ ಕೃಣುಷ್ವೇತ್ಯತ್ರ ವರ್ಣಿತಃ ।**
**ಶತ್ರುಂ ಯೋಽಭಿಚರೇದೇಷಃ ಕುರ್ಯಾದ್ರುದ್ರವತೇ ಹವಿಃ ॥**

**ಕುರ್ಯಾತ್ಸುರಭಿಮದ್ಯಾಗಂ ನರಗೋಮೃತಿತದ್ಭಯೇ ।**
**ಯುಯುತ್ಸುರಪಮೃತ್ಯುಭ್ಯೋ ಭೀತಶ್ಚ ಗೃಹದಾಹವಾನ್ ॥**

**ಏತೇ ತ್ರಯೋಽಷ್ಟಾಕಪಾಲಂ ಕುರ್ಯುಃ ಕ್ಷಾಮವತೇಽಗ್ನಯೇ ।**
**ಅನುವಾಕೇ ದ್ವಿತೀಯೇ ತು ಸ್ಥಿತಾಃ ಪಾಥಿಕೃದಾದಯಃ ॥**

ದರ್ಶ–ಪೂರ್ಣಮಾಸ ಇಷ್ಟಿಗಳನ್ನು ಮಾಡಲು ತಪ್ಪಿದವನು ಪಥಿಕೃದಗ್ನಿಗೆ ಅಷ್ಟಾಕಪಾಲ ಪುರೋಡಾಶಯಾಗವನ್ನೂ, ಆಹಿತಾಗ್ನಿಯಾದವನು ವ್ರತವಿರುದ್ಧ ಕಾರ್ಯವನ್ನೆಸಗಿದರೆ ಅಷ್ಟಾಕಪಾಲಪುರೋಡಾಶಯಾಗವನ್ನು ಅನುಷ್ಠಿಸಬೇಕು. **'ಉಭಾ ವಾವ್' [ತೈಸಂ.1.1.14]** ಅನುವಾಕದಲ್ಲಿ ಇದರ ವಿವರಣೆಯು ಇದೆ. ಪಿಶಾಚಗ್ರಹ ಬಾಧೆಯುಂಟಾದವನು ರಕ್ಷೋಹಾಗ್ನಿದೇವನಿಗೆ ಅಷ್ಟಾಕಪಾಲಪುರೋಡಾಶ ಯಾಗವನ್ನು ಮಾಡಬೇಕು. ಇದರ ಅರ್ಥವಾದವು **'ಕೃಣುಷ್ವ' [ತೈ.ಸಂ.1.2.14]** ಅನುವಾಕದಲ್ಲಿ ವಿವರಿಸಲ್ಪಟ್ಟಿದೆ. ಶತ್ರುನಾಶವನ್ನು ಬಯಸುವವನು ರುದ್ರವದಗ್ನಿಗೆ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಮನೆಯಲ್ಲಿ ಭೃತ್ಯರಾಗಲೀ, ಹಸುವೇ ಮೊದಲಾದ ಪ್ರಾಣಿಗಳಾಗಲೀ ಅಕಾಲಿಕ ಸಾವಿಗೆ ಒಳಗಾದರೆ ಸುರಭಿಮದಗ್ನಿಗೆ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಯುದ್ಧದಲ್ಲಿ ಗೆಲ್ಲಬಯಸುವವನೂ, ಅಪಮೃತ್ಯುವಿನಿಂದ ಭೀತನೂ, ಅಗ್ನಿಯಿಂದ ಮನೆ ಸುಟ್ಟು ಕೊಂಡವನೂ ಕ್ಷಾಮವದಗ್ನಿಗೆ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು.

* * *

## ॥ ತೃತೀಯೋನುವಾಕಃ ॥

ಅಗ್ನಯೇ ಕಾಮಾಯ ಪುರೋಡಾಶಮಷ್ಟಾಕಪಾಲಂ

ನಿರ್ವಪೇದ್ಯಂ ಕಾಮೋ ನೋಪನಮೇದಗ್ನಿಮೇವ

ಕಾಮಗ್ಂ ಸ್ವೇನ ಭಾಗಧೇಯೇನೋಪಧಾವತಿ

---

**ಅಗ್ನಯೇ** । ಕಾಮಾಯ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ ।

ನಿರಿತಿ । ವಪೇತ್ । ಯಮ್ । ಕಾಮಃ । ನ । ಉಪನಮೇದಿತ್ಯುಪ–ನಮೇತ್ । ಅಗ್ನಿಮ್ ।

ಏವ । ಕಾಮಮ್ । ಸ್ವೇನ । ಭಾಗಧೇಯೇನೇತಿ ಭಾಗ – ಧೇಯೇನ । ಉಪೇತಿ । ಧಾವತಿ ।

---

**ಇಚ್ಛಾಪೂರಣಾರ್ಥವಾದ ಕಾಮಾಗ್ನೀಷ್ಟಿವಿಧಿ; ಪ್ರಶಂಸೆ;**

| | |
|---|---|
| ಯಮ್ ಕಾಮಃ ನ ಉಪನಮೇತ್ | ಯಾವ ಯಜಮಾನನು ಇಚ್ಛಿಸಿದ ಕಾಮನೆಯು ಕೈಗೂಡುವುದಿಲ್ಲವೋ |
| [ಸಃ] ಅಗ್ನಯೇ ಕಾಮಾಯ ಪುರೋಡಾಶಮ್ ಅಷ್ಟಾ–ಕಪಾಲಮ್ ನಿರ್ವಪೇತ್ | [ಅವನು] ಕಾಮಪ್ರದನಾದ ಅಗ್ನಿದೇವನಿಗಾಗಿ ಅಷ್ಟಾಕಪಾಲಪುರೋಡಾಶಯಾಗವನ್ನು ಮಾಡಬೇಕು. |
| ಕಾಮಮ್ ಅಗ್ನಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಈ ಯಾಗದಿಂದ] ಇಚ್ಛೆಯನ್ನು ಪೂರ್ಣಗೊಳಿಸುವ ಅಗ್ನಿಗೆ ಅವನ ಹವಿರ್ಭಾಗವನ್ನಿತ್ತು ಸುಪ್ರೀತನನ್ನಾಗಿ ಮಾಡುತ್ತಾನೆ. |

---

ಮಾನವನು ಆರಂಭಿಸುವ ಹಲವು ಕಾರ್ಯಗಳು ಇಚ್ಛಿಸಿದ ಫಲವನ್ನು ಕೊಡದಿರಬಹುದು. ಅಂತಹ ಸಮಯದಲ್ಲಿ ಕಾಮಾಗ್ನಿದೇವನಿಗಾಗಿ ಅಷ್ಟಾಕಪಾಲಪುರೋಡಾಶಯಾಗವನ್ನು ಮಾಡಬೇಕು. ಇದರಿಂದ ಕಾಮಪ್ರದನಾದ ಅಗ್ನಿದೇವನು ತೃಪ್ತನಾಗುತ್ತಾನೆ.

ಸ ಏವೈನಂ ಕಾಮೇನ ಸಮರ್ಧಯತ್ಯುಪೈನಂ ಕಾಮೋ
ನಮತ್ಯಗ್ನಯೇ ಯವಿಷ್ಠಾಯ ಪುರೋಡಾಶಮಷ್ಟಾಕಪಾಲಂ
ನಿರ್ವಪೇತ್ಸ್ಪರ್ಧಮಾನಃ ಕ್ಷೇತ್ರೇ ವಾ ಸಜಾತೇಷು ವಾಽಗ್ನಿ
ಮೇವ ಯವಿಷ್ಠಗ್‌ಂ ಸ್ವೇನ ಭಾಗಧೇಯೇನೋಪಧಾವತಿ

---

ಸಃ। ಏವ। ಏನಮ್। ಕಾಮೇನ। ಸಮಿತಿ। ಅರ್ಧಯತಿ। ಉಪೇತಿ। ಏನಮ್। ಕಾಮಃ। ನಮತಿ। **ಅಗ್ನಯೇ।** ಯವಿಷ್ಠಾಯ। ಪುರೋಡಾಶಮ್। ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್। ನಿರಿತಿ। ವಪೇತ್। ಸ್ಪರ್ಧಮಾನಃ। ಕ್ಷೇತ್ರೇ। ವಾ। ಸಜಾತೇಷ್ವಿತಿ ಸ-ಜಾತೇಷು। ವಾ। ಅಗ್ನಿಮ್। ಏವ। ಯವಿಷ್ಠಮ್। ಸ್ವೇನ। ಭಾಗಧೇಯೇನೇತಿ ಭಾಗ-ಧೇಯೇನ। ಉಪೇತಿ। ಧಾವತಿ।

---

| | |
|---|---|
| ಸಃ ಏವ ಏನಮ್ ಕಾಮೇನ ಸಮರ್ಧಯತಿ | ತೃಪ್ತನಾದ ಕಾಮಾಗ್ನಿಯು ಈ ಯಜಮಾನನನ್ನು ಪೂರ್ಣಕಾಮನನ್ನಾಗಿ ಮಾಡುತ್ತಾನೆ. |
| ಏನಮ್ ಕಾಮಃ ಉಪನಮತಿ | ಈ ಯಜಮಾನನ ಇಷ್ಟಾರ್ಥವು ಸಂಪ್ರಾಪ್ತವಾಗುತ್ತದೆ. |

**ಸ್ಪರ್ಧಾಳುವಿಗೆ ವಿಹಿತವಾದ ಯವಿಷ್ಠೇಷ್ಟಿ – ಪ್ರಶಂಸೆ**

| | |
|---|---|
| ಕ್ಷೇತ್ರೇ ವಾ ಸಜಾತೇಷು ವಾ ಸ್ಪರ್ಧಮಾನಃ ಯವಿಷ್ಠಾಯ ಅಗ್ನಯೇ ಅಷ್ಟಾಕಪಾಲಮ್ ಪುರೋಡಾಶಮ್ ನಿರ್ವಪೇತ್ | ಭೂಮ್ಯಾದಿವಿಷಯದಲ್ಲಿಯಾಗಲೀ, ಸಮಾನರಾದ ಜ್ಞಾತಿಗಳೇ ಮೊದಲಾದವರಲ್ಲಿಯಾಗಲೀ ತಾನು ಮೇಲಾಗಬೇಕೆಂದು ಬಯಸುವವನು ಯವಿಷ್ಠನಾದ ಅಗ್ನಿಗೆ ಅಷ್ಟಾಕಪಾಲಪುರೋಡಾಶವನ್ನು ಯಾಗ ಮಾಡಬೇಕು. |
| ಯವಿಷ್ಠಮ್ ಅಗ್ನಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಈ ಯಾಗದಿಂದ ಯಜಮಾನನು] ಯವಿಷ್ಠಾಗ್ನಿಗೆ ಹವಿಸ್ಸನ್ನಿತ್ತು ಸೇವಿಸಿದವನಾಗುತ್ತಾನೆ. |

ತೇನೈವೇಂದ್ರಿಯಂ ವೀರ್ಯಂ ಭ್ರಾತೃವ್ಯಸ್ಯ [(೧) ಯುವತೇ]

ಯುವತೇ ವಿ ಪಾಪ್ಮನಾ ಭ್ರಾತೃವ್ಯೇಣ ಜಯತೇಽಗ್ನಯೇ

ಯವಿಷ್ಠಾಯ ಪುರೋಡಾಶಮಷ್ಟಾಕಪಾಲಂ

ನಿರ್ವಪೇದಭಿಚರ್ಯಮಾಣೋಽಗ್ನಿಮೇವ

---

ತೇನ । ಏವ । ಇಂದ್ರಿಯಮ್ । ವೀರ್ಯಮ್ । ಭ್ರಾತೃವ್ಯಸ್ಯ । ಯುವತೇ । ವೀತಿ । ಪಾಪ್ಮನಾ । ಭ್ರಾತೃವ್ಯೇಣ । ಜಯತೇ । **ಅಗ್ನಯೇ** । ಯವಿಷ್ಠಾಯ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ । ನಿರಿತಿ । ವಪೇತ್ । ಅಭಿಚರ್ಯಮಾಣ ಇತ್ಯಭಿ – ಚರ್ಯಮಾಣಃ । ಅಗ್ನಿಮ್ । ಏವ ।

---

| | |
|---|---|
| ತೇನ ಏವ ಭ್ರಾತೃವ್ಯಸ್ಯ ಇಂದ್ರಿಯಮ್ ವೀರ್ಯಮ್ ಯುವತೇ | ಈ ಯಾಗದಿಂದ ತೃಪ್ತನಾದ ಅಗ್ನಿದೇವನು ವಿರೋಧಿಯ ಇಂದ್ರಿಯಶಕ್ತಿ ಮತ್ತು ಸಾಮರ್ಥ್ಯವನ್ನು ಅವನಿಂದ ಬೇರ್ಪಡಿಸುತ್ತಾನೆ. |
| ಪಾಪ್ಮನಾ ಭ್ರಾತೃವ್ಯೇಣ ವಿ ಜಯತೇ | ಶಕ್ತಿಹೀನನಾದ ಎದುರಾಳಿಯನ್ನು ಯಜಮಾನನು ಗೆಲ್ಲುತ್ತಾನೆ. |

**ಶತ್ರುವಿನ ಆಭಿಚಾರಿಕಕೃತ್ಯಗಳಿಗೆ ಗುರಿಯಾದವನಿಗೆ ವಿಹಿತವಾದ ಯವಿಷ್ಠಾಗ್ನಿ ಯಾಗ – ಪ್ರಶಂಸೆ;**

| | |
|---|---|
| ಅಭಿಚರ್ಯಮಾಣಃ | ವೈರಿಯ ಆಭಿಚಾರಿಕಕೃತ್ಯಗಳಿಗೆ ಗುರಿಯಾದವನು |
| ಅಗ್ನಯೇ ಯವಿಷ್ಠಾಯ ಅಷ್ಟಾಕಪಾಲಮ್ ಪುರೋಡಾಶಮ್ ನಿರ್ವಪೇತ್ | ಯವಿಷ್ಠಾಗ್ನಿಯನ್ನು ಕುರಿತು ಅಷ್ಟಾಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. |

---

ಯಜಮಾನನ ಕಾರ್ಯಗಳನ್ನು ಸಫಲಗೊಳಿಸುತ್ತಾನೆ. ಅವನನ್ನು *ಪೂರ್ಣಕಾಮನನ್ನಾಗಿ ಮಾಡುತ್ತಾನೆ. ಅವನ ಕೆಲಸಗಳು ಸಫಲವಾಗುತ್ತವೆ.

---

* ಇಲ್ಲಿ ಕಾಮವೆಂದರೆ ಕೃಷಿ ಮುಂತಾದ ಫಲಕಾಮನೆಯೆಂದು ಕೆಲವರ ಮತ. ಎಲ್ಲ ವಿಧವಾದ ಫಲಕಾಮನೆ ಎಂದು ಮತ್ತೆ ಕೆಲವರ ಮತ.

ಯವಿಷ್ಠಗ್ಗ್ಂ ಸ್ವೇನ ಭಾಗಧೇಯೇನೋಪಧಾವತಿ ಸ

ಏವಾಸ್ಮಾದ್ರಕ್ಷಾಗ್ಂಸಿ ಯವಯತಿ

ನೈನಮಭಿಚರನ್ಥ್ಸೃಣುತೇಽಗ್ನಯ

ಯವಿಷ್ಠಮ್ । ಸ್ವೇನ । ಭಾಗಧೇಯೇನೇತಿ ಭಾಗ – ಧೇಯೇನ । ಉಪೇತಿ । ಧಾವತಿ ।
ಸಃ । ಏವ । ಅಸ್ಮಾತ್ । ರಕ್ಷಾಗ್ಂಸಿ । ಯವಯತೀ । ನ । ಏನಮ್ । ಅಭಿಚರನ್ನಿತ್ಯಭಿ–
ಚರನ್ । ಸ್ತೃಣುತೇ । ಅಗ್ನಯೇ ।

| | |
|---|---|
| ಅಗ್ನಿಮ್ ಯವಿಷ್ಠಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದಿಂದ ಸ್ವೀಯ ಭಾಗಪ್ರದಾನದಿಂದ ಯವಿಷ್ಠಾಗ್ನಿಯನ್ನು ಉಪಚರಿಸಿದವನಾಗುತ್ತಾನೆ. |
| ಸಃ ಏವ ಅಸ್ಮಾತ್ ರಕ್ಷಾಗ್ಂಸಿ ಯವಯತಿ | ಆ ಯವಿಷ್ಠಾಗ್ನಿಯೇ ಈ ಯಜಮಾನನ ಬಳಿಯಿಂದ ರಾಕ್ಷಸರನ್ನು ದೂರ ಮಾಡುತ್ತಾನೆ. |
| ಅಭಿಚರನ್ ಏನಮ್ ನ ಸ್ತೃಣುತೇ | ಈ ಯಜಮಾನನನ್ನು ಆಭಿಚಾರಿಕ ಯಾಗಾದಿಗಳಿಂದ ಹಿಂಸಿಸಲು ಶತ್ರುವು ಶಕ್ತನಾಗುವುದಿಲ್ಲ. |

ಭೂಮಿಯ ವಿಷಯದಲ್ಲಿಯಾಗಲೀ, ಸಮಾನರ ಮಧ್ಯದಲ್ಲಿ ಜಯಗಳಿಸುವ ವಿಷಯದಲ್ಲಿಯಾಗಲೀ ಸ್ಪರ್ಧಿಸುವವನು ಯವಿಷ್ಠನಾದ ಅಂದರೆ ಬೇರ್ಪಡಿಸುವ ಶಕ್ತಿಯುಳ್ಳ ಅಥವಾ ಅತಿಯುವಕನಾದ ಅಗ್ನಿದೇವನಿಗಾಗಿ ಅಷ್ಟಾಕಪಾಲಪುರೋಡಾಶ ಯಾಗವನ್ನು ಮಾಡಬೇಕು. ಇದರಿಂದ ಯವಿಷ್ಠಾಗ್ನಿಗೆ ತನ್ನ ಭಾಗವು ಲಭಿಸಿ, ಅವನು ಸುಪ್ರೀತನಾಗುತ್ತಾನೆ. ಎದುರಾಳಿಯ ಶಕ್ತಿ–ಸಾಮರ್ಥ್ಯಗಳನ್ನು ಕುಗ್ಗಿಸುತ್ತಾನೆ. ಬಳಿಕ ಆ ಯಜಮಾನನು ಆ ಎದುರಾಳಿಯನ್ನು ಗೆಲ್ಲುತ್ತಾನೆ.

ಶತ್ರುಸಂಹಾರಾರ್ಥವಾಗಿ ಆಭಿಚಾರಿಕಯಾಗಾದಿಗಳನ್ನು ಮಾಡುವುದುಂಟು. ಇಂತಹ ಆಭಿಚಾರಿಕಕೃತ್ಯಕ್ಕೆ ಗುರಿಯಾದವನು ಯವಿಷ್ಠಾಗ್ನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಇದರಿಂದ ಯವಿಷ್ಠಾಗ್ನಿಯು ತನ್ನ ಭಾಗವನ್ನು

ಆಯುಷ್ಮತೇ ಪುರೋಡಾಶಮಷ್ಟಾಕಪಾಲಂ ನಿರ್ವಪೇದ್ಯಃ

ಕಾಮಯೇತ ಸರ್ವಮಾಯುರಿಯಾಮಿತ್ಯಗ್ನಿಮೇವಾ

ಯುಷ್ಮಂತಗ್ಂ ಸ್ವೇನ ಭಾಗಧೇಯೇನೋಪಧಾವತಿ

---

ಆಯುಷ್ಮತೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ । ನಿರಿತಿ ।

ವಪೇತ್ । ಯಃ । ಕಾಮಯೇತ । ಸರ್ವಮ್ । ಆಯುಃ । ಇಯಾಮ್ । ಇತಿ । ಅಗ್ನಿಮ್ ।

ಏವ । ಆಯುಷ್ಮಂತಮ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

**ಆಯುಷ್ಕಾಮನಿಗೆ ವಿಹಿತವಾದ ಆಯುಷ್ಮದಿಷ್ಟಿ–ಪ್ರಶಂಸೆ**

| | |
|---|---|
| ಯಃ ಕಾಮಯೇತ ಸರ್ವಮ್ ಆಯುಃ ಇಯಾಮ್ ಇತಿ | ಯಾವನು ಪೂರ್ಣಾಯುಸ್ಸನ್ನು ಹೊಂದಲು ಬಯಸುವವನೋ |
| [ಸಃ] ಅಗ್ನಯೇ ಆಯುಷ್ಮತೇ ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್ | [ಅವನು] ಆಯುಷ್ಮದಗ್ನಿಗೆ ಅಷ್ಟಾಕಪಾಲ ಪುರೋಡಾಶವನ್ನು ಯಾಗ ಮಾಡಬೇಕು. |
| ಆಯುಷ್ಮಂತಮ್ ಅಗ್ನಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಯಜಮಾನನು ಈ ಯಾಗದಿಂದ] ಆಯುಷ್ಮದಗ್ನಿಗೆ ಇಷ್ಟವಾದ ಭಾಗವನ್ನು ಕೊಟ್ಟು, ಸೇವಿಸಿದವನಾಗುತ್ತಾನೆ. |

---

ಪಡೆದು ತೃಪ್ತನಾಗುತ್ತಾನೆ. ಆತನು ಈ ಯಜಮಾನನನ್ನು ಹಿಂಸಿಸಲು ಬರುವ ರಾಕ್ಷಸಾದಿಗಳನ್ನು ದೂರದಲ್ಲಿಯೇ ಇರುವಂತೆ ಮಾಡಿ ಯಜಮಾನನಿಗೆ ಹಿಂಸೆಯಾಗದಂತೆ ಮಾಡುತ್ತಾನೆ.

ಸ [ಏವಾಸ್ಮಿನ್ನ್(೨) ಆಯುಃ] ಏವಾಸ್ಮಿನ್ನಾಯುರ್ದಧಾತಿ

ಸರ್ವಮಾಯುರೇತ್ಯಗ್ನಯೇ ಜಾತವೇದಸೇ

ಪುರೋಡಾಶಮಷ್ಟಾಕಪಾಲಂ

---

ಸಃ । ಏವ । ಅಸ್ಮಿನ್ನ್ । ಆಯುಃ । ದಧಾತಿ । ಸರ್ವಮ್ । ಆಯುಃ । ಏತಿ । **ಅಗ್ನಯೇ** । ಜಾತವೇದಸ

ಇತಿ ಜಾತ–ವೇದಸೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ ।

---

| | |
|---|---|
| **ಸಃ ಏವ ಅಸ್ಮಿನ್ ಆಯುಃ ದಧಾತಿ** | ಆ ಅಗ್ನಿದೇವನು ಈ ಯಜಮಾನನಿಗೆ ದೀರ್ಘಾಯುಸ್ಸನ್ನು ಕೊಡುತ್ತಾನೆ. |
| **ಸರ್ವಮ್ ಆಯುಃ ಏತಿ** | ಯಜಮಾನನು ಪೂರ್ಣಾಯುಸ್ಸನ್ನು ಪಡೆಯುತ್ತಾನೆ. |

**ಐಶ್ವರ್ಯಕಾಮನಿಗೆ ವಿಹಿತವಾದ ಇಷ್ಟಿ; ಪ್ರಶಂಸೆ**

| | |
|---|---|
| **ಭೂತಿಕಾಮಃ** | ಐಶ್ವರ್ಯವನ್ನು ಅಪೇಕ್ಷಿಸುವವನು |
| **ಅಗ್ನಯೇ ಜಾತವೇದಸೇ** | ಜಾತವೇದಸನಾದ ಅಗ್ನಿಗಾಗಿ |
| **ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್** | ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. |

---

ಪೂರ್ಣಾಯುಸ್ಸನ್ನು* ಪಡೆಯಬೇಕೆಂದಿರುವವನು ಆಯುಷ್ಮದಗ್ನಿಯನ್ನು ಉದ್ದೇಶಿಸಿ, ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಇದರಿಂದ ತೃಪ್ತನಾದ ಆಯುಷ್ಮದಗ್ನಿದೇವನು ಯಜಮಾನನಿಗೆ ಪೂರ್ಣಾಯುಸ್ಸನ್ನು ಕೊಡುತ್ತಾನೆ. ಯಜಮಾನನು ತನ್ನ ಅಪೇಕ್ಷೆಯಂತೆ ದೀರ್ಘಾಯುಷ್ಮಂತನಾಗುತ್ತಾನೆ.

ಐಶ್ವರ್ಯವನ್ನು ಬಯಸುವವನು ಜಾತವೇದೋಗ್ನಿಯನ್ನು ಕುರಿತು ಅಷ್ಟಾಕಪಾಲ ಪುರೋಡಾಶಯಾಗವನ್ನನುಷ್ಠಿಸಬೇಕು.

---

* **ಶತಾಯುರ್ವೈ ಪುರುಷಃ**' ಎಂಬ ಶ್ರುತಿವಾಕ್ಯದಂತೆ ಮಾನವನ ಪೂರ್ಣಾಯುಸ್ಸೆಂದರೆ ನೂರು ವರ್ಷಗಳು. ಛಾಂದೋಗ್ಯೋಪನಿಷತ್ತಿನಲ್ಲಿ ನೂರ ಹದಿನಾರು ವರ್ಷಗಳೆಂದೂ ಇದೆ. (**ಛಾ. ಉ. 3.16.1–7**).

ನಿರ್ವಪೇದ್ಭೂತಿಕಾಮೋಽಗ್ನಿಮೇವ ಜಾತವೇದಸಗ್ಂ ಸ್ವೇನ ಭಾಗಧೇಯೇನೋಪಧಾವತಿ ಸ ಏವೈನಂ ಭೂತಿಂ ಗಮಯತಿ ಭವತ್ಯೇವಾಗ್ನಯೇ ರುಕ್ಮತೇ ಪುರೋಡಾಶಮಷ್ಟಾಕಪಾಲಂ

---

ನಿರಿತಿ । ವಪೇತ್ । ಭೂತಿಕಾಮ ಇತಿ ಭೂತಿ–ಕಾಮಃ । ಅಗ್ನಿಮ್ । ಏವ । ಜಾತವೇದಸಮಿತಿ ಜಾತ–ವೇದಸವಮ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಏನಮ್ । ಭೂತಿಮ್ । ಗಮಯತಿ । ಭವತಿ । ಏವ । ಅಗ್ನಯೇ । ರುಕ್ಮತೇ। ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ ।

---

| | |
|---|---|
| ಅಗ್ನಿಮ್ ಏವ ಜಾತವೇದಸವಮ್ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದ ಹವಿರ್ಭಾಗವನ್ನಿತ್ತು ಜಾತವೇದೋಗ್ನಿಯನ್ನು ಸೇವಿಸಿದವನಾಗುತ್ತಾನೆ. |
| ಸಃ ಏವ ಏನಮ್ ಭೂತಿಮ್ ಗಮಯತಿ | ಆ ಜಾತವೇದೋಗ್ನಿಯು ಈ ಯಜಮಾನನು ಐಶ್ವರ್ಯವನ್ನು ಪಡೆಯುವಂತೆ ಮಾಡುತ್ತಾನೆ. |
| ಭವತಿ ಏವ | ಯಜಮಾನನು ಧನವಂತನೇ ಆಗುತ್ತಾನೆ. |

**ಕಾಂತಿಕಾಮನಿಗೆ ವಿಹಿತವಾದ ಇಷ್ಟಿ; ಪ್ರಶಂಸೆ**

| | |
|---|---|
| ರುಕ್ಕಾಮಃ ಅಗ್ನಯೇ ರುಕ್ಮತೇ | ಕಾಂತಿಯನ್ನು ಬಯಸುವವನು ರುಕ್ಮಂತನಾದ ಅಗ್ನಿಗಾಗಿ |
| ಅಷ್ಟಾಕಪಾಲಮ್ ಪುರೋಡಾಶಮ್ | ಅಷ್ಟಾಕಪಾಲ ಪುರೋಡಾಶಯಾಗವನ್ನು |

---

ಇದರಿಂದ ತೃಪ್ತನಾದ ಜಾತವೇದೋಗ್ನಿಯು ಯಜಮಾನನಿಗೆ ಐಶ್ವರ್ಯವನ್ನು ನೀಡುತ್ತಾನೆ. ಯಜಮಾನನು ಧನೇಶ್ವರನೇ ಆಗುತ್ತಾನೆ.

ಕಾಂತಿಯನ್ನು ಬಯಸುವ ಯಜಮಾನನು ರುಕ್ಮಂತನಾದ ಅಗ್ನಿಯನ್ನು ಕುರಿತು ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಿ ಅವನನ್ನು ಸಂತೋಷಪಡಿಸಬೇಕು.

ನಿರ್ವಪೇದ್ರುಕ್ಕಾಮೋಽಗ್ನಿಮೇವ ರುಕ್ಮಂತಗ್‌ಂ ಸ್ವೇನ ಭಾಗ
ಧೇಯೇನೋಪಧಾವತಿ ಸ ಏವಾಸ್ಮಿನ್ರುಚಂ ದಧಾತಿ ರೋಚತ
ಏವಾಗ್ನಯೇ ತೇಜಸ್ವತೇ ಪುರೋಡಾಶಮಷ್ಟಾಕಪಾಲಂ

---

ನಿರಿತಿ। ವಪೇತ್। ರುಕ್ಕಾಮ ಇತಿ ರುಕ್–ಕಾಮಃ। ಅಗ್ನಿಮ್। ಏವ। ರುಕ್ಮಂತಮ್। ಸ್ವೇನ। ಭಾಗಧೇಯೇನೇತಿ ಭಾಗ–ಧೇಯೇನ। ಉಪೇತಿ। ಧಾವತಿ। ಸಃ। ಏವ। ಅಸ್ಮಿನ್ನ್। ರುಚಮ್। ದಧಾತಿ। ರೋಚತೇ। ಏವ। **ಅಗ್ನಯೇ**। ತೇಜಸ್ವತೇ। ಪುರೋಡಾಶಮ್। ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್।

---

| | |
|---|---|
| ನಿರ್ವಪೇತ್ | ಮಾಡಬೇಕು. |
| ರುಕ್ಮಂತಮ್ ಅಗ್ನಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಯಜಮಾನನು ಈ ಯಾಗದಿಂದ] ರುಕ್ಮಂತನಾದ ಅಗ್ನಿಗೆ ಸಲ್ಲಬೇಕಾದ ಭಾಗವನ್ನು ಕೊಟ್ಟು ಆರಾಧಿಸಿದವನಾಗುತ್ತಾನೆ. |
| ಸಃ ಅಸ್ಮಿನ್ ರುಚಮ್ ದಧಾತಿ ಏವ | ಆ ಅಗ್ನಿದೇವನು ಈ ಯಜಮಾನನಿಗೆ ಕಾಂತಿಯನ್ನು ಕೊಟ್ಟೇ ಕೊಡುತ್ತಾನೆ. |
| ರೋಚತೇ ಏವ | ಯಜಮಾನನು ಕಾಂತಿಮಂತನೇ ಆಗುತ್ತಾನೆ. |

**ತೇಜಸ್ಕಾಮನಿಗೆ ವಿಹಿತವಾದ ಇಷ್ಟಿ; ಪ್ರಶಂಸೆ**

| | |
|---|---|
| ತೇಜಸ್ಕಾಮಃ ಅಗ್ನಯೇ ತೇಜಸ್ವತೇ ಅಷ್ಟಾಕಪಾಲಮ್ ಪುರೋಡಾಶಮ್ | ತೇಜಸ್ಸನ್ನು ಅಪೇಕ್ಷಿಸುವವನು ತೇಜಸ್ವದಗ್ನಿಯನ್ನು ಉದ್ದೇಶಿಸಿ ಅಷ್ಟಾಕಪಾಲ ಪುರೋಡಾಶಯಾಗವನ್ನು |
| ನಿರ್ವಪೇತ್ | ಮಾಡಬೇಕು. |

---

ತೃಪ್ತನಾದ ರುಕ್ಮಂತನಾದ ಅಗ್ನಿಯು ಯಜಮಾನನಿಗೆ ಕಾಂತಿಯನ್ನು ಕೊಡುತ್ತಾನೆ. ಯಜಮಾನನು ಕಾಂತಿಮಂತನಾಗುತ್ತಾನೆ.

ತೇಜಸ್ಸನ್ನು [ಬೇರೆಯವರನ್ನು ನಿಗ್ರಹದಲ್ಲಿಡುವ ಶಕ್ತಿ] ಬಯಸುವವನು ತೇಜಸ್ವದಗ್ನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಇದರಿಂದ

ನಿರ್ವಪೇತ್ತೇಜಸ್ಕಾಮೋಽಗ್ನಿಮೇವ ತೇಜಸ್ವಂತಗ್ಂ ಸ್ವೇನ

ಭಾಗಧೇಯೇನೋಪಧಾವತಿ ಸ ಏವಾಸ್ಮಿನ್ತೇಜೋ

ದಧಾತಿ ತೇಜಸ್ವ್ಯೇವ ಭವತ್ಯಗ್ನಯೇ ಸಾಹಂತ್ಯಾಯ

---

ತೇಜಸ್ಕಾಮ ಇತಿ ತೇಜಃ – ಕಾಮಃ । ಅಗ್ನಿಮ್ । ಏವ । ತೇಜಸ್ವಂತಮ್ । ಸ್ವೇನ ।

ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮಿನ್ । ತೇಜಃ ।

ದಧಾತಿ । ತೇಜಸ್ವೀ । ಏವ । ಭವತಿ । **ಅಗ್ನಯೇ** । ಸಾಹಂತ್ಯಾಯ ।

---

| | |
|---|---|
| ತೇಜಸ್ವಂತಮ್ ಅಗ್ನಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ತೇಜಸ್ವದಗ್ನಿಗೆ ಹವಿರ್ಭಾಗವನ್ನಿತ್ತು ಸಂತೋಷಪಡಿಸುತ್ತಾನೆ. |
| ಸಃ ಏವ ಅಸ್ಮಿನ್ ತೇಜಃ ದಧಾತಿ | ಆ ತೇಜಸ್ವದಗ್ನಿಯೇ ಈ ಯಜಮಾನನಲ್ಲಿ ತೇಜಸ್ಸನ್ನು ನೆಲೆಗೊಳಿಸುತ್ತಾನೆ. |
| ತೇಜಸ್ವೀ ಭವತಿ ಏವ ಸಾಹಂತ್ಯಾಯ* ಅಗ್ನಯೇ | ಯಜಮಾನನು ತನ್ನ ಇಚ್ಛೆಯಂತೆ ತೇಜಸ್ವಿಯೇ ಆಗುತ್ತಾನೆ. |

**ಶತ್ರುಗಳನ್ನು ಸೋಲಿಸಬೇಕೆನ್ನುವವನಿಗೆ ಇಷ್ಟಿವಿಧಾನ; ಪ್ರಶಂಸೆ**

| | |
|---|---|
| ಸೀಕ್ಷಮಾಣಃ* ಅಷ್ಟಾಕಪಾಲಮ್ | ಶತ್ರುಗಳನ್ನು ಚೆನ್ನಾಗಿ ಅಡಗಿಸಬಲ್ಲ ಅಗ್ನಿಗಾಗಿ |

---

ಯಜಮಾನನು ತೇಜಸ್ವದಗ್ನಿಗೆ ತಕ್ಕ ಭಾಗವನ್ನು ಕೊಟ್ಟು ಸೇವಿಸಿದಂತಾಗುತ್ತದೆ. ತೇಜಸ್ವದಗ್ನಿಯ ಅನುಗ್ರಹದಿಂದ ಯಜಮಾನನು ತೇಜಸ್ಸನ್ನು ಪಡೆದು ತೇಜಸ್ವಿಯಾಗುತ್ತಾನೆ.

---

* ಸಾಧು ಅಭಿಭವತಿ = ಸಾಹಂತ್ಯ. **ಭ. ಭಾ. ಭಾ.**

ಪುರೋಡಾಶಮಷ್ಟಾಕಪಾಲಂ ನಿರ್ವಪೇತ್ಸೀಕ್ಷಮಾಣೋಽ

ಗ್ನಿಮೇವ ಸಾಹಂತ್ಯಗ್ಗ್ಂ ಸ್ವೇನ ಭಾಗಧೇಯೇನೋಪ

ಧಾವತಿ ತೇನೈವ ಸಹತೇ ಯಗ್ಂ ಸೀಕ್ಷತೇ ||೧೪-3||

[ಭ್ರಾತೃವ್ಯಸ್ಯಾಸ್ಮಿನ್ತ್ರೇಜಸ್ವತೇ ಪುರೋಡಾಶಮಷ್ಟಾತ್ರಿಗ್ಂಶಚ್ಚ ||]

---

ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ನಿರಿತಿ । ವಪೇತ್ ।

ಸೀಕ್ಷಮಾಣಃ । ಅಗ್ನಿಮ್ । ಏವ । ಸಾಹಂತ್ಯಮ್ । ಸ್ವೇನ । ಭಾಗಧೇಯೇನೇತಿ ಭಾಗ-

ಧೇಯೇನ । ಉಪೇತಿ । ಧಾವತಿ । ತೇನ । ಏವ । ಸಹತೇ । ಯಮ್ । ಸೀಕ್ಷತೇ ||3||

---

| | |
|---|---|
| ಪುರೋಡಾಶಮ್ ನಿರ್ವಪೇತ್ | ಶತ್ರುಗಳನ್ನು ಅಡಗಿಸಬೇಕೆನ್ನುವವನು ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| ಸಾಹಂತ್ಯಮ್ ಅಗ್ನಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದಿಂದ ಯಜಮಾನನು ಸಾಹಂತ್ಯಾಗ್ನಿಯನ್ನು ಸೇವಿಸಿದವನಾಗುತ್ತಾನೆ. |
| ಯಮ್ ಸೀಕ್ಷತೇ | ಯಾವ ಹಗೆಯನ್ನು ನಿಗ್ರಹಿಸಬೇಕೆಂದಿರುತ್ತಾನೆಯೋ [ಅವನನ್ನು] |
| ತೇನ ಏವ ಸಹತೇ | ಆ ಸಾಹಂತ್ಯಾಗ್ನಿಯ ನೆರವಿನಿಂದಲೇ ಯಜಮಾನನು ನಿಗ್ರಹಿಸುತ್ತಾನೆ. |

---

* ಶತ್ರುಗಳನ್ನು ಕ್ಷಮಿಸಬೇಕೆನ್ನುವವನು ಎಂದು ಕೆಲವರ ಮತ. ಭ. ಭಾ. ಭ.

ಶತ್ರುವನ್ನು ನಿಗ್ರಹಿಸಬೇಕೆನ್ನುವವನು /**ಕ್ಷಮಿಸಬೇಕೆನ್ನುವವನು** ಸಾಹಂತ್ಯಾಗ್ನಿಯನ್ನು ಉದ್ದೇಶಿಸಿ, ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಆ ಅಗ್ನಿದೇವನಿಗೆ ಬೇಕಾದ ಹವಿರ್ಭಾಗವು ದೊರೆತು, ಅವನು ಸುಪ್ರೀತನಾಗುತ್ತಾನೆ. ಆತನ ಅನುಗ್ರಹ ದಿಂದ ಯಜಮಾನನು ಶತ್ರುಜಯವನ್ನು ಪಡೆಯುತ್ತಾನೆ.

## ತೃತೀಯಾನುವಾಕವಿಷಯಸಂಗ್ರಹ

**ಕಾಮೋಪನತಿಮಾಕಾಂಕ್ಷನ್ ಕಾಮುಕಾಯಾಗ್ನಯೇ ಚರೇತ್ ।**
**ಸ್ಪರ್ಧಮಾನೋ ಯವಿಷ್ಠಾಯ ವಹ್ನಯೇ ಹವಿರಾಚರೇತ್ ॥**

**ತಥಾಽಭಿಚರ್ಯಮಾಣೋಽಪಿ ಯವಿಷ್ಠಾಯ ಹವಿಶ್ಚರೇತ್ ।**
**ಕೃತ್ಸ್ನಾಯುಃಪ್ರಾಪ್ತಯೇ ಕುರ್ಯಾದ್ಧವಿರಾಯುಷ್ಮತೇಽಗ್ನಯೇ ॥**

**ಭೂತಿಕಾಮೋ ಹವಿಃ ಕುರ್ಯಾದ್ವಹ್ನಯೇ ಜಾತವೇದಸೇ ।**
**ಕಾಂತಿಕಾಮೋಽಷ್ಟಾಕಪಾಲಮಾಚರೇದ್ರುಕ್ಮತೇಽಗ್ನಯೇ ॥**

**ಆಜ್ಞಾಂ ಕರ್ತುಮಭೀಪ್ಸುಸ್ಸನ್ಕುರ್ಯಾತ್ತೇಜಸ್ವತೇಽಗ್ನಯೇ ।**
**ವೈರಿಣೋಽಭಿಭವಂ ಕಾಂಕ್ಷನ್ ಸಾಹಂತ್ಯಾಯ ಹವಿಶ್ಚರೇತ್ ॥**
**ಅನುವಾಕೇ ತೃತೀಯೇಽಸ್ಮಿನ್ಕಾಮುಕೇಷ್ಟ್ಯಾದಯಃ ಶ್ರುತಾಃ ॥**

ಇಚ್ಛೆಯನ್ನು ಪೂರೈಸಿಕೊಳ್ಳಬಯಸುವವನು ಕಾಮಪ್ರದನಾದ ಅಗ್ನಿಯನ್ನು ಕುರಿತೂ, ಸ್ಪರ್ಧಾಳುವಾದವನು ಯವಿಷ್ಠಾಗ್ನಿಗೂ, ಆಭಿಚಾರಿಕಕೃತ್ಯಕ್ಕೆ ಒಳಗಾದವನು ಯವಿಷ್ಠಾಗ್ನಿಗೂ, ಆಯುಷ್ಕಾಮನಾದವನು ಆಯುಷ್ಮದಗ್ನಿಗೂ, ಐಶ್ವರ್ಯವನ್ನು ಬಯಸುವವನು ಜಾತವೇದಾಗ್ನಿಗೂ, ಕಾಂತಿಯನ್ನು ಬಯಸುವವನು ರುಕ್ಮಂತನಾದ ಅಗ್ನಿಗೂ, ಬೇರೆಯವರನ್ನು ನಿಯಮದಲ್ಲಿ ಇಟ್ಟುಕೊಳ್ಳುವ ಶಕ್ತಿಯನ್ನು ಬಯಸುವವನು ತೇಜಸ್ವದಗ್ನಿಯನ್ನು ಕುರಿತೂ, ವೈರಿಯನ್ನು ಸೋಲಿಸಬಯಸುವವನು ಸಾಹಂತ್ಯಾಗ್ನಿಯನ್ನು ಕುರಿತೂ ಇಷ್ಟಿಯನ್ನು ಮಾಡಬೇಕು.

* * *

## || ಚತುರ್ಥೋಽನುವಾಕಃ ||

ಅಗ್ನಯೇಽನ್ನವತೇ ಪುರೋಡಾಶಮಷ್ಟಾಕಪಾಲಂ

ನಿರ್ವಪೇದ್ಯಃ ಕಾಮಯೇತಾನ್ನವಾನ್ಸ್ಯಾಮಿತ್ಯಗ್ನಿಮೇವಾನ್ನ

ವಂತಗ್ಂ ಸ್ವೇನ ಭಾಗಧೇಯೇನೋಪಧಾವತಿ

---

ಅಗ್ನಯೇ । ಅನ್ನವತ ಇತ್ಯನ್ನ–ವತೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ । ನಿರಿತಿ । ವಪೇತ್ । ಯಃ । ಕಾಮಯೇತ । ಅನ್ನವಾನಿತ್ಯನ್ನ–ವಾನ್ । ಸ್ಯಾಮ್ । ಇತಿ । ಅಗ್ನಿಮ್ । ಏವ । ಅನ್ನವಂತಮಿತ್ಯನ್ನ–ವಂತಮ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

**ಅನ್ನವು ಬೇಕಾದವನಿಗೆ ವಿಹಿತವಾದ ಇಷ್ಟಿ; ಪ್ರಶಂಸೆ**

| | |
|---|---|
| ಯಃ ಕಾಮಯೇತ ಅನ್ನವಾನ್ ಸ್ಯಾಮ್ ಇತಿ [ಸಃ] ಅಗ್ನಯೇ ಅನ್ನವತೇ ಅಷ್ಟಾಕಪಾಲಮ್ ಪುರೋಡಾಶಮ್ ನಿರ್ವಪೇತ್ | ಯಾವನು ತಾನು ಅನ್ನಸಮೃದ್ಧಿಯುಳ್ಳವನಾಗಬೇಕೆಂದು ಬಯಸುತ್ತಾನೆಯೋ [ಅವನು] ಅನ್ನವಂತನಾದ ಅಗ್ನಿದೇವನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| ಅನ್ನವಂತಮ್ ಅಗ್ನಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಹವಿರ್ಭಾಗವನ್ನು ಕೊಟ್ಟು ಅನ್ನವಂತನಾದ ಅಗ್ನಿಯನ್ನು ಸೇವಿಸುತ್ತಾನೆ. |

---

ಮಾನವನಿಗೆ ಶರೀರಧಾರಣೆಗಾಗಿ ಅನ್ನವು ಮುಖ್ಯವಾಗಿ ಬೇಕು. ಇಂತಹ ಅನ್ನವು ಬೇಕೆನ್ನುವವನು ಅನ್ನವದಗ್ನಿದೇವನನ್ನು ಕುರಿತು ಅಷ್ಟಾಕಪಾಲಪುರೋಡಾಶಯಾಗವನ್ನು ಮಾಡಬೇಕು. ಈ ಯಾಗದಿಂದ ಯಜಮಾನನು ಅನ್ನವದಗ್ನಿದೇವನನ್ನು ಸುಪ್ರೀತನನ್ನಾಗಿ ಮಾಡುತ್ತಾನೆ.

ಸ ಏವೈನಮನ್ನವಂತಂ ಕರೋತ್ಯನ್ನವಾನೇವ

ಭವತ್ಯಗ್ನಯೇಽನ್ನಾದಾಯ ಪುರೋಡಾಶಮಷ್ಟಾಕಪಾಲಂ

ನಿರ್ವಪೇದ್ಯಃ ಕಾಮಯೇತಾನ್ನಾದಃ ಸ್ಯಾಮಿತ್ಯಗ್ನಿ-

ಮೇವಾನ್ನಾದಗ್ಗ್ಂ ಸ್ವೇನ ಭಾಗಧೇಯೇನೋಪಧಾವತಿ

---

ಸಃ । ಏವ । ಏನಮ್ । ಅನ್ನವಂತಮಿತ್ಯನ್ನ-ವಂತಮ್ । ಕರೋತಿ । ಅನ್ನವಾನಿತ್ಯನ್ನ-ವಾನ್ । ಏವ । ಭವತಿ । ಅಗ್ನಯೇ । ಅನ್ನಾದಾಯೇತ್ಯನ್ನ-ಅದಾಯ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ನಿರಿತಿ । ವಪೇತ್ । ಯಃ । ಕಾಮಯೇತ । ಅನ್ನಾದ ಇತ್ಯನ್ನ - ಅದಃ । ಸ್ಯಾಮ್ । ಇತಿ । ಅಗ್ನಿಮ್ । ಏವ । ಅನ್ನಾದಮಿತ್ಯನ್ನ-ಅದಮ್ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ ।

---

| | |
|---|---|
| **ಸಃ ಏವ ಏನಮ್ ಅನ್ನವಂತಮ್ ಕರೋತಿ** | ಆ ಅನ್ನವಂತನಾದ ಅಗ್ನಿಯೇ ಈ ಯಜಮಾನನನ್ನು ಅನ್ನಸಮೃದ್ಧಿಯುಳ್ಳವನನ್ನಾಗಿ ಮಾಡುತ್ತಾನೆ. |
| **ಅನ್ನವಾನ್ ಏವ ಭವತಿ** | ಯಜಮಾನನು ಅನ್ನವಂತನೇ ಆಗುತ್ತಾನೆ. |

**ಅನ್ನವನ್ನು ತಿನ್ನುವ ಶಕ್ತಿಯು ಬೇಕೆನ್ನುವವನಿಗೆ ಇಷ್ಟಿವಿಧಾನ; ಪ್ರಶಂಸೆ**

| | |
|---|---|
| **ಯಃ ಅನ್ನಾದಃ ಸ್ಯಾಮ್ ಇತಿ ಕಾಮಯೇತ ಅನ್ನಾದಾಯ ಅಗ್ನಯೇ ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್** | ಯಾವನು ಅನ್ನವನ್ನು ತಿನ್ನುವ ಶಕ್ತಿಯು ಬೇಕೆಂದು ಬಯಸುವನೋ [ಅವನು] ಅನ್ನಾದಾಗ್ನಿಯನ್ನು ಉದ್ದೇಶಿಸಿ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| **ಅನ್ನಾದಮ್ ಅಗ್ನಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ** | ಈ ಯಾಗದಿಂದ ಯಜಮಾನನು ಅನ್ನಾದಾಗ್ನಿಯನ್ನು ಹವಿರ್ಭಾಗವನ್ನು ಸಮರ್ಪಿಸಿ ಸೇವಿಸುತ್ತಾನೆ. |

# ಸ ಏವೈನಮನ್ನಾದಂ ಕರೋತ್ಯನ್ನಾದ [... ಕರೋತ್ಯನ್ನಾದಃ

# (೧) ಏವ] ಏವ ಭವತ್ಯಗ್ನಯೇಽನ್ನಪತಯೇ

# ಪುರೋಡಾಶಮಷ್ಟಾಕಪಾಲಂ ನಿರ್ವಪೇದ್ಯಃ

---

ಸಃ । ಏವ । ಏನಮ್ । ಅನ್ನಾದಮಿತ್ಯನ್ನ–ಅದಮ್ । ಕರೋತಿ । ಅನ್ನಾದ ಇತ್ಯನ್ನ–ಅದಃ ।

ಏವ । ಭವತಿ । **ಅಗ್ನಯೇ** । ಅನ್ನಪತಯ ಇತ್ಯನ್ನ–ಪತಯೇ । ಪುರೋಡಾಶಮ್ ।

ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ । ನಿರಿತಿ । ವಪೇತ್ । ಯಃ ।

---

| | |
|---|---|
| **ಸಃ ಏವ ಏನಮ್ ಅನ್ನಾದಮ್ ಕರೋತಿ** | ಆ ಅನ್ನಾದಾಗ್ನಿಯೇ ಈ ಯಜಮಾನನನ್ನು ಅನ್ನವನ್ನು ತಿನ್ನುವ ಶಕ್ತಿಯುಳ್ಳವನನ್ನಾಗಿ ಮಾಡುತ್ತಾನೆ. |
| **ಅನ್ನಾದಃ ಏವ ಭವತಿ** | ಯಜಮಾನನು ಅನ್ನವನ್ನು ತಿನ್ನಬಲ್ಲವನಾಗಿಯೇ ಆಗುತ್ತಾನೆ. |

**ಅನ್ನಸ್ವಾಮಿಯಾಗಬಯಸುವವನಿಗೆ ಇಷ್ಟಿವಿಧಾನ; ಪ್ರಶಂಸೆ**

| | |
|---|---|
| **ಯಃ ಅನ್ನಪತಿಃ** | ಯಾವನು ಅಧಿಕವಾದ ಅನ್ನವಸ್ತುಗಳಿಗೆ |

---

ಅನ್ನವದಗ್ನಿದೇವನು ತೃಪ್ತನಾಗಿ ಅವನನ್ನು ಅನ್ನವಂತನನ್ನಾಗಿ ಮಾಡುತ್ತಾನೆ. ಯಜಮಾನನು ಅನ್ನದ ಕೊರತೆಯಿಲ್ಲದವನಾಗಿ ಅನ್ನಸಮೃದ್ಧಿಯನ್ನು ಹೊಂದುತ್ತಾನೆ.

ಮನೆಯಲ್ಲಿ ಬೇಕಾದಷ್ಟು ಅನ್ನವಿದ್ದರೂ ಜೀರ್ಣಶಕ್ತಿಯೇ ಇಲ್ಲವಾದರೆ ಏನು ಪ್ರಯೋಜನ ? **'ಅಗ್ನಿರ್ವೈ ದೇವಾನಾಮನ್ನಾದಃ'** ಎನ್ನುವಂತೆ ದೇವತೆಗಳಲ್ಲಿ ಅಗ್ನಿಯು ಅನ್ನಾದನಾಗಿರುತ್ತಾನೆ. ಆದುದರಿಂದ ಅಂತಹ ಜೀರ್ಣಶಕ್ತಿಯನ್ನು ಬಯಸುವವನು ಅನ್ನಾದಾಗ್ನಿಯನ್ನು ಉದ್ದೇಶಿಸಿ, ಅಷ್ಟಾಕಪಾಲಪುರೋಡಾಶಯಾಗವನ್ನು ಮಾಡಬೇಕು. ಇದರಿಂದ ಅನ್ನಾದಾಗ್ನಿಯು ತೃಪ್ತನಾಗುತ್ತಾನೆ. ಈ ಯಜಮಾನನನ್ನು ಅನ್ನಾದನನ್ನಾಗಿ ಮಾಡುತ್ತಾನೆ. ಯಜಮಾನನು ಯಥೇಷ್ಟವಾಗಿ ಅನ್ನವನ್ನು ತಿನ್ನಬಲ್ಲವನಾಗುತ್ತಾನೆ.

ಕಾಮಯೇತಾನ್ನಪತಿಃ ಸ್ಯಾಮಿತ್ಯಗ್ನಿಮೇವಾನ್ನಪತಿಗ್‍ಂ ಸ್ವೇನ ಭಾಗಧೇಯೇನೋಪಧಾವತಿ ಸ ಏವೈನಮನ್ನಪತಿಂ ಕರೋತ್ಯನ್ನಪತಿರೇವ

---

ಕಾಮಯೇತ । ಅನ್ನಪತಿರಿತ್ಯನ್ನ-ಪತಿಃ । ಸ್ಯಾಮ್ । ಇತಿ । ಅಗ್ನಿಮ್ । ಏವ । ಅನ್ನಪತಿಮಿತ್ಯನ್ನ-ಪತಿಮ್ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ಸಃ । ಏವ । ಏನಮ್ । ಅನ್ನಪತಿಮಿತ್ಯನ್ನ-ಪತಿಮ್ । ಕರೋತಿ । ಅನ್ನಪತಿರಿತ್ಯನ್ನ-ಪತಿಃ । ಏವ ।

---

| | |
|---|---|
| ಸ್ಯಾಮ್ ಇತಿ ಕಾಮಯೇತ | ಒಡೆಯನಾಗಬೇಕೆಂದು ಬಯಸುವನೋ |
| ಅನ್ನಪತಯೇ ಅಗ್ನಯೇ ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್ | [ಅವನು] ಅನ್ನಪತಿಯಾದ ಅಗ್ನಿಗಾಗಿ ಅಷ್ಟಾಕಪಾಲ ಪುರೋಡಾಶ ಹವಿಸ್ಸುಳ್ಳ ಯಾಗವನ್ನು ಮಾಡಬೇಕು. |
| ಅನ್ನಪತಿಮ್ ಅಗ್ನಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಆ ಯಜಮಾನನು ಅನ್ನಪತ್ಯಗ್ನಿಯನ್ನು ಹವಿಸ್ಸಿನಿಂದ ಆರಾಧಿಸಿದವನಾಗುತ್ತಾನೆ. |
| ಸಃ ಏವ ಏನಮ್ ಅನ್ನಪತಿಮ್ ಕರೋತಿ | ಆ ಅಗ್ನಿದೇವನೇ ಈ ಯಜಮಾನನನ್ನು ಅನ್ನದ್ರವ್ಯಗಳಿಗೆ ಸ್ವಾಮಿಯನ್ನಾಗಿ ಮಾಡುತ್ತಾನೆ. |
| ಅನ್ನಪತಿಃ ಏವ | ಯಜಮಾನನು ಪ್ರಭೂತವಾದ ಅನ್ನಕ್ಕೆ ಒಡೆಯನೇ |

---

ಯಜಮಾನನ ಮನೆಯಲ್ಲಿ ಅನ್ನದ್ರವ್ಯಗಳು [ತಿನ್ನುವ ವಸ್ತುಗಳು] ಹೇರಳವಾಗಿ ಇರದಿದ್ದರೆ ಮನೆಗೆ ಬಂದವರ, ಅತಿಥಿಗಳ ಸತ್ಕಾರವನ್ನು ಮಾಡಲಾದೀತೇ? ಅಂತಹ ಅನ್ನಪತಿಯಾಗಬೇಕೆಂದು ಬಯಸುವವನು ಅನ್ನಪತಿಯಾದ ಅಗ್ನಿಗೆ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಅನ್ನಪತ್ಯಗ್ನಿಯನ್ನು ಯಜಮಾನನು ಈ ಯಾಗದಿಂದ ತೃಪ್ತಿಪಡಿಸುವುದರಿಂದ ಅವನ ಅನುಗ್ರಹದಿಂದ ಯಜಮಾನನು ತಿನ್ನುವ ವಸ್ತುಗಳೆನಿಸುವ ಅನ್ನದ್ರವ್ಯಗಳಿಗೆ ಅಧಿಪತಿಯಾಗುತ್ತಾನೆ.

ಭವತ್ಯಗ್ನಯೇ ಪವಮಾನಾಯ

ಪುರೋಡಾಶಮಷ್ಟಾಕಪಾಲಂ ನಿರ್ವಪೇದಗ್ನಯೇ

ಪಾವಕಾಯಾಗ್ನಯೇ ಶುಚಯೇ ಜ್ಯೋಗಾಮಯಾವೀ

---

ಭವತಿ । ಅಗ್ನಯೇ । ಪವಮಾನಾಯ ।ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ನಿರಿತಿ । ವಪೇತ್ । ಅಗ್ನಯೇ । ಪಾವಕಾಯ । ಅಗ್ನಯೇ । ಶುಚಯೇ । ಜ್ಯೋಗಾಮಯಾವೀತಿ ಜ್ಯೋಕ್-ಆಮಯಾವೀ ।

---

| | |
|---|---|
| ಭವತಿ | ಆಗುತ್ತಾನೆ. |
| ಜ್ಯೋಗಾಮಯಾವೀ ಅಗ್ನಯೇ ಪವಮಾನಾಯ ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್ | ದೀರ್ಘಕಾಲ ಮಹಾರೋಗಗ್ರಸ್ತನಾದವನು ಪವಮಾನಾಗ್ನಿದೇವನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| ಅಗ್ನಯೇ ಪಾವಕಾಯ [ಅಷ್ಟಾಕಪಾಲವ್ ನಿರ್ವಪೇತ್] | ಪಾವಕಾಗ್ನಿಗೂ ಅಷ್ಟಾಕಪಾಲ ಹವಿಸ್ಸನ್ನು ನೀಡಬೇಕು. |
| ಅಗ್ನಯೇ ಶುಚಯೇ [ಅಷ್ಟಾಕಪಾಲವ್ ನಿರ್ವಪೇತ್] | ಶುಚಿಸಂಜ್ಞಕನಾದ ಅಗ್ನಿದೇವನನ್ನು ಉದ್ದೇಶಿಸಿಯೂ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. |

---

ಮಾನವನು ಹಿಂದೆ ಮಾಡಿದ ಪಾಪವೇ ವ್ಯಾಧಿರೂಪವಾಗಿ ಬಾಧಿಸುತ್ತದೆಯೆಂದು ಹೇಳುತ್ತಾರೆ. ರೋಗದ ಫಲವಾಗಿ ಉಸಿರಾಡುವುದೂ ಕಷ್ಟವಾಗುತ್ತದೆ. ಮಾತೂ ನಿಂತು ಹೋಗುತ್ತದೆ. ದೇಹದ ಕಾಂತಿಯೂ ಕುಗ್ಗುತ್ತದೆ. ಇಂತಹ ಮಹಾರೋಗಪೀಡಿತನಾದವನು ಪವಮಾನಾಗ್ನಿಗೂ, ಪಾವಕಾಗ್ನಿಗೂ, ಶುಚ್ಯಗ್ನಿಗೂ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಇದರಿಂದ ಮೂರು ಶಕ್ತಿಗಳನ್ನೂ ಹೊಂದಿರುವ ಅಗ್ನಿದೇವನು

ಯದಗ್ನಯೇ ಪವಮಾನಾಯ ನಿರ್ವಪತಿ ಪ್ರಾಣಮೇವಾಸ್ಮಿ

ನ್ತೇನ ದಧಾತಿ ಯದಗ್ನಯೇ [ಯದಗ್ನಯೇ (೨) ಪಾವಕಾಯ]

ಪಾವಕಾಯ ವಾಚಮೇವಾಸ್ಮಿನ್ತೇನ ದಧಾತಿ

---

ಯತ್ । ಅಗ್ನಯೇ । ಪವಮಾನಾಯ । ನಿರ್ವಪತೀತಿ ನಿಃ – ವಪತಿ । ಪ್ರಾಣಮಿತಿ

ಪ್ರ–ಅನಮ್ । ಏವ । ಅಸ್ಮಿನ್ನ್ । ತೇನ । ದಧಾತಿ । ಯತ್ । ಅಗ್ನಯೇ । ಪಾವಕಾಯ ।

ವಾಚಮ್ । ಏವ । ಅಸ್ಮಿನ್ನ್ । ತೇನ । ದಧಾತಿ ।

---

| | |
|---|---|
| ಯತ್ ಅಗ್ನಯೇ ಪವಮಾನಾಯ ನಿರ್ವಪತಿ | ಪವಮಾನಾಗ್ನಿಯನ್ನುದ್ದೇಶಿಸಿ ಮಾಡಿದ ಯಾವ ಯಾಗವುಂಟೋ |
| ತೇನ ಪ್ರಾಣಮ್ ಏವ ಅಸ್ಮಿನ್ ದಧಾತಿ | ಆ ಯಾಗದಿಂದ ಈ ಯಜಮಾನನಲ್ಲಿ ಪವಮಾನದೇವನು ಪ್ರಾಣಶಕ್ತಿಯನ್ನು ಕೊಡುತ್ತಾನೆ. |
| ಯತ್ ಅಗ್ನಯೇ ಪಾವಕಾಯ [ನಿರ್ವಪತಿ] ತೇನ ವಾಚಮ್ ಏವ ಅಸ್ಮಿನ್ ದಧಾತಿ | ಪಾವಕಾಗ್ನಿಗಾಗಿ ಯಾಗವನ್ನು ಮಾಡುವುದರಿಂದ ಆ ದೇವನು ಮಾತಿನ ಶಕ್ತಿಯನ್ನು ನೀಡುತ್ತಾನೆ. |

---

ಪ್ರಸನ್ನನಾಗಿ, ಪವಮಾನಾಗ್ನಿಯು ಪ್ರಾಣಶಕ್ತಿಯನ್ನೂ, ಪಾವಕಾಗ್ನಿಯು ಮಾತಿನ ಶಕ್ತಿಯನ್ನೂ ನೀಡುತ್ತಾನೆ. ಅಗ್ನಿಯು ರೋಗಕಾರಣವಾದ ಪಾಪವನ್ನು ಹೋಗಲಾಡಿಸಿ, ಶುದ್ಧಿಗೊಳಿಸಿ ಪಾಪಸಂಬಂಧವಿಲ್ಲದಂತೆ ಮಾಡಿ, ದೇಹಕಾಂತಿಯನ್ನು ಕೊಟ್ಟು, ರೋಗವಿಲ್ಲದಂತೆ ಮಾಡಿ ಆಯುಷ್ಮಂತನನ್ನಾಗಿ ಮಾಡುತ್ತಾನೆ.

ಯದಗ್ನಯೇ ಶುಚಯ ಆಯುರೇವಾಸ್ಮಿನ್ತ್ತೇನ ದಧಾತ್ಯುತ

ಯದೀತಾಸುರ್ಭವತಿ ಜೀವತ್ಯೇವೈತಾಮೇವ ನಿರ್ವಪೇಚ್ಚ

ಕ್ಷುಷ್ಕಾಮೋ ಯದಗ್ನಯೇ ಪವಮಾನಾಯ ನಿರ್ವಪತಿ

ಪ್ರಾಣಮೇವಾಸ್ಮಿನ್ತ್ತೇನ ದಧಾತಿ

---

ಯತ್ । ಅಗ್ನಯೇ । ಶುಚಯೇ । ಆಯುಃ । ಏವ । ಅಸ್ಮಿನ್ನ್ । ತೇನ । ದಧಾತಿ । ಉತ ।

ಯದಿ । ಇತಾಸುರಿತೀತ–ಅಸುಃ । ಭವತಿ । ಜೀವತಿ । ಏವ । **ಏತಾವ್** । ಏವ । ನಿರಿತಿ ।

ವಪೇತ್ । ಚಕ್ಷುಷ್ಕಾಮ ಇತಿ ಚಕ್ಷುಃ–ಕಾಮಃ । ಯತ್ । ಅಗ್ನಯೇ । ಪವಮಾನಾಯ ।

ನಿರ್ವಪತೀತಿ ನಿಃ–ವಪತಿ । ಪ್ರಾಣಮಿತಿ ಪ್ರ–ಅನಮ್ । ಏವ । ಅಸ್ಮಿನ್ನ್ । ತೇನ । ದಧಾತಿ ।

---

| | |
|---|---|
| ಯತ್ ಅಗ್ನಯೇ ಶುಚಯೇ [ನಿರ್ವಪತಿ] ತೇನ ಆಯುಃ ಏವ ಅಸ್ಮಿನ್ ದಧಾತಿ | ಶುಚ್ಯಗ್ನಿಯನ್ನುದ್ದೇಶಿಸಿ ಯಾಗವನ್ನು ಮಾಡುವುದರಿಂದ ಅಗ್ನಿಶುಚಿದೇವನು ಆಯಸ್ಸನ್ನು ನೆಲೆಗೊಳಿಸುತ್ತಾನೆ. |
| ಉತ ಯದಿ ಇತಾಸುಃ ಭವತಿ ಜೀವತಿ ಏವ | ಪ್ರಾಣ ಹೋಗುವ ಸ್ಥಿತಿಯಲ್ಲಿದ್ದರೂ ಈ ಯಾಗದ ಫಲವಾಗಿ ಬದುಕುತ್ತಾನೆ. |

**ಚಕ್ಷುಷ್ಕಾಮನಿಗೂ ವಿಹಿತವಾಗಿರುವ ಇದೇ ಇಷ್ಟಿ; ಪ್ರಶಂಸೆ**

| | |
|---|---|
| ಚಕ್ಷುಷ್ಕಾಮಃ ಏತಾವ್ ಏವ ನಿರ್ವಪೇತ್ | ದೃಢಚಕ್ಷುಃಪ್ರಕಾಶವನ್ನು ಬಯಸುವವನು ಈ ಮೂರು ಇಷ್ಟಿಗಳನ್ನೇ ಮಾಡಬೇಕು. |
| ಯತ್ ಅಗ್ನಯೇ ಪವಮಾನಾಯ ನಿರ್ವಪತಿ | ಪವಮಾನಾಗ್ನಿಯಾಗದಿಂದ ಪ್ರಸನ್ನನಾದ ಅಗ್ನಿಪವಮಾನದೇವನು |
| ತೇನ ಪ್ರಾಣಮ್ ಏವ ಅಸ್ಮಿನ್ ದಧಾತಿ | ಈ ಯಜಮಾನನಲ್ಲಿ ಪ್ರಾಣಶಕ್ತಿಯನ್ನು ನೆಲೆಗೊಳಿಸುತ್ತಾನೆ. |

---

ಈ ಯಾಗದ ಪ್ರಭಾವದಿಂದ ಸಾಯುವುದರಲ್ಲಿರುವವನೂ ಬದುಕುಳಿದು ಆಯುಷ್ಮಂತನಾಗುತ್ತಾನೆ.

ಯದಗ್ನಯೇ ಪಾವಕಾಯ ವಾಚಮೇವಾಸ್ಮಿನ್ತೇನ ದಧಾತಿ

ಯದಗ್ನಯೇ ಶುಚಯೇ ಚಕ್ಷುರೇವಾಸ್ಮಿನ್ತೇನ ದಧಾತ್ಯುತ

[ದಧಾತಿ (೩) ಉತ] ಯದ್ಯಂಧೋ ಭವತಿ ಪ್ರೈವ

ಪಶ್ಯತ್ಯಗ್ನಯೇ

---

ಯತ್ । ಅಗ್ನಯೇ । ಪಾವಕಾಯ । ವಾಚಮ್ । ಏವ । ಅಸ್ಮಿನ್ । ತೇನ । ದಧಾತಿ ।

ಯತ್ । ಅಗ್ನಯೇ । ಶುಚಯೇ । ಚಕ್ಷುಃ । ಏವ । ಅಸ್ಮಿನ್ । ತೇನ । ದಧಾತಿ । ಉತ ।

ಯದಿ । ಅಂಧಃ । ಭವತಿ । ಪ್ರೇತಿ । ಏವ । ಪಶ್ಯತಿ । ಅಗ್ನಯೇ ।

---

| | |
|---|---|
| ಯತ್ ಅಗ್ನಯೇ ಪಾವಕಾಯ<br>[ನಿರ್ವಪತಿ] ತೇನ ವಾಚಮ್<br>ಏವ ಅಸ್ಮಿನ್ ದಧಾತಿ | ಪಾವಕಾಗ್ನಿಯಾಗದಿಂದ ತೃಪ್ತನಾದ ಪಾವಕಾಗ್ನಿದೇವನು ಈ ಯಜಮಾನನಲ್ಲಿ ವಾಕ್‌ಶಕ್ತಿಯನ್ನುಂಟುಮಾಡುತ್ತಾನೆ. |
| ಯತ್ ಅಗ್ನಯೇ ಶುಚಯೇ<br>[ನಿರ್ವಪತಿ] ತೇನ ಚಕ್ಷುಃ<br>ಏವ ಅಸ್ಮಿನ್ ದಧಾತಿ | ಶುಚ್ಯಗ್ನಿದೇವನನ್ನುದ್ದೇಶಿಸಿ ಯಾಗ ಮಾಡುವುದರಿಂದ ಆ ಶುಚ್ಯಗ್ನಿದೇವನು ಚಕ್ಷುಃ ಪ್ರಕಾಶವನ್ನು ಕೊಡುತ್ತಾನೆ. |
| ಉತ ಯದಿ ಅಂಧಃ ಭವತಿ<br>ಪ್ರ ಪಶ್ಯತಿ ಏವ | ಕುರುಡನಾಗಿದ್ದರೂ ಈ ಯಾಗದ ಪ್ರಭಾವದಿಂದ ಚೆನ್ನಾಗಿ ನೋಡಬಲ್ಲವನಾಗುತ್ತಾನೆ. |

---

ಜನ್ಮಾಂತರ ಪಾಪದ ಫಲವಾಗಿ ವ್ಯಾಧಿಯಿಂದ ದುರ್ಬಲನಾಗಿ ಕಣ್ಣುಗಳ ಶಕ್ತಿಯನ್ನು ಕಳೆದುಕೊಂಡಿರುವವನು ಚಕ್ಷುಷ್ಕಾಮನಾಗಿ ಈ ಮೂರು ಇಷ್ಟಿಗಳನ್ನು ಮಾಡುವುದರಿಂದ ಮೂರು ಶಕ್ತಿಗಳಿಂದ ಕೂಡಿದ ಅಗ್ನಿಯು ಸಂತುಷ್ಟನಾಗುತ್ತಾನೆ. ಪವಮಾನಾಗ್ನಿಯು ಪ್ರಾಣಶಕ್ತಿಯನ್ನೂ, ಪಾವಕಾಗ್ನಿಯು ವಾಕ್‌ಶಕ್ತಿಯನ್ನೂ, ಪ್ರಕಾಶಕನಾದ ಶುಚ್ಯಗ್ನಿಯು ನೋಡುವ ಶಕ್ತಿಯನ್ನೂ ಅನುಗ್ರಹಿಸುತ್ತಾರೆ. ಈ ಯಾಗದ ಮಹಿಮೆಯಿಂದ ಕುರುಡನೂ ನೋಡುವ ಶಕ್ತಿಯನ್ನು ಹೊಂದುತ್ತಾನೆ.

ಪುತ್ರವತೇ ಪುರೋಡಾಶಮಷ್ಟಾಕಪಾಲಂ
ನಿರ್ವಪೇದಿಂದ್ರಾಯ ಪುತ್ರಿಣೇ ಪುರೋಡಾಶಮೇಕಾದಶ
ಕಪಾಲಂ ಪ್ರಜಾಕಾಮೋಽಗ್ನಿರೇವಾಸ್ಮೈ ಪ್ರಜಾಂ
ಪ್ರಜನಯತಿ

---

ಪುತ್ರವತ ಇತಿ ಪುತ್ರ–ವತೇ। ಪುರೋಡಾಶಮ್। ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್। ನಿರಿತಿ। ವಪೇತ್। ಇಂದ್ರಾಯ। ಪುತ್ರಿಣೇ। ಪುರೋಡಾಶಮ್। ಏಕಾದಶಕಪಾಲ ಮಿತ್ಯೇಕಾದಶ–ಕಪಾಲಮ್। ಪ್ರಜಾಕಾಮ ಇತಿ ಪ್ರಜಾ–ಕಾಮಃ। ಅಗ್ನಿಃ। ಏವ। ಅಸ್ಮೈ। ಪ್ರಜಾಮಿತಿ ಪ್ರ–ಜಾಮ್। ಪ್ರಜನಯತೀತಿ ಪ್ರ–ಜನಯತಿ।

---

**ಪುತ್ರಕಾಮನಿಗೆ ವಿಹಿತವಾದ ಇಷ್ಟಿ; ಪ್ರಶಂಸೆ**

| | |
|---|---|
| ಪ್ರಜಾಕಾಮಃ | ಪುತ್ರರನ್ನು ಬಯಸುವವನು |
| ಅಗ್ನಯೇ ಪುತ್ರವತೇ ಅಷ್ಟಾಕಪಾಲಮ್ ಪುರೋಡಾಶಮ್ ನಿರ್ವಪೇತ್ | ಪುತ್ರೋತ್ಪಾದನಶಕ್ತಿಯನ್ನು ಕೊಡುವ ಅಗ್ನಿ ದೇವನಿಗಾಗಿ ಅಷ್ಟಾಕಪಾಲಪುರೋಡಾಶ ಯಾಗವನ್ನು ಮಾಡಬೇಕು. |
| ಇಂದ್ರಾಯ ಪುತ್ರಿಣೇ ಪುರೋಡಾಶಮ್ ಏಕಾದಶಕಪಾಲಮ್ [ನಿರ್ವಪೇತ್] | ಪುತ್ರವೃದ್ಧಿಯನ್ನು ಮಾಡುವ ಇಂದ್ರ ದೇವನಿಗಾಗಿ ಏಕಾದಶಕಪಾಲಪುರೋಡಾಶ ಯಾಗವನ್ನು ಮಾಡಬೇಕು. |
| ಅಗ್ನಿಃ ಏವ ಅಸ್ಮೈ ಪ್ರಜಾಮ್ ಪ್ರಜನಯತಿ | ಅಗ್ನಿದೇವನೇ ಈ ಯಜಮಾನನಿಗೆ ಮಕ್ಕಳನ್ನು ಅನುಗ್ರಹಿಸುತ್ತಾನೆ. |

---

ಒಳ್ಳೆಯ ಮಕ್ಕಳು ಬೇಕೆನ್ನುವವನು ಮಕ್ಕಳನ್ನು ಕೊಡುವ ಅಗ್ನಿದೇವನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನೂ, ಮಕ್ಕಳನ್ನು ವೃದ್ಧಿಗೊಳಿಸುವ ಇಂದ್ರದೇವನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನೂ ಮಾಡಬೇಕು. ತೃಪ್ತನಾದ ಅಗ್ನಿಯು ಮಕ್ಕಳನ್ನು ಕೊಡುತ್ತಾನೆ.

ವೃದ್ಧಾಮಿಂದ್ರಃ ಪ್ರಯಚ್ಛತ್ಯಗ್ನಯೇ

ರಸವತೇಽಜಕ್ಷೀರೇ ಚರುಂ ನಿರ್ವಪೇದ್ಯಃ ಕಾಮಯೇತ

ರಸವಾನ್ಸ್ಯಾಮಿತ್ಯಗ್ನಿಮೇವ ರಸವಂತಗ್ಂ ಸ್ವೇನ

ಭಾಗಧೇಯೇನೋಪಧಾವತಿ

---

ವೃದ್ಧಾಮ್ । ಇಂದ್ರಃ । ಪ್ರೇತಿ । ಯಚ್ಛತಿ । **ಅಗ್ನಯೇ** । ರಸವತ ಇತಿ ರಸ-ವತೇ । ಅಜಕ್ಷೀರ ಇತ್ಯಜ-ಕ್ಷೀರೇ । ಚರುವಮ್ । ನಿರಿತಿ । ವಪೇತ್ । ಯಃ । ಕಾಮಯೇತ । ರಸವಾನಿತಿ ರಸ-ವಾನ್ । ಸ್ಯಾಮ್ । ಇತಿ । ಅಗ್ನಿಮ್ । ಏವ । ರಸವಂತಮಿತಿ ರಸ-ವಂತಮ್ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಇಂದ್ರಃ ವೃದ್ಧಾಮ್ ಪ್ರಯಚ್ಛತಿ | ಇಂದ್ರನು ಆ ಮಕ್ಕಳನ್ನು ವೃದ್ಧಿಗೊಳಿಸುತ್ತಾನೆ. |

**ಕ್ಷೀರಾದಿರಸಕಾಮನಿಗೆ ಇಷ್ಟಿವಿಧಿ; ಪ್ರಶಂಸೆ**

| | |
|---|---|
| ರಸವಾನ್ ಸ್ಯಾಮ್ ಇತಿ ಯಃ ಕಾಮಯೇತ ರಸವತೇ ಅಗ್ನಯೇ ಅಜಕ್ಷೀರೇ ಚರುವಮ್ ನಿರ್ವಪೇತ್ | ಹಾಲು, ಮೊಸರು ಮೊದಲಾದ ರಸದ್ರವ್ಯ ಪೂರ್ಣನಾಗಬೇಕೆಂದು ಬಯಸುವವನು ರಸವದಗ್ನಿಯನ್ನು ಉದ್ದೇಶಿಸಿ ಆಡಿನ ಹಾಲಿನಲ್ಲಿ ಮಾಡಿದ ಚರುವಿನ ಯಾಗವನ್ನು ಮಾಡಬೇಕು. |
| ರಸವಂತವಮ್ ಅಗ್ನಿವಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದಿಂದ ಯಜಮಾನನು ರಸವದಗ್ನಿಯ ಭಾಗವನ್ನು ಸಮರ್ಪಿಸಿ ಸೇವಿಸುತ್ತಾನೆ. |

---

ಇಂದ್ರದೇವನು ಆ ಮಕ್ಕಳನ್ನು ವೃದ್ಧಿಗೊಳಿಸುತ್ತಾನೆ. ಹೀಗೆ ಯಜಮಾನನು ಪ್ರಜಾವಂತನಾಗುತ್ತಾನೆ.

ಹಾಲು, ಮೊಸರು, ತುಪ್ಪ ಮುಂತಾದ ರಸದ್ರವ್ಯಗಳು ಬೇಕೆಂದು ಬಯಸುವವನು

ಸ ಏವೈನಗ್ಂ ರಸವಂತಂ ಕರೋತಿ [ಕರೋತಿ (೪)]

ರಸವಾನೇವ ಭವತ್ಯಜಕ್ಷೀರೇ ಭವತ್ಯಾಗ್ನೇಯೀ ವಾ

ಏಷಾ ಯದಜಾ ಸಾಕ್ಷಾದೇವ ರಸಮುವರುಂಧೇಽಗ್ನಯೇ

ಸಃ । ಏವ । ಏನಮ್ । ರಸವಂತಮಿತಿ ರಸ-ವಂತಮ್ । ಕರೋತಿ । ರಸವಾನಿತಿ ರಸ-ವಾನ್ । ಏವ । ಭವತಿ । ಅಜಕ್ಷೀರ ಇತ್ಯಜ-ಕ್ಷೀರೇ । ಭವತಿ । ಆಗ್ನೇಯೀ । ವೈ । ಏಷಾ । ಯತ್ । ಅಜಾ । ಸಾಕ್ಷಾದಿತಿ ಸ-ಅಕ್ಷಾತ್ । ಏವ । ರಸಮ್ । ಅವೇತಿ । ರುಂಧೇ । ಅಗ್ನಯೇ ।

| | |
|---|---|
| ಸಃ ಏವ ಏನಮ್ ರಸವಂತಮ್ ಕರೋತಿ | ಆ ರಸವದಗ್ನಿಯೇ ಈ ಯಜಮಾನನನ್ನು ಕ್ಷೀರಾದಿ ರಸದ್ರವ್ಯಸಂಪನ್ನನಾಗುವಂತೆ ಮಾಡುತ್ತಾನೆ. |
| ರಸವಾನ್ ಏವ ಭವತಿ | ಈ ಯಜಮಾನನು ರಸವಂತನೇ ಆಗುತ್ತಾನೆ. |
| ಅಜಕ್ಷೀರೇ ಭವತಿ | ಈ ಚರುವು ಆಡಿನ ಹಾಲಿನಲ್ಲಿ ಪಕ್ವವಾಗುತ್ತದೆ. |
| ಆಗ್ನೇಯೀ ವೈ ಏಷಾ ಯತ್ ಅಜಾ ಸಾಕ್ಷಾತ್ ಏವ ರಸಮ್ ಅವರುಂಧೇ | ಈ ಆಡೆಂಬುದು ಯಾವುದುಂಟೋ ಅದು ಅಗ್ನಿಸಂಬಂಧಿಯಾಗಿದೆ. [ಆದುದರಿಂದ ಯಜಮಾನನು ರಸವದಗ್ನಿಯ ಅನುಗ್ರಹದಿಂದ] ಒಡನೆಯೇ ರಸಸಮೃದ್ಧಿಯನ್ನು ಪಡೆಯುತ್ತಾನೆ. |

ರಸದ್ರವ್ಯಗಳನ್ನು ಅನುಗ್ರಹಿಸುವ ರಸವದಗ್ನಿಯನ್ನು ಕುರಿತು ಆಡಿನ ಹಾಲಿನಲ್ಲಿ ಪಕ್ವವಾಗಿ ಗಂಜಿಯನ್ನು ಬಸಿಯದೆ ಮಾಡಿರುವ ಚರುವಿನ ಯಾಗವನ್ನು ಮಾಡಬೇಕು. ಇದರಿಂದ ರಸವದಗ್ನಿಯನ್ನು ತೃಪ್ತಿಪಡಿಸುತ್ತಾನೆ. ತೃಪ್ತನಾದ ರಸವದಗ್ನಿಯು ಯಜಮಾನ ನಿಗೆ ಯಥೇಚ್ಛವಾಗಿ ರಸದ್ರವ್ಯಗಳನ್ನು ಅನುಗ್ರಹಿಸುತ್ತಾನೆ.

*ಆಡು ಅಗ್ನಿಸಂಬಂಧಿಯಾಗಿದೆ. ಆಡಿನ ಹಾಲಿನಲ್ಲಿ ಚರುವನ್ನು ಮಾಡುವುದರಿಂದ ಅಗ್ನಿಯು ಬೇಗನೆ ಸುಪ್ರೀತನಾಗುತ್ತಾನೆ. ರಸದ್ರವ್ಯಸಮೃದ್ಧಿಯನ್ನು ಅನುಗ್ರಹಿಸುತ್ತಾನೆ.

* ಅಗ್ನಿಯು ಪ್ರಜಾಪತಿಯ ಮುಖದಿಂದ ಜನಿಸಿದವನು. ಆಡೂ ಸಹ ಪ್ರಜಾಪತಿಯ ಮುಖದಿಂದಲೇ ಜನಿಸಿದ್ದಾಗಿದೆ. – ತೈ. ಸಂ. 7.1.1

ವಸುಮತೇ ಪುರೋಡಾಶಮಷ್ಟಾಕಪಾಲಂ ನಿರ್ವಪೇದ್ಯಃ

ಕಾಮಯೇತ ವಸುಮಾನ್ತ್ಸ್ಯಾಮಿತ್ಯಗ್ನಿಮೇವ ವಸುಮಂತಗ್ಂ

ಸ್ವೇನ ಭಾಗಧೇಯೇನೋಪಧಾವತಿ ಸ ಏವೈನಂ

ವಸುಮಂತಂ ಕರೋತಿ

---

ವಸುಮತ ಇತಿ ವಸು–ಮತೇ । ಪುರೋಡಾಶವ್ । ಅಷ್ಟಾಕಪಾಲಮಿತ್ಯಷ್ಟಾ–ಕಪಾಲವ್ । ನಿರಿತಿ । ವಪೇತ್ । ಯಃ । ಕಾಮಯೇತ । ವಸಮಾನಿತಿ ವಸು–ಮಾನ್ । ಸ್ಯಾವ್ । ಇತಿ । ಅಗ್ನಿವ್ । ಏವ । ವಸುಮಂತಮಿತಿ ವಸು–ಮಂತವ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಏನವ್ । ವಸುಮಂತಮಿತಿ ವಸು–ಮಂತಮ್ । ಕರೋತಿ ।

---

**ಧನಕಾಮನಿಗೆ ವಿಹಿತವಾದ ಇಷ್ಟಿ; ಅದರ ಪ್ರಶಂಸೆ**

| | |
|---|---|
| ವಸುಮಾನ್ ಸ್ಯಾವ್ ಇತಿ ಯಃ ಕಾಮಯೇತ | ಧನವಂತನಾಗಬೇಕೆಂದು ಯಾವನು ಆಶಿಸುತ್ತಾನೆಯೋ |
| ಅಗ್ನಯೇ ವಸುಮತೇ ಪುರೋಡಾಶವ್ ಅಷ್ಟಾಕಪಾಲವ್ ನಿರ್ವಪೇತ್ | ಐಶ್ವರ್ಯವನ್ನು ಕೊಡುವ ಅಗ್ನಿದೇವನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| ಅಗ್ನಿವ್ ವಸುಮಂತವ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದಿಂದ ಯಜಮಾನನು ವಸುಮದಗ್ನಿಯನ್ನು ಸೇವಿಸಿದಂತಾಗುತ್ತದೆ. |
| ಸಃ ಏವ ಏನವ್ ವಸುಮಂತವ್ ಕರೋತಿ | ವಸುಮದಗ್ನಿಯು ಯಜಮಾನನನ್ನು ಧನವಂತನನ್ನಾಗಿ ಮಾಡುತ್ತಾನೆ. |

---

ಧನಿಕನಾಗಬಯಸುವವನು ವಸುಮದಗ್ನಿಗೆ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಈ ಯಾಗದಿಂದ ಧನಪ್ರದನಾದ ಅಗ್ನಿಯು ಸುಪ್ರೀತನಾಗುತ್ತಾನೆ. ಅಗ್ನಿಯ ಅನುಗ್ರಹದಿಂದ ಯಜಮಾನನೂ ವಸುಮಂತ [ಐಶ್ವರ್ಯವಂತ]ನಾಗುತ್ತಾನೆ.

ವಸುಮಾನೇವ ಭವತ್ಯಗ್ನಯೇ ವಾಜಸೃತೇ

ಪುರೋಡಾಶಮಷ್ಟಾಕಪಾಲಂ ನಿರ್ವಪೇತ್ಸಂಗ್ರಾಮೇ

ಸಂಯತ್ತೇ ವಾಜಂ [ವಾಜಮ್ (೫)] ವಾ ಏಷ ಸಿಸೀರ್‌ಷತಿ

ಯಸ್ಸಂಗ್ರಾಮಂ ಜಿಗೀಷತ್ಯಗ್ನಿಃ

---

ವಸುಮಾನಿತಿ ವಸು–ಮಾನ್ । ಏವ । ಭವತಿ । **ಅಗ್ನಯೇ** । ವಾಜಸೃತ ಇತಿ ವಾಜ–ಸೃತೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ– ಕಪಾಲಮ್ । ನಿರಿತಿ । ವಪೇತ್ । ಸಂಗ್ರಾಮ ಇತಿ ಸಮ್–ಗ್ರಾಮೇ । ಸಂಯತ್ತ ಇತಿ ಸಮ್–ಯತ್ತೇ । ವಾಜಮ್ । ವೈ । ಏಷಃ । ಸಿಸೀರ್‌ಷತಿ । ಯಃ । ಸಂಗ್ರಾಮಮಿತಿ ಸಮ್–ಗ್ರಾಮಮ್ । ಜಿಗೀಷತಿ । ಅಗ್ನಿಃ ।

| | |
|---|---|
| ವಸುಮಾನ್ ಭವತಿ ಏವ | ಯಜಮಾನನು ಐಶ್ವರ್ಯವಂತನೇ ಆಗುತ್ತಾನೆ. |

**ಅನ್ನಕಾಮನಿಗೆ [ಯುದ್ಧದಲ್ಲಿ ಗೆಲುವನ್ನು ಕೋರುವವನಿಗೆ ]**
**ವಿಹಿತವಾದ ಇಷ್ಟಿ; ಪ್ರಶಂಸೆ**

| | |
|---|---|
| ಸಂಗ್ರಾಮೇ ಸಂಯತ್ತೇ [ಸತಿ] | ಯುದ್ಧವು ಪ್ರಾಪ್ತವಾಗಲಾಗಿ |
| ವಾಜಸೃತೇ ಅಗ್ನಯೇ ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್ | ವಾಜಸೃತನಾದ ಅಗ್ನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| ಯಃ ಸಂಗ್ರಾಮಮ್ ಜಿಗೀಷತಿ | ಯಾವನು ಯುದ್ಧವನ್ನು ಗೆಲ್ಲಬೇಕೆಂದು ಬಯಸುತ್ತಾನೆಯೋ |
| ಏಷಃ ವಾಜಮ್ ಸಿಸೀರ್‌ಷತಿ ವೈ | ಆತನು ಶತ್ರುಸಂಬಂಧಿಯಾದ ಅನ್ನವನ್ನು ವಶಪಡಿಸಿಕೊಳ್ಳಲು ಇಚ್ಛಿಸುವನಷ್ಟೆ. |
| ಅಗ್ನಿಃ | ದೇವತೆಗಳಲ್ಲಿ ಅಗ್ನಿಯೇ |

---

ಯುದ್ಧದಲ್ಲಿ ಗೆದ್ದು ಶತ್ರುಗಳಲ್ಲಿರುವ ಅನ್ನವನ್ನು ವಶಪಡಿಸಿಕೊಳ್ಳಬೇಕೆಂದಿರುವವನು ವಾಜಸೃದಗ್ನಿಗೆ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. ದೇವತೆಗಳಲ್ಲಿ ಅಗ್ನಿಯೇ ವಾಜಸೃತನಾಗಿರುತ್ತಾನೆ. ಈ ಯಾಗದಿಂದ ಅಗ್ನಿದೇವನು ಸುಪ್ರೀತನಾಗುತ್ತಾನೆ.

ಖಲು ವೈ ದೇವಾನಾಂ ವಾಜಸೃದಗ್ನಿಮೇವ

ವಾಜಸೃತಗ್‍ಂ ಸ್ವೇನ ಭಾಗಧೇಯೇನೋಪಧಾವತಿ

ಧಾವತಿ ವಾಜಗ್‍ಂ ಹಂತಿ ವೃತ್ರಂ ಜಯತಿ ತಗ್‍ಂ

ಸಂಗ್ರಾಮಮಥೋ ಅಗ್ನಿರಿವ

---

ಖಲು । ವೈ । ದೇವಾನಾಮ್ । ವಾಜಸೃದಿತಿ ವಾಜ-ಸೃತ್ । ಅಗ್ನಿಮ್ । ಏವ ।

ವಾಜಸೃತಮಿತಿ ವಾಜ-ಸೃತಮ್ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ ।

ಉಪೇತಿ । ಧಾವತಿ । ಧಾವತಿ । ವಾಜಮ್ । ಹಂತಿ । ವೃತ್ರಮ್ । ಜಯತಿ । ತಮ್ ।

ಸಂಗ್ರಾಮಮಿತಿ ಸಮ್-ಗ್ರಾಮಮ್ । ಅಥೋ ಇತಿ । ಅಗ್ನಿಃ । ಇವ ।

---

| | |
|---|---|
| ಖಲು ವೈ ದೇವಾನಾಮ್ ವಾಜಸೃತ್ | ಶತ್ರುಗಳಲ್ಲಿರುವ ಅನ್ನವನ್ನು ವಶಪಡಿಸಿಕೊಳ್ಳ ಬಲ್ಲವನಲ್ಲವೇ? |
| ಅಗ್ನಿಮ್ ಏವ ವಾಜಸೃತಮ್ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದಿಂದ ಯಜಮಾನನು ವಾಜಸೃತನಾದ ಅಗ್ನಿಯನ್ನು ಸೇವಿಸುತ್ತಾನೆ. |
| ವಾಜಮ್ ಧಾವತಿ | [ಶತ್ರುಗಳ] ಅನ್ನವನ್ನು [ಸ್ವಾಧೀನಪಡಿಸಿಕೊಳ್ಳಲು] ಮುನ್ನುಗ್ಗುತ್ತಾನೆ. |
| ವೃತ್ರಮ್ ಹಂತಿ | ವೃತ್ರಾಸುರನಂತೆ ಪ್ರಬಲನಾದ ಶತ್ರುವನ್ನು/ ಪಾಪವನ್ನು ಕೊಲ್ಲುತ್ತಾನೆ. |
| ತಮ್ ಸಂಗ್ರಾಮಮ್ ಜಯತಿ | ಆ ಯುದ್ಧದಲ್ಲಿ ಗೆಲ್ಲುತ್ತಾನೆ. |
| ಅಥೋ ಅಗ್ನಿಃ ಇವ | ಅಗ್ನಿದೇವನಂತೆ |

---

ಪ್ರೀತನಾದ ಅಗ್ನಿಯ ಅನುಗ್ರಹದಿಂದ ಯಜಮಾನನು ಶತ್ರುಗಳನ್ನು ಜಯಿಸಿ, ಅವರಲ್ಲಿರುವ ಅನ್ನವನ್ನು ವಶಪಡಿಸಿಕೊಳ್ಳುತ್ತಾನೆ.

ನ ಪ್ರತಿಧೃಷೇ ಭವತ್ಯಗ್ನಯೇಽಗ್ನಿವತೇ

ಪುರೋಡಾಶಮಷ್ಟಾಕಪಾಲಂ ನಿರ್ವಪೇದ್ಯ-

ಸ್ಯಾಗ್ನಾವಗ್ನಿಮಭ್ಯುದ್ಧರೇಯುರ್ನಿರ್ದಿಷ್ಟಭಾಗೋ ವಾ

ಏತಯೋರನ್ಯೋಽನಿರ್ದಿಷ್ಟಭಾಗೋಽನ್ಯಸ್ತೌ ಸಂಭವಂತೌ

---

ನ । ಪ್ರತಿಧೃಷ ಇತಿ ಪ್ರತಿ–ಧೃಷೇ । ಭವತಿ । ಅಗ್ನಯೇ । ಅಗ್ನಿವತ ಇತ್ಯಗ್ನಿ–ವತೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ– ಕಪಾಲಮ್ । ನಿರಿತಿ । ವಪೇತ್ । ಯಸ್ಯ । ಅಗ್ನೌ । ಅಗ್ನಿಮ್ । ಅಭ್ಯುದ್ಧರೇಯುರಿತ್ಯಭಿ – ಉದ್ಧರೇಯುಃ । ನಿರ್ದಿಷ್ಟಭಾಗ ಇತಿ ನಿರ್ದಿಷ್ಟ–ಭಾಗಃ । ವೈ । ಏತಯೋಃ । ಅನ್ಯಃ । ಅನಿರ್ದಿಷ್ಟಭಾಗ ಇತ್ಯನಿರ್ದಿಷ್ಟ–ಭಾಗಃ । ಅನ್ಯಃ । ತೌ । ಸಂಭವಂತಾವಿತಿ ಸಮ್–ಭವಂತೌ ।

---

| | |
|---|---|
| ನ ಪ್ರತಿಧೃಷೇ ಭವತಿ | ಶತ್ರುಗಳು ಎದುರಿಸಲು ಅಶಕ್ಯನಾಗುತ್ತಾನೆ. |

**ಅಗ್ನಿಯಲ್ಲಿ ಬೇರೊಂದು ಅಗ್ನಿಯನ್ನು ಅಜ್ಞಾನದಿಂದ ಹಾಕಿದಾಗ ನೈಮಿತ್ತಿಕವಾದ ಇಷ್ಟಿ; ಪ್ರಶಂಸೆ**

| | |
|---|---|
| ಯಸ್ಯ ಅಗ್ನೌ ಅಗ್ನಿಮ್ ಅಭ್ಯುದ್ಧರೇಯುಃ | ಯಾವ ಯಜಮಾನನ ಆಹವನೀಯಾಗ್ನಿಯಲ್ಲಿ ಮತ್ತೊಂದು ಅಗ್ನಿಯನ್ನು ತಂದು ಹಾಕು ತ್ತಾರೆಯೋ [ಆ ಯಜಮಾನನು] |
| ಅಗ್ನಿವತೇ ಅಗ್ನಯೇ ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್ | ಅಗ್ನಿವಂತನಾದ ಅಗ್ನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| ಏತಯೋಃ ಅನ್ಯಃ ನಿರ್ದಿಷ್ಟಭಾಗಃ ವೈ | ಈ ಅಗ್ನಿಗಳಲ್ಲಿ ಒಬ್ಬ ಆಹವನೀಯಾಗ್ನಿಯು ಗೊತ್ತಾಗಿರುವ ಅಗ್ನಿಹೋತ್ರಭಾಗವುಳ್ಳವನು. |
| ಅನ್ಯಃ ಅನಿರ್ದಿಷ್ಟಭಾಗಃ | ಇನ್ನೊಬ್ಬ ಅಗ್ನಿಯು ನಿರ್ದಿಷ್ಟಭಾಗವಿಲ್ಲದವನು. |
| ತೌ ಸಂಭವಂತೌ | ಪರಸ್ಪರ ಒಂದಾಗಿರುವ ಆ ಅಗ್ನಿಗಳು |

ಯಜಮಾನಮ್(ಽ)ಅಭಿ ಸಂಭವತಸ್ಸ ಈಶ್ವರ ಆರ್ತಿ

ಮಾರ್ತೋಽರ್ಯದಗ್ನಯೇಽಗ್ನಿವತೇ ನಿರ್ವಪತಿ

ಭಾಗಧೇಯೇನೈವೈನೌ ಶಮಯತಿ ನಾರ್ತಿಮಾರ್ಚ್ಛತಿ

---

ಯಜಮಾನಮ್ । ಅಭಿ । ಸಮಿತಿ । ಭವತಃ । ಸಃ । ಈಶ್ವರಃ । ಆರ್ತಿಮ್ ।

ಆರ್ತೋಽರಿತ್ಯಾ–ಅರ್ತೋಃ । ಯತ್ । ಅಗ್ನಯೇ । ಅಗ್ನಿವತ ಇತ್ಯಗ್ನಿ–ವತೇ ।

ನಿರ್ವಪತೀತಿ ನಿಃ–ವಪತಿ । ಭಾಗಧೇಯೇನೇತಿ ಭಾಗ–ಧೇಯೇನ । ಏವ । ಏನೌ ।

ಶಮಯತಿ । ನ । ಆರ್ತಿಮ್ । ಏತಿ । ಋಚ್ಛತಿ ।

---

| | |
|---|---|
| ಯಜಮಾನಮ್ ಅಭಿಸಂಭವತಃ | [ತಮ್ಮ ಆಹಾರಭಾಗಕ್ಕಾಗಿ] ಯಜಮಾನನಿಗೆ ಅಭಿಮುಖವಾಗಿಯೇ ಬರುತ್ತವೆ. |
| ಸಃ ಆರ್ತಿಮ್ ಆರ್ತೋಃ ಈಶ್ವರಃ | ಆ ಯಜಮಾನನು ಆಗ ತೊಂದರೆಗೆ ಒಳಗಾಗುತ್ತಾನೆ. |
| ಯತ್ ಅಗ್ನಿವತೇ ಅಗ್ನಯೇ ನಿರ್ವಪತಿ ಏನೌ ಭಾಗಧೇಯೇನ ಏವ ಶಮಯತಿ | ಅಗ್ನಿವಂತನಾದ ಅಗ್ನಿಗೆ ಈ ಯಾಗದಿಂದ ಹವಿಸ್ಸಿನ ಸಮರ್ಪಣೆ ಎಂಬುದರಿಂದ [ಯಜಮಾನನು] ಇಬ್ಬರು ಅಗ್ನಿಗಳಿಗೂ ಭಾಗವನ್ನಿತ್ತು ಶಾಂತಗೊಳಿಸುತ್ತಾನೆ. |
| ಯಜಮಾನಃ ಆರ್ತಿಮ್ ನ ಋಚ್ಛತಿ | ಯಜಮಾನನು ಬಾಧೆಯನ್ನು ಹೊಂದುವುದಿಲ್ಲ. |

---

ಅಗ್ನಿಯಂತೆ ಶತ್ರುಗಳಿಗೆ ಎದುರಿಸಲು ಅಸಾಧ್ಯನಾಗುತ್ತಾನೆ.

ಅಗ್ನಿಹೋತ್ರಕ್ಕಾಗಿ ಗಾರ್ಹಪತ್ಯಾಗ್ನಿಯಿಂದ ಅಗ್ನಿಪ್ರಣಯನ ಮಾಡಿ ಆಹವನೀಯಾಗ್ನಿಸ್ಥಾನದಲ್ಲಿ ಹಾಕಬೇಕು. ಹೀಗೆ ಮಾಡಿದ ನಂತರ ಪ್ರಮಾದದಿಂದ ಮತ್ತೊಂದು ಬಾರಿ ಪ್ರಣಯನ ಮಾಡಿ ಮೊದಲಿನ ಅಗ್ನಿಯೊಡನೆ ಸೇರಿಸಿದರೆ ಅಗ್ನಿವಂತನಾದ ಅಗ್ನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಏಕೆಂದರೆ ಇಬ್ಬರು ಅಗ್ನಿಗಳಲ್ಲಿ ಮೊದಲನೆಯ ಅಗ್ನಿಗೆ ಹವಿರ್ಭಾಗವು ಗೊತ್ತಾಗಿದೆ. ಎರಡನೆಯ ಅಗ್ನಿಗೆ ನಿರ್ದಿಷ್ಟವಾಗಿಲ್ಲ. ಆ ಅಗ್ನಿಗಳು ತಮ್ಮ ಭಾಗಗಳಿಗಾಗಿ ಯಜಮಾನನ ಬಳಿಗೇ ಬರುತ್ತವೆ.

ಯಜಮಾನೋಽಗ್ನಯೇ ಜ್ಯೋತಿಷ್ಮತೇ ಪುರೋಡಾಶ ಮಷ್ಟಾಕಪಾಲಂ ನಿರ್ವಪೇದ್ಯಸ್ಯಾಗ್ನಿರುದ್ಧೃತೋಽಹುತೇಽಗ್ನಿಹೋತ್ರ ಉದ್ವಾಯೇದಪರ ಆದೀಪ್ಯಾನೂದ್ಧೃತ್ಯ ಇತ್ಯಾಹು-

---

ಯಜಮಾನಃ । ಅಗ್ನಯೇ । ಜ್ಯೋತಿಷ್ಮತೇ । ಪುರೋಡಾಶವ್ । ಅಷ್ಟಾಕಪಾಲ ಮಿತ್ಯಷ್ಟಾ-ಕಪಾಲವ್ । ನಿರಿತಿ । ವಪೇತ್ । ಯಸ್ಯ । ಅಗ್ನಿಃ । ಉದ್ಧೃತ ಇತ್ಯುತ್-ಹೃತಃ । ಅಹುತೇ । ಅಗ್ನಿಹೋತ್ರ ಇತ್ಯಗ್ನಿ-ಹೋತ್ರೇ । ಉದ್ವಾಯೇದಿತ್ಯುತ್-ವಾಯೇತ್ । ಅಪರಃ । ಆದೀಪ್ಯೇತ್ಯಾ-ದೀಪ್ಯ । ಅನೂದ್ಧೃತ್ಯ ಇತ್ಯನು-ಉದ್ಧೃತ್ಯಃ । ಇತಿ । ಆಹುಃ ।

---

**ಆಹವನೀಯಾಗ್ನಿಯು ಹೋಮಕ್ಕೆ ಮೊದಲೇ ಆರಿದರೆ ನೈಮಿತ್ತಿಕವಾಗಿ ಅನುಷ್ಠಿಸಬೇಕಾದ ಇಷ್ಟಿ; ಪ್ರಶಂಸೆ**

| | |
|---|---|
| ಅಹುತೇ ಅಗ್ನಿಹೋತ್ರೇ | ಅಗ್ನಿಹೋತ್ರಹೋಮವು ಆಗದಿರುವಾಗ |
| ಯಸ್ಯ ಉದ್ಧೃತಃ ಅಗ್ನಿಃ ಉದ್ವಾಯೇತ್ | ಯಾವ ಯಜಮಾನನ ಪ್ರಣಯನ ಮಾಡಿದ ಆಹವನೀಯಾಗ್ನಿಯು ಆರಿಹೋಗುತ್ತದೆಯೋ |
| ಜ್ಯೋತಿಷ್ಮತೇ ಅಗ್ನಯೇ ಪುರೋಡಾಶವ್ ಅಷ್ಟಾಕಪಾಲವ್ ನಿರ್ವಪೇತ್ | [ಅವನು] ಜ್ಯೋತಿಷ್ಮದಗ್ನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು. |

**ಆಹವನೀಯಾಗ್ನಿಯು ಆರಿದರೆ ಮಾಡಬೇಕಾದ ಪಕ್ಷಾಂತರ; ದೂಷಣೆ**

| | |
|---|---|
| ಆದೀಪ್ಯ ಅಪರಃ ಅನೂದ್ಧೃತ್ಯಃ ಇತಿ ಆಹುಃ | ಕೆಲವರು ಆಚಾರ್ಯರು 'ಬೇರೆಯ ಅಗ್ನಿಯು ಪ್ರಜ್ವಲಿಸುವಂತೆ ಮಾಡಿ ಮತ್ತೆ ಪ್ರಣಯನ ಮಾಡಬೇಕು' ಎಂದು ಹೇಳುತ್ತಾರೆ. |

---

ಇದರಿಂದ ಯಜಮಾನನು ಪೀಡೆಗೆ ಗುರಿಯಾಗಬೇಕಾಗುತ್ತದೆ. ಈ ಯಾಗವನ್ನು ಮಾಡುವುದರಿಂದ ಆ ಇಬ್ಬರು ಅಗ್ನಿಗಳೂ ಹವಿಭಾರ್ಗವನ್ನು ಪಡೆದು ತೃಪ್ತರಾಗಿ ಶಾಂತರಾಗುತ್ತಾರೆ. ಆದುದರಿಂದ ಯಜಮಾನನು ಬಾಧೆಗೆ ಗುರಿಯಾಗುವುದಿಲ್ಲ.

ಅಗ್ನಿಹೋತ್ರಹೋಮಕ್ಕಾಗಿ ಗಾರ್ಹಪತ್ಯಾಗ್ನಿಯಿಂದ ಆಹವನೀಯಾಗ್ನಿಯನ್ನು ಪ್ರಣಯನ ಮಾಡಿದ ಮೇಲೆ ಹೋಮಕ್ಕೆ ಮೊದಲೇ ಅಗ್ನಿಯು ಆರಿಹೋದರೆ

ಸ್ತತ್ತಥಾ ನ ಕಾರ್ಯಂ ಯದ್ಭಾಗಧೇಯಮಭಿಪೂರ್ವ ಉದ್ಧ್ರಿ

ಯತೇ ಕಿಮಪರೋಽಭ್ಯು [ಉತ್(೭)ಹ್ರಿಯೇತ]ದ್ಧ್ರಿಯೇ

ತೇತಿ ತಾನ್ಯೇವಾವಕ್ಷಾಣಾನಿ ಸನ್ನಿಧಾಯ ಮಂಥೇದಿತಃ

---

ತತ್ । ತಥಾ । ನ । ಕಾರ್ಯಮ್ । ಯತ್ । ಭಾಗಧೇಯಮಿತಿ ಭಾಗ–ಧೇಯಮ್ । ಅಭೀತಿ । ಪೂರ್ವಃ । ಉದ್ಧ್ರಿಯತ ಇತ್ಯುತ್–ಹ್ರಿಯತೇ । ಕಿಮ್ । ಅಪರಃ । ಅಭಿ । ಉದಿತಿ । ಹ್ರಿಯೇತ । ಇತಿ । ತಾನಿ । ಏವ । ಅವಕ್ಷಾಣಾನೀತ್ಯವ–ಕ್ಷಾಣಾನಿ । ಸನ್ನಿಧಾಯೇತಿ ಸಮ್ – ನಿಧಾಯ । ಮಂಥೇತ್ । ಇತಃ ।

---

| | |
|---|---|
| ತತ್ ತಥಾ ನ ಕಾರ್ಯಮ್ | ಅದು ಹಾಗೆ ಮಾಡಲ್ಪಡಬಾರದು. |
| ಯತ್ ಭಾಗಧೇಯಮ್ ಅಭಿಪೂರ್ವಃ ಉದ್ಧ್ರಿಯತೇ | 'ಅಗ್ನಿಹೋತ್ರಹೋಮಭಾಗಕ್ಕಾಗಿ ಮೊದಲನೆಯ ಅಗ್ನಿಯು ತರಲ್ಪಟ್ಟ ಕಾರಣ, |
| ಕಿಮ್ ಅಪರಃ ಅಭ್ಯುದ್ಧ್ರಿಯೇತ ಇತಿ | ಅದಕ್ಕಾಗಿಯೇ ಮತ್ತೊಂದು ಅಗ್ನಿಯು ಏತಕ್ಕಾಗಿ ತರಲ್ಪಡಬೇಕು?' [ಎಂದು ಸಿದ್ಧಾಂತಿಗಳು ಹೇಳುತ್ತಾರೆ] |

**ಮಾಡಬೇಕಾದ ಕಾರ್ಯದ ವಿಧಿ; ಪ್ರಶಂಸೆ**

| | |
|---|---|
| ತಾನಿ ಅವಕ್ಷಾಣಾನಿ ಏವ ಸನ್ನಿಧಾಯ ಮಂಥೇತ್ | ಸುಟ್ಟು ಉಳಿದಿರುವ ಆ ಕಟ್ಟಿಗೆಗಳ ಭಾಗಗಳನ್ನೇ ಒಟ್ಟುಗೂಡಿಸಿ ಸಮೀಪದಲ್ಲಿರಿಸಿ, ಮಥನ ಮಾಡಬೇಕು. |

---

ಜ್ಯೋತಿಷ್ಮದಗ್ನಿಗಾಗಿ ಅಷ್ಟಾಕಪಾಲಪುರೋಡಾಶಯಾಗವನ್ನು ಮಾಡಬೇಕು.

ಕೆಲವರು 'ಅಗ್ನಿಹೋತ್ರಹೋಮಕ್ಕಾಗಿ ಪ್ರಣಯನ ಮಾಡಿದ ಅಗ್ನಿಯು ಆರಿ ಹೋದರೆ ಮತ್ತೊಂದು ಬಾರಿ ಗಾರ್ಹಪತ್ಯಾಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿ ಪ್ರಣಯನ ಮಾಡಬೇಕು' ಎಂದು ಹೇಳುತ್ತಾರೆ. ಆದರೆ 'ಹಾಗೆ ಮಾಡಬಾರದು. ಏಕೆಂದರೆ ಅಗ್ನಿಹೋತ್ರಹೋಮಭಾಗವನ್ನು ಸ್ವೀಕರಿಸಲು ಪೂರ್ವಾಗ್ನಿಯನ್ನು ಪ್ರಣಯನ ಮಾಡಿದ ಮೇಲೆ ಅದಕ್ಕಾಗಿಯೇ ಮತ್ತೊಂದು ಅಗ್ನಿಯನ್ನು ತರುವುದೇಕೆ ? ಇದು ಸರಿಯಲ್ಲ' ಎಂದು ಸಿದ್ಧಾಂತಿಗಳು ಹೇಳುತ್ತಾರೆ.

ಪ್ರಥಮಂ ಜಜ್ಞೇ ಅಗ್ನಿಃ ಸ್ವಾದ್ಯೋನೇರಧಿ ಜಾತವೇದಾಃ।
ಸ ಗಾಯತ್ರಿಯಾ ತ್ರಿಷ್ಟುಭಾ ಜಗತ್ಯಾ ದೇವೇಭ್ಯೋ ಹವ್ಯಂ
ವಹತು ಪ್ರಜಾನನ್ನಿತಿ

---

**ಪ್ರಥಮಮ್। ಜಜ್ಞೇ। ಅಗ್ನಿಃ। ಸ್ವಾತ್। ಯೋನೇಃ। ಅಧೀತಿ। ಜಾತವೇದಾ ಇತಿ ಜಾತ-ವೇದಾಃ। ಸಃ। ಗಾಯತ್ರಿಯಾ। ತ್ರಿಷ್ಟುಭಾ। ಜಗತ್ಯಾ। ದೇವೇಭ್ಯಃ। ಹವ್ಯಮ್ । ವಹತು। ಪ್ರಜಾನನ್ನಿತಿ ಪ್ರ-ಜಾನನ್ । ಇತಿ ।**

---

| ಮಂತ್ರ | ವಿನಿಯೋಗ |
|---|---|
| ಇತಃ..... ಪ್ರಜಾನನ್। | ಅಗ್ನಿಮಥನವನ್ನು ಮಾಡಲು |

---

❖ **ಮಂತ್ರಾರ್ಥ : ಪ್ರಥಮಮ್** = ಮೊದಲು; **ಜಾತವೇದಾಃ** = ಜಾತವೇದಸ [ಎಲ್ಲವನ್ನೂ ಅರಿತ]ನಾದ; **ಅಗ್ನಿಃ** = ಅಗ್ನಿಯು; **ಸ್ವಾತ್ ಯೋನೇಃ** = ತನ್ನ ಉತ್ಪತ್ತಿಸ್ಥಾನವಾದ, **ಇತಃ** = ಈ ಕಟ್ಟಿಗೆಗಳಿಂದ; **ಅಧಿ ಜಜ್ಞೇ** = ಉತ್ಪನ್ನನಾದನು; **ಸಃ** = ಆ ಅಗ್ನಿಯು; **ಗಾಯತ್ರಿಯಾ, ತ್ರಿಷ್ಟುಭಾ, ಜಗತ್ಯಾ** [ಜಾತಃ]= ಗಾಯತ್ರೀ ತ್ರಿಷ್ಟುಪ್ ಹಾಗೂ ಜಗತೀಛಂದಸ್ಸುಗಳಿಂದ ಅನುಗ್ರಹೀತನಾಗಿ; [ಇತಃ ಅಧಿ ಜಾಯತಾಮ್ = ಈ ಕಟ್ಟಿಗೆಗಳಿಂದ ಹುಟ್ಟಲಿ.] [ಹುಟ್ಟಿದ ಅಗ್ನಿಯು] **ಪ್ರಜಾನನ್** = [ಯಾವ ದೇವತೆಗೆ ಯಾವ ಹವ್ಯವನ್ನು ಕೊಡಬೇಕೆಂದು] ತಿಳಿದವನಾಗಿ; **ದೇವೇಭ್ಯಃ ಹವ್ಯಮ್ ವಹತು** = ದೇವತೆಗಳಿಗೆ ಹವ್ಯವನ್ನು ಒಯ್ಯಲಿ; **ಇತಿ** = ಹೀಗೆ ಅಗ್ನ್ಯುತ್ಪತ್ತಿಯನ್ನು ಮಾಡಬೇಕು; [ಇದರಿಂದ]

---

ಆದುದರಿಂದ ಉರಿದು ಉಳಿದಿರುವ ಕಟ್ಟಿಗೆಗಳನ್ನು ಒಟ್ಟುಗೂಡಿಸಿ, ಹತ್ತಿರದಲ್ಲಿಟ್ಟು **'ಇತಃ ಪ್ರಥಮಮ್'** ಎಂಬ ಮಂತ್ರದಿಂದ ಅರಣಿಯಲ್ಲಿ ಅಗ್ನಿಮಥನವನ್ನು ಮಾಡಿ ಅಗ್ನಿಯನ್ನುಂಟುಮಾಡಬೇಕು.

---

**ಮಂತ್ರಾರ್ಥ ತಾತ್ಪರ್ಯ :** ಜಾತವೇದನಾದ ಅಗ್ನಿಯು ಮೊದಲು ತನ್ನ ಉತ್ಪತ್ತಿಸ್ಥಾನವಾದ ಈ ಸಮಿತ್ತುಗಳಿಂದ ಜನಿಸಿದನು. ಈಗ ಮತ್ತೆ ಗಾಯತ್ರ್ಯಾದಿಛಂದಸ್ಸುಗಳಿಂದ ಅನುಗೃಹೀತನಾಗಿ ಹುಟ್ಟಲಿ.

ಛಂದೋಭಿರೇವೈನಗ್ಗ್ಂ ಸ್ವಾದ್ಯೋನೇಃ ಪ್ರಜನಯತ್ಯೇಷ ವಾವ ಸೋಽಗ್ನಿರಿತ್ಯಾಹುರ್ಜ್ಯೋತಿಸ್ತ್ವಾವ ಅಸ್ಯ ಪರಾಪತಿತಮಿತಿ ಯದಗ್ನಯೇ ಜ್ಯೋತಿಷ್ಮತೇ ನಿರ್ವಪತಿ

---

ಛಂದೋಭಿರಿತಿ ಛಂದಃ –ಭಿಃ । ಏವ । ಏನಮ್ । ಸ್ವಾತ್ । ಯೋನೇಃ । ಪ್ರೇತಿ । ಜನಯತಿ । ಏಷಃ । ವಾವ । ಸಃ । ಅಗ್ನಿಃ । ಇತಿ । ಆಹುಃ । ಜ್ಯೋತಿಃ । ತು । ವೈ । ಅಸ್ಯ । ಪರಾಪತಿತಮಿತಿ ಪರಾ–ಪತಿತಮ್ । ಇತಿ । ಯತ್ । ಅಗ್ನಯೇ । ಜ್ಯೋತಿಷ್ಮತೇ । ನಿರ್ವಪತೀತಿ ನಿಃ–ವಪತಿ ।

---

| | |
|---|---|
| ಏನಮ್ ಛಂದೋಭಿಃ<br>ಏವ ಸ್ವಾತ್ ಯೋನೇಃ<br>ಪ್ರಜನಯತಿ | ಗಾಯತ್ರ್ಯಾದಿಛಂದಸ್ಸುಗಳಿಂದಲೇ ಮೊದಲಿನ ಅಗ್ನಿಯನ್ನೇ ಅದರ ಉತ್ಪತ್ತಿ ಸ್ಥಾನದಿಂದಲೇ ಮತ್ತೆ ಉಂಟು ಮಾಡಿ ದಂತಾಗುತ್ತದೆ. |
| ಏಷಃ ವಾವ ಸಃ ಅಗ್ನಿಃ ಇತಿ<br>ಜ್ಯೋತಿಃ ತು ವೈ ಅಸ್ಯ<br>ಪರಾಪತಿತಮ್ ಇತಿ ಆಹುಃ | ತಿಳಿದವರು 'ಈ ಅಗ್ನಿಯು ಆ ಮೊದಲಿನ ಅಗ್ನಿಯೇ' ಎಂದೂ 'ಇದರ ಜ್ಯೋತಿಯು ಮಾತ್ರ ನಷ್ಟವಾಗಿದೆ' ಎಂದೂ ಹೇಳುತ್ತಾರೆ. |
| ಜ್ಯೋತಿಷ್ಮತೇ ಅಗ್ನಯೇ<br>ನಿರ್ವಪತಿ ಯತ್ | ಜ್ಯೋತಿಷ್ಮದಗ್ನಿಗಾಗಿ ಈ ಇಷ್ಟಿಯನ್ನು ಮಾಡುವುದೆಂಬುದು ಯಾವುದೋ [ಅದರಿಂದ] |

---

ಆಯಾ ದೇವತೆಗಳ ಭಾಗಗಳನ್ನು ತಿಳಿದು ಹವಿಸ್ಸನ್ನು ಅವರಿಗೆ ಸಮರ್ಪಿಸಲಿ.

ಹೀಗೆ ಜ್ಯೋತಿಷ್ಮದಗ್ನಿಗಾಗಿ ಯಾಗವನ್ನು ಮಾಡುವುದರಿಂದ ಹಿಂದೆ ಶಾಂತನಾಗಿ ಪ್ರಜ್ವಲಿಸದೇ ಇದ್ದ ಆ ಅಗ್ನಿಯನ್ನೇ ಯಜಮಾನನು ಪಡೆಯುತ್ತಾನೆ. ತಿಳಿದವರು 'ಅದು ಮೊದಲಿನ ಅಗ್ನಿಯೇ ಸರಿ. ಅದರ ಜ್ಯೋತಿಯು ಒಳಗಿದ್ದರೂ ಹೊರಗೆ ಕಾಣುತ್ತಿಲ್ಲ' ಎನ್ನುತ್ತಾರೆ. ಹೀಗಾಗಿ ಆ ಅಗ್ನಿಯನ್ನೇ ಯಜಮಾನನು ಹೊಂದುವನಲ್ಲದೆ ಅಗ್ನಿಯು ಬೇರೆಯಾಗುವುದಿಲ್ಲ.

ಯದೇವಾಸ್ಯ ಜ್ಯೋತಿಃ ಪರಾಪತಿತಂ

ತದೇವಾವರುಂಧೇ ||೨೨-4||

[ಕರೋತ್ಯನ್ನಾದೋ ದಧಾತಿ ಯದಗ್ನಯೇ ಶುಚಯೇ ಚಕ್ಷುರೇವಾಸ್ಮಿನ್ತೇನ ದಧಾತಿ ಕರೋತಿ ವಾಜಂ ಯಜಮಾನಮುದೇವಾಸ್ಯ ಷಟ್ಚ ||4||]

---

ಯತ್ | ಏವ | ಅಸ್ಯ | ಜ್ಯೋತಿಃ | ಪರಾಪತಿತಮಿತಿ ಪರಾ-ಪತಿತಮ್ | ತತ್ | ಏವ | ಅವೇತಿ | ರುಂಧೇ ||4||

---

| | |
|---|---|
| ಯತ್ ಏವ ಅಸ್ಯ ಜ್ಯೋತಿಃ ಪರಾಪತಿತಮ್ ತತ್ ಏವ ಅವರುಂಧೇ | ಯಜಮಾನನು ನಷ್ಟವಾದ ಆ ಜ್ಯೋತಿಯನ್ನೇ ಮತ್ತೆ ಪಡೆಯುತ್ತಾನೆ. |

* * *

## ಚತುರ್ಥಾನುವಾಕವಿಷಯಸಂಗ್ರಹ

ಯೋ ವಾಂಛತ್ಯನ್ನವಾನ್ ಸ್ಯಾಂ ಸ ಕುರ್ಯಾದನ್ನವತೇಽಗ್ನಯೇ |
ವಾಂಛತ್ಯನ್ನಾದನೇ ಶಕ್ತಿಮನ್ನಾದಾಯ ಹವಿಶ್ಚರೇತ್ ||

ಪ್ರಭೂತಾನ್ನಸ್ವಾಮಿತಾರ್ಥೀ ಹ್ಯನ್ನಸ್ಯ ಪತಯೇ ಚರೇತ್ |
ಪವಮಾನಃ ಪಾವಕಶ್ಚ ಶುಚಿಶ್ಚೇತಿ ತ್ರಿಭಿರ್ಗುಣೈಃ ||

ಯುಕ್ತೇಭ್ಯಃ ಕುರುತೇ ದೀರ್ಘರೋಗಯುಕ್ತೋ ಹವಿಸ್ತ್ರಯಮ್ |
ಚಕ್ಷುಷ್ಪಾಟವಕಾಮೋಽಪಿ ಪೂರ್ವೋಕ್ತಂ ತ್ರಯಮಾಚರೇತ್ ||

ರುದ್ರವದ್ಯಾಗಮಾರಭ್ಯ ಯೇ ಪ್ರೋಕ್ತಾ ಏತದಂತಕಾಃ |
ತ್ವಮಗ್ನೇ ರುದ್ರ ಇತ್ಯತ್ರ ತದರ್ಥೋ ವರ್ಣಿತೋಽಖಿಲಃ ||

**ಪ್ರಜಾಕಾಮಃ ಪುತ್ರವತೇ ವಹ್ನಯೇ ಪುತ್ರಿಣೇ ತಥಾ ।**
**ಇಂದ್ರಾಯೇತಿ ಹವಿರ್ಭ್ಯಾಂ ತು ಯುಕ್ತಾಮಿಷ್ಟಿಮಿಹಾಚರೇತ್ ॥**

**ಕ್ಷೀರಾದಿರಸಕಾಮಸ್ತು ಕುರ್ಯಾದ್ರಸವತೇ ಚರುಮ್ ।**
**ಧನಕಾಮೋ ವಸುಮತೇ ವಹ್ನಯೇಽತ್ರ ಹವಿಶ್ಚರೇತ್ ॥**

**ಯುದ್ಧಂ ಜಿತ್ವಾಽನ್ನಕಾಮಸ್ತು ಕುರ್ಯಾದ್ವಾಜಸ್ವತೇಽಗ್ನಯೇ ।**
**ದ್ವಿರುಗ್ನ್ಯುದ್ಧರಣೇ ಕುರ್ಯಾದಗ್ನಯೇಽಗ್ನಿವತೇ ಹವಿಃ ।**
**ಜ್ಯೋತಿಷ್ಮತೇಽಗ್ನಯೇ ಕುರ್ಯಾದುದ್ಧೃತಾಗ್ನಿವಿನಾಶನೇ ॥**

**ಅನ್ನವದ್ಯಾಗಮಾರಭ್ಯ ಜ್ಯೋತಿಷ್ಮದವಸಾನಕಾಃ ।**
**ಅನುವಾಕೇ ಚತುರ್ಥೇಽತ್ರ ಕ್ರಮೇಣೈತೇ ಸಮೀರಿತಾಃ ॥**

ಅನ್ನವುಳ್ಳವನಾಗಬಯಸುವವನು ಅನ್ನವಂತನಾದ ಅಗ್ನಿದೇವನಿಗೂ, ಅನ್ನವನ್ನು ತಿನ್ನುವ ಶಕ್ತಿಯು ಬೇಕೆನ್ನುವವನು ಅನ್ನಾದಾಗ್ನಿದೇವನಿಗೂ, ಅಧಿಕವಾದ ಅನ್ನಸ್ವಾಮಿಯಾಗಬಯಸುವವನು ಅನ್ನಪತಿಯಾದ ಅಗ್ನಿದೇವನಿಗೂ, ದೀರ್ಘರೋಗಗ್ರಸ್ತನಾದವನು ಪವಮಾನಾಗ್ನಿ, ಪಾವಕಾಗ್ನಿ ಹಾಗೂ ಶುಚ್ಯಗ್ನಿದೇವನಿಗಾಗಿಯೂ, ದೃಢವಾದ ಚಕ್ಷುಃ ಪ್ರಕಾಶವನ್ನು ಬಯಸುವವನು ಹಿಂದಿನದೇ ಮೂರು ದೇವತೆಗಳಿಗೂ, ಸಂತತಿಯನ್ನು ಬಯಸುವವನು ಪುತ್ರವದಗ್ನಿದೇವನಿಗೂ, ಪುತ್ರವೃದ್ಧಿಯನ್ನು ಮಾಡುವ ಇಂದ್ರದೇವನಿಗಾಗಿಯೂ, ರಸಕಾಮನಾದವನು ರಸವದಗ್ನಿದೇವನಿಗಾಗಿಯೂ, ಧನಕಾಮನಾದವನು ವಸುಮದಗ್ನಿದೇವನಿಗಾಗಿಯೂ, ಯುದ್ಧವನ್ನು ಗೆದ್ದು ಶತ್ರುವಿನ ಅನ್ನವನ್ನು ವಶಪಡಿಸಿಕೊಳ್ಳಲುಬಯಸುವವನು ವಾಜಸ್ವದಗ್ನಿದೇವನಿಗಾಗಿಯೂ, ಅಗ್ನಿಯಲ್ಲಿ ಅಜ್ಞಾನದಿಂದ ಬೇರೊಂದು ಅಗ್ನಿಯನ್ನು ಹಾಕಿದಾಗ ನೈಮಿತ್ತಿಕವಾಗಿ ಅಗ್ನಿವದಗ್ನಿದೇವನಿಗಾಗಿಯೂ, ಆಹವನೀಯಾಗ್ನಿಯು ಹೋಮಕ್ಕೆ ಮೊದಲೇ ಆರಿ ಹೋದರೆ ನೈಮಿತ್ತಿಕವಾಗಿ ಜ್ಯೋತಿಷ್ಮದಗ್ನಿದೇವನಿಗಾಗಿಯೂ ಇಷ್ಟಿಗಳನ್ನು ಅನುಷ್ಠಿಸಬೇಕು.

* * *

## ॥ ಪಂಚಮೋಽನುವಾಕಃ ॥

ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇದ್ವಾರುಣಂ

ಚರುಂ ದಧಿಕ್ರಾವ್ಣ್ಣೇ ಚರುಮಭಿಶಸ್ಯಮಾನೋ

---

**ವೈಶ್ವಾನರಮ್** । ದ್ವಾದಶಕಪಾಲಮಿತಿ ದ್ವಾದಶ–ಕಪಾಲಮ್ । ನಿರಿತಿ । ವಪೇತ್ । ವಾರುಣಮ್ । ಚರುಮ್ । ದಧಿಕ್ರಾವ್ಣ್ಣ ಇತಿ ದಧಿ–ಕ್ರಾವ್ಣ್ಣೇ । ಚರುಮ್ । ಅಭಿಶಸ್ಯಮಾನ ಇತ್ಯಭಿ–ಶಸ್ಯಮಾನಃ ।

---

**ವೃಥಾಪವಾದಕ್ಕೆ ಗುರಿಯಾದವನಿಗೆ ಇಷ್ಟಿತ್ರಯವಿಧಾನ; ಸ್ತುತಿ**

| | |
|---|---|
| ಅಭಿಶಸ್ಯಮಾನಃ | ಪಾಪವನ್ನು ಮಾಡದಿದ್ದರೂ ಪಾಪಿಯೆಂಬ ಆರೋಪಕ್ಕೆ ಒಳಗಾದವನು |
| ವೈಶ್ವಾನರಮ್ ದ್ವಾದಶಕಪಾಲಮ್ ನಿರ್ವಪೇತ್, ವಾರುಣಮ್ ಚರುಮ್, ದಧಿಕ್ರಾವ್ಣ್ಣೇ ಚರುಮ್ [ನಿರ್ವಪೇತ್] | ವೈಶ್ವಾನರದೇವತೆಗಾಗಿ ದ್ವಾದಶಕಪಾಲ ಪುರೋಡಾಶಯಾಗವನ್ನೂ, ವರುಣದೇವನಿಗಾಗಿ ಚರುಯಾಗವನ್ನೂ, *ದಧಿಕ್ರಾವದೇವನಿಗಾಗಿ ಚರುಯಾಗವನ್ನೂ ಮಾಡಬೇಕು. |

---

ಒಮ್ಮೊಮ್ಮೆ ಪಾಪವನ್ನು ಮಾಡದಿದ್ದರೂ ಪಾಪಿಯಾಗಿರುವನೆಂಬ ವೃಥಾಪವಾದವು ಬರುತ್ತದೆ. ಶ್ರೀಕೃಷ್ಣನು ಸತ್ರಾಜಿತನನ್ನು ಕೊಂದನೆಂಬ ವೃಥಾಪವಾದವು ಪ್ರಸಿದ್ಧವಾಗಿದೆ. ಹೀಗೆ ಅಪವಾದವು ಬಂದಾಗ ಬಂಧುಗಳು ಬಹಿಷ್ಕಾರ ಹಾಕುತ್ತಾರೆ. ಹಾಗಾಗಿ ಅಪವಾದಕ್ಕೆ ಗುರಿಯಾದವನು ವೈಶ್ವಾನರಾಗ್ನಿದೇವತೆಗಾಗಿ ದ್ವಾದಶಕಪಾಲಪುರೋಡಾಶಯಾಗವನ್ನೂ, ವರುಣನಿಗಾಗಿ ಚರುಯಾಗವನ್ನೂ , ದಧಿಕ್ರಾವದೇವನಿಗಾಗಿ ಚರುಯಾಗವನ್ನೂ ಅನುಷ್ಠಿಸಬೇಕು.

---

* ದಧಿಕ್ರಾವಾ = ದೇವತಾವಿಶೇಷ; ಅಗ್ನಿಯೆಂದು ಕೆಲವರ ಮತ.

ಯದ್ವೈಶ್ವಾನರೋ ದ್ವಾದಶಕಪಾಲೋ ಭವತಿ
ಸಂವತ್ಸರೋ ವಾ ಅಗ್ನಿರ್ವೈಶ್ವಾನರಸ್ಸಂವತ್ಸರೇ -
ಣೈವೈನಗ್ಂ ಸ್ವದಯತ್ಯಪಪಾಪಂ ವರ್ಣಗ್ಂ ಹತೇ

---

ಯತ್ । ವೈಶ್ವಾನರಃ । ದ್ವಾದಶಕಪಾಲ ಇತಿ ದ್ವಾದಶ–ಕಪಾಲಃ । ಭವತಿ । ಸಂವತ್ಸರ ಇತಿ ಸಮ್ – ವತ್ಸರಃ । ವೈ । ಅಗ್ನಿಃ । ವೈಶ್ವಾನರಃ । ಸಂವತ್ಸರೇಣೇತಿ ಸಮ್–ವತ್ಸರೇಣ । ಏವ । ಏನಮ್ । ಸ್ವದಯತಿ । ಅಪೇತಿ । ಪಾಪಮ್ । ವರ್ಣಮ್ । ಹತೇ ।

---

| | |
|---|---|
| ಯತ್ ವೈಶ್ವಾನರಃ ದ್ವಾದಶಕಪಾಲಃ ಭವತಿ | ವೈಶ್ವಾನರಯಾಗವು ದ್ವಾದಶಕಪಾಲವಾಗಿರುವುದರಿಂದ |
| ಸಂವತ್ಸರಃ ವೈ ಅಗ್ನಿಃ ವೈಶ್ವಾನರಃ ಸಂವತ್ಸರೇಣ ಏವ ಏನಮ್ ಸ್ವದಯತಿ | ಸಂವತ್ಸರಾಧಿಪತಿಯಾದ ವೈಶ್ವಾನರಾಗ್ನಿ ದೇವನು (ಪ್ರಸನ್ನನಾಗಿ) ಒಂದು ಸಂವತ್ಸರ ಕಾಲದಿಂದಲೇ ಈ ಯಜಮಾನನನ್ನು (ಬಂಧುಗಳಿಗೆ) ಇಷ್ಟನನ್ನಾಗಿ ಮಾಡುತ್ತಾನೆ. |
| ಪಾಪಮ್ ವರ್ಣಮ್ ಅಪ ಹತೇ | ಪಾಪಿಯೆಂಬ ವೃಥಾಪವಾದವನ್ನು ಹೋಗಲಾಡಿಸಿಕೊಳ್ಳುತ್ತಾನೆ. |

---

ವೈಶ್ವಾನರಾಗ್ನಿಯು ದ್ವಾದಶಮಾಸಾತ್ಮಕ ಸಂವತ್ಸರಸ್ವರೂಪನು. ಅವನ ಅನುಗ್ರಹದಿಂದ ಸಂವತ್ಸರಕಾಲದಲ್ಲಿಯೇ ಯಜಮಾನನು ಬಂಧುಗಳಿಗೆ ಇಷ್ಟನಾಗುತ್ತಾನೆ. ಅವನು ತನ್ನ ಮೇಲಿನ ಅಪವಾದವನ್ನು ಕಳೆದುಕೊಳ್ಳುತ್ತಾನೆ.

ವಾರುಣೇನ್ನೈವೈನಂ ವರುಣಪಾಶಾನ್ಮುಂಚತಿ

ದಧಿಕ್ರಾವ್ಣ್ಣಾ ಪುನಾತಿ ಹಿರಣ್ಯಂ ದಕ್ಷಿಣಾ ಪವಿತ್ರಂ

ವೈ ಹಿರಣ್ಯಂ ಪುನಾತ್ಯೇವೈನಮಾದ್ಯಮಸ್ಯಾನ್ನಂ ಭವತ್ಯೇ-

---

ವಾರುಣೇನ। ಏವ। ಏನಮ್। ವರುಣಪಾಶಾದಿತಿ ವರುಣ – ಪಾಶಾತ್। ಮುಂಚತಿ।

ದಧಿಕ್ರಾವ್ಣ್ಣೇತಿ ದಧಿ–ಕ್ರಾವ್ಣ್ಣಾ। ಪುನಾತಿ। ಹಿರಣ್ಯಮ್। ದಕ್ಷಿಣಾ। ಪವಿತ್ರಮ್।

ವೈ। ಹಿರಣ್ಯಮ್। ಪುನಾತಿ। ಏವ। ಏನಮ್। ಆದ್ಯಮ್। ಅಸ್ಯ। ಅನ್ನಮ್। ಭವತಿ।

---

| | |
|---|---|
| ವಾರುಣೇನ ಏವ ಏನಮ್ ವರುಣಪಾಶಾತ್ ಮುಂಚತಿ | (ಯಜಮಾನನು) ಪಾಪಿಗಳನ್ನು ಬಂಧಿಸುವ ವರುಣಪಾಶದಿಂದ ತನ್ನನ್ನು ಬಿಡಿಸಿಕೊಳ್ಳುತ್ತಾನೆ. |
| ದಧಿಕ್ರಾವ್ಣ್ಣಾ ಪುನಾತಿ | ದಧಿಪ್ರಿಯನಾದ ದೇವತಾವಿಶೇಷನಿಂದ/ ಅಗ್ನಿದೇವನಿಂದ ತನ್ನನ್ನು ಪರಿಶುದ್ಧನನ್ನಾಗಿ ಮಾಡಿಕೊಳ್ಳುತ್ತಾನೆ. |
| ಹಿರಣ್ಯಮ್ ದಕ್ಷಿಣಾ | ಈ ಯಾಗತ್ರಯಕ್ಕೆ ಚಿನ್ನವು ದಕ್ಷಿಣೆಯಾಗಿದೆ. |
| ಹಿರಣ್ಯಮ್ ಪವಿತ್ರಮ್ ವೈ | ಚಿನ್ನವು ಪವಿತ್ರವಷ್ಟೆ. |
| ಏನಮ್ ಪುನಾತಿ ಏವ | ಅದು ಈ ಯಜಮಾನನ್ನು ಶುದ್ಧಿಗೊಳಿಸುತ್ತದೆ. |
| ಅಸ್ಯ ಅನ್ನಮ್ ಆದ್ಯಮ್ ಭವತಿ | ಈ ಯಜಮಾನನ ಅನ್ನವು ತಿನ್ನಲು ಯೋಗ್ಯವಾಗುತ್ತದೆ. |

---

ವರುಣನ ಅನುಗ್ರಹದಿಂದ ಪಾಪಿಗಳನ್ನು ಬಂಧಿಸುವ ವರುಣಪಾಶದಿಂದಲೂ ಬಿಡುಗಡೆ ಯಾಗುತ್ತದೆ. ದಧಿಕ್ರಾವದೇವನು ಯಜಮಾನನನ್ನು ಶುದ್ಧಿಗೊಳಿಸುತ್ತಾನೆ. ಈ ಯಾಗದ ದಕ್ಷಿಣೆಯು ಚಿನ್ನವಾದುದರಿಂದ ಅದೂ ಯಜಮಾನನನ್ನು ಪವಿತ್ರಗೊಳಿಸುತ್ತದೆ. ಈ ಯಜಮಾನನ ಅನ್ನವು ತಿನ್ನಲು ಯೋಗ್ಯವಾಗುತ್ತದೆ. ಹೀಗೆ ವೃಥಾಪವಾದವು ದೂರಾಗುತ್ತದೆ.

– ತಾಮೇವ ನಿರ್ವಪೇತ್ಪ್ರಜಾಕಾಮಸ್ಸಂವತ್ಸರೋ ವಾ

[ಸಂವತ್ಸರಃ (೧) ವಾ]ಏತಸ್ಯಾಶಾಂತೋ ಯೋನಿಂ

ಪ್ರಜಾಯೈ ಪಶೂನಾಂ ನಿರ್ದಹತಿ ಯೋಽಲಂ

ಪ್ರಜಾಯೈ ಸನ್ಪ್ರಜಾಂ ನ ವಿಂದತೇ

---

**ಏತಾಮ್** । ಏವ । ನಿರಿತಿ । ವಪೇತ್ । ಪ್ರಜಾಕಾಮ ಇತಿ ಪ್ರಜಾ–ಕಾಮಃ । ಸಂವತ್ಸರ ಇತಿ ಸಮ್ – ವತ್ಸರಃ । ವೈ । ಏತಸ್ಯ । ಅಶಾಂತಃ । ಯೋನಿಮ್ । ಪ್ರಜಾಯಾ ಇತಿ ಪ್ರ–ಜಾಯೈ । ಪಶೂನಾಮ್ । ನಿರಿತಿ । ದಹತಿ । ಯಃ । ಅಲಮ್ । ಪ್ರಜಾಯಾ ಇತಿ ಪ್ರ–ಜಾಯೈ । ಸನ್ । ಪ್ರಜಾಮಿತಿ ಪ್ರ–ಜಾಮ್ । ನ । ವಿಂದತೇ ।

---

**ಪ್ರಜಾಕಾಮನಿಗೂ ವಿಹಿತವಾಗಿರುವ ಹಿಂದಿನ ಯಾಗ**

| | |
|---|---|
| **ಪ್ರಜಾಕಾಮಃ ಏತಾಮ್ ಏವ ನಿರ್ವಪೇತ್** | ಮಕ್ಕಳನ್ನು ಬಯಸುವವನು ಈ ಯಾಗ ತ್ರಯವನ್ನೇ ಮಾಡಬೇಕು. |
| **ಏತಸ್ಯ ವೈ ಅಶಾಂತಃ ಸಂವತ್ಸರಃ** | ಈ ಯಜಮಾನನ ವಿಷಯದಲ್ಲಿ ಕೋಪಗೊಂಡ ಸಂವತ್ಸರಾಭಿಮಾನಿದೇವನು |
| **ಪಶೂನಾಮ್ ಪ್ರಜಾಯೈ ಯೋನಿಮ್ ನಿರ್ದಹತಿ** | ಈತನ ಪ್ರಜಾ–ಪಶುಗಳ ಗರ್ಭಧಾರಣ ಶಕ್ತಿಯನ್ನು ಸುಟ್ಟು ಹಾಕುತ್ತಾನೆ. |
| **ಯಃ ಪ್ರಜಾಯೈ ಅಲಮ್ ಸನ್ ಪ್ರಜಾಮ್ ನ ವಿಂದತೇ** | ಯಾವನು ಪ್ರಜೋತ್ಪಾದನಶಕ್ತಿಯುಳ್ಳವನಾದರೂ ಸಂತತಿಯನ್ನು ಹೊಂದಿರುವುದಿಲ್ಲವೋ ಅವನು ಈ ಯಾಗವನ್ನು ಮಾಡಬೇಕು. |

---

ಪ್ರಜೋತ್ಪಾದನಶಕ್ತಿಯುಳ್ಳವನಾದರೂ ಯಾವನು ಮಕ್ಕಳನ್ನು ಹೊಂದಿರುವುದಿಲ್ಲವೋ ಅವನು ಈ ಇಷ್ಟಿತ್ರಯವನ್ನೂ ಅನುಷ್ಠಿಸಬೇಕು.

ಯದ್ವೈಶ್ವಾನರೋ ದ್ವಾದಶಕಪಾಲೋ ಭವತಿ
ಸಂವತ್ಸರೋ ವಾ ಅಗ್ನಿರ್ವೈಶ್ವಾನರಃ ಸಂವತ್ಸರಮೇವ
ಭಾಗಧೇಯೇನ ಶಮಯತಿ ಸೋಽಸ್ಮೈ ಶಾಂತಃ
ಸ್ವಾದ್ಯೋನೇಃ ಪ್ರಜಾಂ ಪ್ರಜನಯತಿ

---

ಯತ್ । ವೈಶ್ವಾನರಃ । ದ್ವಾದಶಕಪಾಲ ಇತಿ ದ್ವಾದಶ–ಕಪಾಲಃ । ಭವತಿ । ಸಂವತ್ಸರ ಇತಿ ಸಮ್ – ವತ್ಸರಃ । ವೈ । ಅಗ್ನಿಃ । ವೈಶ್ವಾನರಃ । ಸಂವತ್ಸರಮಿತಿ ಸಮ್ – ವತ್ಸರಮ್ । ಏವ । ಭಾಗಧೇಯೇನೇತಿ ಭಾಗ–ಧೇಯೇನ । ಶಮಯತಿ । ಸಃ । ಅಸ್ಮೈ । ಶಾಂತಃ । ಸ್ವಾತ್ । ಯೋನೇಃ । ಪ್ರಜಾಮಿತಿ ಪ್ರ–ಜಾಮ್ । ಪ್ರೇತಿ । ಜನಯತಿ ।

---

| | |
|---|---|
| ಯತ್ ವೈಶ್ವಾನರಃ ದ್ವಾದಶಕಪಾಲಃ ಭವತಿ | ವೈಶ್ವಾನರಾಗ್ನಿಗೆ ದ್ವಾದಶಕಪಾಲಪುರೋಡಾಶ ಯಾಗವನ್ನು ಮಾಡುವುದರಿಂದ – |
| ಅಗ್ನಿಃ ವೈಶ್ವಾನರಃ ಸಂವತ್ಸರಃ ವೈ | [ವೈಶ್ವಾನರಾಗ್ನಿಯು ಸಂವತ್ಸರಸ್ವರೂಪನಷ್ಟೆ]. |
| ಸಂವತ್ಸರಮ್ ಏವ ಭಾಗಧೇಯೇನ ಶಮಯತಿ | – ಆ ವೈಶ್ವಾನರಾಗ್ನಿಯನ್ನು (ಸಂವತ್ಸರರೂಪಿಯನ್ನು ) ಹವಿರ್ಭಾಗವನ್ನಿತ್ತು ಯಜಮಾನನು ಶಾಂತನನ್ನಾಗಿ ಮಾಡುತ್ತಾನೆ. |
| ಸಃ ಅಸ್ಮೈ ಶಾಂತಃ ಸ್ವಾತ್ ಯೋನೇಃ ಪ್ರಜಾಮ್ ಪ್ರಜನಯತಿ | ಈ ಯಜಮಾನನ ವಿಷಯದಲ್ಲಿ ಶಾಂತನಾದ ವೈಶ್ವಾನರಾಗ್ನಿಯು ಮಕ್ಕಳನ್ನು ತನ್ನ ಜನ್ಮಸ್ಥಾನದಿಂದಲೇ ಉತ್ಪತ್ತಿ ಮಾಡುತ್ತಾನೆ. |

---

ಯಾವುದೋ ಕಾರಣದಿಂದ ಅಶಾಂತನಾದ ವೈಶ್ವಾನರಾಗ್ನಿದೇವನು ಪ್ರಜಾ–ಪಶುಗಳಲ್ಲಿ ಉತ್ಪಾದನಶಕ್ತಿಯನ್ನು ಪ್ರತಿಬಂಧಿಸಿರುತ್ತಾನೆ. ವೈಶ್ವಾನರಾಗ್ನಿಯು ಸಂವತ್ಸರಸ್ವರೂಪಿಯಾದವನು. ಅವನಿಗಾಗಿ ದ್ವಾದಶಕಪಾಲಯಾಗವನ್ನು ಮಾಡುವುದರಿಂದ ತನ್ನ ಭಾಗವನ್ನು ಹೊಂದಿ ವೈಶ್ವಾನರಾಗ್ನಿಯು ಯಜಮಾನನ ವಿಷಯದಲ್ಲಿ ಶಾಂತನಾಗುತ್ತಾನೆ.

– ತಾಮೇವ ನಿರ್ವಪೇತ್ಪ್ರಜಾಕಾಮಸ್ಸಂವತ್ಸರೋ ವಾ

[ಸಂವತ್ಸರಃ (೧) ವಾ]ಏತಸ್ಯಾಶಾಂತೋ ಯೋನಿಂ

ಪ್ರಜಾಯೈ ಪಶೂನಾಂ ನಿರ್ದಹತಿ ಯೋಽಲಂ

ಪ್ರಜಾಯೈ ಸನ್ಪ್ರಜಾಂ ನ ವಿಂದತೇ

---

**ಏತಾಮ್** । ಏವ । ನಿರಿತಿ । ವಪೇತ್ । ಪ್ರಜಾಕಾಮ ಇತಿ ಪ್ರಜಾ–ಕಾಮಃ । ಸಂವತ್ಸರ ಇತಿ ಸಮ್ – ವತ್ಸರಃ । ವೈ । ಏತಸ್ಯ । ಅಶಾಂತಃ । ಯೋನಿಮ್ । ಪ್ರಜಾಯಾ ಇತಿ ಪ್ರ–ಜಾಯೈ । ಪಶೂನಾಮ್ । ನಿರಿತಿ । ದಹತಿ । ಯಃ । ಅಲಮ್ । ಪ್ರಜಾಯಾ ಇತಿ ಪ್ರ–ಜಾಯೈ । ಸನ್ । ಪ್ರಜಾಮಿತಿ ಪ್ರ–ಜಾಮ್ । ನ । ವಿಂದತೇ ।

---

**ಪ್ರಜಾಕಾಮನಿಗೂ ವಿಹಿತವಾಗಿರುವ ಹಿಂದಿನ ಯಾಗ**

| | |
|---|---|
| ಪ್ರಜಾಕಾಮಃ ಏತಾಮ್ ಏವ ನಿರ್ವಪೇತ್ | ಮಕ್ಕಳನ್ನು ಬಯಸುವವನು ಈ ಯಾಗ ತ್ರಯವನ್ನೇ ಮಾಡಬೇಕು. |
| ಏತಸ್ಯ ವೈ ಅಶಾಂತಃ ಸಂವತ್ಸರಃ | ಈ ಯಜಮಾನನ ವಿಷಯದಲ್ಲಿ ಕೋಪಗೊಂಡ ಸಂವತ್ಸರಾಭಿಮಾನಿದೇವನು |
| ಪಶೂನಾಮ್ ಪ್ರಜಾಯೈ ಯೋನಿಮ್ ನಿರ್ದಹತಿ | ಈತನ ಪ್ರಜಾ–ಪಶುಗಳ ಗರ್ಭಧಾರಣ ಶಕ್ತಿಯನ್ನು ಸುಟ್ಟು ಹಾಕುತ್ತಾನೆ. |
| ಯಃ ಪ್ರಜಾಯೈ ಅಲಮ್ ಸನ್ ಪ್ರಜಾಮ್ ನ ವಿಂದತೇ | ಯಾವನು ಪ್ರಜೋತ್ಪಾದನಶಕ್ತಿಯುಳ್ಳವನಾದರೂ ಸಂತತಿಯನ್ನು ಹೊಂದಿರುವುದಿಲ್ಲವೋ ಅವನು ಈ ಯಾಗವನ್ನು ಮಾಡಬೇಕು. |

---

ಪ್ರಜೋತ್ಪಾದನಶಕ್ತಿಯುಳ್ಳವನಾದರೂ ಯಾವನು ಮಕ್ಕಳನ್ನು ಹೊಂದಿರುವುದಿಲ್ಲವೋ ಅವನು ಈ ಇಷ್ಟಿತ್ರಯವನ್ನೂ ಅನುಷ್ಠಿಸಬೇಕು.

# ಯದ್ವೈಶ್ವಾನರೋ ದ್ವಾದಶಕಪಾಲೋ ಭವತಿ
# ಸಂವತ್ಸರೋ ವಾ ಅಗ್ನಿರ್ವೈಶ್ವಾನರಃ ಸಂವತ್ಸರಮೇವ
# ಭಾಗಧೇಯೇನ ಶಮಯತಿ ಸೋಽಸ್ಮೈ ಶಾಂತಃ
# ಸ್ವಾದ್ಯೋನೇಃ ಪ್ರಜಾಂ ಪ್ರಜನಯತಿ

---

ಯತ್ । ವೈಶ್ವಾನರಃ । ದ್ವಾದಶಕಪಾಲ ಇತಿ ದ್ವಾದಶ–ಕಪಾಲಃ । ಭವತಿ । ಸಂವತ್ಸರ ಇತಿ ಸಮ್ – ವತ್ಸರಃ । ವೈ । ಅಗ್ನಿಃ । ವೈಶ್ವಾನರಃ । ಸಂವತ್ಸರಮಿತಿ ಸಮ್ – ವತ್ಸರಮ್ । ಏವ । ಭಾಗಧೇಯೇನೇತಿ ಭಾಗ–ಧೇಯೇನ । ಶಮಯತಿ । ಸಃ । ಅಸ್ಮೈ । ಶಾಂತಃ । ಸ್ವಾತ್ । ಯೋನೇಃ । ಪ್ರಜಾಮಿತಿ ಪ್ರ–ಜಾಮ್ । ಪ್ರೇತಿ । ಜನಯತಿ ।

---

| | |
|---|---|
| ಯತ್ ವೈಶ್ವಾನರಃ ದ್ವಾದಶಕಪಾಲಃ ಭವತಿ | ವೈಶ್ವಾನರಾಗ್ನಿಗೆ ದ್ವಾದಶಕಪಾಲಪುರೋಡಾಶ ಯಾಗವನ್ನು ಮಾಡುವುದರಿಂದ – |
| ಅಗ್ನಿಃ ವೈಶ್ವಾನರಃ ಸಂವತ್ಸರಃ ವೈ | [ವೈಶ್ವಾನರಾಗ್ನಿಯು ಸಂವತ್ಸರಸ್ವರೂಪನಷ್ಟೆ]. |
| ಸಂವತ್ಸರಮ್ ಏವ ಭಾಗಧೇಯೇನ ಶಮಯತಿ | – ಆ ವೈಶ್ವಾನರಾಗ್ನಿಯನ್ನು (ಸಂವತ್ಸರರೂಪಿಯನ್ನು ) ಹವಿರ್ಭಾಗವನ್ನಿತ್ತು ಯಜಮಾನನು ಶಾಂತನನ್ನಾಗಿ ಮಾಡುತ್ತಾನೆ. |
| ಸಃ ಅಸ್ಮೈ ಶಾಂತಃ ಸ್ವಾತ್ ಯೋನೇಃ ಪ್ರಜಾಮ್ ಪ್ರಜನಯತಿ | ಈ ಯಜಮಾನನ ವಿಷಯದಲ್ಲಿ ಶಾಂತನಾದ ವೈಶ್ವಾನರಾಗ್ನಿಯು ಮಕ್ಕಳನ್ನು ತನ್ನ ಜನ್ಮಸ್ಥಾನದಿಂದಲೇ ಉತ್ಪತ್ತಿಮಾಡುತ್ತಾನೆ. |

---

ಯಾವುದೋ ಕಾರಣದಿಂದ ಅಶಾಂತನಾದ ವೈಶ್ವಾನರಾಗ್ನಿದೇವನು ಪ್ರಜಾ–ಪಶುಗಳಲ್ಲಿ ಉತ್ಪಾದನಶಕ್ತಿಯನ್ನು ಪ್ರತಿಬಂಧಿಸಿರುತ್ತಾನೆ. ವೈಶ್ವಾನರಾಗ್ನಿಯು ಸಂವತ್ಸರಸ್ವರೂಪಿಯಾದವನು. ಅವನಿಗಾಗಿ ದ್ವಾದಶಕಪಾಲಯಾಗವನ್ನು ಮಾಡುವುದರಿಂದ ತನ್ನ ಭಾಗವನ್ನು ಹೊಂದಿ ವೈಶ್ವಾನರಾಗ್ನಿಯು ಯಜಮಾನನ ವಿಷಯದಲ್ಲಿ ಶಾಂತನಾಗುತ್ತಾನೆ.

ವಾರುಣೇನೈವೈನಂ ವರುಣಪಾಶಾನ್ಮುಂಚತಿ

ದಧಿಕ್ರಾವ್‌ಣ್ಣಾ ಪುನಾತಿ ಹಿರಣ್ಯಂ ದಕ್ಷಿಣಾ ಪವಿತ್ರಂ ವೈ

ಹಿರಣ್ಯಂ ಪುನಾತ್ಯೇವೈನಂ [....ಪುನಾತ್ಯೇವೈನಮ್ (೨)]

ವಿಂದತೇ ಪ್ರಜಾಂ

---

ವಾರುಣೇನ। ಏವ। ಏನಮ್। ವರುಣಪಾಶಾದಿತಿ ವರುಣ – ಪಾಶಾತ್। ಮುಂಚತಿ। ದಧಿಕ್ರಾವ್‌ಣ್ಣೇತಿ ದಧಿ–ಕ್ರಾವ್‌ಣ್ಣಾ। ಪುನಾತಿ। ಹಿರಣ್ಯಮ್। ದಕ್ಷಿಣಾ। ಪವಿತ್ರಮ್। ವೈ। ಹಿರಣ್ಯಮ್। ಪುನಾತಿ। ಏವ। ಏನಮ್। ವಿಂದತೇ। ಪ್ರಜಾಮಿತಿ ಪ್ರ–ಜಾಮ್।

---

| | |
|---|---|
| ವಾರುಣೇನ ಏವ ಏನಮ್ ವರುಣಪಾಶಾತ್ ಮುಂಚತಿ | ವಾರುಣಯಾಗದಿಂದ ತೊಂದರೆಯುಂಟು ಮಾಡುವ ವರುಣಪಾಶದಿಂದ ಬಿಡುಗಡೆ ಯಾಗುತ್ತದೆ. |
| ದಧಿಕ್ರಾವ್‌ಣ್ಣಾ ಪುನಾತಿ | ದಧಿಕ್ರಾವದೇವನ ಅನುಗ್ರಹದಿಂದ ಯಜಮಾನನು ಶುದ್ಧನಾಗುತ್ತಾನೆ. |
| ಹಿರಣ್ಯಂ ದಕ್ಷಿಣಾ | ಈ ಯಾಗಕ್ಕೆ ಚಿನ್ನವು ದಕ್ಷಿಣೆ. |
| ಪವಿತ್ರಮ್ ವೈ ಹಿರಣ್ಯಮ್ ಏನಮ್ ಪುನಾತಿ ಏವ | ಚಿನ್ನವು ಪವಿತ್ರವಾದುದಷ್ಟೆ. ಯಜಮಾನನನ್ನು ಅದು ಪವಿತ್ರಗೊಳಿಸುತ್ತದೆ. |
| ಪ್ರಜಾಮ್ ವಿಂದತೇ | ಯಜಮಾನನು ಪುತ್ರವಂತನಾಗುತ್ತಾನೆ. |

---

ಪ್ರಜಾಪ್ರತಿಬಂಧಕದೋಷಗಳನ್ನು ಪರಿಹರಿಸಿ ಮಕ್ಕಳಾಗುವಂತೆ ಅವನು ಅನುಗ್ರಹಿಸುತ್ತಾನೆ. ವರುಣದೇವನ ಅನುಗ್ರಹದಿಂದ ವರುಣಪಾಶವೂ ಯಜಮಾನನಿಂದ ದೂರಾಗುತ್ತದೆ. ದಧಿಕ್ರಾವದೇವನು ಯಜಮಾನನನ್ನು ಶುದ್ಧನನ್ನಾಗಿ ಮಾಡುತ್ತಾನೆ. ಹೀಗೆ ಪರಿಶುದ್ಧನಾದ ಯಜಮಾನನು ಪವಿತ್ರವಾದ ಹಿರಣ್ಯವನ್ನು ದಕ್ಷಿಣೆಯನ್ನಾಗಿ ನೀಡುವುದರಿಂದ ಮತ್ತಷ್ಟು ಪರಿಶುದ್ಧನಾಗಿ, ಪ್ರಜಾಪ್ರತಿಬಂಧಕಗಳನ್ನು ಪರಿಹರಿಸಿ ಉತ್ತಮ ಪ್ರಜೆಯನ್ನು ಪಡೆಯುತ್ತಾನೆ.

ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇತ್ಪುತ್ರೇ ಜಾತೇ

ಯದಷ್ಟಾಕಪಾಲೋ ಭವತಿ ಗಾಯತ್ರಿಯೈವೈನಂ

ಬ್ರಹ್ಮವರ್ಚಸೇನ ಪುನಾತಿ

---

**ವೈಶ್ವಾನರಮ್** । ದ್ವಾದಶಕಪಾಲಮಿತಿ ದ್ವಾದಶ–ಕಪಾಲಮ್ । ನಿರಿತಿ । ವಪೇತ್ ।

ಪುತ್ರೇ । ಜಾತೇ । ಯತ್ । ಅಷ್ಟಾಕಪಾಲ ಇತ್ಯಷ್ಟಾ–ಕಪಾಲಃ । ಭವತಿ । ಗಾಯತ್ರಿಯಾ ।

ಏವ । ಏನಮ್ । ಬ್ರಹ್ಮವರ್ಚಸೇನೇತಿ ಬ್ರಹ್ಮ–ವರ್ಚಸೇನ । ಪುನಾತಿ ।

---

**ಮಗನು ಜನಿಸಿದ ಮೇಲೆ ಜಾತಕರ್ಮದಂತೆ ಮಾಡಬೇಕಾದ ಇಷ್ಟಿ; ವಿಧಿ; ಅರ್ಥವಾದ**

| | |
|---|---|
| **ಪುತ್ರೇ ಜಾತೇ ವೈಶ್ವಾನರಮ್ ದ್ವಾದಶಕಪಾಲಮ್ ನಿರ್ವಪೇತ್** | ಪುತ್ರನು ಹುಟ್ಟಲಾಗಿ ವೈಶ್ವಾನರದೇವನಿಗಾಗಿ ದ್ವಾದಶಕಪಾಲ ಪುರೋಡಾಶ ಯಾಗವನ್ನು ಮಾಡಬೇಕು. |
| **ಯತ್ ಅಷ್ಟಾಕಪಾಲಃ ಭವತಿ** | ದ್ವಾದಶಕಪಾಲದಲ್ಲಿ ಅಷ್ಟಾಕಪಾಲವೂ ಇರುವುದರಿಂದ |
| **ಏನಮ್ ಗಾಯತ್ರಿಯಾ ಬ್ರಹ್ಮವರ್ಚಸೇನ ಏವ ಪುನಾತಿ** | ಈ ಪುತ್ರನನ್ನು ಗಾಯತ್ರೀಛಂದಸ್ಸಿನಿಂದಲೂ, ಬ್ರಹ್ಮವರ್ಚಸದಿಂದಲೂ ಪವಿತ್ರಗೊಳಿಸುತ್ತಾನೆ. |

---

ನೈಮಿತ್ತಿಕವಾದ ಈ ಇಷ್ಟಿಯು ಮಗನು ಹುಟ್ಟಿದಾಗ ಮಾಡುವ ಇಷ್ಟಿಯಾಗಿದೆ. ಇಲ್ಲಿ ದ್ವಾದಶಕಪಾಲದಲ್ಲಿ ಅಷ್ಟಾಕಪಾಲಾದಿಗಳು ಸೇರಿಕೊಂಡಿರುವುದರಿಂದ ಅವುಗಳೆಲ್ಲದರ ಫಲವೂ ಈ ಯಾಗದಿಂದ ಉಂಟಾಗುತ್ತದೆಯೆಂದು ಸ್ತುತಿಸಲಾಗಿದೆ. ದ್ವಾದಶಕಪಾಲದಲ್ಲಿ ಅಷ್ಟಾಕಪಾಲವೂ ಅಂತರ್ಗತ. ಗಾಯತ್ರೀ ಛಂದಸ್ಸೂ ಅಷ್ಟಾಕ್ಷರ. ಗಾಯತ್ರಿಯು ಬ್ರಹ್ಮವರ್ಚಸಸ್ವರೂಪವಾಗಿದೆ. ಹೀಗೆ ಅಷ್ಟಾಕಪಾಲವು ಬ್ರಹ್ಮವರ್ಚಸ

ಯನ್ನವಕಪಾಲಸ್ತ್ರಿವೃತ್ತೈವಾಸ್ಮಿನ್ತೇಜೋ ದಧಾತಿ

ಯದ್ದಶಕಪಾಲೋ ವಿರಾಜೈವಾಸ್ಮಿನ್ನನ್ನಾದ್ಯಂ ದಧಾತಿ

ಯದೇಕಾದಶಕಪಾಲಸ್ತ್ರಿಷ್ಟುಭೈವಾಸ್ಮಿನ್ನಿಂದ್ರಿಯಂ ದಧಾತಿ

---

ಯತ್। ನವಕಪಾಲ ಇತಿ ನವ–ಕಪಾಲಃ। ತ್ರಿವೃತೇತಿ ತ್ರಿ–ವೃತಾ। ಏವ। ಅಸ್ಮಿನ್ನ್। ತೇಜಃ। ದಧಾತಿ। ಯತ್। ದಶಕಪಾಲ ಇತಿ ದಶ–ಕಪಾಲಃ। ವಿರಾಜೇತಿ ವಿ–ರಾಜಾ। ಏವ। ಅಸ್ಮಿನ್ನ್। ಅನ್ನಾದ್ಯಮಿತ್ಯನ್ನ – ಅದ್ಯಮ್। ದಧಾತಿ। ಯತ್। ಏಕಾದಶಕಪಾಲ ಇತ್ಯೇಕಾದಶ–ಕಪಾಲಃ। ತ್ರಿಷ್ಟುಭಾ। ಏವ। ಅಸ್ಮಿನ್ನ್। ಇಂದ್ರಿಯಮ್। ದಧಾತಿ।

---

| | |
|---|---|
| ಯತ್ ನವಕಪಾಲಃ ಅಸ್ಮಿನ್ ತ್ರಿವೃತಾ ಏವ ತೇಜಃ ದಧಾತಿ | ದ್ವಾದಶಕಪಾಲದಲ್ಲಿ ನವಕಪಾಲವೂ ಇರುವುದರಿಂದ ತ್ರಿವೃತ್ ಸ್ತೋಮದಿಂದ ಈ ಮಗುವಿನಲ್ಲಿ ತೇಜಸ್ಸನ್ನು ನೆಲೆಗೊಳಿಸುತ್ತಾನೆ. |
| ಯತ್ ದಶಕಪಾಲಃ | ದ್ವಾದಶಕಪಾಲದಲ್ಲಿ ದಶಕಪಾಲವೂ ಇರುವುದರಿಂದ |
| ಅಸ್ಮಿನ್ ವಿರಾಜಾ ಏವ ಅನ್ನಾದ್ಯಮ್ ದಧಾತಿ | ಈ ಮಗುವಿನಲ್ಲಿ ವಿರಾಟ್ ಛಂದಸ್ಸಿನಿಂದ ಅನ್ನವನ್ನು ತಿನ್ನುವ ಶಕ್ತಿಯನ್ನುಂಟುಮಾಡುತ್ತಾನೆ. |
| ಯತ್ ಏಕಾದಶಕಪಾಲಃ ಅಸ್ಮಿನ್ ತ್ರಿಷ್ಟುಭಾ ಏವ ಇಂದ್ರಿಯಮ್ ದಧಾತಿ | ದ್ವಾದಶಕಪಾಲವು ಏಕಾದಶಕಪಾಲವನ್ನು ಒಳಗೊಂಡಿರುವುದರಿಂದ ಈ ಮಗುವಿನಲ್ಲಿ ತ್ರಿಷ್ಟುಪ್ ಛಂದಸ್ಸಿನಿಂದ ಇಂದ್ರಿಯ ಸಾಮರ್ಥ್ಯವನ್ನು ಉಂಟು ಮಾಡುತ್ತಾನೆ. |

---

ಸ್ವರೂಪವಾಗಿ ಹುಟ್ಟಿದ ಮಗನನ್ನು ಗಾಯತ್ರಿಯಿಂದ ಪೂತನನ್ನಾಗಿ ಮಾಡುತ್ತದೆ. ನವಕಪಾಲವು ತ್ರಿವೃತ್ಸ್ತೋಮಸ್ವರೂಪವಾಗಿದೆ. ತ್ರಿವೃತ್ತು ತೇಜಃಸ್ವರೂಪವಾಗಿದೆ. ಆದುದರಿಂದ ನವಕಪಾಲವು ಪುತ್ರನನ್ನು ತೇಜಸ್ವಿಯನ್ನಾಗಿ ಮಾಡುತ್ತದೆ. ದಶಕಪಾಲವು ದಶಾಕ್ಷರವಾದ ವಿರಾಟ್ ಸ್ವರೂಪವಾಗಿದೆ. ಅನ್ನವೂ ವಿರಾಟ್ ಸ್ವರೂಪವಾಗಿದೆ. ಇದು ಪುತ್ರನನ್ನು ಅನ್ನಾದನನ್ನಾಗಿ ಮಾಡುತ್ತದೆ. ಏಕಾದಶಕಪಾಲವು ಏಕಾದಶಾಕ್ಷರಗಳುಳ್ಳ ತ್ರಿಷ್ಟುಬ್ರೂಪವಾಗಿದೆ.

ಯದ್ದ್ವಾದಶಕಪಾಲೋ ಜಗತ್ಯೈವಾಸ್ಮಿನ್ಪಶೂನ್ದಧಾತಿ

ಯಸ್ಮಿಞ್ಜಾತ ಏತಾಮಿಷ್ಟಿಂ ನಿರ್ವಪತಿ ಪೂತ [(ಪೂತಃ (೩)]

ಏವ ತೇಜಸ್ವ್ಯನ್ನಾದ ಇಂದ್ರಿಯಾವೀ ಪಶುಮಾನ್ಭವತ್ಯೇವ

---

ಯತ್ । ದ್ವಾದಶಕಪಾಲ ಇತಿ ದ್ವಾದಶ–ಕಪಾಲಃ । ಜಗತ್ಯಾ । ಏವ । ಅಸ್ಮಿನ್ । ಪಶೂನ್ । ದಧಾತಿ । ಯಸ್ಮಿನ್ । ಜಾತೇ । ಏತಾಮ್ । ಇಷ್ಟಿಮ್ । ನಿರ್ವಪತೀತಿ ನಿಃ – ವಪತಿ । ಪೂತಃ । ಏವ । ತೇಜಸ್ವೀ । ಅನ್ನಾದ ಇತ್ಯನ್ನ – ಅದಃ । ಇಂದ್ರಿಯಾವೀ । ಪಶುಮಾನಿತಿ ಪಶು–ಮಾನ್ । ಭವತಿ । **ಅವೇತಿ** ।

---

| | |
|---|---|
| ಯತ್ ದ್ವಾದಶಕಪಾಲಃ ಅಸ್ಮಿನ್ ಜಗತ್ಯಾ ಏವ ಪಶೂನ್ ದಧಾತಿ | ದ್ವಾದಶಕಪಾಲವಾಗಿರುವುದರಿಂದ ಈ ಪುತ್ರನಲ್ಲಿ ಜಗತೀಛಂದಸ್ಸಿನಿಂದ ಪಶುಗಳನ್ನು ಕೊಡುತ್ತಾನೆ. |
| ಯಸ್ಮಿನ್ ಜಾತೇ ಏತಾಮ್ ಇಷ್ಟಿಮ್ ನಿರ್ವಪತಿ ಪೂತಃ | ಯಾವ ಪುತ್ರನು ಜನಿಸಿದಾಗ ತಂದೆಯು ಈ ಯಾಗವನ್ನು ಮಾಡುವನೋ ಆ ಪುತ್ರನು ದೇವತೆಗಳ ಅನುಗ್ರಹದಿಂದ ಪರಿಶುದ್ಧನೂ |
| ತೇಜಸ್ವೀ ಅನ್ನಾದಃ ಇಂದ್ರಿಯಾವೀ | ತೇಜಸ್ವಿಯೂ, ಅನ್ನಾದನೂ, ಇಂದ್ರಿಯ ಸಾಮರ್ಥ್ಯವುಳ್ಳವನೂ, |
| ಪಶುಮಾನ್ ಏವ ಭವತಿ | ಪಶುಸಮೃದ್ಧಿಯುಳ್ಳವನೂ ಆಗುತ್ತಾನೆ. |

---

ತ್ರಿಷ್ಟುಪ್ ಇಂದ್ರಿಯರೂಪವಾಗಿದೆ. ಇದರಿಂದ ಹುಟ್ಟಿದ ಮಗನು ಇಂದ್ರಿಯಶಕ್ತಿಯನ್ನು ಪಡೆಯುತ್ತಾನೆ. ದ್ವಾದಶಕಪಾಲವು ದ್ವಾದಶಾಕ್ಷರವಾದ ಜಗತೀಸ್ವರೂಪವಾಗಿದೆ. ಪಶುಗಳೂ ಜಗತೀಸಂಬಂಧಿಗಳೇ. ಇದು ಪುತ್ರನು ಪಶುಸಂಪನ್ನನಾಗುವಂತೆ ಮಾಡುತ್ತದೆ. ಹೀಗೆ ವೈಶ್ವಾನರಯಾಗದ ಫಲವಾಗಿ ಪುತ್ರನು ಶುದ್ಧನೂ, ತೇಜಸ್ವಿಯೂ, ಅನ್ನಾದನೂ, ಇಂದ್ರಿಯಶಕ್ತಿಸಂಪನ್ನನೂ, ಪಶುಮಂತನೂ ಆಗುತ್ತಾನೆ.

ವಾ ಏಷ ಸುವರ್ಗಾಲ್ಲೋಕಾಚ್ಛಿದ್ಯತೇ ಯೋ ದರ್-

ಶಪೂರ್ಣಮಾಸಯಾಜೀ ಸನ್ನಮಾವಾಸ್ಯಾಂ ವಾ

ಪೌರ್ಣಮಾಸೀಂ ವಾಽತಿಪಾದಯತಿ

---

ವೈ। ಏಷಃ। ಸುವರ್ಗಾದಿತಿ ಸುವಃ – ಗಾತ್। ಲೋಕಾತ್। ಛಿದ್ಯತೇ। ಯಃ।

ದರ್ಶಪೂರ್ಣಮಾಸಯಾಜೀತಿ ದರ್ಶಪೂರ್ಣಮಾಸ–ಯಾಜೀ। ಸನ್। ಅಮಾವಾಸ್ಯಾ

ಮಿತ್ಯಮಾ–ವಾಸ್ಯಾಮ್। ವಾ। ಪೌರ್ಣಮಾಸೀಮಿತಿ ಪೌರ್ಣ–ಮಾಸೀಮ್। ವಾ।

ಅತಿಪಾದಯತೀತ್ಯತಿ – ಪಾದಯತಿ।

---

**ಪ್ರಾಯಶ್ಚಿತ್ತರೂಪವಾದ ವೈಶ್ವಾನರೇಷ್ಟಿ – ಪ್ರಶಂಸೆ**

| | |
|---|---|
| ಯಃ ದರ್ಶಪೂರ್ಣಮಾಸ ಯಾಜೀ ಸನ್ | ಯಾವನು ಆಹಿತಾಗ್ನಿಯಾಗಿ ದರ್ಶ– ಪೂರ್ಣ ಮಾಸಗಳನ್ನು ಮಾಡುವವನಾದರೂ |
| ಅಮಾವಾಸ್ಯಾಮ್ ವಾ ಪೌರ್ಣಮಾಸೀಮ್ ವಾ ಅತಿಪಾದಯತಿ | ಆ ಇಷ್ಟಿಗಳನ್ನು ಮಾಡದೇ ಆ ಕಾಲವನ್ನು ಮೀರಿದರೆ |
| ಏಷಃ ವೈ ಸುವರ್ಗಾತ್ ಲೋಕಾತ್ ಅವ ಛಿದ್ಯತೇ | ದರ್ಶಪೂರ್ಣಮಾಸಫಲವಾದ ಸ್ವರ್ಗಲೋಕ ಪ್ರಾಪ್ತಿಯಿಂದ ವಂಚಿತನಾಗುತ್ತಾನೆ. |

---

ಇದು ಪುತ್ರನ ಶ್ರೇಯಸ್ಸಿಗಾಗಿ ಸಂಕಲ್ಪಿಸಿ ಮಾಡುವ ನೈಮಿತ್ತಿಕಯಾಗ. ಮಗನು ಹುಟ್ಟಿ ಹತ್ತು ದಿನಗಳು ಕಳೆದ ಮೇಲೆ ಬರುವ ಪೌರ್ಣಮಾಸೀ ಅಥವಾ ಅಮಾವಾಸ್ಯಾ ದಿನಗಳಲ್ಲಿ ಅನುಷ್ಠಿಸಬೇಕು.

**'ಯಾವಜ್ಜೀವಂ ದರ್ಶಪೂರ್ಣಮಾಸಾಭ್ಯಾಂ ಯಜೇತ'** ಎಂದು ವಿಧಿಯು ಹೇಳುತ್ತದೆ. ಆಹಿತಾಗ್ನಿಯಾದವನು ಯಾವಾಗಲಾದರೂ ಪ್ರಮಾದದಿಂದ ದರ್ಶ–ಪೂರ್ಣಮಾಸಗಳನ್ನು ಅನುಷ್ಠಿಸದಿದ್ದರೆ ಪ್ರಾಯಶ್ಚಿತ್ತರೂಪವಾಗಿ ವೈಶ್ವಾನರೇಷ್ಟಿಯನ್ನು ಮಾಡಬೇಕು. ಇಲ್ಲವಾದರೆ ದರ್ಶ–ಪೂರ್ಣಮಾಸಗಳ ಫಲವಾದ ಸ್ವರ್ಗವು ಅವನಿಗೆ ದೊರೆಯುವುದಿಲ್ಲ.

ಸುವರ್ಗಾಯ ಹಿ ಲೋಕಾಯ ದರ್ಶಪೂರ್ಣಮಾಸಾ
ವಿಜ್ಯೇತೇ ವೈಶ್ವಾನರಂ ದ್ವಾದಶಕಪಾಲಂ
ನಿರ್ವಪೇದಮಾವಾಸ್ಯಾಂ ವಾ ಪೌರ್ಣಮಾಸೀಂ
ವಾऽತಿಪಾದ್ಯ ಸಂವತ್ಸರೋ ವಾ ಅಗ್ನಿರ್ವೈಶ್ವಾನರಃ

---

ಸುವರ್ಗಾಯೇತಿ ಸುವಃ - ಗಾಯ । ಹಿ । ಲೋಕಾಯ । ದರ್ಶಪೂರ್ಣಮಾಸಾವಿತಿ ದರ್ಶ-ಪೂರ್ಣಮಾಸೌ । ಇಜ್ಯೇತೇ ಇತಿ । ವೈಶ್ವಾನರಮ್ । ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್ । ನಿರಿತಿ । ವಪೇತ್ । ಅಮಾವಾಸ್ಯಾಮಿತ್ಯಮಾ-ವಾಸ್ಯಾಮ್ । ವಾ । ಪೌರ್ಣಮಾಸೀಮಿತಿ ಪೌರ್ಣ-ಮಾಸೀಮ್ । ವಾ । ಅತಿಪಾದ್ಯೇತ್ಯತಿ - ಪಾದ್ಯ । ಸಂವತ್ಸರ ಇತಿ ಸಮ್ - ವತ್ಸರಃ । ವೈ । ಅಗ್ನಿಃ । ವೈಶ್ವಾನರಃ ।

---

| | |
|---|---|
| ಸುವರ್ಗಾಯ ಲೋಕಾಯ ಹಿ ದರ್ಶಪೂರ್ಣಮಾಸೌ ಇಜ್ಯೇತೇ | ಸ್ವರ್ಗಲೋಕಪ್ರಾಪ್ತಿಗಾಗಿ ತಾನೇ ದರ್ಶ ಪೂರ್ಣಮಾಸಯಾಗಗಳು ಮಾಡಲ್ಪಡುತ್ತವೆ ! |
| ಅಮಾವಾಸ್ಯಾಮ್ ವಾ ಪೌರ್ಣಮಾಸೀಮ್ ವಾ ಅತಿಪಾದ್ಯ | ಅಮಾವಾಸ್ಯಾಯಾಗವನ್ನಾಗಲೀ ಪೌರ್ಣ ಮಾಸೀಯಾಗವನ್ನಾಗಲೀ ತಪ್ಪಿ* |
| ವೈಶ್ವಾನರಮ್ ದ್ವಾದಶಕಪಾಲಮ್ ನಿರ್ವಪೇತ್* | ದ್ವಾದಶಕಪಾಲಪುರೋಡಾಶವುಳ್ಳ ವೈಶ್ವಾನರ ಯಾಗವನ್ನು ಮಾಡಬೇಕು. |
| ಅಗ್ನಿಃ ವೈಶ್ವಾನರಃ ಸಂವತ್ಸರಃ ವೈ | ವೈಶ್ವಾನರಾಗ್ನಿಯು ಸಂವತ್ಸರಸ್ವರೂಪನಾಗಿರುತ್ತಾನೆ. |

---

ಅವನು ವೈಶ್ವಾನರಾಗ್ನಿಯನ್ನು ಕುರಿತು ದ್ವಾದಶಕಪಾಲಪುರೋಡಾಶಯಾಗವನ್ನು ಅನುಷ್ಠಿಸಬೇಕು. ವೈಶ್ವಾನರಾಗ್ನಿಯು ಸಂವತ್ಸರಸ್ವರೂಪನು. ಈ ಯಾಗದಿಂದ ಆತನು ತನ್ನ

* ಇಂತಹ ಸಮಯದಲ್ಲಿ ಹಿಂದೆ ನಿಹಿತವಾದ ಪಾಥಿಕೃತೀಷ್ಟಿಯನ್ನೂ ಈ ವೈಶ್ವಾನರೇಷ್ಟಿಯನ್ನೂ ಅನುಷ್ಠಿಸಬೇಕೆಂದು ಒಂದು ಮತ. ಒಂದನ್ನು ಮಾಡಿದರೆ ಸಾಕೆಂದು ಒಂದು ಮತ. ಇದನ್ನು ಶ್ರೌತಸೂತ್ರಕಾರರೂ ಹೇಳಿರುತ್ತಾರೆ.

ಸಂವತ್ಸರಮೇವ ಪ್ರೀಣಾತ್ಯಥೋ ಸಂವತ್ಸರಮೇವಾಸ್ಮಾ

ಉಪದಧಾತಿ ಸುವರ್ಗಸ್ಯ ಲೋಕಸ್ಯ ಸಮಷ್ಟ್ಯೈ

[.... ಸಮಷ್ಟ್ಯೈ(೪)] ಅಥೋ ದೇವತಾ ಏವಾನ್ವಾರಭ್ಯ

---

ಸಂವತ್ಸರಮಿತಿ ಸಮ್–ವತ್ಸರಮ್ । ಏವ । ಪ್ರೀಣಾತಿ । ಅಥೋ ಇತಿ । ಸಂವತ್ಸರಮಿತಿ ಸಮ್–ವತ್ಸರಮ್ । ಏವ । ಅಸ್ಮೈ । ಉಪೇತಿ । ದಧಾತಿ । ಸುವರ್ಗಸ್ಯೇತಿ ಸುವಃ–ಗಸ್ಯ । ಲೋಕಸ್ಯ । ಸಮಷ್ಟ್ಯೈ ಇತಿ ಸಮ್–ಅಷ್ಟ್ಯೈ । ಅಥೋ ಇತಿ । ದೇವತಾಃ । ಏವ । ಅನ್ವಾರಭ್ಯೇತ್ಯನು–ಆರಭ್ಯ ।

---

| | |
|---|---|
| ಸಂವತ್ಸರಮ್ ಏವ ಪ್ರೀಣಾತಿ | ಯಜಮಾನನು ಸಂವತ್ಸರದೇವತೆಯನ್ನು ಸಂತೋಷಪಡಿಸುತ್ತಾನೆ. |
| ಅಥೋ ಸಂವತ್ಸರಮ್ ಏವ ಅಸ್ಮೈ ಉಪದಧಾತಿ | ವೈಶ್ವಾನರಾಗ್ನಿಯು ಸಂವತ್ಸರಕಾಲದಲ್ಲಿ ಮಾಡಬೇಕಾದ ಯಾಗಗಳನ್ನು ಸಮೀಪ ದಲ್ಲಿರುವಂತೆ ಮಾಡುತ್ತಾನೆ. |
| ಸುವರ್ಗಸ್ಯ ಲೋಕಸ್ಯ ಸಮಷ್ಟ್ಯೈ | ಹೀಗೆ ವೈಶ್ವಾನರಯಾಗವು ಸ್ವರ್ಗಪ್ರಾಪ್ತಿಗೆ ಕಾರಣವಾಗುತ್ತದೆ. |
| ಅಥೋ ದೇವತಾಃ ಅನ್ವಾರಭ್ಯ ಏವ | ಮತ್ತು ಯಜಮಾನನು ತೃಪ್ತರಾದ ದೇವತೆ ಗಳನ್ನು ಅನುಸರಿಸಿ |

---

ಭಾಗವನ್ನು ಪಡೆದು ತೃಪ್ತನಾಗುತ್ತಾನೆ. ಸಂವತ್ಸರಕಾಲವೂ ಮಾಡಿದ ಯಾಗಗಳ ಫಲವನ್ನು ಕೊಡುತ್ತಾನೆ. ಆ ದೇವತೆಗಳ ಅನುಗ್ರಹವನ್ನೂ ದೊರಕಿಸಿಕೊಡುತ್ತಾನೆ. ಇದರಿಂದ ಯಾಗವನ್ನು ಅನುಷ್ಠಿಸಲು ತಪ್ಪಿದ ದೋಷವು ಪರಿಹಾರವಾಗುತ್ತದೆ. ಸ್ವರ್ಗಪ್ರಾಪ್ತಿಯೂ ಆಗುತ್ತದೆ.

ಸುವರ್ಗಂ ಲೋಕಮೇತಿ ವೀರಹಾ ವಾ ಏಷ ದೇವಾನಾಂ

ಯೋಽಗ್ನಿಮುದ್ವಾಸಯತೇ ನ ವಾ ಏತಸ್ಯ ಬ್ರಾಹ್ಮಣಾ

ಋತಾಯವಃ ಪುರಾಽನ್ನಮಕ್ಷನ್ನಾ-

---

ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಏತಿ । **ವೀರಹೇತಿ ವೀರ – ಹಾ** । ವೈ । ಏಷಃ । ದೇವಾನಾಮ್ । ಯಃ । ಅಗ್ನಿಮ್ । ಉದ್ವಾಸಯತ ಇತ್ಯುತ್ – ವಾಸಯತೇ । ನ ವೈ । ಏತಸ್ಯ । ಬ್ರಾಹ್ಮಣಾಃ । ಋತಾಯವ ಇತ್ಯೃತ-ಯವಃ । ಪುರಾ । ಅನ್ನಮ್ । ಅಕ್ಷನ್ । 

---

| | |
|---|---|
| ಸುವರ್ಗಮ್ ಲೋಕಮ್ ಏತಿ | [ಅವರ ಅನುಗ್ರಹದಿಂದ] ಸ್ವರ್ಗಕ್ಕೆ ಹೋಗುತ್ತಾನೆ |

**ಅಗ್ನಿಯನ್ನು ಉದ್ವಾಸನೆ ಮಾಡುವವನು ಮಾಡಬೇಕಾದ ಎರಡು ಇಷ್ಟಿಗಳು; ಅರ್ಥವಾದ**

| | |
|---|---|
| ಯಃ ಅಗ್ನಿಮ್ ಉದ್ವಾಸಯತೇ | ಪುನರಾಧಾನಕ್ಕಾಗಿ ಯಾವನು ಅಗ್ನ್ಯುದ್ವಾಸನೆಯನ್ನು ಮಾಡುತ್ತಾನೆಯೋ |
| ಏಷಃ ವೈ ದೇವಾನಾಮ್ ವೀರಹಾ | ಈತನು ದೇವತೆಗಳಲ್ಲಿ ಶೂರನಾದ ಅಗ್ನಿಯನ್ನು ಹತ್ಯೆ ಮಾಡಿದವನಾಗುತ್ತಾನೆ. |
| ಋತಾಯವಃ ಬ್ರಾಹ್ಮಣಾಃ ಪುರಾ ಏತಸ್ಯ ಅನ್ನಮ್ ನ ವೈ ಅಕ್ಷನ್ | ಯಜ್ಞಶೀಲರಾದ/ಸತ್ಯವಂತರಾದ ಬ್ರಾಹ್ಮಣರು ಮೊದಲು ದೋಷಿಯಾದ ಈತನ ಅನ್ನವನ್ನು ತಿನ್ನುವುದಿಲ್ಲ. |

---

ಅಗ್ನ್ಯಾಧಾನವನ್ನು ಮಾಡಿ ಯಜ್ಞಾದಿಗಳನ್ನು ಮಾಡಿದರೂ ಸಹ ಸಮೃದ್ಧಿಯನ್ನು ಹೊಂದದವನು ಅಗ್ನಿಯನ್ನು ಉದ್ವಾಸನೆ ಮಾಡಿ ಪುನಃ ಆಧಾನವನ್ನು ಅನುಷ್ಠಿಸಬೇಕೆಂದು ವಿಹಿತವಾಗಿದೆ. ಅಥವಾ ರೋಗಾದಿಗಳಿಂದಲೂ ಅಗ್ನಿಯನ್ನು ಉದ್ವಾಸನೆ ಮಾಡುವ ಪ್ರಸಂಗವು ಒದಗಬಹುದು. ಅಂದರೆ ಅಗ್ನ್ಯುದ್ವಾಸನೆಯೆಂದರೆ ದೇವತೆಗಳಲ್ಲಿ ವೀರನಾದ ಅಗ್ನಿಯನ್ನು ಕೊಂದಂತೆಯೇ ಸರಿ. ಈ ಪಾಪನಿಮಿತ್ತವಾಗಿ ಯಜ್ಞಶೀಲರಾದ ಬ್ರಾಹ್ಮಣರು ಅಗ್ನ್ಯುದ್ವಾಸನೆಯನ್ನು ಮಾಡಿದವನ ಮನೆಯಲ್ಲಿ ಊಟ ಮಾಡುವುದಿಲ್ಲ.

ಗ್ನೇಯಮಷ್ಟಾಕಪಾಲಂ ನಿರ್ವಪೇದ್ವೈಶ್ವಾನರಂ ದ್ವಾದಶ

ಕಪಾಲಮಗ್ನಿಮುದ್ವಾಸಯಿಷ್ಯನ್, ಯದಷ್ಟಾಕಪಾಲೋ

ಭವತ್ಯಷ್ಟಾಕ್ಷರಾ ಗಾಯತ್ರೀ ಗಾಯತ್ರೋಽಗ್ನಿ

---

ಆಗ್ನೇಯಮ್। ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್। ನಿರಿತಿ। ವಪೇತ್। ವೈಶ್ವಾನರಮ್। ದ್ವಾದಶಕಪಾಲಮಿತಿ ದ್ವಾದಶ–ಕಪಾಲಮ್। ಅಗ್ನಿಮ್। ಉದ್ವಾಸಯಿಷ್ಯನ್ನಿತ್ಯುತ್ – ವಾಸಯಿಷ್ಯನ್ನ್। ಯತ್। ಅಷ್ಟಾಕಪಾಲ ಇತ್ಯಷ್ಟಾ–ಕಪಾಲಃ। ಭವತಿ। ಅಷ್ಟಾಕ್ಷರೇತ್ಯಷ್ಟಾ– ಅಕ್ಷರಾ। ಗಾಯತ್ರೀ। ಗಾಯತ್ರಃ। ಅಗ್ನಿಃ।

---

| | |
|---|---|
| ಅಗ್ನಿಮ್ ಉದ್ವಾಸಯಿಷ್ಯನ್ | ಅಗ್ನಿಯನ್ನು ಉದ್ವಾಸನೆ ಮಾಡುವವನು |
| ಆಗ್ನೇಯಮ್ ಅಷ್ಟಾಕಪಾಲಮ್ ವೈಶ್ವಾನರಮ್ ದ್ವಾದಶಕಪಾಲಮ್ ನಿರ್ವಪೇತ್ | ಅಗ್ನಿದೇವನಿಗಾಗಿ ಅಷ್ಟಾಕಪಾಲಪುರೋಡಾಶ ಯಾಗವನ್ನೂ ವೈಶ್ವಾನರನಿಗಾಗಿ ದ್ವಾದಶ ಕಪಾಲಪುರೋಡಾಶಯಾಗವನ್ನೂ ಮಾಡ ಬೇಕು |
| ಯತ್ ಅಷ್ಟಾಕಪಾಲಃ ಭವತಿ | ಅಷ್ಟಾಕಪಾಲಪುರೋಡಾಶಯಾಗವೆಂಬುದು ಯಾವುದುಂಟೋ (ಅದರ ಫಲವು ಹೀಗಿದೆ) |
| ಅಷ್ಟಾಕ್ಷರಾ ಗಾಯತ್ರೀ | ಗಾಯತ್ರಿಯು ಅಷ್ಟಾಕ್ಷರಗಳುಳ್ಳದ್ದು. |
| ಗಾಯತ್ರಃ ಅಗ್ನಿಃ | ಗಾಯತ್ರಿಗೆ ಸಂಬಂಧಿಸಿದವನು ಅಗ್ನಿ. |

---

ಈ ದೋಷನಿವೃತ್ತಿಗಾಗಿ ಅಷ್ಟಾಕಪಾಲಪುರೋಡಾಶವುಳ್ಳ ಆಗ್ನೇಯಯಾಗವನ್ನೂ ದ್ವಾದಶಕಪಾಲಪುರೋಡಾಶವುಳ್ಳ ವೈಶ್ವಾನರಯಾಗವನ್ನೂ ಮಾಡಬೇಕು. ಆಗ್ನೇಯ ಯಾಗವು ಅಷ್ಟಾಕಪಾಲವುಳ್ಳದ್ದಾಗಿದೆ. ಗಾಯತ್ರಿಯು ಅಷ್ಟಾಕ್ಷರಗಳನ್ನು ಹೊಂದಿದೆ. ಅಗ್ನಿಯು ಗಾಯತ್ರೀಸ್ವರೂಪನು.

ಯಾವಾನೇವಾಗ್ನಿಸ್ತಸ್ಮಾ ಆತಿಥ್ಯಂ ಕರೋತ್ಯಥೋ ಯಥಾ
ಜನಂ ಯತೇಽವಸಂ ಕರೋತಿ ತಾದೃಗೇವ [ತಾದೃಕ್
(೫) ಏವ] ತದ್ದ್ವಾದಶಕಪಾಲೋ ವೈಶ್ವಾನರೋ ಭವತಿ
ದ್ವಾದಶ ಮಾಸಾಸ್ಸಂವತ್ಸರ

---

ಯಾವಾನ್ । ಏವ । ಅಗ್ನಿಃ । ತಸ್ಮೈ । ಆತಿಥ್ಯಮ್ । ಕರೋತಿ । ಅಥೋ ಇತಿ । ಯಥಾ ।
ಜನಮ್ । ಯತೇ । ಅವಸಮ್ । ಕರೋತಿ । ತಾದೃಕ್ । ಏವ । ತತ್ । ದ್ವಾದಶಕಪಾಲ
ಇತಿ ದ್ವಾದಶ–ಕಪಾಲಃ । ವೈಶ್ವಾನರಃ । ಭವತಿ । ದ್ವಾದಶ । ಮಾಸಾಃ । ಸಂವತ್ಸರ ಇತಿ
ಸಮ್–ವತ್ಸರಃ ।

---

| | |
|---|---|
| ಯಾವಾನ್ ಏವ ಅಗ್ನಿಃ ತಸ್ಮೈ ಆತಿಥ್ಯಮ್ ಕರೋತಿ | [ಯಜಮಾನನು] ಈ ಯಾಗದಿಂದ ಅಗ್ನಿಗಳೆಲ್ಲರಿಗೂ ಆತಿಥ್ಯವನ್ನು ಮಾಡಿದಂತಾಗುತ್ತದೆ. |
| ಅಥೋ ಯಥಾ ಜನಮ್ ಯತೇ ಅವಸಮ್ ಕರೋತಿ ತಾದೃಕ್ ಏವ ತತ್ | ಮತ್ತು ಬಂಧುಗಳನ್ನು ನೋಡಲು ಹೋಗುವವನಿಗೆ ಬುತ್ತಿಯನ್ನು ಹೇಗೆ ಕೊಟ್ಟು ಕಳಿಸುವರೋ ಹಾಗೆಯೇ ಮಾಡಿದಂತಾಗುತ್ತದೆ. |
| ವೈಶ್ವಾನರಃ ದ್ವಾದಶಕಪಾಲಃ ಭವತಿ | ವೈಶ್ವಾನರಯಾಗದಲ್ಲಿ ದ್ವಾದಶಕಪಾಲ ಪುರೋಡಾಶ ಹವಿಸ್ಸಿದೆ. [ಅದರ ಫಲವು ಹೀಗಿದೆ] |
| ದ್ವಾದಶ ಮಾಸಾಃ ಸಂವತ್ಸರಃ | ಹನ್ನೆರಡು ಮಾಸಗಳು ಒಂದು ಸಂವತ್ಸರ. |

---

ಆದುದರಿಂದ ಈ ಯಾಗದಿಂದ ಅಗ್ನಿದೇವರೆಲ್ಲರಿಗೂ ಆತಿಥ್ಯವನ್ನು ಮಾಡಿದಂತೆ ಆಗುತ್ತದೆ. ಮತ್ತು ಗ್ರಾಮಾಂತರಕ್ಕೆ ಹೋಗುವವನಿಗೆ ಬುತ್ತಿಯನ್ನು ಕೊಟ್ಟು ಕಳಿಸಿದಂತಾಗುತ್ತದೆ. ವೈಶ್ವಾನರಯಾಗವು ದ್ವಾದಶಮಾಸಾತ್ಮಕ ಸಂವತ್ಸರಸ್ವರೂಪವಾಗಿದೆ. ಹನ್ನೆರಡು ಮಾಸಗಳು ಒಂದು ಸಂವತ್ಸರ.

# ಸ್ಸಂವತ್ಸರಃ ಖಲು ವಾ ಅಗ್ನೇರ್ಯೋನಿಃ ಸ್ವಾಮೇವೈನಂ ಯೋನಿಂ ಗಮಯತ್ಯಾದ್ಯಮಸ್ಯಾನ್ನಂ ಭವತಿ ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇನ್ಮಾರುತಗ್‌ಂ ಸಪ್ತಕಪಾಲಂ ಗ್ರಾಮಕಾಮ

---

ಸಂವತ್ಸರ ಇತಿ ಸಮ್-ವತ್ಸರಃ । ಖಲು । ವೈ । ಅಗ್ನೇಃ । ಯೋನಿಃ । ಸ್ವಾಮ್ । ಏವ । ಏನಮ್ । ಯೋನಿಮ್ । ಗಮಯತಿ । ಆದ್ಯಮ್ । ಅಸ್ಯ । ಅನ್ನಮ್ । ಭವತಿ । **ವೈಶ್ವಾನರಮ್** । ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್ । ನಿರಿತಿ । ವಪೇತ್ । ಮಾರುತಮ್ । ಸಪ್ತಕಪಾಲಮಿತಿ ಸಪ್ತ-ಕಪಾಲಮ್ । ಗ್ರಾಮಕಾಮ ಇತಿ ಗ್ರಾಮ-ಕಾಮಃ ।

---

| | |
|---|---|
| ಸಂವತ್ಸರಃ ಅಗ್ನೇಃ ಯೋನಿಃ ವೈ | ಸಂವತ್ಸರವು ಅಗ್ನಿಯ ಉತ್ಪತ್ತಿಸ್ಥಾನವಾಗಿದೆ. |
| ಏನಮ್ ಸ್ವಾಮ್ ಯೋನಿಮ್ ಏವ ಗಮಯತಿ | [ಈ ವೈಶ್ವಾನರಯಾಗದಿಂದ] ಅಗ್ನಿಯನ್ನು ತನ್ನ ಸ್ಥಾನಕ್ಕೆ ಕಳುಹಿಸಿದಂತೆ ಆಗುತ್ತದೆ. |
| ಅಸ್ಯ ಅನ್ನಮ್ ಆದ್ಯಮ್ ಭವತಿ | ಈತನ ಅನ್ನವು ತಿನ್ನಲು ಯೋಗ್ಯವಾಗುತ್ತದೆ. |

**ಗ್ರಾಮಕಾಮನಿಗೆ ವಿಹಿತವಾದ ವೈಶ್ವಾನರ-ಮಾರುತಯಾಗವಿಧಿ; ಪ್ರಶಂಸೆ**

| | |
|---|---|
| ಗ್ರಾಮಕಾಮಃ* | ಗ್ರಾಮಸ್ವಾಮಿಯಾಗಬಯಸುವವನು |
| ವೈಶ್ವಾನರಂ ದ್ವಾದಶಕಪಾಲಮ್ ನಿರ್ವಪೇತ್ | ದ್ವಾದಶಕಪಾಲಪುರೋಡಾಶದ್ರವ್ಯವುಳ್ಳ ವೈಶ್ವಾನರಯಾಗವನ್ನು ಅನುಷ್ಠಿಸಬೇಕು. |
| ಮಾರುತಮ್ ಸಪ್ತಕಪಾಲಮ್ [ನಿರ್ವಪೇತ್] | ಸಪ್ತಕಪಾಲಪುರೋಡಾಶ ಹವಿಸ್ಸುಳ್ಳ ಮಾರುತಯಾಗವನ್ನು ಅನುಷ್ಠಿಸಬೇಕು. |

---

ಸಂವತ್ಸರವು ಅಗ್ನಿಯ ಉತ್ಪತ್ತಿ ಸ್ಥಾನ. ಈ ಯಾಗದಿಂದ ಅಗ್ನಿಯನ್ನು ತನ್ನ ಸ್ಥಾನಕ್ಕೆ ಕಳಿಸಿ

---

* ಇಲ್ಲಿ 'ಗ್ರಾಮಕಾಮಃ' ಎಂದು ಸಾಮಾನ್ಯವಾಗಿ ಹೇಳಿದರೂ ರಾಜ-ಪ್ರಜೆಗಳಿಗೆ ಸಂಬಂಧಿಸಿದಂತೆ ವಿವರಣೆಯು ತೋರುವುದರಿಂದ ಈ ಯಾಗಕ್ಕೆ ಕ್ಷತ್ರಿಯನು ಅಧಿಕಾರಿಯೆಂದು ಕೆಲವರ ಮತ. ದ್ರೋಣಾಚಾರ್ಯರಂತೆ ಕ್ಷತ್ರಿಯ ವೃತ್ತಿಯಲ್ಲಿರುವ ಬ್ರಾಹ್ಮಣರೂ ಅಧಿಕಾರಿಗಳೆಂದು ಕೆಲವರ ಮತ. ಗ್ರಾಮಕಾಮರಾದ ಎಲ್ಲರೂ ಅಧಿಕಾರಿಗಳೆಂದೂ ಹೇಳಬಹುದು.

# ಆಹವನೀಯೇ ವೈಶ್ವಾನರಮಧಿಶ್ರಯತಿ ಗಾರ್ಹಪತ್ಯೇ ಮಾರುತಂ ಪಾಪವಸ್ಯಸಸ್ಯ ವಿಧೃತ್ಯೈ

---

ಆಹವನೀಯ ಇತ್ಯಾ–ಹವನೀಯೇ। ವೈಶ್ವಾನರಮ್। ಅಧೀತಿ। ಶ್ರಯತಿ। ಗಾರ್ಹಪತ್ಯ ಇತಿ ಗಾರ್ಹ–ಪತ್ಯೇ। ಮಾರುತಮ್। ಪಾಸವಸ್ಯಸಸ್ಯೇತಿ ಪಾಪ–ವಸ್ಯಸಸ್ಯ। ವಿಧೃತ್ಯಾ ಇತಿ ವಿ–ಧೃತ್ಯೈ।

---

**ಪ್ರಯೋಗವಿಶೇಷವಿಧಿ; ಪ್ರಶಂಸೆ**

| | |
|---|---|
| **ಆಹವನೀಯೇ ವೈಶ್ವಾನರಮ್ ಅಧಿಶ್ರಯತಿ** | ದ್ವಾದಶಕಪಾಲಪುರೋಡಾಶವನ್ನು ಆಹವನೀಯಾಗ್ನಿಯಲ್ಲಿ ಬೇಯಿಸಬೇಕು. |
| **ಗಾರ್ಹಪತ್ಯೇ ಮಾರುತಮ್ [ಅಧಿಶ್ರಯತಿ]** | ಗಾರ್ಹಪತ್ಯಾಗ್ನಿಯಲ್ಲಿ ಮಾರುತ ಸಪ್ತಕಪಾಲ ಹವಿಸ್ಸನ್ನು ಬೇಯಿಸಬೇಕು. |
| **ಪಾಪವಸ್ಯಸಸ್ಯ ವಿಧೃತ್ಯೈ** | ಗ್ರಾಮಪ್ರಾಪ್ತಿಪ್ರತಿಬಂಧಕಪಾಪವನ್ನು ಇದರಿಂದ ಪ್ರತ್ಯೇಕಿಸಿ ದೂರ ಮಾಡಿದಂತೆ ಆಗುತ್ತದೆ. |

---

ದಂತಾಗುತ್ತದೆ. ಅಗ್ನಿಹತ್ಯಾದೋಷಪ್ರಸಂಗವೇ ಇರುವುದಿಲ್ಲ. ಈ ಯಜಮಾನನ ಅನ್ನವು ಶುದ್ಧವಾಗಿ ಶಿಷ್ಟರೂ ತಿನ್ನಲು ಯೋಗ್ಯವಾಗುತ್ತದೆ.

ಗ್ರಾಮಕ್ಕೆ ಒಡೆಯನಾಗಲು ಇಚ್ಛಿಸುವವನು ಅಥವಾ ಪ್ರಜೆಗಳನ್ನು ತನ್ನ ಅಧೀನದಲ್ಲಿಟ್ಟು ಕೊಳ್ಳಲು ಬಯಸುವವನು ವೈಶ್ವಾನರದೇವತೆಗಾಗಿ ದ್ವಾದಶಕಪಾಲ ಪುರೋಡಾಶಯಾಗವನ್ನೂ, ಮರುದ್ದೇವತೆಗಳಿಗಾಗಿ ಸಪ್ತಕಪಾಲ ಪುರೋಡಾಶ ಯಾಗವನ್ನೂ ಅನುಷ್ಠಿಸಬೇಕು.

ಇಲ್ಲಿಯ ಪ್ರಯೋಗದಲ್ಲಿ ವಿಶೇಷಾಂಶವಿದೆ; ಆಹವನೀಯಾಗ್ನಿಯಲ್ಲಿ ವೈಶ್ವಾನರ ಪುರೋಡಾಶವನ್ನೂ ಗಾರ್ಹಪತ್ಯಾಗ್ನಿಯಲ್ಲಿ ಮಾರುತ ಸಪ್ತಕಪಾಲಹವಿಸ್ಸನ್ನು ಪಚನ ಮಾಡಬೇಕು. ಇದರಿಂದ ಗ್ರಾಮಪ್ರಾಪ್ತಿಗೆ ಪ್ರತಿಬಂಧಕವಾಗಿರುವ ಪಾಪವನ್ನು ದೂರ ಮಾಡಿದಂತಾಗುತ್ತದೆ. ಶ್ರೇಷ್ಠನಿಗೂ ಸಾಮಾನ್ಯನಿಗೂ ಉಚಿತವಾದ ಭೇದವನ್ನೇ ಮಾಡಿದಂತೆ ಆಗುತ್ತದೆ.

ದ್ವಾದಶಕಪಾಲೋ ವೈಶ್ವಾನರೋ ಭವತಿ ದ್ವಾದಶ ಮಾಸಾಃ

ಸಂವತ್ಸರಸ್ಸಂವತ್ಸರೇಣೈವಾಸ್ಮೈ ಸಜಾತಾಗ್ಂಶ್ಚ್ಯಾವಯತಿ

ಮಾರುತೋ ಭವತಿ ಮರುತೋ ವೈ ದೇವಾನಾಂ ವಿಶೋ

---

ದ್ವಾದಶಕಪಾಲ ಇತಿ ದ್ವಾದಶ-ಕಪಾಲಃ । ವೈಶ್ವಾನರಃ । ಭವತಿ । ದ್ವಾದಶ । ಮಾಸಾಃ । ಸಂವತ್ಸರ ಇತಿ ಸಮ್-ವತ್ಸರಃ । ಸಂವತ್ಸರೇಣೇತಿ ಸಮ್-ವತ್ಸರೇಣ । ಏವ । ಅಸ್ಮೈ । ಸಜಾತಾನಿತಿ ಸ-ಜಾತಾನ್ । ಚ್ಯಾವಯತಿ । ಮಾರುತಃ । ಭವತಿ । ಮರುತಃ । ವೈ । ದೇವಾನಾಮ್ । ವಿಶಃ ।

---

### ವೈಶ್ವಾನರ ದ್ವಾದಶಕಪಾಲಯಾಗದ ಪ್ರಶಂಸೆ

| | |
|---|---|
| ದ್ವಾದಶಕಪಾಲಃ ವೈಶ್ವಾನರಃ ಭವತಿ | ವೈಶ್ವಾನರಯಾಗವು ದ್ವಾದಶಕಪಾಲ ಪುರೋಡಾಶ ದ್ರವ್ಯವುಳ್ಳದ್ದಾಗಿದೆ. |
| ದ್ವಾದಶ ಮಾಸಾಃ ಸಂವತ್ಸರಃ | ಹನ್ನೆರಡು ತಿಂಗಳುಗಳು ಒಂದು ವರ್ಷ. |
| ಸಂವತ್ಸರೇಣ ಏವ ಅಸ್ಮೈ ಸಜಾತಾನ್ ಚ್ಯಾವಯತಿ | ಈ ಯಾಗವು ಒಂದು ವರ್ಷದಲ್ಲಿಯೇ ಜ್ಞಾತಿಗಳು ಮೊದಲಾದವರನ್ನು ವಶರಾಗುವಂತೆ ಮಾಡುತ್ತದೆ. |
| ಮಾರುತಃ ಭವತಿ | ಈ ಯಾಗವು ಮರುದ್ದೇವತೆಗಳಿಗಾಗಿ ಮಾಡಲ್ಪಡುತ್ತದೆ. |
| ದೇವಾನಾಮ್ ಮರುತಃ ವೈ ವಿಶಃ | ಮರುತ್ತುಗಳು ದೇವತೆಗಳಲ್ಲಿ ಪ್ರಜೆಗಳಾಗಿದ್ದಾರೆ. |

---

ಈ ವೈಶ್ವಾನರಯಾಗಕ್ಕೆ ದ್ವಾದಶಕಪಾಲಪುರೋಡಾಶವು ಒಂದು ಹವಿಸ್ಸು. ಒಂದು ಸಂವತ್ಸರಕ್ಕೆ ಹನ್ನೆರಡು ತಿಂಗಳು. ಸಂವತ್ಸರಸ್ವರೂಪವಾದ ಈ ಯಾಗದ ಪ್ರಭಾವದಿಂದ ಪ್ರಜೆಗಳು ಒಂದು ವರ್ಷದಲ್ಲಿಯೇ ಈ ಯಜಮಾನನ ಅಧೀನರಾಗುತ್ತಾರೆ.

देवविशैव

ದೇವವಿಶೈವಾಸ್ಮೈ ಮನುಷ್ಯವಿಶಮವರುಂಧೇ

ಸಪ್ತಕಪಾಲೋ ಭವತಿ ಸಪ್ತಗಣಾ ವೈ ಮರುತೋ ಗಣಶ

ಏವಾಸ್ಮೈ

---

ದೇವವಿಶೇನೇತಿ ದೇವ–ವಿಶೇನ । ಏವ । ಅಸ್ಮೈ । ಮನುಷ್ಯವಿಶಮಿತಿ ಮನುಷ್ಯ–ವಿಶಮ್ । ಅವೇತಿ । ರುಂಧೇ । ಸಪ್ತಕಪಾಲ ಇತಿ ಸಪ್ತ–ಕಪಾಲಃ । ಭವತಿ । ಸಪ್ತಗಣಾ ಇತಿ ಸಪ್ತ–ಗಣಾಃ । ವೈ । ಮರುತಃ । ಗಣಶ ಇತಿ ಗಣ–ಶಃ । ಏವ । ಅಸ್ಮೈ ।

---

| | |
|---|---|
| ದೇವವಿಶೇನ ಏವ ಅಸ್ಮೈ ಮನುಷ್ಯವಿಶಮ್ ಅವರುಂಧೇ | [ಈ ಯಾಗವು] ದೇವಪ್ರಜೆಗಳಾದ ಮರುದ್ದೇವತೆಗಳ ಅನುಗ್ರಹದಿಂದ ಮನುಷ್ಯ ಪ್ರಜೆಗಳು ವಶರಾಗುವಂತೆ ಮಾಡುತ್ತದೆ. |
| ಸಪ್ತಕಪಾಲಃ ಭವತಿ | ಈ ಯಾಗಕ್ಕೆ ಸಪ್ತಕಪಾಲಪುರೋಡಾಶವು ಹವಿಸ್ಸಾಗಿದೆ. |
| ಸಪ್ತಗಣಾಃ ವೈ ಮರುತಃ | ಮರುತ್ತುಗಳು ಏಳು ಗುಂಪುಗಳಾಗಿರುತ್ತಾರೆ. |
| ಗಣಶಃ ಏವ ಅಸ್ಮೈ | [ಈ ಯಾಗವು ತನ್ನ ಪ್ರಭಾವದಿಂದ] ಪ್ರಜೆಗಳನ್ನು ಗುಂಪುಗುಂಪುಗಳಾಗಿಯೇ ಈ ಯಜಮಾನನಿಗೆ |

---

ಈ ಮಾರುತಯಾಗವು ಮರುದ್ದೇವತೆಗಳಿಗಾಗಿ ಮಾಡಲ್ಪಡುತ್ತದೆ. ಇದಕ್ಕೆ ಸಪ್ತಕಪಾಲ ಪುರೋಡಾಶವು ಹವಿಸ್ಸಾಗಿದೆ. ಮರುದ್ಗಣಗಳೂ ದೇವಲೋಕದ ಪ್ರಜೆಗಳು. ಅವರ ಅನುಗ್ರಹದಿಂದ ಮನುಷ್ಯಪ್ರಜೆಗಳೂ ಗುಂಪುಗುಂಪಾಗಿ ಯಜಮಾನನ ಅಧೀನರಾಗುತ್ತಾರೆ.

ಸಜಾತಾನವರುಂಧೇऽನೂಚ್ಯಮಾನ ಆಸಾದಯತಿ

ವಿಶಮೇವಾಸ್ಮಾ ಅನುವರ್ತ್ಮಾನಂ ಕರೋತಿ ||೨೯–5||

[ಪ್ರಜಾಕಾಮಸ್ಸಂವತ್ಸರಃ ಪುನಾತ್ಯೇವೈನಂ ಪೂತಸ್ಸಮುಷ್ಯ್ಕೈ ಕಾದ್ಯಜ್ಞಾರುತೋ

ಭವತ್ಯೇಕಾನ್ನತ್ರಿಗ್ಂಶಚ್ಚ ।]

---

ಸಜಾತಾನಿತಿ ಸ–ಜಾತಾನ್ । ಅವೇತಿ । ರುಂಧೇ । ಅನೂಚ್ಯಮಾನ ಇತ್ಯನು–ಉಚ್ಯಮಾನೇ । ಏತಿ । ಸಾದಯತಿ । ವಿಶಮ್ । ಏವ । ಅಸ್ಮೈ । ಅನುವರ್ತ್ಮಾನಮಿತ್ಯನು–ವರ್ತ್ಮಾನಮ್ । ಕರೋತಿ ॥ 5 ॥

---

| | |
|---|---|
| ಸಜಾತಾನ್ ಅವರುಂಧೇ | ಅಧೀನರಾಗುವಂತೆ ಮಾಡುತ್ತದೆ. |
| ಅನೂಚ್ಯಮಾನೇ ಆಸಾದಯತಿ | ಸಾಮಿಧೇನೀಮಂತ್ರಗಳು ಅನುಸರಿಸಿ ಹೇಳಲ್ಪಡುತ್ತಿರುವಾಗ ಮಾರುತಹವಿಸ್ಸನ್ನು ಆಸಾದನ ಮಾಡಬೇಕು. |
| ಅಸ್ಮೈ ವಿಶಮ್ ಅನುವರ್ತ್ಮಾನಮ್ ಕರೋತಿ ಏವ | ಇದು ಪ್ರಜೆಗಳನ್ನು ಈ ಯಜಮಾನನ ಅನುವರ್ತಿಗಳನ್ನಾಗಿ ಮಾಡುತ್ತದೆ. |

---

ಸಾಮಿಧೇನಿಗಳಿಗೆ ಮೊದಲೇ ವೈಶ್ವಾನರ ದ್ವಾದಶಕಪಾಲಹವಿಸ್ಸನ್ನು ಆಹವನೀಯಾಗ್ನಿಯ ಪಶ್ಚಾದ್ಭಾಗದಲ್ಲಿ ಆಸಾದನ ಮಾಡಬೇಕು. ಸಾಮಿಧೇನೀಮಂತ್ರಗಳನ್ನು ಹೋತೃವು ಪಠಿಸುತ್ತಿರುವಾಗ ಮಾರುತಹವಿಸ್ಸನ್ನು ವೇದಿಯಲ್ಲಿ ಗಾರ್ಹಪತ್ಯಾಗ್ನಿಯ ಪಶ್ಚಾದ್ಭಾಗದಲ್ಲಿ ಆಸಾದನ ಮಾಡಬೇಕು. ಇದರಿಂದ ಪ್ರಜೆಗಳು ಯಜಮಾನನನ್ನು ಅನುಸರಿಸುವಂತಾಗುತ್ತದೆ.

* * *

# ಅನುವಾಕದ ವಿಶೇಷ ವಿಷಯಗಳು

**ಸಪ್ತಗಣಾಃ ವೈ ಮಾರುತಃ ।**

ಮರುತ್ತುಗ್ಗಳು ಏಳು ಗುಂಪುಗಳಾಗಿರುತ್ತವೆ. ಅವುಗಳಲ್ಲಿ ಕೆಲವು ಗಣಗಳು ತೈತ್ತಿರೀಯ ಸಂಹಿತೆಯ ನಾಲ್ಕನೆಯ ಕಾಂಡದಲ್ಲಿನ ಆರನೆಯ ಪ್ರಪಾಠಕದಲ್ಲಿ ಹೇಳಲ್ಪಟ್ಟಿವೆ.

**ಪ್ರಥಮಗಣ** 1) ಈದೃಜ್ 2) ಅನ್ಯಾದೃಜ್ 3) ಏತಾದೃಜ್ 4) ಪ್ರತಿದೃಜ್ 5) ಮಿತಃ 6) ಸಮ್ಮಿತಃ 7) ಸಭರಸ್

**ದ್ವಿತೀಯಗಣ** 1) ಶುಕ್ರಜ್ಯೋತಿಃ 2) ಚಿತ್ರಜ್ಯೋತಿಃ 3) ಸತ್ಯಜ್ಯೋತಿಃ 4) ಜ್ಯೋತಿಷ್ಮಾನ್ 5) ಸತ್ಯಃ 6) ಋತಪಾಃ 7) ಅತ್ಯಗ್‌ಂಹಸ್

**ತೃತೀಯಗಣ** 1) ಋತಜಿತ್ 2) ಸತ್ಯಜಿತ್ 3) ಸೇನಜಿತ್ 4) ಸುಷೇಣಃ 5) ಅಂತ್ಯಮಿತ್ರಃ 6) ದೂರೇ ಅಮಿತ್ರಃ 7) ಗಣಃ

**ಚತುರ್ಥಗಣ** 1) ಋತಃ 2) ಸತ್ಯಃ 3) ಧ್ರುವಃ 4) ಧರುಣಃ 5) ಧರ್ತಾ 6) ವಿಧರ್ತಾ 7) ವಿಧಾರಯಃ

***ಪಂಚಮಗಣ** 1) ಈದೃಕ್ಷಾಸಃ 2) ಏತಾದೃಕ್ಷಾಸಃ 3) ಸದೃಕ್ಷಾಸಃ 4) ಪ್ರತಿಸದೃಕ್ಷಾಸಃ

***ಆರನೆಯ ಗಣದ ಮರುತ್ತುಗಳು ಆಪಸ್ತಂಬಶ್ರೌತಸೂತ್ರದಲ್ಲಿ ಹೇಳಲ್ಪಟ್ಟಿವೆ. ಆಪ. ಶ್ರೌ.ಸೂ. [17–16, 14–19]**

1) ಸ್ವತವಾನ್ 2) ಪ್ರಘಾಸೀ 3) ಸಾಂತಪನ 4) ಗೃಹಮೇಧೀ 5) ಕ್ರೀಡೀ 6) ಸಾಕೀ 7) ಊರ್ಜಿಷೀ

**ಏಳನೆಯ ಗಣದ ಮರುತ್ತುಗಳು ಶಾಖಾಂತರೀಯವಾದವು. ಆರಣ್ಯಕದಲ್ಲಿ ಹೇಳಿರುವ ಗಣವನ್ನೂ ಪರಿಗಣಿಸಬಹುದು.**

1) ಧುನಿ 2) ಧ್ವಾಂತ 3) ಧ್ವನ 4) ಧ್ವನಯ 5) ನಿಲಿಂಪ 6) ವಿಲಿಂಪ 7) ವಿಕ್ಷಿಪ.

**[ತೈ. ಆ. 4.]**

---

* ಈ ಗಣದಲ್ಲಿ ನಾಲ್ಕೇ ಹೆಸರುಗಳು ಶ್ರುತ್ಯುಕ್ತವಾಗಿವೆ. ಗಣಗಳ ಹೆಸರಿನ ನಂತರ ಪಠಿತವಾದ ಮಂತ್ರಗಳಲ್ಲಿ **ಸಂಮಿತಾಸಃ** ಎಂಬ ಶಬ್ದಕ್ಕೆ **'ಪಂಚಮಗಣೇ ಚತುಃಸಂಖ್ಯಯಾ ಸಂಕ್ಷಿಪ್ಯ ಮಿತಾಃ'** ಎಂದು ಸಾಯಣಭಾಷ್ಯವಿದೆ.

# ಪಂಚಮಾನುವಾಕವಿಷಯಸಂಗ್ರಹ

**ವೈಶ್ವಾನರಂ ಪುರೋಡಾಶಂ ಚರುಂ ವರುಣದೈವತಮ್ ।**
**ದಧಿಕ್ರಾವ್ಣೇ ಚರುಂ ಕುರ್ಯಾದಭಿಶಸ್ತಃ ಪರೈಃ ಪುಮಾನ್ ॥**

**ತ್ರಿಹವಿಷ್ಕಾಮಿಮಾಮೇವ ಪ್ರಜಾರ್ಥ್ಯಪಿ ಸಮಾಚರೇತ್ ।**
**ಏಕಂ ವೈಶ್ವಾನರಂ ಕುರ್ಯಾತ್ ಪುತ್ರೇ ಜಾತೇಽಭಿವೃದ್ಧಯೇ ॥**

**ದರ್ಶಾದಿಕಮತಿಕ್ರಮ್ಯ ತದ್ವದ್ವೈಶ್ವಾನರಂ ಚರೇತ್ ।**
**ಅಗ್ನಿಮುದ್ವಾಸಯಿಷ್ಯನ್ನಾಗ್ನೇಯಮಷ್ಟಾಕಪಾಲಕಮ್ ॥**

**ಉಕ್ತಂ ವೈಶ್ವಾನರಂ ಚೋಭೇ ನಿರ್ವಪೇದ್ಧವಿಷೀ ಅಥ ।**
**ವೈಶ್ವಾನರಂ ಮಾರುತಂ ಚ ಗ್ರಾಮಕಾಮಸ್ಸಮಾಚರೇತ್ ॥**

**ಅಭಿಶಸ್ತೇಷ್ಟಿಮಾರಭ್ಯ ಪಂಚಮೇಽಸ್ಮಿನ್ನುದಾಹೃತಾಃ ॥**

ವೃಥಾಪವಾದಕ್ಕೆ ಒಳಗಾದವನು, ಮಕ್ಕಳನ್ನು ಬಯಸುವವನು, ಪುತ್ರನು ಜನಿಸಿದ ನಂತರ ನೈಮಿತ್ತಿಕವಾಗಿಯೂ, ಅಭಿವೃದ್ಧಿಗಾಗಿಯೂ, ದರ್ಶ–ಪೂರ್ಣಮಾಸೇಷ್ಟಿಗಳನ್ನು ಅನುಷ್ಠಿಸಬೇಕಾದ ಕಾಲವನ್ನು ಮೀರಿದವನು, ಪುನರಾಧಾನಕ್ಕಾಗಿ ಅಗ್ನ್ಯುದ್ವಾಸನೆಯನ್ನು ಮಾಡುವವನು. ಗ್ರಾಮಸ್ವಾಮಿಯಾಗಬಯಸುವವನು – ಇವರಿಗೆ ಈ ಅನುವಾಕದಲ್ಲಿ ಇಷ್ಟಿಗಳು ಹೇಳಲ್ಪಟ್ಟಿವೆ.

* * *

## ॥ ಷಷ್ಠೋಽನುವಾಕಃ ॥

ಆದಿತ್ಯಂ ಚರುಂ ನಿರ್ವಪೇತ್ಸಂಗ್ರಾಮಮುಪ
ಪ್ರಯಾಸ್ಯನ್ನಿಯಂ ವಾ ಅದಿತಿರಸ್ಯಾಮೇವ ಪೂರ್ವೇ
ಪ್ರತಿತಿಷ್ಠಂತಿ

---

ಆದಿತ್ಯಮ್ । ಚರುಮ್ । ನಿರಿತಿ । ವಪೇತ್ । ಸಂಗ್ರಾಮಮಿತಿ ಸಮ್-ಗ್ರಾಮಮ್ । ಉಪಪ್ರಯಾಸ್ಯನ್ನಿತ್ಯುಪ-ಪ್ರಯಾಸ್ಯನ್ನ್ । ಇಯಮ್ । ವೈ । ಅದಿತಿಃ । ಅಸ್ಯಾಮ್ । ಏವ । ಪೂರ್ವೇ । ಪ್ರತೀತಿ । ತಿಷ್ಠಂತಿ ।

---

**ಯುದ್ಧಕ್ಕೆ ಹೋಗುವವನಿಗೆ ವಿಹಿತವಾದ ಇಷ್ಟಿ; ಅದರ ಸ್ತುತಿ**

| | |
|---|---|
| ಸಂಗ್ರಾಮಮ್ ಉಪಪ್ರಯಾಸ್ಯನ್ | ಯುದ್ಧವನ್ನು ಮಾಡಲು ಹೊರಡುವವನು |
| ಆದಿತ್ಯಮ್ ಚರುಮ್ ನಿರ್ವಪೇತ್ | ಅದಿತಿದೇವಿಗಾಗಿ ಚರುಯಾಗವನ್ನು ಮಾಡಬೇಕು. |
| ಇಯಮ್ ವೈ ಅದಿತಿಃ | ಈ ಭೂಮಿಯೇ ಅದಿತಿದೇವತೆ. |
| ಅಸ್ಯಾಮ್ ಏವ ಪೂರ್ವೇ ಪ್ರತಿತಿಷ್ಠಂತಿ | ಈ ಭೂಮಿಯಲ್ಲಿಯೇ ಹಿಂದಿನವರು ಪ್ರತಿಷ್ಠಾವಂತರಾಗಿ ಬಾಳಿದರು. |

---

ಯುದ್ಧಕ್ಕೆ ಹೋಗುವವನು ಅದಿತಿದೇವತಾಕವಾದ ಚರುಯಾಗವನ್ನು ಮಾಡಬೇಕು. ಈ ಭೂಮಿಯೇ ಅದಿತಿದೇವಿ. ಅದಿತಿದೇವಿಯ ಅನುಗ್ರಹದಿಂದಲೇ ಹಿಂದಿನವರು ರಣರಂಗದಲ್ಲಿ ಜಯಶೀಲರಾಗಿ ಪ್ರತಿಷ್ಠಾವಂತರಾಗಿ ಬಾಳಿದರು. ಈ ಯಾಗ ಮಾಡಿ ಯುದ್ಧಕ್ಕೆ ಹೋದವರು ಅದಿತಿಯ ಅನುಗ್ರಹದಿಂದ ಯುದ್ಧದಲ್ಲಿ ಗೆದ್ದು ಹಿಂದಿನವರಂತೆ ಭೂಮಿಯಲ್ಲಿ ಪ್ರತಿಷ್ಠೆಯನ್ನು ಪಡೆದು ಬಾಳುತ್ತಾರೆ.

ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇದಾಯತನಂ ಗತ್ವಾ ಸಂವತ್ಸರೋ ವಾ ಅಗ್ನಿರ್ವೈಶ್ವಾನರಃ ಸಂವತ್ಸರಃ ಖಲು ವೈ ದೇವಾನಾಮಾಯತನಮೇತಸ್ಮಾದ್ವಾ ಆಯತನಾದ್ದೇವಾ

---

ವೈಶ್ವಾನರಮ್ । ದ್ವಾದಶಕಪಾಲಮಿತಿ ದ್ವಾದಶ–ಕಪಾಲಮ್ । ನಿರಿತಿ । ವಪೇತ್ । ಆಯತನಮಿತ್ಯಾ–ಯತನಮ್ । ಗತ್ವಾ । ಸಂವತ್ಸರ ಇತಿ ಸಮ್–ವತ್ಸರಃ । ವೈ । ಅಗ್ನಿಃ । ವೈಶ್ವಾನರಃ । ಸಂವತ್ಸರ ಇತಿ ಸಮ್–ವತ್ಸರಃ । ಖಲು । ವೈ । ದೇವಾನಾಮ್ । ಆಯತನ –ಮಿತ್ಯಾ–ಯತನಮ್ । ಏತಸ್ಮಾತ್ । ವೈ । ಆಯತನಾದಿತ್ಯಾ – ಯತನಾತ್ । ದೇವಾಃ ।

---

**ಯುದ್ಧದಲ್ಲಿ ಗೆಲ್ಲಬೇಕೆನ್ನುವವನಿಗೆ ವಿಹಿತವಾದ ವೈಶ್ವಾನರೇಷ್ಟಿ; ಪ್ರಶಂಸೆ**

| | |
|---|---|
| ಆಯತನಮ್ ಗತ್ವಾ ವೈಶ್ವಾನರಮ್ ದ್ವಾದಶಕಪಾಲಮ್ ನಿರ್ವಪೇತ್ | ರಣರಂಗವನ್ನು ಹೊಂದಿ, ವೈಶ್ವಾನರಾಗ್ನಿ ದೇವನಿಗಾಗಿ ದ್ವಾದಶಕಪಾಲಪುರೋಡಾಶ ಯಾಗವನ್ನು ಅನುಷ್ಠಿಸಬೇಕು. |
| ಅಗ್ನಿಃ ವೈಶ್ವಾನರಃ ಸಂವತ್ಸರಃ ವೈ | ವೈಶ್ವಾನರಾಗ್ನಿಯು ಸಂವತ್ಸರದೇವತಾ ಸ್ವರೂಪನಷ್ಟೆ. |
| ಸಂವತ್ಸರಃ ದೇವಾನಾಮ್ ಆಯತನಮ್ ಖಲು | ಸಂವತ್ಸರವೇ ದೇವತೆಗಳ ವಾಸಸ್ಥಾನವೂ ಆಗಿದೆ. |
| ಏತಸ್ಮಾತ್ ವೈ ಆಯತನಾತ್ ದೇವಾಃ | ಈ ಅಗ್ನಿವೈಶ್ವಾನರನ ಅನುಗ್ರಹದಿಂದಲೇ ದೇವತೆಗಳು |

---

ಯುದ್ಧರಂಗದಲ್ಲಿ ಗೆಲುವನ್ನು ಬಯಸುವವನು ಯುದ್ಧದ ಪ್ರದೇಶವನ್ನು ಹೊಕ್ಕು ವೈಶ್ವಾನರಾಗ್ನಿದೇವತೆಗಾಗಿ ದ್ವಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. ವೈಶ್ವಾನರಾಗ್ನಿಯು ಸಂವತ್ಸರಸ್ವರೂಪನು. ಸಂವತ್ಸರವು ದೇವತೆಗಳ ವಾಸಸ್ಥಾನವಾಗಿದೆ.

ಅಸುರಾನಜನಯನ್ ಯದ್ವೈಶ್ವಾನರಂ ದ್ವಾದಶಕಪಾಲಂ

ನಿರ್ವಪತಿ ದೇವಾನಾಮೇವಾऽಽಯತನೇ ಯತತೇ

ಜಯತಿ ತಗ್ಂ

---

ಅಸುರಾನ್ । ಅಜನಯನ್ನ್ । ಯತ್ । ವೈಶ್ವಾನರಮ್ । ದ್ವಾದಶಕಪಾಲಮಿತಿ ದ್ವಾದಶ-ಕಪಾಲಮ್ । ನಿರ್ವಪತೀತಿ ನಿಃ-ವಪತಿ । ದೇವಾನಾಮ್ । ಏವ । ಆಯತನ ಇತ್ಯಾ-ಯತನೇ । ಯತತೇ । ಜಯತಿ । ತಮ್ ।

---

| | |
|---|---|
| ಅಸುರಾನ್ ಅಜನಯನ್ನ್ | ರಾಕ್ಷಸರನ್ನು ಜಯಿಸಿದರು. |
| ವೈಶ್ವಾನರಮ್ ದ್ವಾದಶಕಪಾಲಮ್ ನಿರ್ವಪತಿ [ಇತಿ] ಯತ್ | ವೈಶ್ವಾನರಾಗ್ನಿದೇವನಿಗಾಗಿ ದ್ವಾದಶಕಪಾಲ ಪುರೋಡಾಶಯಾಗ ಮಾಡುವುದೆಂಬುದು ಯಾವುದುಂಟೋ ಅದರಿಂದ |
| ದೇವಾನಾಮ್ ಆಯತನೇ ಏವ ಯತತೇ | ದೇವತೆಗಳು ಜಯಸಿದ ರಣರಂಗದಲ್ಲಿಯೇ ಯಜಮಾನನೂ ಜಯಕ್ಕಾಗಿ ಯತ್ನಿಸಿದವನಾಗುತ್ತಾನೆ. |
| ತಮ್ ಸಂಗ್ರಾಮಮ್ ಜಯತಿ | [ವೈಶ್ವಾನರಾಗ್ನಿಯ ಅನುಗ್ರಹದಿಂದ] ಯುದ್ಧದಲ್ಲಿ ಜಯವನ್ನು ಪಡೆಯುತ್ತಾನೆ. |

---

ಈ ಯಾಗವನ್ನು ಮಾಡಿ ದೇವತೆಗಳು ರಾಕ್ಷಸರನ್ನು ಜಯಿಸಿದರು. ಈ ಯಜಮಾನನೂ ರಣರಂಗದ ಭೂದೇವತೆಯಾದ ವೈಶ್ವಾನರಾಗ್ನಿಯ ಅನುಗ್ರಹದಿಂದ ದೇವತೆಗಳು ಜಯಿಸಿದಂತೆಯೇ ಯುದ್ಧವನ್ನು ಮಾಡಿ ಗೆಲ್ಲುತ್ತಾನೆ.

ಸಂಗ್ರಾಮಮೇತಸ್ಮಿನ್ವಾ ಏತೌ ಮೃಜಾತೇ [ಮೃಜಾತೇ ೧]

ಯೋ ವಿದ್ವಿಷಾಣಯೋರನ್ನಮತ್ತಿ ವೈಶ್ವಾನರಂ ದ್ವಾದಶ

ಕಪಾಲಂ ನಿರ್ವಪೇದ್ವಿದ್ವಿಷಾಣಯೋರನ್ನಂ ಜಗ್ಧ್ವಾ

---

ಸಂಗ್ರಾಮಮಿತಿ ಸಮ್–ಗ್ರಾಮಮ್ । ಏತಸ್ಮಿನ್ । ವೈ । ಏತೌ । ಮೃಜಾತೇ ಇತಿ । ಯಃ ।

ವಿದ್ವಿಷಾಣಯೋರಿತಿ ವಿ–ದ್ವಿಷಾಣಯೋಃ । ಅನ್ನಮ್ । ಅತ್ತಿ । ವೈಶ್ವಾನರಮ್ । ದ್ವಾದಶ

ಕಪಾಲಮಿತಿ ದ್ವಾದಶ–ಕಪಾಲಮ್ । ನಿರಿತಿ । ವಪೇತ್ । ವಿದ್ವಿಷಾಣಯೋರಿತಿ ವಿ–

ದ್ವಿಷಾಣಯೋಃ । ಅನ್ನಮ್ । ಜಗ್ಧ್ವಾ ।

---

**ಪರಸ್ಪರದ್ವೇಷಿಗಳ ಅನ್ನವನ್ನು ತಿಂದವನಿಗೆ ವಿಹಿತವಾದ ಪ್ರಾಯಶ್ಚಿತ್ತ ರೂಪವಾದ ವೈಶ್ವಾನರೇಷ್ಟಿ; ಅರ್ಥವಾದ**

| | |
|---|---|
| ಯಃ ವಿದ್ವಿಷಾಣಯೋಃ ಅನ್ನಮ್ ಅತ್ತಿ ಏತಸ್ಮಿನ್ ವೈ ಏತೌ ಮೃಜಾತೇ | ಯಾವನು ಪರಸ್ಪರದ್ವೇಷಿಗಳಾಗಿರುವವರ ಅನ್ನವನ್ನು ತಿನ್ನುತ್ತಾನೆಯೋ ಇವನಲ್ಲಿ ಅನ್ಯೋನ್ಯದ್ವೇಷಿಗಳು ತಮ್ಮ ಪಾಪವನ್ನು ಹಾಕಿ ಶುದ್ಧರಾಗುತ್ತಾರೆ. |
| ವಿದ್ವಿಷಾಣಯೋಃ ಅನ್ನಮ್ ಜಗ್ಧ್ವಾ | ಪರಸ್ಪರದ್ವೇಷಿಗಳ ಅನ್ನವನ್ನು ತಿಂದು |
| ವೈಶ್ವಾನರಮ್ ದ್ವಾದಶಕಪಾಲಮ್ ನಿರ್ವಪೇತ್ | ಪಾಪಪರಿಹಾರಾರ್ಥವಾಗಿ ವೈಶ್ವಾನರಾಗ್ನಿಗಾಗಿ ದ್ವಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು. |

---

ಕೆಲವರು ಪರಸ್ಪರದ್ವೇಷದಿಂದ ಅಭಿಚಾರಾದಿಪಾಪಕೃತ್ಯಗಳಲ್ಲಿ ತೊಡಗಿರುತ್ತಾರೆ. ಅವರ ಅನ್ನವನ್ನು ತಿಂದವನಲ್ಲಿ ಅವರು ಪಾಪವನ್ನು ಹಾಕಿ ಶುದ್ಧರಾಗುತ್ತಾರೆ. ಇಂತಹ ದ್ವೇಷಿಗಳ ಅನ್ನವನ್ನು ತಿಂದವನು ವೈಶ್ವಾನರಾಗ್ನಿಗಾಗಿ ದ್ವಾದಶಕಪಾಲಪುರೋಡಾಶ ಯಾಗವನ್ನು ಮಾಡಬೇಕು.

ಸಂವತ್ಸರೋ ವಾ ಅಗ್ನಿರ್ವೈಶ್ವಾನರಃ ಸಂವತ್ಸರಸ್ವದಿತ
ಮೇವಾತ್ತಿ ನಾಸ್ಮಿನ್ಮೃಜಾತೇ ಸಂವತ್ಸರಾಯ ವಾ ಏತೌ
ಸಮಮಾತೇ ಯೌ ಸಮಮಾತೇ

---

ಸಂವತ್ಸರ ಇತಿ ಸಮ್-ವತ್ಸರಃ । ವೈ । ಅಗ್ನಿಃ । ವೈಶ್ವಾನರಃ । ಸಂವತ್ಸರಸ್ವದಿತಮಿತಿ ಸಂವತ್ಸರ-ಸ್ವದಿತಮ್ । ಏವ । ಅತ್ತಿ । ನ । ಅಸ್ಮಿನ್ । ಮೃಜಾತೇ ಇತಿ । ಸಂವತ್ಸರಾಯೇತಿ **ಸಮ್-ವತ್ಸರಾಯ** । ವೈ । ಏತೌ । ಸಮಿತಿ । ಅಮಾತೇ ಇತಿ । ಯೌ । ಸಮಮಾತೇ ಇತಿ ಸಮ್-ಅಮಾತೇ ।

---

| | |
|---|---|
| ಅಗ್ನಿಃ ವೈಶ್ವಾನರಃ ಸಂವತ್ಸರಃ ವೈ | ವೈಶ್ವಾನರಾಗ್ನಿಯು ಸಂವತ್ಸರಸ್ವರೂಪನಲ್ಲವೇ ? |
| ಸಂವತ್ಸರಸ್ವದಿತಮ್ ಏವ ಅತ್ತಿ | ಸಂವತ್ಸರದೇವತೆಯಿಂದ ಶುದ್ಧ ಮಾಡಲ್ಪಟ್ಟ ಅನ್ನವನ್ನೇ ಯಜಮಾನನು ತಿಂದವನಾಗುತ್ತಾನೆ. |
| ಅಸ್ಮಿನ್ ನ ಮೃಜಾತೇ | [ಆದುದರಿಂದ ಪರಸ್ಪರದ್ವೇಷಿಗಳು ತಮ್ಮ ಪಾಪ ವನ್ನು] ಈ ಯಜಮಾನನಲ್ಲಿ ಹಾಕಲಾರರು. |

**ಶಪಥವನ್ನು ಮೀರಿದವನಿಗೆ ವಿಹಿತವಾದ ವೈಶ್ವಾನರೇಷ್ಟಿ; ಅರ್ಥವಾದ**

| | |
|---|---|
| ಯೌ ಸಮಮಾತೇ | ಯಾವ ಇಬ್ಬರು ಪರಸ್ಪರದ್ರೋಹ ಮಾಡು ವುದಿಲ್ಲವೆಂದು ಪ್ರತಿಜ್ಞೆ ಮಾಡುತ್ತಾರೆಯೋ |
| ಏತೌ ಸಂವತ್ಸರಾಯ ವೈ ಸಮಮಾತೇ | ಈ ಇಬ್ಬರೂ ಸಂವತ್ಸರದೇವನನ್ನೇ ಸಾಕ್ಷಿ ಯನ್ನಾಗಿಟ್ಟುಕೊಂಡು ಶಪಥವನ್ನು ಮಾಡಿರು ತ್ತಾರೆ/ಸಂವತ್ಸರಕ್ಕೆ ಮೊದಲು ದ್ರೋಹ ಮಾಡುವುದಿಲ್ಲವೆಂದು ಶಪಥ ಮಾಡಿರುತ್ತಾರೆ. |

---

ಸಂವತ್ಸರಸ್ವರೂಪನಾದ ಅಗ್ನಿದೇವನು ತಿಂದ ಅನ್ನವನ್ನು ಶುದ್ಧಗೊಳಿಸುತ್ತಾನೆ. ಆದುದರಿಂದ ಈ ಯಜಮಾನನಲ್ಲಿ ಹಗೆಗಳ ಅನ್ನವು ದೋಷವನ್ನುಂಟುಮಾಡುವುದಿಲ್ಲ. ಅವರ ಪಾಪವು ಯಜಮಾನನಿಗೆ ತಾಕುವುದಿಲ್ಲ.

ಪರಸ್ಪರವಾಗಿ ದ್ರೋಹವನ್ನು ಬಗೆಯುವುದಿಲ್ಲವೆಂದು ಪ್ರತಿಜ್ಞೆ ಮಾಡಿದವರಿಗೆ ಸಂವತ್ಸರದೇವನೇ ಸಾಕ್ಷಿಯಾಗಿರುತ್ತಾನೆ. ಇದರ ಅವಧಿ ಒಂದು ಸಂವತ್ಸರ. ಅವಧಿಗೆ

ತಯೋರ್ಯಃ ಪೂರ್ವೋಽಭಿದ್ರುಹ್ಯತಿ ತಂ ವರುಣೋ

ಗೃಹ್ಣಾತಿ ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇತ್ಸಮ

ಮಾನಯೋಃ ಪೂರ್ವೋಽಭಿದ್ರುಹ್ಯ ಸಂವತ್ಸರೋ

ವಾ ಅಗ್ನಿರ್ವೈಶ್ವಾನರಃ

---

ತಯೋಃ । ಯಃ । ಪೂರ್ವಃ । ಅಭಿದ್ರುಹ್ಯತೀತ್ಯಭಿ–ದ್ರುಹ್ಯತಿ । ತಮ್ । ವರುಣಃ । ಗೃಹ್ಣಾತಿ । ವೈಶ್ವಾನರಮ್ । ದ್ವಾದಶಕಪಾಲಮಿತಿ ದ್ವಾದಶ–ಕಪಾಲಮ್ । ನಿರಿತಿ । ವಪೇತ್ । ಸಮಮಾನಯೋರಿತಿ ಸಮ್–ಅಮಾನಯೋಃ । ಪೂರ್ವಃ । ಅಭಿದ್ರುಹ್ಯೇತ್ಯಭಿ–ದ್ರುಹ್ಯ । ಸಂವತ್ಸರ ಇತಿ ಸಮ್–ವತ್ಸರಃ । ವೈ । ಅಗ್ನಿಃ । ವೈಶ್ವಾನರಃ ।

---

| | |
|---|---|
| ತಯೋಃ ಪ್ರಥಮಃ ಯಃ ಅಭಿದ್ರುಹ್ಯತಿ ತಮ್ ವರುಣಃ ಗೃಹ್ಣಾತಿ | ಅವರಿಬ್ಬರಲ್ಲಿ ಯಾವನು ಮೊದಲು ಇನ್ನೊಬ್ಬನಿಗೆ ದ್ರೋಹ ಬಗೆಯುವನೋ ಅವನನ್ನು ವರುಣದೇವನು ರೋಗವನ್ನು ಕೊಟ್ಟು ಪೀಡಿಸುತ್ತಾನೆ. |
| ಸಮಮಾನಯೋಃ ಪೂರ್ವಃ ಅಭಿದ್ರುಹ್ಯ | ಪ್ರತಿಜ್ಞೆ ಮಾಡಿದ್ದವರಲ್ಲಿ ಮೊದಲನೆಯವನಾಗಿ ದ್ರೋಹವನ್ನು ಮಾಡಿ |
| ವೈಶ್ವಾನರಮ್ ದ್ವಾದಶಕಪಾಲಮ್ ನಿರ್ವಪೇತ್ | ವೈಶ್ವಾನರಾಗ್ನಿದೇವನಿಗಾಗಿ ದ್ವಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| ಸಂವತ್ಸರಃ ಅಗ್ನಿಃ ವೈಶ್ವಾನರಃ ವೈ | ವೈಶ್ವಾನರಾಗ್ನಿದೇವನು ಸಂವತ್ಸರಸ್ವರೂಪನಲ್ಲವೇ ? |

---

ಮೊದಲೇ ಮೊದಲು ದ್ರೋಹ ಮಾಡಿದವನು ದೋಷಿಯಾಗುತ್ತಾನೆ. ಅವನು ವರುಣನ ಕೋಪಕ್ಕೆ ಗುರಿಯಾಗಿ ಜಲೋದರಾದಿರೋಗಪೀಡಿತನಾಗುತ್ತಾನೆ. ಅವನು ಅದರ ಪ್ರಾಯಶ್ಚಿತ್ತರೂಪವಾಗಿ ದ್ವಾದಶಕಪಾಲ ಪುರೋಡಾಶಯಾಗವನ್ನು ವೈಶ್ವಾನರಾಗ್ನಿದೇವನಿಗಾಗಿ ಮಾಡಬೇಕು. ಇದರಿಂದ ಸಂವತ್ಸರಸ್ವರೂಪನಾದ ವೈಶ್ವಾನರಾಗ್ನಿದೇವನು

ಸಂವತ್ಸರಮೇವಾಽಽಪ್ತ್ವಾ ನಿರ್ವರುಣಂ [೨] ಪರಸ್ತಾದಭಿ

ದ್ರುಹ್ಯತಿ ನೈನಂ ವರುಣೋ ಗೃಹ್ಣಾತ್ಯಾವ್ಯಂ ವಾ ಏಷ

ಪ್ರತಿಗೃಹ್ಣಾತಿ ಯೋಽವಿಂ ಪ್ರತಿಗೃಹ್ಣಾತಿ

---

ಸಂವತ್ಸರಮಿತಿ ಸಮ್-ವತ್ಸರಮ್ । ಏವ । ಆಪ್ತ್ವಾ । ನಿರ್ವರುಣಮಿತಿ ನಿಃ-ವರುಣಮ್ । ಪರಸ್ತಾತ್ । ಅಭೀತಿ । ದ್ರುಹ್ಯತಿ । ನ । ಏನಮ್ । ವರುಣಃ । ಗೃಹ್ಣಾತಿ । ಆವ್ಯಮ್ । ವೈ । ಏಷಃ । ಪ್ರತೀತಿ । ಗೃಹ್ಣಾತಿ । ಯಃ । ಅವಿಮ್ । ಪ್ರತಿಗೃಹ್ಣಾತೀತಿ ಪ್ರತಿ-ಗೃಹ್ಣಾತಿ ।

---

| | |
|---|---|
| ಸಂವತ್ಸರಮ್ ಏವ ಆಪ್ತ್ವಾ | ಯಾಗ ಮಾಡಿದ ಯಜಮಾನನು ಸಂವತ್ಸರ ಕಾಲವನ್ನು ಮುಗಿಸಿದಂತಾಗಿ |
| ನಿರ್ವರುಣಮ್ ಪರಸ್ತಾತ್ ಅಭಿದ್ರುಹ್ಯತಿ | ಸಂವತ್ಸರವು ಕಳೆದ ನಂತರ ಮಾಡಿದ ದ್ರೋಹದಂತಾಗುವುದರಿಂದ ಆ ದ್ರೋಹವು ವರುಣನಿಂದ ಗ್ರಹಣವಾಗದ ದ್ರೋಹದಂತಾಗುತ್ತದೆ. |
| ಏನಮ್ ವರುಣಃ ನ ಗೃಹ್ಣಾತಿ | ಹೀಗಾಗಿ ವರುಣನು ಯಜಮಾನನನ್ನು ಪೀಡಿಸುವುದಿಲ್ಲ. |

**ಕುರಿಯನ್ನು ದಾನ ಪಡೆದವರಿಗೆ ವಿಹಿತವಾದ ಪ್ರಾಯಶ್ಚಿತ್ತೇಷ್ಟಿ; ಪ್ರಶಂಸೆ**

| | |
|---|---|
| ಯಃ ಅವಿಮ್ ಪ್ರತಿಗೃಹ್ಣಾತಿ | ಯಾವನು ಅವಿ(ಕುರಿ)ಯನ್ನು ಪ್ರತಿಗ್ರಹ ಮಾಡುತ್ತಾನೆಯೋ |
| ಏಷಃ ಆವ್ಯಮ್ ಪ್ರತಿಗೃಹ್ಣಾತಿ | ಈತನು ಅವಿಯ ಸ್ವಭಾವವನ್ನೇ/ಪಾಪವನ್ನೇ/ದೈನ್ಯವನ್ನೇ ಸ್ವೀಕರಿಸುತ್ತಾನೆ. |

---

ಸುಪ್ರೀತನಾಗುತ್ತಾನೆ. ಅವನ ಅನುಗ್ರಹದಿಂದ ಪ್ರತಿಜ್ಞೆಯ ಕಾಲ ಮುಗಿದ ನಂತರ ಮಾಡಿದ ದ್ರೋಹದಂತಾಗಿ ಆ ದ್ರೋಹಕ್ಕಾಗಿ ವರುಣನು ಪೀಡಿಸುವುದಿಲ್ಲ. ರೋಗಬಾಧೆಯುಂಟಾಗುವುದಿಲ್ಲ. ಇದೊಂದು ಪ್ರಾಯಶ್ಚಿತ್ತೇಷ್ಟಿ.

ಕುರಿಯನ್ನು ಪ್ರತಿಗ್ರಹ ಮಾಡಿದವನು ಪಾಪವನ್ನು/ಕುರಿಯ ದೈನ್ಯಸ್ವಭಾವವನ್ನು ತೆಗೆದುಕೊಂಡವನಾಗುತ್ತಾನೆ.

ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇದವಿಂ ಪ್ರತಿಗೃಹ್ಯ

ಸಂವತ್ಸರೋ ವಾ ಅಗ್ನಿರ್ವೈಶ್ವಾನರಃ ಸಂವತ್ಸರಸ್ವದಿತಾ-

ಮೇವ ಪ್ರತಿಗೃಹ್ಣಾತಿ ನಾವ್ಯಂ ಪ್ರತಿಗೃಹ್ಣಾತ್ಯಾತ್ಮನೋ

ವಾ ಏಷ ಮಾತ್ರಾವಾಪ್ನೋತಿ ಯ

---

ವೈಶ್ವಾನರಮ್ । ದ್ವಾದಶಕಪಾಲಮಿತಿ ದ್ವಾದಶ–ಕಪಾಲಮ್ । ನಿರಿತಿ । ವಪೇತ್ ।

ಅವಿಮ್ । ಪ್ರತಿಗೃಹ್ಯೇತಿ ಪ್ರತಿ–ಗೃಹ್ಯ । ಸಂವತ್ಸರ ಇತಿ ಸಮ್–ವತ್ಸರಃ । ವೈ । ಅಗ್ನಿಃ ।

ವೈಶ್ವಾನರಃ । ಸಂವತ್ಸರಸ್ವದಿತಾಮಿತಿ ಸಂವತ್ಸರ–ಸ್ವದಿತಾಮ್ । ಏವ । ಪ್ರತೀತಿ । ಗೃಹ್ಣಾತಿ ।

ನ । ಅವ್ಯಮ್ । ಪ್ರತೀತಿ । ಗೃಹ್ಣಾತಿ । ಆತ್ಮನಃ । ವೈ । ಏಷಃ । ಮಾತ್ರಾಮ್ । ಆಪ್ನೋತಿ । ಯಃ ।

---

| | |
|---|---|
| ಅವಿಮ್ ಪ್ರತಿಗೃಹ್ಯ ವೈಶ್ವಾನರಮ್ ದ್ವಾದಶಕಪಾಲಮ್ ನಿರ್ವಪೇತ್ | ಕುರಿಯನ್ನು ಪ್ರತಿಗ್ರಹಿಸಿ ವೈಶ್ವಾನರಾಗ್ನಿ ದೇವನಿಗಾಗಿ ದ್ವಾದಶಕಪಾಲಪುರೋಡಾಶ ಯಾಗವನ್ನು ಮಾಡಬೇಕು |
| ಅಗ್ನಿಃ ವೈಶ್ವಾನರಃ ಸಂವತ್ಸರಃ ವೈ | ವೈಶ್ವಾನರಾಗ್ನಿಯು ಸಂವತ್ಸರದೇವನಾಗಿದ್ದಾನೆ. |
| ಸಂವತ್ಸರಸ್ವದಿತಾಮ್ ಏವ ಪ್ರತಿಗೃಹ್ಣಾತಿ | ಸಂವತ್ಸರದೇವನಿಂದ ಸ್ವೀಕೃತನಾಗಿ ಶುದ್ಧವಾದ ಕುರಿಯನ್ನೇ ಈತನು ಪ್ರತಿಗ್ರಹಿಸಿದಂತಾಗುತ್ತದೆ. |
| ಅವ್ಯಮ್ ನ ಪ್ರತಿಗೃಹ್ಣಾತಿ | ಪಾಪದ/ಕುರಿಯಸ್ವಭಾವದ ಪ್ರತಿಗ್ರಹವನ್ನು ಮಾಡಿದಂತಾಗುವುದಿಲ್ಲ. |

**ಬಾಯಲ್ಲಿ ಎರಡು ಕಡೆ ಹಲ್ಲುಗಳಿರುವ ಕುದುರೆ ಮುಂತಾದ ಪ್ರತಿಗ್ರಹ ಮಾಡಿದವನಿಗೆ ವಿಹಿತವಾದ ಪ್ರಾಯಶ್ಚಿತ್ತೇಷ್ಟಿ; ಪ್ರಶಂಸೆ**

| | |
|---|---|
| ಯಃ | ಯಾವನು |

ಈ ದೋಷಪರಿಹಾರಾರ್ಥವಾಗಿ ವೈಶ್ವಾನರಾಗ್ನಿದೇವನಿಗಾಗಿ ದ್ವಾದಶಕಪಾಲ ಪುರೋಡಾಶಯಾಗವನ್ನನುಷ್ಠಿಸಬೇಕು. ಈ ಯಾಗದಿಂದ ಸಂವತ್ಸರಸ್ವರೂಪನಾದ ಅಗ್ನಿ ವೈಶ್ವಾನರದೇವನು ಸುಪ್ರೀತನಾಗುತ್ತಾನೆ. ಇದರಿಂದ ದೋಷಪರಿಹಾರವಾಗಿ ರೋಗವೂ ಬರುವುದಿಲ್ಲ, ಕುರಿಯ ಸ್ವಭಾವವೂ ಬರುವುದಿಲ್ಲ.

ಉಭಯಾದತ್ಪ್ರತಿಗೃಹ್ಣಾತ್ಯಶ್ವಂ ವಾ ಪುರುಷಂ ವಾ

ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇದುಭಯಾ

[ದತ್ (೩) ಪ್ರತಿಗೃಹ್ಯ] ದತ್ಪ್ರತಿಗೃಹ್ಯ ಸಂವತ್ಸರೋ ವಾ

---

ಉಭಯಾದತ್ । ಪ್ರತಿಗೃಹ್ಣಾತೀತಿ ಪ್ರತಿ–ಗೃಹ್ಣಾತಿ । ಅಶ್ವಮ್ । ವಾ । ಪುರುಷಮ್ ।

ವಾ । ವೈಶ್ವಾನರಮ್ । ದ್ವಾದಶಕಪಾಲಮಿತಿ ದ್ವಾದಶ–ಕಪಾಲಮ್ । ನಿರಿತಿ । ವಪೇತ್ ।

ಉಭಯಾದತ್ । ಪ್ರತಿಗೃಹ್ಯೇತಿ ಪ್ರತಿ–ಗೃಹ್ಯ । ಸಂವತ್ಸರ ಇತಿ ಸಮ್–ವತ್ಸರಃ । ವೈ ।

---

| | |
|---|---|
| ಉಭಯಾದತ್ ಅಶ್ವಮ್ ವಾ ಪುರುಷಮ್ ವಾ ಪ್ರತಿಗೃಹ್ಣಾತಿ | ಎರಡು ಕಡೆಗಳಲ್ಲಿಯೂ ಹಲ್ಲಿರುವ ಕುದುರೆಯನ್ನಾಗಲೀ, ಪುರುಷನನ್ನಾಗಲೀ ಪ್ರತಿಗ್ರಹ ಮಾಡುತ್ತಾನೆಯೋ |
| ಏಷಃ ಆತ್ಮನಃ ಮಾತ್ರಾಮ್ ಆಪ್ನೋತಿ ವೈ | ಈತನು ಈ ಪ್ರತಿಗ್ರಹಪಾಪದಿಂದ ತನ್ನ ಹಿಂಸೆಯನ್ನೇ ಹೊಂದುತ್ತಾನೆ. |
| ಉಭಯಾದತ್ ಪ್ರತಿಗೃಹ್ಯ ವೈಶ್ವಾನರಮ್ ದ್ವಾದಶಕಪಾಲಮ್ ನಿರ್ವಪೇತ್ | ಎರಡೂ ಕಡೆಯಲ್ಲಿ ಹಲ್ಲಿರುವ ಪ್ರಾಣಿಯನ್ನು ದಾನ ಪಡೆದುಕೊಂಡು ವೈಶ್ವಾನರಾಗ್ನಿ ದೇವನಿಗಾಗಿ ದ್ವಾದಶಕಪಾಲ ಪುರೋಡಾಶ ಯಾಗವನ್ನು ಮಾಡಬೇಕು. |

---

ಕುದುರೆ, ಮನುಷ್ಯ ಮೊದಲಾದ ಪ್ರಾಣಿಗಳಿಗೆ ಬಾಯಿಯಲ್ಲಿ ಎರಡೂ ಕಡೆ ಹಲ್ಲುಗಳಿವೆ. ಇಂತಹ ಪ್ರಾಣಿಗಳ ಪ್ರತಿಗ್ರಹಪಾಪದಿಂದ ದಾನವನ್ನು ಪಡೆದವನು ತನ್ನ ಹಿಂಸೆಯನ್ನು ಹೊಂದುತ್ತಾನೆ. ಈ ದೋಷಪರಿಹಾರಕ್ಕಾಗಿ ವೈಶ್ವಾನರಾಗ್ನಿಯಾಗವನ್ನು ಮಾಡಬೇಕು. ಇದರಿಂದ ಸಂವತ್ಸರಸ್ವರೂಪನಾದ ವೈಶ್ವಾನರಾಗ್ನಿದೇವನು

ಅಗ್ನಿರ್ವೈಶ್ವಾನರಸ್ಸಂವತ್ಸರಸ್ವದಿತಮೇವ ಪ್ರತಿಗೃಹ್ಣಾತಿ

ನಾಽಽತ್ಮನೋ ಮಾತ್ರಾಮಾಪ್ನೋತಿ ವೈಶ್ವಾನರಂ

ದ್ವಾದಶಕಪಾಲಂ ನಿರ್ವಪೇತ್ಸನಿಮೇಷ್ಯನ್ತ್ಸಂವತ್ಸರೋ ವಾ

ಅಗ್ನಿರ್ವೈಶ್ವಾನರೋ

---

ಅಗ್ನಿಃ । ವೈಶ್ವಾನರಃ । ಸಂವತ್ಸರಸ್ವದಿತಮಿತಿ ಸಂವತ್ಸರ–ಸ್ವದಿತಮ್ । ಏವ । ಪ್ರತೀತಿ । ಗೃಹ್ಣಾತಿ । ನ । ಆತ್ಮನಃ । ಮಾತ್ರಾಮ್ । ಆಪ್ನೋತಿ । **ವೈಶ್ವಾನರಮ್** । ದ್ವಾದಶಕಪಾಲಮಿತಿ ದ್ವಾದಶ–ಕಪಾಲಮ್ । ನಿರಿತಿ । ವಪೇತ್ । ಸನಿಮ್ । ಏಷ್ಯನ್ । ಸಂವತ್ಸರ ಇತಿ ಸಮ್–ವತ್ಸರಃ । ವೈ । ಅಗ್ನಿಃ । ವೈಶ್ವಾನರಃ ।

---

| | |
|---|---|
| ಅಗ್ನಿಃ ವೈಶ್ವಾನರಃ ಸಂವತ್ಸರಃ ವೈ ಸಂವತ್ಸರಸ್ವದಿತಮ್ ಏವ ಪ್ರತಿಗೃಹ್ಣಾತಿ | ವೈಶ್ವಾನರಾಗ್ನಿಯು ಸಂವತ್ಸರಸ್ವರೂಪ ನಲ್ಲವೇ ? ಸಂವತ್ಸರದೇವನ ಅನುಗ್ರಹ ದಿಂದ ಪಾಪದಾಯಕವಲ್ಲದ ಪ್ರಾಣಿಯನ್ನೇ ಪ್ರತಿಗ್ರಹ ಮಾಡಿದಂತಾಗುತ್ತದೆ. |
| ಆತ್ಮನಃ ಮಾತ್ರಾಮ್ ನ ಆಪ್ನೋತಿ | ತನ್ನ ಹಿಂಸೆಯನ್ನು ಹೊಂದುವುದಿಲ್ಲ. |

**ಧನವನ್ನು ಬೇಡಲು ಹೋದವನಿಗೆ ವಿಹಿತವಾದ ವೈಶ್ವಾನರೇಷ್ಟಿ; ಪ್ರಶಂಸೆ**

| | |
|---|---|
| ಸನಿಮ್ ಏಷ್ಯನ್ ವೈಶ್ವಾನರಮ್ ದ್ವಾದಶಕಪಾಲಮ್ ನಿರ್ವಪೇತ್ | ಧನವನ್ನು ಯಾಚಿಸಲು ಹೋಗುವವನು ವೈಶ್ವಾನರಾಗ್ನಿದೇವನಿಗಾಗಿ ದ್ವಾದಶಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. |
| ಅಗ್ನಿಃ ವೈಶ್ವಾನರಃ ಸಂವತ್ಸರಃ ವೈ | ವೈಶ್ವಾನರಾಗ್ನಿಯು ಸಂವತ್ಸರಸ್ವರೂಪನಷ್ಟೆ. |

---

ಸುಪ್ರೀತನಾಗುವನು. ಸಂವತ್ಸರಾಗ್ನಿದೇವನು ಪ್ರಾಣಿಯನ್ನು ದೋಷರಹಿತವನ್ನಾಗಿ ಮಾಡುತ್ತಾನೆ. ಇದರಿಂದ ದೋಷಪರಿಹಾರವಾಗಿ ಪಾಪದಿಂದ ಉಂಟಾದ ಹಿಂಸೆಯನ್ನು ಯಜಮಾನನು ಪಡೆಯುವುದಿಲ್ಲ.

ಯಾಗವೇ ಮೊದಲಾದ ಅವಶ್ಯಕಾರ್ಯಗಳಿಗಾಗಿ ಧನವನ್ನು ಬೇಡಿ ಪಡೆಯ ಬಹುದು. ಅದಕ್ಕಾಗಿ ಹೋಗುವವನು ವೈಶ್ವಾನರೇಷ್ಟಿಯನ್ನು ಅನುಷ್ಠಿಸಬೇಕು. ಇದರಿಂದ

# ಯದಾ ಖಲು ವೈ ಸಂವತ್ಸರಂ ಜನತಾಯಾಂ ಚರತ್ಯಥ ಸ ಧನಾರ್ಘೋ ಭವತಿ ಯದ್ವೈಶ್ವಾನರಂ ದ್ವಾದಶಕಪಾಲಂ ನಿರ್ವಪತಿ ಸಂವತ್ಸರಸಾತಾಮೇವ ಸನಿಮಭಿಪ್ರಚ್ಯವತೇ ದಾನಕಾಮಾ ಅಸ್ಮೈ ಪ್ರಜಾ ಭವಂತಿ

---

ಯದಾ । ಖಲು । ವೈ । ಸಂವತ್ಸರಮಿತಿ ಸಮ್–ವತ್ಸರಮ್ । ಜನತಾಯಾಮ್ । ಚರತಿ । ಅಥ । ಸಃ । ಧನಾರ್ಘ ಇತಿ ಧನ–ಅರ್ಘಃ । ಭವತಿ । ಯತ್ । ವೈಶ್ವಾನರಮ್ । ದ್ವಾದಶಕಪಾಲಮಿತಿ ದ್ವಾದಶ–ಕಪಾಲಮ್ । ನಿರ್ವಪತೀತಿ ನಿಃ–ವಪತಿ । ಸಂವತ್ಸರಸಾತಾಮಿತಿ ಸಂವತ್ಸರ–ಸಾತಾಮ್ । ಏವ । ಸನಿಮ್ । ಅಭಿ । ಪ್ರೇತಿ । ಚ್ಯವತೇ । ದಾನಕಾಮಾ ಇತಿ ದಾನ–ಕಾಮಾಃ । ಅಸ್ಮೈ । ಪ್ರಜಾ ಇತಿ ಪ್ರ–ಜಾಃ । ಭವಂತಿ ।

---

| | |
|---|---|
| ಯದಾ ಖಲು ವೈ ಸಂವತ್ಸರಮ್ ಜನತಾಯಾಮ್ ಚರತಿ | ಹೀಗೆ ಇಷ್ಟಿಯನ್ನು ಮಾಡಿ ವೈಶ್ವಾನರಾಗ್ನಿಯ ಅನುಗ್ರಹವನ್ನು ಪಡೆದವನು ಯಾವಾಗ ಧನಿಕ ಜನಸಮೂಹದಲ್ಲಿ ಒಂದು ಸಂವತ್ಸರ ಕಾಲ ಸಂಚರಿಸುತ್ತಾನೆಯೋ |
| ಅಥ ಸಃ ಧನಾರ್ಘಃ ಭವತಿ | ಅವನು ಧನವನ್ನು ಹೊಂದಿ ಪೂಜ್ಯನಾಗುತ್ತಾನೆ. |
| ವೈಶ್ವಾನರಮ್ ದ್ವಾದಶಕಪಾಲಮ್ ನಿರ್ವಪತಿ [ಇತಿ] ಯತ್ | ವೈಶ್ವಾನರಾಗ್ನಿಯನ್ನು ಕುರಿತು ಯಾಗ ಮಾಡುತ್ತಾನೆಂಬುದು ಯಾವುದುಂಟೋ [ಅದರಿಂದ] |
| ಸಂವತ್ಸರಸಾತಾಮ್ ಏವ ಸನಿಮ್ ಅಭಿಪ್ರಚ್ಯವತೇ | ಸಂವತ್ಸರದೇವನು ಅನುಗ್ರಹಿಸಿದ ತಾನು ಬೇಡಿದ ಧನವನ್ನು ಪಡೆಯುತ್ತಾನೆ. |
| ಅಸ್ಮೈ ದಾನಕಾಮಾಃ ಪ್ರಜಾಃ ಭವಂತಿ | ಧನಿಕರಾದ ಜನರು ಈತನಿಗೆ ದಾನವನ್ನು ಮಾಡಬಯಸುತ್ತಾರೆ. |

---

ಸಂವತ್ಸರಸ್ವರೂಪನಾದ ಅಗ್ನಿದೇವನು ತೃಪ್ತನಾಗುತ್ತಾನೆ. ಅವನ ಅನುಗ್ರಹದಿಂದ ಒಂದು ಸಂವತ್ಸರ ಕಾಲ ಧನಿಕಸಮೂಹದಲ್ಲಿ ಬೇಡಲು ಸಂಚರಿಸಿದವನು ಅಧಿಕವಾದ ಧನವನ್ನು

ಯೋ ವೈ ಸಂವತ್ಸರಂ [೪] ಪ್ರಯುಜ್ಯ ನ ವಿಮುಂಚತ್ಯ

ಪ್ರತಿಷ್ಠಾನೋ ವೈ ಸ ಭವತ್ಯೇತಮೇವ ವೈಶ್ವಾನರಂ

ಪುನರಾಗತ್ಯ ನಿರ್ವಪೇದ್ಯಮೇವ ಪ್ರಯುಂಕ್ತೇ

---

ಯಃ । ವೈ । ಸಂವತ್ಸರಮಿತಿ ಸಮ್–ವತ್ಸರಮ್ । ಪ್ರಯುಜ್ಯೇತಿ ಪ್ರ–ಯುಜ್ಯ । ನ । ವಿಮುಂಚತೀತಿ ವಿ–ಮುಂಚತಿ । ಅಪ್ರತಿಷ್ಠಾನ ಇತ್ಯಪ್ರತಿ–ಸ್ಥಾನಃ । ವೈ । ಸಃ । ಭವತಿ । ಏತಮ್ । ಏವ । ವೈಶ್ವಾನರಮ್ । ಪುನಃ । ಆಗತ್ಯೇತ್ಯಾ–ಗತ್ಯ । ನಿರಿತಿ । ವಪೇತ್ । ಯಮ್ । ಏವ । ಪ್ರಯುಂಕ್ತ ಇತಿ ಪ್ರ–ಯುಂಕ್ತೇ ।

---

**ಧನವನ್ನು ಪಡೆದವನು ಮಾಡಬೇಕಾದ ನೈಮಿತ್ತಿಕ ವೈಶ್ವಾನರೇಷ್ಟಿ; ಪ್ರಶಂಸೆ**

| | |
|---|---|
| ಯಃ ವೈ ಸಂವತ್ಸರಮ್ ಪ್ರಯುಜ್ಯ ನ ವಿಮುಂಚತಿ | ಯಾವನು ದಾನ ಬೇಡುವುದಕ್ಕಾಗಿ ವೈಶ್ವಾನರಾಗ್ನಿಯನ್ನು ಆಹ್ವಾನಿಸಿ, ವಿಸರ್ಜನೆ ಮಾಡುವುದಿಲ್ಲವೋ, |
| ಅಪ್ರತಿಷ್ಠಾನಃ ವೈ ಸಃ ಭವತಿ | ಅವನು ಒಳ್ಳೆಯ ಸ್ಥಿತಿಯುಳ್ಳವನಾಗಿರುವುದಿಲ್ಲ. |
| ಪುನಃ ಆಗತ್ಯ ಏತಮ್ ಏವ ವೈಶ್ವಾನರಮ್ ನಿರ್ವಪೇತ್ | ಸಂವತ್ಸರ ಕಾಲ ಪ್ರವಾಸ ಮಾಡಿ ಹಿಂದಿರುಗಿ ಬಂದವನು ಈ ವೈಶ್ವಾನರಾಗ್ನಿಯ ಯಾಗವನ್ನು ಮಾಡಬೇಕು. |
| ಯಮ್ ಏವ ಪ್ರಯುಂಕ್ತೇ | ಯಾರನ್ನು ಉದ್ದೇಶಿಸಿ ಯಾಗ ಮಾಡುವನೋ |

---

ಪಡೆದು ಪೂಜ್ಯನಾಗುತ್ತಾನೆ. ಈ ಯಾಗದ ಪ್ರಭಾವದಿಂದ ಧನಿಕರು ಈತನಿಗೆ ದಾನವನ್ನೀಯಲು ಮುಂದೆ ಬರುತ್ತಾರೆ. ಈತನೂ ಯಾಗಾದಿಗಳನ್ನು ಮಾಡಲು ಸಮರ್ಥನಾಗುತ್ತಾನೆ.

ದಾನ ಬೇಡುವುದರಲ್ಲಿ ಸಫಲನಾಗುವುದಕ್ಕಾಗಿ ವೈಶ್ವಾನರಾಗ್ನಿಯಲ್ಲಿ ಯಾಗ ಮಾಡಿ ವಿಸರ್ಜನೆಯನ್ನು ಮಾಡದಿರುವವನು ಶ್ರೇಷ್ಠ ಸ್ಥಿತಿಯನ್ನು ಪಡೆಯದವನಾಗುತ್ತಾನೆ. ಅವನು ಹಿಂದಿರುಗಿ ಬಂದವನು ವೈಶ್ವಾನರಾಗ್ನಿಯಾಗವನ್ನೇ ಮಾಡಬೇಕು. ಇದರಿಂದ

ತಂ ಭಾಗಧೇಯೇನ ವಿಮುಂಚತಿ ಪ್ರತಿಷ್ಠಿತ್ಯೈ ಯಯಾ

ರಜ್ವೋತ್ತಮಾಂ ಗಾಮಾಜೇತ್ತಾಂ ಭ್ರಾತೃವ್ಯಾಯ ಪ್ರಹಿಣು-

ಯಾನ್ನಿರ್ ಋತಿಮೇವಾಸ್ಮೈ ಪ್ರಹಿಣೋತಿ ॥ ೩೪–6॥

[ವ್ಯಜಾತೇ ನಿರ್ವರುಣಂ ವಪೇದುಭಯಾದದ್ಯೋ ವೈ ಸಂವತ್ಸರಗ್‌ಂ

ಷಟ್ತ್ರಿಗ್‌ಂಶಚ್ಚ ॥]

ತಮ್ । ಭಾಗಧೇಯೇನೇತಿ ಭಾಗ–ಧೇಯೇನ । ವೀತಿ । ಮುಂಚತಿ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ । ಯಯಾ । ರಜ್ವಾ । ಉತ್ತಮಾಮಿತ್ಯುತ್–ತಮಾಮ್ । ಗಾಮ್ । ಆಜೇದಿತ್ಯಾ–ಅಜೇತ್ । ತಾಮ್ । ಭ್ರಾತೃವ್ಯಾಯ । ಪ್ರೇತಿ । ಹಿಣುಯಾತ್ । ನಿರ್ ಋತಿ ಮಿತಿ ನಿಃ–ಋತಿಮ್ । ಏವ । ಅಸ್ಮೈ । ಪ್ರೇತಿ । ಹಿಣೋತಿ ॥6॥

| | |
|---|---|
| ತಮ್ ಭಾಗಧೇಯೇನ ವಿಮುಂಚತಿ ಪ್ರತಿಷ್ಠಿತ್ಯೈ | ಆ ವೈಶ್ವಾನರಾಗ್ನಿಯ ಭಾಗವನ್ನು ಕೊಟ್ಟು ತೃಪ್ತಿಗೊಳಿಸಿ ಕಳಿಸಿದವನಾಗುತ್ತಾನೆ. ಇದು ಅವನ ಪ್ರತಿಷ್ಠೆಗೆ ಕಾರಣವಾಗುತ್ತದೆ. |
| ಯಯಾ ರಜ್ವಾ ಉತ್ತಮಾಮ್ ಗಾಮ್ ಆಜೇತ್ | ಯಾವ ಹಗ್ಗದಿಂದ ಕೊನೆಯ ಹಸುವನ್ನು ಕಟ್ಟಿ ತಂದಿರುತ್ತಾನೆಯೋ |
| ತಾಮ್ ಭ್ರಾತೃವ್ಯಾಯ ಪ್ರಹಿಣುಯಾತ್ | ಆ ಹಗ್ಗವನ್ನು ತನ್ನ ಹಗೆಯ ಕೊಟ್ಟಿಗೆಯಲ್ಲಿ ಹಾಕಬೇಕು. |
| ಅಸ್ಮೈ ನಿರ್ ಋತಿಮ್ ಏವ ಪ್ರಹಿಣೋತಿ | ಈ ವೈರಿಗೆ ದಾರಿದ್ರ್ಯವನ್ನು ಕೊಡುವ ನಿರ್ ಋತಿಯನ್ನೇ ಹಿಂಸಿಸಲು ಕಳಿಸಿದಂತಾಗುತ್ತದೆ. |

ವೈಶ್ವಾನರಾಗ್ನಿಯನ್ನು ಅವನಿಗೆ ಬೇಕಾದ ಭಾಗವನ್ನಿತ್ತು ಕಳಿಸಿದಂತಾಗುತ್ತದೆ. ತಂದಿರುವ ಹಸುಗಳಲ್ಲಿ ಕೊನೆಯಲ್ಲಿರುವ ಹಸುವಿನ ಹಗ್ಗವನ್ನು ವೈರಿಯ ಕೊಟ್ಟಿಗೆಯಲ್ಲಿ ಹಾಕಬೇಕು. ಇದರಿಂದ ಪಾಪದೇವಿಯನ್ನು/ಹಿಂಸೆಯನ್ನು ಮಾಡುವ ನಿರ್ ಋತಿಯನ್ನು ಶತ್ರುವಿನ ಬಳಿ ಕಳುಹಿಸಿದಂತಾಗುತ್ತದೆ.

# ಷಷ್ಠಾನುವಾಕವಿಷಯಸಂಗ್ರಹ

**ನಿರ್ವಪೇಚ್ಚರುಮಾದಿತ್ಯಂ ಯಃ ಸಂಗ್ರಾಮಂ ಯಿಯಾಸತಿ ।**
**ಯುದ್ಧಭೂಮಿಂ ಗತಸ್ತತ್ರ ಕುರ್ಯಾದ್ವೈಶ್ವಾನರಂ ಹವಿಃ ॥**

**ಮಾರಣೋದ್ಯತಯೋರನ್ನಂ ಜಗ್ಧ್ವಾ ವೈಶ್ವಾನರಂ ಚರೇತ್ ।**
**ಕೃತ್ವಾ ಯಃ ಶಪಥಂ ಪೂರ್ವಂ ದ್ರುಹ್ಯೇದೇಷೋಽಪಿ ತಂ ಚರೇತ್ ॥**

**ಅವಿಂ ತೂಭಯತೋದಂತಂ ವಾ ಸ್ವೀಕೃತ್ಯ ತಮಾಚರೇತ್ ।**
**ತಂ ಚರೇದ್ಯಾಚಿತುಂ ಗಚ್ಛನ್ನಾಗತ್ಯ ಚ ಪುನಶ್ಚರೇತ್ ॥**

**ಷಷ್ಠೇಽನುವಾಕೇ ಆದಿತ್ಯಚರ್ವಾದ್ಯಾ ಉಪವರ್ಣಿತಾಃ ।**
**ವೈಶ್ವಾನರೋ ನ ಇತ್ಯತ್ರ ವರ್ಣಿತೋಽರ್ಥೋಽನುವಾಕಯೋಃ ॥**

ಯುದ್ಧಕ್ಕೆ ಹೋಗಬಯಸುವವನು, ಯುದ್ಧಭೂಮಿಯಲ್ಲಿ ಗೆಲುವನ್ನು ಬಯಸುವವನು, ಪರಸ್ಪರದ್ವೇಷಿಗಳ ಅನ್ನವನ್ನು ತಿಂದವನು, ಶಪಥವನ್ನು ಮೀರಿದವನು, ಕುರಿಯನ್ನಾಗಲೀ, ಬಾಯಿಯ ಎರಡು ಕಡೆಯಲ್ಲಿಯೂ ಹಲ್ಲುಗಳಿರುವ ಪ್ರಾಣಿಯನ್ನಾಗಲೀ ಪ್ರತಿಗ್ರಹ ಮಾಡಿದವನು, ಧನಯಾಚನೆಗಾಗಿ ಹೋಗುವವನು, ಅವನೇ ಹಿಂದಿರುಗಿ ಬಂದಾಗಲೂ – ಮಾಡಬೇಕಾದ ಇಷ್ಟಿಗಳು ಇಲ್ಲಿ ಉಕ್ತವಾಗಿವೆ.

ಇದರ ಯಾಜ್ಯಾ–ಪುರೋನುವಾಕ್ಯೆಗಳು ವೈಶ್ವಾನರೋ ನ......... **[ತೈ. ಸಂ. 1.5.12]** ಅನುವಾಕದಲ್ಲಿವೆ.

* * *

## ॥ ಸಪ್ತಮೋಽನುವಾಕಃ ॥

ಐಂದ್ರಂ ಚರುಂ ನಿರ್ವಪೇತ್ಪಶುಕಾಮ ಐಂದ್ರಾ ವೈ

ಪಶವ ಇಂದ್ರಮೇವ ಸ್ವೇನ ಭಾಗಧೇಯೇನೋಪಧಾವತಿ

ಸ ಏವಾಸ್ಮೈ ಪಶೂನ್ಪ್ರಯಚ್ಛತಿ ಪಶುಮಾನೇವ ಭವತಿ

---

ಐಂದ್ರಮ್ । ಚರುಮ್ । ನಿರಿತಿ । ವಪೇತ್ । ಪಶುಕಾಮ ಇತಿ ಪಶು – ಕಾಮಃ । ಐಂದ್ರಾಃ । ವೈ । ಪಶವಃ । ಇಂದ್ರಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ– ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮೈ । ಪಶೂನ್ । ಪ್ರೇತಿ । ಯಚ್ಛತಿ । ಪಶುಮಾನಿತಿ ಪಶು–ಮಾನ್ । ಏವ । ಭವತಿ ।

---

ಈ ಏಳನೆಯ ಅನುವಾಕದಲ್ಲಿ ಐಂದ್ರಚರು ಮೊದಲಾದ ಇಷ್ಟಿಗಳು ಹೇಳಲ್ಪಟ್ಟಿವೆ.

**ಪಶುಕಾಮನಾದವನಿಗೆ ವಿಹಿತವಾದ ಐಂದ್ರಚರುಯಾಗ; ಪ್ರಶಂಸೆ**

| | |
|---|---|
| ಪಶುಕಾಮಃ ಐಂದ್ರಮ್ ಚರುಮ್ ನಿರ್ವಪೇತ್ | ಪಶುಗಳನ್ನು ಬಯಸುವವನು ಇಂದ್ರ ದೇವನಿಗಾಗಿ ಚರು ಹವಿಸ್ಸಿನ ಯಾಗವನ್ನು ಮಾಡಬೇಕು. |
| ಪಶವಃ ಐಂದ್ರಾಃ ವೈ ಇಂದ್ರಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ ಸಃ ಏವ ಅಸ್ಮೈ ಪಶೂನ್ ಪ್ರಯಚ್ಛತಿ | ಪಶುಗಳು ಇಂದ್ರಸಂಬಂಧಿಯಾಗಿವೆ ಯಲ್ಲವೇ? ಯಜಮಾನನು ಈ ಯಾಗ ದಿಂದ ಇಂದ್ರನಿಗೆ ಅವನ ಭಾಗವನ್ನಿತ್ತು ಸೇವಿಸುತ್ತಾನೆ. ಆ ಇಂದ್ರನೇ ಈ ಯಜಮಾನನಿಗೆ ಪಶುಗಳನ್ನು ಕೊಡುತ್ತಾನೆ. |
| ಪಶುಮಾನ್ ಏವ ಭವತಿ | ಯಜಮಾನನು ಪಶುಗಳುಳ್ಳವನೇ ಆಗು ತ್ತಾನೆ. |

---

ಗವಾದಿಪಶುಕಾಮನಾದವನು ಇಂದ್ರದೇವನಿಗಾಗಿ ಚರುಯಾಗವನ್ನು ಮಾಡಬೇಕು. ತ್ರಿಲೋಕಾಧಿಪತಿಯಾದ ಇಂದ್ರನು ಪಶುಗಳಿಗೂ ಒಡೆಯನಾಗಿರುತ್ತಾನೆ. ಯಜಮಾನನ ಈ ಯಾಗದಿಂದ ತೃಪ್ತನಾದ ಇಂದ್ರನು ಯಜಮಾನನಿಗೆ ಪಶುಗಳನ್ನು ಅನುಗ್ರಹಿಸುತ್ತಾನೆ. ಇಂದ್ರಿಯಶಕ್ತಿಗೆ ಒಡೆಯನು ಇಂದ್ರದೇವನು. ಆ ಇಂದ್ರಿಯಶಕ್ತಿಯು

ಚರುರ್ಭವತಿ ಸ್ವಾದೇವಾಸ್ಮೈ ಯೋನೇಃ ಪಶೂನ್ಪ್ರಜನಯ-

ತೀಂದ್ರಾಯೇಂದ್ರಿಯಾವತೇ ಪುರೋಡಾಶಮೇಕಾದಶ

ಕಪಾಲಂ ನಿರ್ವಪೇತ್ಪಶುಕಾಮ

---

ಚರುಃ । ಭವತಿ । ಸ್ವಾತ್ । ಏವ । ಅಸ್ಮೈ । ಯೋನೇಃ । ಪಶೂನ್ । ಪ್ರೇತಿ । ಜನಯತಿ ।

ಇಂದ್ರಾಯ । ಇಂದ್ರಿಯಾವತ ಇತೀಂದ್ರಿಯ-ವತೇ । ಪುರೋಡಾಶಮ್ । ಏಕಾದಶಕಪಾಲ

ಮಿತ್ಯೇಕಾದಶ – ಕಪಾಲಮ್ । ನಿರಿತಿ । ವಪೇತ್ । ಪಶುಕಾಮ ಇತಿ ಪಶು–ಕಾಮಃ ।

---

| | |
|---|---|
| ಚರುಃ ಭವತಿ<br>ಸ್ವಾತ್ ಯೋನೇಃ ಏವ<br>ಅಸ್ಮೈ ಪಶೂನ್ ಪ್ರಜನಯತಿ | ಈ ಯಾಗದಲ್ಲಿ ಚರುವು ಹವಿಸ್ಸಾಗಿದೆ. ಇಂದ್ರನು ಪಶುಗಳ ಉತ್ಪತ್ತಿಗೆ ಕಾರಣವಾದುದ ರಿಂದಲೇ (ಅನ್ನದಿಂದಲೇ) ಪಶುಗಳನ್ನು ಈ ಯಜಮಾನನಿಗಾಗಿ ಹುಟ್ಟಿಸುತ್ತಾನೆ. |

**ಪಶುಕಾಮನಿಗೆ ವಿಹಿತವಾದ ಇನ್ನೊಂದು ಇಷ್ಟಿ; ಅರ್ಥವಾದ**

| | |
|---|---|
| ಪಶುಕಾಮಃ | ಗವಾದಿ ಪಶುಸಮೃದ್ಧಿಯನ್ನು ಬಯಸುವವನು |
| ಇಂದ್ರಿಯಾವತೇ ಇಂದ್ರಾಯ<br>ಪುರೋಡಾಶಮ್ ಏಕಾದಶ<br>ಕಪಾಲಮ್ ನಿರ್ವಪೇತ್ | ಇಂದ್ರಿಯಾವಂತನಾದ ಇಂದ್ರನಿಗಾಗಿ ಏಕಾದಶಕಪಾಲ ಪುರೋಡಾಶಯಾಗ ವನ್ನನುಷ್ಠಿಸಬೇಕು. |

---

ಅನ್ನದಿಂದ ಉಂಟಾಗುತ್ತದೆ. ಈ ಚರು ಹವಿಸ್ಸಿನಿಂದ ತೃಪ್ತನಾದ ಇಂದ್ರನು ಪಶುಗಳ ಉತ್ಪತ್ತಿಗೆ ಕಾರಣವಾದ ಅನ್ನದಿಂದಲೇ ಇಂದ್ರಿಯಶಕ್ತಿಯನ್ನು ಉಂಟುಮಾಡಿ ಪಶುಗಳನ್ನು ಉಂಟು ಮಾಡುತ್ತಾನೆ. ಹೀಗಾಗಿ ಯಜಮಾನನು ಪಶುಮಂತನಾಗುತ್ತಾನೆ.

ಹಸುಗಳೇ ಮೊದಲಾದ ಪಶುಗಳ ಸಂಪತ್ತಿಯನ್ನು ಅಪೇಕ್ಷಿಸುವವನು ಇಂದ್ರಿಯಾವಂತನಾದ ಇಂದ್ರನಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು.

ಇಂದ್ರಿಯಂ ವೈ ಪಶವ ಇಂದ್ರಮೇವಾಂದ್ರಿಯಾ-

ವಂತಗ್ಗ್ಂ ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮಾ

[....ಸಃ (೧) ] ಇಂದ್ರಿಯಂ ಪಶೂನ್ಪ್ರಯಚ್ಛತಿ

ಪಶುಮಾನೇವ ಭವತೀಂದ್ರಾಯ ಘರ್ಮವತೇ

---

ಇಂದ್ರಿಯಮ್ । ವೈ । ಪಶವಃ । ಇಂದ್ರಮ್ । ಏವ । ಇಂದ್ರಿಯಾವಂತಮಿತೀಂದ್ರಿಯ-ವಂತಮ್ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮೈ । ಇಂದ್ರಿಯಮ್ । ಪಶೂನ್ । ಪ್ರೇತಿ । ಯಚ್ಛತಿ । ಪಶುಮಾನಿತಿ ಪಶು-ಮಾನ್ । ಏವ । ಭವತಿ । **ಇಂದ್ರಾಯ** । ಘರ್ಮವತ ಇತಿ ಘರ್ಮ-ವತೇ ।

---

| | |
|---|---|
| ಪಶವಃ ಇಂದ್ರಿಯಮ್ ವೈ | ಪಶುಗಳೇ ಇಂದ್ರಿಯಶಕ್ತಿಗೆ ಕಾರಣಗಳಲ್ಲವೇ ! |
| ಇಂದ್ರಿಯಾವಂತಮ್ ಇಂದ್ರಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದಿಂದ ಯಜಮಾನನು ಇಂದ್ರಿಯಾವಂತನಾದ ಇಂದ್ರನಿಗೆ ಅವನದಾದ ಭಾಗವನ್ನು ಕೊಟ್ಟು, ಸೇವಿಸುತ್ತಾನೆ. |
| ಸಃ ಏವ ಅಸ್ಮೈ ಇಂದ್ರಿಯಮ್ ಪಶೂನ್ ಪ್ರಯಚ್ಛತಿ | ಆ ಇಂದ್ರಿಯಾವಂತನಾದ ಇಂದ್ರನೇ ಈ ಯಜಮಾನನಿಗೆ ಇಂದ್ರಿಯಶಕ್ತಿಗಳನ್ನೂ ಅದಕ್ಕೆ ಕಾರಣವಾದ ಪಶುಗಳನ್ನೂ ಕೊಡುತ್ತಾನೆ. |
| ಪಶುಮಾನ್ ಏವ ಭವತಿ | ಯಜಮಾನನು ಗವಾದಿಪಶುಗಳುಳ್ಳವನಾಗುತ್ತಾನೆ. |

---

ಪಶುಗಳು ಕ್ಷೀರಘೃತಾದಿಗಳಿಂದ ಇಂದ್ರಿಯಶಕ್ತಿಯನ್ನು ಕೊಡುತ್ತವೆ. ಇಂದ್ರನು ಇಂದ್ರಿಯ ಶಕ್ತಿಗೆ ಅಧಿಪತಿಯಾಗಿರುತ್ತಾನೆ. ಈ ಯಾಗದಿಂದ ಯಜಮಾನನು ಇಂದ್ರಿಯಾವಂತನಾದ ಇಂದ್ರನನ್ನು ಸಂತೋಷಪಡಿಸುತ್ತಾನೆ. ಆ ಇಂದ್ರನು ಈ ಯಜಮಾನನಿಗೆ ಇಂದ್ರಿಯ ಶಕ್ತಿಯನ್ನೂ ಪಶುಗಳನ್ನೂ ಕೊಡುತ್ತಾನೆ. ಯಜಮಾನನು ಪಶುಮಂತನಾಗುತ್ತಾನೆ.

ಪುರೋಡಾಶಮೇಕಾದಶಕಪಾಲಂ ನಿರ್ವಪೇದ್ಬ್ರಹ್ಮವರ್ಚಸ

ಕಾಮೋ ಬ್ರಹ್ಮವರ್ಚಸಂ ವೈ ಘರ್ಮ ಇಂದ್ರಮೇವ

ಘರ್ಮವಂತಗ್ಂ ಸ್ವೇನ ಭಾಗಧೇಯೇನೋಪಧಾವತಿ

ಸ ಏವಾಸ್ಮಿನ್ಬ್ರಹ್ಮವರ್ಚಸಂ ದಧಾತಿ

---

ಪುರೋಡಾಶಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ । ನಿರಿತಿ । ವಪೇತ್ । ಬ್ರಹ್ಮವರ್ಚಸಕಾಮ ಇತಿ ಬ್ರಹ್ಮವರ್ಚಸ-ಕಾಮಃ। ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್। ವೈ। ಘರ್ಮಃ। ಇಂದ್ರಮ್ । ಏವ। ಘರ್ಮವಂತಮಿತಿ ಘರ್ಮ-ವಂತಮ್ । ಸ್ವೇನ। ಭಾಗಧೇಯೇನೇತಿ ಭಾಗ-ಧೇಯೇನ। ಉಪೇತಿ। ಧಾವತಿ। ಸಃ। ಏವ। ಅಸ್ಮಿನ್ನ್। ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್। ದಧಾತಿ।

---

**ಬ್ರಹ್ಮವರ್ಚಸಕಾಮನಿಗೆ ವಿಹಿತವಾದ ಇಷ್ಟಿ; ಅರ್ಥವಾದ**

| | |
|---|---|
| ಬ್ರಹ್ಮವರ್ಚಸಕಾಮಃ | ವೇದಶಾಸ್ತ್ರಾಧ್ಯಯನಗಳಿಂದ ಉಂಟಾಗುವ ತೇಜಸ್ಸನ್ನು ಬಯಸುವವನು |
| ಘರ್ಮವತೇ ಇಂದ್ರಾಯ ಪುರೋಡಾಶಮ್ ಏಕಾದಶ ಕಪಾಲಮ್ ನಿರ್ವಪೇತ್ | ಘರ್ಮವಂತನಾದ ಇಂದ್ರನಿಗಾಗಿ ಏಕಾದಶ ಕಪಾಲಪುರೋಡಾಶಯಾಗವನ್ನು ಮಾಡಬೇಕು. |
| ಬ್ರಹ್ಮವರ್ಚಸಮ್ ವೈ ಘರ್ಮಃ | ಬ್ರಹ್ಮವರ್ಚಸವೇ ಘರ್ಮರೂಪವಷ್ಟೆ. |
| ಘರ್ಮವಂತಮ್ ಇಂದ್ರಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದಿಂದ ಯಜಮಾನನು ಘರ್ಮವಂತನಾದ ಇಂದ್ರದೇವನಿಗಾಗಿ ಅವನ ಭಾಗವನ್ನು ಸಮರ್ಪಿಸಿ, ಸೇವಿಸುತ್ತಾನೆ. |
| ಸಃ ಏವ ಅಸ್ಮಿನ್ ಬ್ರಹ್ಮವರ್ಚಸಮ್ ದಧಾತಿ | ಘರ್ಮವಂತನಾದ ಇಂದ್ರನು ಯಜಮಾನನಲ್ಲಿ ಬ್ರಹ್ಮವರ್ಚಸವನ್ನು ನೆಲೆಗೊಳಿಸುತ್ತಾನೆ. |

---

ಬ್ರಹ್ಮವರ್ಚಸಕಾಮನು ಘರ್ಮವಂತನಾದ ಇಂದ್ರನಿಗಾಗಿ ಏಕಾದಶಕಪಾಲ

ಬ್ರಹ್ಮವರ್ಚಸ್ಯೇವ ಭವತೀಂದ್ರಾಯಾರ್ಕವತೇ ಪುರೋ

ಡಾಶಮೇಕಾದಶಕಪಾಲಂ ನಿರ್ವಪೇದನ್ನಕಾಮೋಽರ್ಕೋ

ವೈ ದೇವಾನಾಮನ್ನಮಿಂದ್ರಮೇವಾರ್ಕವಂತಗ್ಂ

---

ಬ್ರಹ್ಮವರ್ಚಸೀತಿ ಬ್ರಹ್ಮ–ವರ್ಚಸೀ। ಏವ। ಭವತಿ। ಇಂದ್ರಾಯ। ಅರ್ಕವತ ಇತ್ಯರ್ಕ–ವತೇ। ಪುರೋಡಾಶವ್। ಏಕಾದಶಕಪಾಲಮಿತ್ಯೇಕಾದಶ–ಕಪಾಲವ್। ನಿರಿತಿ। ವಪೇತ್। ಅನ್ನಕಾಮ ಇತ್ಯನ್ನ – ಕಾಮಃ। ಅರ್ಕಃ। ವೈ। ದೇವಾನಾವ್। ಅನ್ನವ್। ಇಂದ್ರವ್। ಏವ। ಅರ್ಕವಂತಮಿತ್ಯರ್ಕ–ವಂತವ್।

---

| | |
|---|---|
| ಬ್ರಹ್ಮವರ್ಚಸೀ ಏವ ಭವತಿ | ಯಜಮಾನನು ವೇದಶಾಸ್ತ್ರಾಧ್ಯಯನ ಸಂಪನ್ನನೇ ಆಗುತ್ತಾನೆ. |

**ಅನ್ನಕಾಮನಿಗೆ ವಿಹಿತವಾದ ಇಷ್ಟಿ; ಅರ್ಥವಾದ**

| | |
|---|---|
| ಅನ್ನಕಾಮಃ | ಅನ್ನವನ್ನು ಇಚ್ಛಿಸುವವನು |
| ಅರ್ಕವತೇ ಇಂದ್ರಾಯ ಪುರೋಡಾಶವ್ ಏಕಾದಶಕಪಾಲವ್ ನಿರ್ವಪೇತ್ | ಅರ್ಕವಂತನಾದ ಇಂದ್ರದೇವನನ್ನು ಉದ್ದೇಶಿಸಿ, ಏಕಾದಶಕಪಾಲಪುರೋಡಾಶ ಯಾಗವನ್ನು ಮಾಡಬೇಕು. |
| ಅರ್ಕಃ ವೈ ದೇವಾನಾವ್ ಅನ್ನವ್ | ಜನರು ಆದರದಿಂದ ಪ್ರಾರ್ಥಿಸುವ ಅನ್ನವೇ ಅರ್ಕಶಬ್ದವಾಚ್ಯವಾಗಿದೆ. |
| ಅರ್ಕವಂತವ್ ಇಂದ್ರವ್ ಏವ | [ಯಜಮಾನನು ಈ ಯಾಗದಿಂದ] ಅರ್ಕವಂತನಾದ ಇಂದ್ರನನ್ನು |

---

ಪುರೋಡಾಶಯಾಗವನ್ನು ಮಾಡಬೇಕು. ಬ್ರಹ್ಮವರ್ಚಸವು ತೇಜಸ್ಸೇ/ಘರ್ಮವೇ ಆಗಿದೆ. ಈ ಯಾಗದಿಂದ ಘರ್ಮವಂತನಾದ ಇಂದ್ರನು ತನ್ನ ಭಾಗವನ್ನು ಪಡೆದು ತೃಪ್ತನಾಗಿ ಯಜಮಾನನಿಗೆ ಬ್ರಹ್ಮವರ್ಚಸವನ್ನು ಕೊಡುತ್ತಾನೆ. ಯಜಮಾನನು ಬ್ರಹ್ಮವರ್ಚಸಿಯಾಗುತ್ತಾನೆ.

ಸ್ವೇನ ಭಾಗಧೇಯೇನೋಪ [....ಧೇಯೇನ (೨)

ಉಪಧಾವತಿ] ಧಾವತಿ ಸ ಏವಾಸ್ಮಾ ಅನ್ನಂ ಪ್ರಯಚ್ಛತ್ಯ

ನ್ನಾದ ಏವ ಭವತೀಂದ್ರಾಯ ಘರ್ಮವತೇ

---

ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮೈ । ಅನ್ನಮ್ । ಪ್ರೇತಿ । ಯಚ್ಛತಿ । ಅನ್ನಾದ ಇತ್ಯನ್ನ – ಅದಃ । ಏವ । ಭವತಿ । ಇಂದ್ರಾಯ । ಘರ್ಮವತ ಇತಿ ಘರ್ಮ–ವತೇ ।

---

| | |
|---|---|
| ಸ್ವೇನ ಭಾಗಧೇಯೇನ ಉಪಧಾವತಿ | ಸ್ವೀಯಭಾಗಪ್ರದಾನದಿಂದ ಸೇವಿಸುತ್ತಾನೆ. |
| ಸಃ ಏವ ಅಸ್ಮೈ ಅನ್ನಮ್ ಪ್ರಯಚ್ಛತಿ | ತೃಪ್ತನಾದ ಇಂದ್ರದೇವನು ಈ ಯಜಮಾನನಿಗೆ ಅನ್ನವನ್ನು ಕೊಡುತ್ತಾನೆ. |
| ಅನ್ನಾದಃ ಏವ ಭವತಿ | ಅನ್ನವುಳ್ಳವನೂ ಅನ್ನವನ್ನು ತಿನ್ನುವ ಸಾಮರ್ಥ್ಯವಂತನೂ ಆಗುತ್ತಾನೆ. |

**ಐಶ್ವರ್ಯವನ್ನು ಬಯಸುವವನಿಗೆ ವಿಹಿತವಾದ ಮೂರು ಹವಿಸ್ಸುಗಳುಳ್ಳ ಇಷ್ಟಿ; ಪ್ರಶಂಸೆ**

| | |
|---|---|
| ಭೂತಿಕಾಮಃ | ಐಶ್ವರ್ಯವನ್ನು ಅಪೇಕ್ಷಿಸುವವನು |
| ಇಂದ್ರಾಯ ಘರ್ಮವತೇ | ಘರ್ಮವಂತನಾದ ಇಂದ್ರನಿಗಾಗಿ |

---

ಅನ್ನವು ಬೇಕೆನ್ನುವವನು ಅರ್ಕವಂತನಾದ ಇಂದ್ರನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. ದೇವತೆಗಳ ಅನ್ನವು ಹಸಿದವರು ಅಪೇಕ್ಷಿಸುವ ಸುತ್ಯರ್ಹವಾದ ವಸ್ತುವಾಗಿದೆ. ಈ ಯಾಗದಿಂದ ತೃಪ್ತನಾದ ಅರ್ಕವಂತ ಇಂದ್ರದೇವನು ಯಜಮಾನನನ್ನು ಅನ್ನಸಮೃದ್ಧಿಯುಳ್ಳವನನ್ನಾಗಿಯೂ, ಅನ್ನವನ್ನು ತಿನ್ನಬಲ್ಲ ಶಕ್ತಿವಂತನನ್ನಾಗಿಯೂ ಮಾಡುತ್ತಾನೆ.

ಪುರೋಡಾಶಮೇಕಾದಶಕಪಾಲಂ ನಿರ್ವಪೇದಿಂದ್ರಾ-

ಯೇಂದ್ರಿಯಾವತ ಇಂದ್ರಾಯಾರ್ಕವತೇ ಭೂತಿಕಾಮೋ

ಯದಿಂದ್ರಾಯ ಘರ್ಮವತೇ ನಿರ್ವಪತಿ

---

ಪುರೋಡಾಶಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ । ನಿರಿತಿ । ವಪೇತ್ । **ಇಂದ್ರಾಯ** । ಇಂದ್ರಿಯಾವತ ಇತೀಂದ್ರಿಯ-ವತೇ । **ಇಂದ್ರಾಯ** । ಅರ್ಕವತ ಇತ್ಯರ್ಕ-ವತೇ । ಭೂತಿಕಾಮ ಇತಿ ಭೂತಿ-ಕಾಮಃ । ಯತ್ । ಇಂದ್ರಾಯ । ಘರ್ಮವತ ಇತಿ ಘರ್ಮ-ವತೇ । ನಿರ್ವಪತೀತಿ ನಿಃ-ವಪತಿ ।

---

| | |
|---|---|
| ಏಕಾದಶಕಪಾಲಮ್ ನಿರ್ವಪೇತ್ | ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| ಇಂದ್ರಿಯಾವತೇ ಇಂದ್ರಾಯ | ಇಂದ್ರಿಯಾವಂತನಾದ ಇಂದ್ರನಿಗಾಗಿ |
| ಏಕಾದಶಕಪಾಲಮ್ ಪುರೋಡಾಶಮ್ ನಿರ್ವಪೇತ್ | ಏಕಾದಶಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. |
| ಅರ್ಕವತೇ ಇಂದ್ರಾಯ ಏಕಾದಶಕಪಾಲಮ್ ಪುರೋಡಾಶಮ್ ನಿರ್ವಪೇತ್ | ಅರ್ಕವಂತನಾದ ಇಂದ್ರನಿಗಾಗಿ ಏಕಾದಶ ಕಪಾಲ ಪುರೋಡಾಶಯಾಗವನ್ನು ಮಾಡ ಬೇಕು. |
| ಇಂದ್ರಾಯ ಘರ್ಮವತೇ ನಿರ್ವಪತಿ [ಇತಿ] ಯತ್ | ಘರ್ಮವಂತನಾದ ಇಂದ್ರನಿಗಾಗಿ ಯಾಗ ಮಾಡುವುದೆಂಬುದು ಯಾವುದುಂಟೋ |

---

ಐಶ್ವರ್ಯವನ್ನು ಬಯಸುವವನು ಘರ್ಮವಂತನಾದ ಇಂದ್ರನಿಗಾಗಿ ಏಕಾದಶ ಕಪಾಲಪುರೋಡಾಶಯಾಗವನ್ನೂ, ಇಂದ್ರಿಯಾವಂತನಾದ ಇಂದ್ರನಿಗಾಗಿ ಹಾಗೂ ಅರ್ಕವಂತನಾದ ಇಂದ್ರನಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನು ಮಾಡ ಬೇಕು. ಘರ್ಮವಂತನಾದ ಇಂದ್ರನ ಅನುಗ್ರಹದಿಂದ ಯಜಮಾನನು ಸರ್ವಾಂಗಗಳಲ್ಲಿ

ಶಿರ ಏವಾಸ್ಯ ತೇನ ಕರೋತಿ ಯದಿಂದ್ರಾಯೇಂದ್ರಿ

ಯಾವತ ಆತ್ಮಾನಮೇವಾಸ್ಯ ತೇನ ಕರೋತಿ ಯದಿಂದ್ರಾ

ಯಾರ್ಕವತೇ ಭೂತ ಏವಾನ್ನಾದ್ಯೇ ಪ್ರತಿತಿಷ್ಠತಿ

---

ಶಿರಃ । ಏವ । ಅಸ್ಯ । ತೇನ । ಕರೋತಿ । ಯತ್ । ಇಂದ್ರಾಯ । ಇಂದ್ರಿಯಾವತ ಇತೀಂದ್ರಿಯ–ವತೇ । ಆತ್ಮಾನಮ್ । ಏವ । ಅಸ್ಯ । ತೇನ । ಕರೋತಿ । ಯತ್ । ಇಂದ್ರಾಯ । ಅರ್ಕವತ ಇತ್ಯರ್ಕ–ವತೇ । ಭೂತಃ । ಏವ । ಅನ್ನಾದ್ಯ ಇತ್ಯನ್ನ–ಅದ್ಯೇ । ಪ್ರತೀತಿ । ತಿಷ್ಠತಿ ।

---

| | |
|---|---|
| ಅಸ್ಯ ಶಿರಃ ಏವ ತೇನ ಕರೋತಿ | [ಆದರಿಂದ] ಇಂದ್ರನು ಯಜಮಾನನನ್ನು ತಲೆಯಂತೆ ಶ್ರೇಷ್ಠನನ್ನಾಗಿ ಮಾಡುತ್ತಾನೆ. |
| ಯತ್ ಇಂದ್ರಿಯಾವತೇ ಇಂದ್ರಾಯ [ನಿರ್ವಪತಿ] | ಇಂದ್ರಿಯಾವಂತನಾದ ಇಂದ್ರನಿಗಾಗಿ ಯಾಗ ಮಾಡುವುದರಿಂದ |
| ಅಸ್ಯ ಆತ್ಮಾನಮ್ ಏವ ತೇನ ಕರೋತಿ | ತುಷ್ಟನಾದ ಇಂದ್ರನು ಈ ಯಜಮಾನನ ಶರೀರವನ್ನು ಪುಷ್ಟವನ್ನಾಗಿ ಮಾಡುತ್ತಾನೆ. |
| ಯತ್ ಇಂದ್ರಾಯ ಅರ್ಕವತೇ [ನಿರ್ವಪತಿ] | ಅರ್ಕವಂತನಾದ ಇಂದ್ರನನ್ನು ಉದ್ದೇಶಿಸಿ ಯಾಗ ಮಾಡುವುದರಿಂದ |
| ಅನ್ನಾದ್ಯೇ ಭೂತ ಏವ ಪ್ರತಿತಿಷ್ಠತಿ | ಯಜಮಾನನು ಧನಿಕನಾಗಿ ಅನ್ನಸಮೃದ್ಧಿಯಲ್ಲಿ ಸ್ಥಿರವಾಗಿರುತ್ತಾನೆ. |

---

ಶ್ರೇಷ್ಠವಾದ ತಲೆಯಂತೆ ತಲೆಯೆತ್ತಿನಿಲ್ಲುವಂತಾಗುತ್ತದೆ. ಇಂದ್ರಿಯಾವಂತನಾದ ಇಂದ್ರನ ಅನುಗ್ರಹದಿಂದ ಯಜಮಾನನ ಶರೀರವು ಪುಷ್ಟವಾಗಿಯೂ, ಬಲಿಷ್ಠವಾಗಿಯೂ ಆಗುತ್ತದೆ. ಅರ್ಕವಂತನಾದ ಇಂದ್ರನಿಗಾಗಿ ಮಾಡುವ ಯಾಗದ ಪ್ರಭಾವದಿಂದ

ಭವತ್ಯೇವೇಂದ್ರಾಯಾಗ್ಂಹೋಮುಚೇ

[....ಭವತ್ಯೇವೇಂದ್ರಾಯ (೩) ಅಗ್ಂಹೋಮುಚೇ]

ಪುರೋಡಾಶಮೇಕಾದಶಕಪಾಲಂ ನಿರ್ವಪೇದ್ಯಃ

---

ಭವತಿ । ಏವ । ಇಂದ್ರಾಯ । ಅಗ್ಂಹೋಮುಚ ಇತ್ಯಗ್ಂಹಃ-ಮುಚೇ ।

ಪುರೋಡಾಶಮ್ । ಏಕಾದಶಕಪಾಲಮಿತ್ಯೇಕಾದಶ -ಕಪಾಲಮ್ । ನಿರಿತಿ । ವಪೇತ್ ।

ಯಃ ।

---

| | |
|---|---|
| ಭವತಿ ಏವ | ದೇವತಾನುಗ್ರಹದಿಂದ ಐಶ್ವರ್ಯವಂತನಾಗಿಯೇ ಇರುತ್ತಾನೆ. |

**ಪಾಪಗ್ರಸ್ತನಾದವನಿಗೆ ವಿಹಿತವಾದ ಇಷ್ಟಿ; ಅರ್ಥವಾದ**

| | |
|---|---|
| ಯಃ ಪಾಪ್ಮನಾ ಗೃಹೀತಃ ಸ್ಯಾತ್ [ಸಃ] | ಯಾವನು ಪಾಪದಿಂದ ಗ್ರಸ್ತನಾಗಿರುತ್ತಾನೆಯೋ ಅವನು |
| ಇಂದ್ರಾಯ ಅಗ್ಂಹೋಮುಚೇ ಏಕಾದಶಕಪಾಲಮ್ ಪುರೋಡಾಶಮ್ ನಿರ್ವಪೇತ್ | ಪಾಪಗಳನ್ನು ಹೋಗಲಾಡಿಸುವ ಇಂದ್ರನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. |

---

ಯಜಮಾನನು ಧನಿಕನಾಗಿ ಅನ್ನಸಮೃದ್ಧಿಯನ್ನು ಪಡೆಯುತ್ತಾನೆ. ಹೀಗೆ ಸರ್ವವಿಧದಲ್ಲಿಯೂ ಶ್ರೀಮಂತನಾಗುತ್ತಾನೆ.

ಯಾವನು ನಿಷಿದ್ಧವಾದ ಕಾರ್ಯಗಳನ್ನು ಮಾಡುವುದರಿಂದ ಉಂಟಾಗುವ ಪಾಪದಿಂದ ಗ್ರಸ್ತನಾಗಿರುತ್ತಾನೆಯೋ, ಅವನು ಪಾಪಪರಿಹಾರಾರ್ಥವಾಗಿ ಅಂಹೋಮುಚನಾದ ಇಂದ್ರನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು.

ಪಾಪ್ಮನಾ ಗೃಹೀತಃ ಸ್ಯಾತ್ಪಾಪ್ಮಾ ವಾ ಅಗ್ಂಹ ಇಂದ್ರಮೇ

ವಾಗ್ಂಹೋಮುಚಗ್ಂ ಸ್ವೇನ ಭಾಗಧೇಯೇನೋಪ

ಧಾವತಿ ಸ ಏವೈನಂ ಪಾಪ್ಮನೋऽಗ್ಂಹಸೋ

---

ಪಾಪ್ಮನಾ । ಗೃಹೀತಃ । ಸ್ಯಾತ್ । ಪಾಪ್ಮಾ । ವೈ । ಅಗ್ಂಹಃ । ಇಂದ್ರಮ್ । ಏವ । ಅಗ್ಂಹೋಮುಚಮಿತ್ಯಗ್ಂಹಃ – ಮುಚಮ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಏನಮ್ । ಪಾಪ್ಮನಃ । ಅಗ್ಂಹಸಃ ।

---

| | |
|---|---|
| ಪಾಪ್ಮಾ ವೈ ಅಗ್ಂಹಃ | ಪಾಪವೇ ಅಗ್ಂಹಃಪದವಾಚ್ಯವಾಗಿದೆ. |
| ಇಂದ್ರಮ್ ಏವ ಅಗ್ಂ ಹೋಮುಚಮ್ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದಿಂದ ಯಜಮಾನನು ಅಗ್ಂ ಹೋಮುಚನಾದ ಇಂದ್ರನನ್ನು ತಕ್ಕ ಭಾಗವನ್ನಿತ್ತು ಸೇವಿಸುತ್ತಾನೆ. |
| ಸಃ ಏವ ಏನಮ್ | ಆ ಇಂದ್ರದೇವನೇ ಈ ಯಜಮಾನನ್ನು |
| ಪಾಪ್ಮನಃ ಅಗ್ಂಹಸಃ | ಅತ್ಯಧಿಕವಾದ ಪಾಪದಿಂದ |

---

ಪಾಪವೇ ಅಂಹಃಪದವಾಚ್ಯವಾಗಿದೆ. ಈ ಯಾಗದಿಂದ ಸುಪ್ರೀತನಾದ ಪಾಪಪರಿಹಾರಕನಾದ ಇಂದ್ರನು ಯಜಮಾನನ ಪಾಪವನ್ನು ಪರಿಹಾರ ಮಾಡುತ್ತಾನೆ.

ಮುಂಚತೀಂದ್ರಾಯ ವೈಮೃಧಾಯ ಪುರೋಡಾಶ

ಮೇಕಾದಶಕಪಾಲಂ ನಿರ್ವಪೇದ್ಯಂ ಮೃಧೋಽಭಿ

ಪ್ರವೇಪೇರನ್ರಾಷ್ಟ್ರಾಣಿ ವಾಽಭಿ

---

ಮುಂಚತಿ । **ಇಂದ್ರಾಯ** । ವೈಮೃಧಾಯ । ಪುರೋಡಾಶಮ್ । ಏಕಾದಶಕಪಾಲ

ಮಿತ್ಯೇಕಾದಶ–ಕಪಾಲಮ್ । ನಿರಿತಿ । ವಪೇತ್ । ಯಮ್ । ಮೃಧಃ । ಅಭೀತಿ ।

ಪ್ರವೇಪೇರನ್ನಿತಿ ಪ್ರ–ವೇಪೇರನ್ । ರಾಷ್ಟ್ರಾಣಿ । ವಾ । ಅಭೀತಿ ।

---

ಮುಂಚತಿ — ಬಿಡಿಸುತ್ತಾನೆ.

**ಶತ್ರುಗಳ ಆಕ್ರಮಣಕ್ಕೆ ಒಳಗಾದವನಿಗೆ ವಿಹಿತವಾದ ವೈಮೃಧೇಷ್ಟಿ; ಅದರ ಪ್ರಶಂಸೆ**

| | |
|---|---|
| ಯಮ್ ಮೃಧಃ ಅಭಿ ಪ್ರವೇಪೇರನ್ | ಯಾವನನ್ನು ಶತ್ರುಗಳು ಸುತ್ತಿಕೊಂಡು ಭಯ ಪಡಿಸುತ್ತಾರೆಯೋ |
| ರಾಷ್ಟ್ರಾಣಿ ವಾ ಅಭಿ ಸಮಿಯುಃ | ದೇಶಭಾಗಗಳನ್ನು ಆಕ್ರಮಿಸಲು ಒಟ್ಟಾಗುತ್ತಾರೆಯೋ/ಪ್ರಜೆಗಳು ಒಟ್ಟುಗೂಡಿ ದಂಗೆಯೇಳುತ್ತಾರೆಯೋ ಅವನು |
| [ಸಃ] ಇಂದ್ರಾಯ ವೈಮೃಧಾಯ ಪುರೋಡಾಶಮ್ ಏಕಾದಶ ಕಪಾಲಮ್ ನಿರ್ವಪೇತ್ | ಶತ್ರುನಾಶಕನಾದ ಇಂದ್ರನಿಗಾಗಿ ಏಕಾದಶ ಕಪಾಲಪುರೋಡಾಶಯಾಗವನ್ನು ಮಾಡಬೇಕು. |

---

ಯಾವನನ್ನು ಶತ್ರುಗಳು ಭಯಪಡಿಸುತ್ತಿರುತ್ತಾರೆಯೋ ಅಥವಾ ಯಾವನ ರಾಷ್ಟ್ರವನ್ನು ಶತ್ರುಗಳು ಆಕ್ರಮಿಸಲು ಒಟ್ಟುಗೂಡಿರುತ್ತಾರೆಯೋ / ರಾಷ್ಟ್ರದ ಪ್ರಜೆಗಳು ದಂಗೆ ಏಳುತ್ತಿದ್ದಾರೆಯೋ ಅವನು ವೈಮೃಧ [ಶತ್ರುನಾಶಕ]ನಾದ ಇಂದ್ರನಿಗಾಗಿ ಏಕಾದಶ ಕಪಾಲಪುರೋಡಾಶಯಾಗವನ್ನು ಮಾಡಬೇಕು. ಇದರಿಂದ ತನ್ನ ಭಾಗವನ್ನು ಪಡೆದು

ಸಮಿಯುರಿಂದ್ರಮೇವ ವೈಮೃಧಗ್‍ಂ ಸ್ವೇನ ಭಾಗಧೇಯೇ
ನೋಪಧಾವತಿ ಸ ಏವಾಸ್ಮಾನ್ಮೃಧೋಽಪ [...ಮೃಧಃ (೪)
ಅಪಹಂತೀಂದ್ರಾಯ] ಹಂತೀಂದ್ರಾಯ ತ್ರಾತ್ರೇ ಪುರೋಡಾಶ
ಮೇಕಾದಶಕಪಾಲಂ ನಿರ್ವಪೇದ್ಬದ್ಧೋ ವಾ ಪರಿಯತ್ತೋ

---

ಸಮಿಯುರಿತಿ ಸಮ್–ಇಯುಃ। ಇಂದ್ರಮ್। ಏವ। ವೈ ಮೃಧಮ್। ಸ್ವೇನ। ಭಾಗ–ಧೇಯೇನೇತಿ ಭಾಗ–ಧೇಯೇನ। ಉಪೇತಿ। ಧಾವತಿ। ಸಃ। ಏವ। ಅಸ್ಮಾತ್। ಮೃಧಃ। ಅಪೇತಿ। ಹಂತಿ। ಇಂದ್ರಾಯ। ತ್ರಾತ್ರೇ। ಪುರೋಡಾಶಮ್। ಏಕಾದಶಕಪಾಲ ಮಿತ್ಯೇಕಾದಶ–ಕಪಾಲಮ್। ನಿರಿತಿ। ವಪೇತ್। ಬದ್ಧಃ। ವಾ। ಪರಿಯತ್ತ ಇತಿ ಪರಿ–ಯತ್ತಃ।

---

| | |
|---|---|
| ಇಂದ್ರಮ್ ಏವ ವೈಮೃಧಮ್ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದಿಂದ ಯಜಮಾನನು ಶತ್ರುನಾಶಕನಾದ ಇಂದ್ರನನ್ನು ಹವಿರ್ಭಾಗಪ್ರದಾನದಿಂದ ಸೇವಿಸುತ್ತಾನೆ. |
| ಸಃ ಏವ ಅಸ್ಮಾತ್ ಮೃಧಃ ಅಪಹಂತಿ | ಶತ್ರುನಾಶಕನಾದ ಇಂದ್ರನೇ ಶತ್ರುನಾಶವನ್ನು ಮಾಡಿ ಯಜಮಾನನನ್ನು ರಕ್ಷಿಸುತ್ತಾನೆ. |

**ಬಂಧನದಲ್ಲಿ ಇರುವವನಿಗೆ ವಿಹಿತವಾದ ಇಷ್ಟಿ; ಪ್ರಶಂಸೆ**

| | |
|---|---|
| ಬದ್ಧಃ ವಾ ಪರಿಯತ್ತಃ ವಾ | ಬೇಡಿ ಹಾಕಲ್ಪಟ್ಟವನಾಗಲೀ, ಶತ್ರುಗಳಿಂದ ಗೃಹಬಂಧನಕ್ಕೆ ಒಳಗಾದವನಾಗಲೀ |
| ಇಂದ್ರಾಯ ತ್ರಾತ್ರೇ ಪುರೋಡಾಶಮ್ ಏಕಾದಶಕಪಾಲಮ್ ನಿರ್ವಪೇತ್ | ರಕ್ಷಕನಾದ ಇಂದ್ರನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. |

---

ಸುಪ್ರೀತನಾದ ಇಂದ್ರವೈಮೃಧನು ಶತ್ರುಗಳನ್ನು ನಾಶ ಮಾಡಿ ಯಜಮಾನನನ್ನು ರಕ್ಷಿಸುತ್ತಾನೆ.

ಬೇಡಿ ಹಾಕಿ ಬಂಧನದಲ್ಲಿ ಇಡಲ್ಪಟ್ಟವನು ಅಥವಾ ಗೃಹಬಂಧನಕ್ಕೆ ಒಳಗಾದವನು ತ್ರಾತಾರನಾದ ಇಂದ್ರನಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು.

ವೇಂದ್ರಮೇವ ತ್ರಾತಾರಗ್‌ಂ ಸ್ವೇನ ಭಾಗಧೇಯೇನೋಪ

ಧಾವತಿ ಸ ಏವೈನಂ ತ್ರಾಯತ ಇಂದ್ರಾಯಾರ್ಕಾಶ್ವಮೇಧ

ವತೇ ಪುರೋಡಾಶಮೇಕಾದಶಕಪಾಲಂ ನಿರ್ವಪೇದ್ಯಂ

ಮಹಾಯಜ್ಞೋ ನೋಪನಮೇದೇತೇ

---

ವಾ। ಇಂದ್ರಮ್। ಏವ। ತ್ರಾತಾರಮ್। ಸ್ವೇನ। ಭಾಗಧೇಯೇನೇತಿ ಭಾಗ-ಧೇಯೇನ। ಉಪೇತಿ। ಧಾವತಿ। ಸಃ। ಏವ। ಏನಮ್। ತ್ರಾಯತೇ। ಇಂದ್ರಾಯ। ಅರ್ಕಾಶ್ವಮೇಧವತ ಇತ್ಯರ್ಕಾಶ್ವಮೇಧ-ವತೇ। ಪುರೋಡಾಶಮ್। ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್। ನಿರಿತಿ। ವಪೇತ್। ಯಮ್। ಮಹಾಯಜ್ಞ ಇತಿ ಮಹಾ-ಯಜ್ಞಃ। ನ। ಉಪನಮೇದಿತ್ಯುಪ-ನಮೇತ್। ಏತೇ ಇತಿ।

---

| | |
|---|---|
| ತ್ರಾತಾರಮ್ ಇಂದ್ರಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ತ್ರಾತಾರನಾದ ಇಂದ್ರನನ್ನು ಯಜಮಾನನು ಹವಿರ್ಭಾಗವನ್ನಿತ್ತು ತೃಪ್ತಿಪಡಿಸುತ್ತಾನೆ. |
| ಸಃ ಏವ ಏನಮ್ ತ್ರಾಯತೇ | ಆ ತ್ರಾತಾರನಾದ ಇಂದ್ರದೇವನೇ ಈ ಯಜಮಾನನನ್ನು ಬಂಧನದಿಂದ ಬಿಡಿಸಿ ರಕ್ಷಿಸುತ್ತಾನೆ. |

**ಅಶ್ವಮೇಧ-ರಾಜಸೂಯಾದಿ ಮಹಾಸೋಮಯಾಗಗಳು ಪ್ರಾಪ್ತವಾಗದವನು ಮಾಡಬೇಕಾದ ಇಷ್ಟಿ; ಪ್ರಶಂಸೆ.**

| | |
|---|---|
| ಯಮ್ ಮಹಾಯಜ್ಞಃ ನ ಉಪನಮೇತ್ | ಯಾವನನ್ನು ಅಶ್ವಮೇಧಾದಿಮಹಾಯಜ್ಞಗಳು ಹೊಂದುವುದಿಲ್ಲವೋ |
| [ಸಃ] ಅರ್ಕಾಶ್ವಮೇಧವತೇ ಇಂದ್ರಾಯ ಏಕಾದಶಕಪಾಲಮ್ ಪುರೋಡಾಶಮ್ ನಿರ್ವಪೇತ್ | [ಅವನು] *ಅಗ್ನಿ ಮತ್ತು *ಆದಿತ್ಯರಿಂದ ಯುಕ್ತನಾದ ಇಂದ್ರದೇವನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. |

---

* 'ಅರ್ಕೋ ವಾ ಏಷ ಯದಗ್ನಿಃ' ।
'ಅಸಾವಾದಿತ್ಯೋಽಶ್ವಮೇಧಃ।' ಎಂಬ ಶ್ರುತಿಯನ್ನನುಸರಿಸಿ ಈ ವಿವರಣೆ ಇದೆ.

ವೈ ಮಹಾಯಜ್ಞಸ್ಯಾಂತ್ಯೇ ತನೂ ಯದರ್ಕಾಶ್ವ

ಮೇಧಾವಿಂದ್ರಮೇವಾರ್ಕಾಶ್ವಮೇಧವಂತಗ್‌ಂ ಸ್ವೇನ

ಭಾಗಧೇಯೇನೋಪಧಾವತಿ

---

ವೈ। ಮಹಾಯಜ್ಞಸ್ಯೇತಿ ಮಹಾ–ಯಜ್ಞಸ್ಯ। ಅಂತ್ಯೇ ಇತಿ। ತನೂ ಇತಿ। ಯತ್। ಅರ್ಕಾಶ್ವ ಮೇಧಾವಿತ್ಯರ್ಕ–ಅಶ್ವಮೇಧೌ। ಇಂದ್ರಮ್। ಏವ। ಅರ್ಕಾಶ್ವಮೇಧವಂತಮಿತ್ಯರ್ಕಾ ಶ್ವಮೇಧ–ವಂತಮ್। ಸ್ವೇನ। ಭಾಗಧೇಯೇನೇತಿ ಭಾಗ–ಧೇಯೇನ। ಉಪೇತಿ। ಧಾವತಿ।

---

| | |
|---|---|
| ಯತ್ ಅರ್ಕಾಶ್ವಮೇಧೌ<br>ಏತೇ ವೈ ಮಹಾಯಜ್ಞಸ್ಯ<br>ಅಂತ್ಯೇ ತನೂ | ಅಗ್ನಿ ಹಾಗೂ ಆದಿತ್ಯ ಇವರು *ಮಹಾ ಯಜ್ಞದ *ಆದಿ ಮತ್ತು *ಕೊನೆಯ ಶರೀರಗಳು. |
| ಅರ್ಕಾಶ್ವಮೇಧವಂತಮ್<br>ಇಂದ್ರಮ್ ಏವ ಸ್ವೇನ<br>ಭಾಗಧೇಯೇನ ಉಪಧಾವತಿ | *ಅರ್ಕಾಶ್ವಮೇಧವಂತನಾದ ಇಂದ್ರನನ್ನು ಈ ಯಾಗದಿಂದ ಯಜಮಾನನು ಹವಿರ್ಭಾಗವನ್ನಿತ್ತು ಸೇವಿಸುತ್ತಾನೆ. |

---

ಇದರಿಂದ ಸುಪ್ರೀತನಾದ ಇಂದ್ರನು ಯಜಮಾನನನ್ನು ಬಂಧನದಿಂದ ಬಿಡಿಸಿ ರಕ್ಷಿಸುತ್ತಾನೆ.

ಕಾರಣಾಂತರಗಳಿಂದ ಮಹಾಯಜ್ಞಗಳನ್ನು ಅನುಷ್ಠಿಸಲಾರದವನು ಅರ್ಕಾಶ್ವಮೇಧ ವಂತನಾದ ಇಂದ್ರನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. ಅರ್ಕಾಶ್ವಮೇಧಗಳು ಮಹಾಯಜ್ಞದ ಕೊನೆಯ ವಿಕೃತಿಗಳಾಗಿವೆ. ಆದ್ಯಂತಗಳಾಗಿವೆ. ಈ ಯಾಗದಿಂದ ಸುಪ್ರೀತನಾದ ಅರ್ಕಾಶ್ವಮೇಧವಂತನಾದ ಇಂದ್ರದೇವನು

---

- ಮಹಾಯಜ್ಞ = ಸೋಮಯಾಗ.
- ಅಗ್ನಿಯು ಯಜ್ಞದ ಸಾಧನ. ಆದಿತ್ಯನು ಯಾಗದ ಫಲ. ಹೀಗಾಗಿ ಈ ಇಬ್ಬರೂ ಯಜ್ಞದ ಆದಿ ಹಾಗೂ ಅಂತ್ಯಶರೀರಗಳೆನಿಸಿದ್ದಾರೆ.
- ಅರ್ಕಾಶ್ವಮೇಧಗಳು ಮಹಾಕ್ರತುಗಳು. ಇವುಗಳಿಂದ ಆರಾಧಿಸಲ್ಪಡುವ ಇಂದ್ರನೂ ಅರ್ಕಾಶ್ವಮೇಧವಂತನೆನಿಸಿದ್ದಾನೆ.

ಸ ಏವಾಸ್ಮಾ ಅಂತತೋ ಮಹಾಯಜ್ಞಂ ಚ್ಯಾವಯತ್ಯುಪೈನಂ

ಮಹಾಯಜ್ಞೋ ನಮತಿ ||೩೯–7||

[ಇಂದ್ರಿಯಾವಂತಗ್ಂ ಸ್ವೇನ ಭಾಗಧೇಯೇನೋಪಧಾವತಿ ಸೋಽರ್ಕವಂತಗ್ಂ

ಸ್ವೇನ ಭಾಗಧೇಯೇನೈವೇಂದ್ರಾಯಾಸ್ಮಾನ್ಪ್ರಧೋಽಸ್ಮೈ ಸಪ್ತ ಚ ||]

---

ಸಃ | ಏವ | ಅಸ್ಮೈ | ಅಂತತಃ | ಮಹಾಯಜ್ಞಮಿತಿ ಮಹಾ–ಯಜ್ಞಮ್ | ಚ್ಯಾವಯತಿ |

ಉಪೇತಿ | ಏನಮ್ | ಮಹಾಯಜ್ಞ ಇತಿ ಮಹಾ–ಯಜ್ಞಃ | ನಮತಿ ||7||

---

| | |
|---|---|
| ಸಃ ಏವ ಮಹಾಯಜ್ಞಮ್ ಅಸ್ಮೈ ಅಂತತಃ ಚ್ಯಾವಯತಿ | ಆ ಇಂದ್ರನೇ ಯಜಮಾನನ ಸಮೀಪದಲ್ಲಿಯೇ ಮಹಾಯಜ್ಞವು ಇರುವಂತೆ ಮಾಡುತ್ತಾನೆ. |
| ಏನಮ್ ಮಹಾಯಜ್ಞಃ ಉಪನಮತಿ | ಈ ಯಜಮಾನನನ್ನು ಮಹಾಯಜ್ಞವು ಹೊಂದುತ್ತದೆ. |

---

ಮಹಾಯಜ್ಞವು ಸಮೀಪದಲ್ಲಿಯೇ ಇರುವಂತೆ ಮಾಡುತ್ತಾನೆ. ಆತನ ಅನುಗ್ರಹದಿಂದ ಯಜಮಾನನು ಮಹಾಯಜ್ಞವನ್ನು ಅನುಷ್ಠಿಸಲು ಸಮರ್ಥನಾಗುತ್ತಾನೆ.

* * *

# ಸಪ್ತಮಾನುವಾಕ ವಿಷಯಸಂಗ್ರಹ

**ಪಶ್ವರ್ಥೀ ನಿರ್ವಪೇದೈಂದ್ರಂ ಚರುಂ ಯದ್ವೇಂದ್ರಿಯಾವತೇ ।**
**ಪುರೋಡಾಶಂ ಬ್ರಹ್ಮತೇಜೋ ವಾಂಛನ್ ಘರ್ಮವತೇ ಚರೇತ್ ॥**

**ಅನ್ನಾರ್ಥ್ಯರ್ಕವತೇ ಕುರ್ಯಾದ್ಭೂತ್ಯರ್ಥೀ ತು ಹವಿಸ್ತ್ರಯಮ್ ॥**

**ಘರ್ಮೇಂದ್ರಿಯಾರ್ಕೈರ್ಯುಕ್ತೇಭ್ಯ ಇಂದ್ರೇಭ್ಯಸ್ತದ್ಯಥಾಕ್ರಮಮ್ ।**
**ಅಂಹೋಮುಚೇ ಪಾಪಘಾತೀ ವೈಮೃಧಾಯಾನ್ಯಪೀಡಿತಃ ।**
**ಬದ್ಧೋ ವಾ ಪರಿಯತ್ತೋ ವಾ ತ್ರಾತ್ರ ಇಂದ್ರಾಯ ನಿರ್ವಪೇತ್ ।**
**ಅರ್ಕಾಶ್ವಮೇಧಯುಕ್ತಾಯ ಮಹಾಯಜ್ಞೇಚ್ಛುರಾಚರೇತ್ ।**
**ಐಂದ್ರಚರ್ವಾದಯಃ ಪ್ರೋಕ್ತಾ ಅನುವಾಕೇಽತ್ರ ಸಪ್ತಮೇ ॥**
**ಇಂದ್ರಂ ವ ಇತ್ಯತ್ರ ಸರ್ವಸ್ತದರ್ಥ ಉಪವರ್ಣಿತಃ ॥**

ಪಶುಕಾಮನಾದವನಿಗೂ, ಬ್ರಹ್ಮತೇಜಸ್ಸನ್ನು ಬಯಸುವವನಿಗೂ, ಅನ್ನವನ್ನು ಇಚ್ಛಿಸುವವನಿಗೂ, ಐಶ್ವರ್ಯವನ್ನು ಅಪೇಕ್ಷಿಸುವವನಿಗೂ, ಪಾಪಗ್ರಸ್ತನಾದವನಿಗೂ, ಶತ್ರುಗಳಿಂದ ಪೀಡಿತನಾದವನಿಗೂ, ಬದ್ಧನಾದವನಿಗೂ, ಮಹಾಯಜ್ಞಗಳನ್ನು ಹೊಂದಲು ಬಯಸುವವನಿಗೂ ಇಷ್ಟಿಗಳು ಈ ಅನುವಾಕದಲ್ಲಿ ವಿಹಿತವಾಗಿವೆ.

**'ಇಂದ್ರಂ ವ' [ತೈ. ಸಂ. 1.6.12]** ಅನುವಾಕದಲ್ಲಿ ಮಂತ್ರಾರ್ಥಗಳು ವರ್ಣಿತವಾಗಿವೆ.

* * *

## ॥ ಅಷ್ಟಮೋಽನುವಾಕಃ ॥

ಇಂದ್ರಾಯಾನ್ವೃಜವೇ ಪುರೋಡಾಶಮೇಕಾದಶಕಪಾಲಂ

ನಿರ್ವಪೇದ್ಗ್ರಾಮಕಾಮ ಇಂದ್ರಮೇವಾನ್ವೃಜುಗ್ಗ್ಂ

ಸ್ವೇನ ಭಾಗಧೇಯೇನೋಪಧಾವತಿ

---

**ಇಂದ್ರಾಯ** । ಅನ್ವೃಜವ ಇತ್ಯನು–ಋಜವೇ । ಪುರೋಡಾಶಮ್ । ಏಕಾದಶಕಪಾಲ ಮಿತ್ಯೇಕಾದಶ–ಕಪಾಲಮ್ । ನಿರಿತಿ । ವಪೇತ್ । ಗ್ರಾಮಕಾಮ ಇತಿ ಗ್ರಾಮ–ಕಾಮಃ । ಇಂದ್ರಮ್ । ಏವ । ಅನ್ವೃಜುಮಿತ್ಯನು–ಋಜುಮ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

**ಗ್ರಾಮಕಾಮನಿಗೆ ವಿಹಿತವಾದ ಇಷ್ಟಿ; ಅರ್ಥವಾದ**

| | |
|---|---|
| ಗ್ರಾಮಕಾಮಃ | ಗ್ರಾಮಸ್ವಾಮಿಯಾಗಲುಬಯಸುವವನು |
| ಇಂದ್ರಾಯ ಅನ್ವೃಜವೇ ಪುರೋಡಾಶಮ್ ಏಕಾದಶ ಕಪಾಲಮ್ ನಿರ್ವಪೇತ್ | *ಅನ್ವೃಜುವಾದ ಇಂದ್ರನಿಗಾಗಿ ಏಕಾದಶ ಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| ಇಂದ್ರಮ್ ಏವ ಅನ್ವೃಜುಮ್ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದಿಂದ ಅನ್ವೃಜುವಾದ ಇಂದ್ರನನ್ನು ಹವಿರ್ಭಾಗವನ್ನಿತ್ತು ಸೇವಿಸುತ್ತಾನೆ. |

---

ಗ್ರಾಮಸ್ವಾಮಿಯಾಗಲುಬಯಸುವವನು ಅನ್ವೃಜುವಾದ ಇಂದ್ರನಿಗಾಗಿ ಏಕಾದಶ ಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಅನ್ವೃಜುವೆಂದರೆ ಅನುಕೂಲನೂ ಸರಳನೂ ಆಗಿರುವವನು. ಅಥವಾ ಬೇರೆಯುವರು ತನ್ನನ್ನು ಪ್ರೀತಿಸುವಂತೆ ಮಾಡಬಲ್ಲವನು.

---

* ಅನುಕೂಲನು, ಸರಳನು, ಬೇರೆಯವರನ್ನು ಪ್ರೀತಿಯುಳ್ಳವರನ್ನಾಗಿ ಮಾಡುವವನು.

ಸ ಏವಾಸ್ಮೈ ಸಜಾತಾನನುಕಾನ್ಕರೋತಿ ಗ್ರಾಮ್ಯೇವ

ಭವತೀಂದ್ರಾಣ್ಯೈ ಚರುಂ ನಿರ್ವಪೇದ್ಯಸ್ಯ

ಸೇನಾಽಸಗ್ಂಶಿತೇವ ಸ್ಯಾದಿಂದ್ರಾಣೀ ವೈ ಸೇನಾಯೈ

---

ಸಃ । ಏವ । ಅಸ್ಮೈ । ಸಜಾತಾನಿತಿ ಸ-ಜಾತಾನ್ । ಅನುಕಾನಿತ್ಯನು-ಕಾನ್ । ಕರೋತಿ । ಗ್ರಾಮೀ । ಏವ । ಭವತಿ । ಇಂದ್ರಾಣ್ಯೈ । ಚರುಮ್ । ನಿರಿತಿ । ವಪೇತ್ । ಯಸ್ಯ । ಸೇನಾ । ಅಸಗ್ಂಶಿತೇತ್ಯಸಮ್-ಶಿತಾ । ಇವ । ಸ್ಯಾತ್ । ಇಂದ್ರಾಣೀ । ವೈ । ಸೇನಾಯೈ ।

---

| | |
|---|---|
| ಸಃ ಏವ ಅಸ್ಮೈ ಸಜಾತಾನ್ ಅನುಕಾನ್ ಕರೋತಿ | ಆ ಇಂದ್ರನು ಜ್ಞಾತಿಭ್ರಾತ್ರಾದಿಗಳನ್ನು ಯಜಮಾನನಲ್ಲಿ ಪ್ರೀತಿಯುಳ್ಳವರನ್ನಾಗಿ ಮಾಡುತ್ತಾನೆ. |
| ಗ್ರಾಮೀ ಏವ ಭವತಿ | ಯಜಮಾನನು ಗ್ರಾಮಸ್ವಾಮಿಯೇ ಆಗುತ್ತಾನೆ. |

**ಸೇನೆಯನ್ನು ಸುಸಜ್ಜಿತವನ್ನಾಗಿ ಮಾಡಬಯಸುವವನಿಗೆ ವಿಹಿತವಾದ ಇಷ್ಟಿ; ಅದರ ಪ್ರಶಂಸೆ**

| | |
|---|---|
| ಯಸ್ಯ ಸೇನಾ ಅಸಗ್ಂಶಿತಾ ಇವ ಸ್ಯಾತ್ [ಸಃ] ಇಂದ್ರಾಣ್ಯೈ ಚರುಮ್ ನಿರ್ವಪೇತ್ | ಯಾವನ ಸೈನ್ಯವು ತೀಕ್ಷ್ಣವಾಗಿ ಯುದ್ಧ ಸಮರ್ಥವಾಗಿರುವಂತಿಲ್ಲವೋ ಅವನು ಇಂದ್ರಪತ್ನಿಯಾದ ಇಂದ್ರಾಣಿದೇವಿಗಾಗಿ ಚರುಯಾಗವನ್ನು ಮಾಡಬೇಕು. |
| ಇಂದ್ರಾಣೀ ವೈ ಸೇನಾಯೈ | ಇಂದ್ರಾಣಿಯೇ ಸೈನ್ಯಕ್ಕೆ |

---

ಇಂತಹ ಇಂದ್ರನು ಯಜಮಾನನು ಕೊಡುವ ಹವಿಸ್ಸಿನಿಂದ ಸುಪ್ರೀತನಾಗಿ ಜ್ಞಾತಿ-ಬಂಧು-ಭೃತ್ಯಾದಿಗಳನ್ನು ಅನುಕೂಲರನ್ನಾಗಿ, ಯಜಮಾನನಲ್ಲಿ ಪ್ರೀತಿಯುಳ್ಳವರನ್ನಾಗಿ ಮಾಡುತ್ತಾನೆ. ಇವರ ಬೆಂಬಲವನ್ನು ಪಡೆದ ಯಜಮಾನನು ಗ್ರಾಮಸ್ವಾಮಿಯೇ ಆಗುತ್ತಾನೆ.

ಯಾವನ ಸೈನ್ಯವು ತೀಕ್ಷ್ಣವಾಗಿಲ್ಲದಿರುವುದರಿಂದ ಯುದ್ಧಸಮರ್ಥವಾಗಿಲ್ಲವೋ ಆತನು ಇಂದ್ರಪತ್ನಿ ಇಂದ್ರಾಣಿಗಾಗಿ ಚರುಯಾಗವನ್ನು ಮಾಡಬೇಕು. ಇಂದ್ರಾಣಿಯೇ

ದೇವತೇಂದ್ರಾಣೀಮೇವ ಸ್ವೇನ ಭಾಗಧೇಯೇನೋಪ

ಧಾವತಿ ಸೈವಾಸ್ಯ ಸೇನಾಗ್ಂ ಸಗ್ಂಶ್ಯತಿ ಬಲ್ಬಜಾನಪೀಧ್ಮೇ

[...ನಪಿ (೧) ಇಧ್ಮೇ] ಸಂನಹ್ಯೇದ್ಗೌರ್ಯತ್ರಾಧಿಷ್ಕನ್ನಾ

---

ದೇವತಾ । ಇಂದ್ರಾಣೀಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ ।

ಉಪೇತಿ । ಧಾವತಿ । ಸಾ । ಏವ । ಅಸ್ಯ । ಸೇನಾಮ್ । ಸಮಿತಿ । ಶ್ಯತಿ । **ಬಲ್ಬಜಾನ್ ।**

ಅಪೀತಿ । ಇಧ್ಮೇ । ಸಮಿತಿ । ನಹ್ಯೇತ್ । ಗೌಃ । ಯತ್ರ । ಅಧಿಷ್ಕನ್ನೇತ್ಯಧಿ–ಸ್ಕನ್ನಾ ।

---

| | |
|---|---|
| ದೇವತಾ | ದೇವತೆಯಾಗಿರುತ್ತಾಳೆ. |
| ಇಂದ್ರಾಣೀಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಚರುಯಾಗದಿಂದ ಇಂದ್ರಾಣೀದೇವಿಯ ಭಾಗವನ್ನು ಸಮರ್ಪಿಸಿ ಆರಾಧಿಸಿದವನಾಗುತ್ತಾನೆ. |
| ಸಾ ಏವ ಅಸ್ಯ ಸೇನಾಮ್ ಸಮ್ ಶ್ಯತಿ | ಆ ಇಂದ್ರಾಣೀದೇವತೆಯೇ ಈ ಯಜಮಾನನ ಸೇನೆಯನ್ನು ಯುದ್ಧಸಿದ್ಧವನ್ನಾಗಿ ಮಾಡುತ್ತಾಳೆ. |

**ಈ ಯಾಗದಲ್ಲಿನ ವಿಶೇಷವಿಧಿ; ಪ್ರಶಂಸೆ**

| | |
|---|---|
| ಬಲ್ಬಜಾನ್ ಅಪಿ ಇಧ್ಮೇ ಸಂನಹ್ಯೇತ್ | ಜೊಂಡು (ಚೇಣೀಹುಲ್ಲು) ಹುಲ್ಲನ್ನೂ ಇಧ್ಮದ ಜೊತೆಗೆ ಸೇರಿಸಿ ಕಟ್ಟಬೇಕು. |
| ಯತ್ರ ಅಧಿಷ್ಕನ್ನಾ ಗೌಃ | ಹೋರಾಡಲು ಸಿದ್ಧವಾದ ಹಸುವು ಯಾವ ಸ್ಥಳದಲ್ಲಿ ಹೆಚ್ಚಾಗಿ ಸಗಣಿಯನ್ನು ಹಾಕಿ, |

---

ಸೈನ್ಯಕ್ಕೆ ದೇವತೆ. ಈ ಚರುಯಾಗದಿಂದ ಯಜಮಾನನು ಇಂದ್ರಾಣಿ ದೇವತೆಯನ್ನು ಆರಾಧಿಸಿದವನಾಗುತ್ತಾನೆ. ಆ ಇಂದ್ರಾಣಿದೇವತೆಯೇ ಈ ಯಜಮಾನನ ಸೇನೆಯನ್ನು ಯುದ್ಧಕ್ಕೆ ಸಜ್ಜುಗೊಳಿಸುತ್ತಾಳೆ.

ನ್ಯಮೇಹತ್ತತೋ ಬಲ್ಬಜಾ ಉದತಿಷ್ಠನ್ಗವಾಮೇವೈನಂ

ನ್ಯಾಯಮಪಿನೀಯ ಗಾವೇದಯತೀಂದ್ರಾಯ

ಮನ್ಯುಮತೇ ಮನಸ್ವತೇ ಪುರೋಡಾಶಮೇಕಾದಶ

ಕಪಾಲಂ ನಿರ್ವಪೇತ್ಸಂಗ್ರಾಮೇ ಸಂಯತ್ತ

---

ನ್ಯಮೇಹದಿತಿ ನಿ–ಅಮೇಹತ್। ತತಃ। ಬಲ್ಬಜಾಃ। ಉದಿತಿ। ಅತಿಷ್ಠನ್ನ್। ಗವಾಮ್। ಏವ। ಏನಮ್। ನ್ಯಾಯಮಿತಿ ನಿ–ಆಯಮ್। ಅಪಿನೀಯೇತ್ಯಪಿ – ನೀಯ। ಗಾಃ। ವೇದಯತಿ। **ಇಂದ್ರಾಯ**। ಮನ್ಯುಮತ ಇತಿ ಮನ್ಯು–ಮತೇ। ಮನಸ್ವತೇ। ಪುರೋಡಾಶಮ್। ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್। ನಿರಿತಿ। ವಪೇತ್। ಸಂಗ್ರಾಮ ಇತಿ ಸಮ್–ಗ್ರಾಮೇ। ಸಂಯತ್ತ ಇತಿ ಸಮ್–ಯತ್ತೇ।

---

| | |
|---|---|
| ನ್ಯಮೇಹತ್ | ಮೂತ್ರವನ್ನು ಸುರಿಸುತ್ತದೆಯೋ |
| ತತಃ ಬಲ್ಬಜಾಃ ಉದತಿಷ್ಠನ್ನ್ | ಆ ಪ್ರದೇಶದಿಂದಲೇ ಜೊಂಡು (ಚೇಣೀ) ಹುಲ್ಲುಗಳು ಚೆನ್ನಾಗಿ ಬೆಳೆಯುತ್ತವೆ. |
| ಗವಾಮ್ ಏವ ನ್ಯಾಯಮ್ ಅಪಿನೀಯ ಗಾಃ ಏನಮ್ ವೇದಯತಿ | [ಇದು] ಎದುರಾಳಿಗಳ ಮೇಲೆ ನುಗ್ಗುವ ಹಸುಗಳ ಮಾರ್ಗವನ್ನೇ ಅನುಸರಿಸಿ ಯಜಮಾನನ ಸೇನೆಯು ಶತ್ರುಗಳ ಮೇಲೆ ನುಗ್ಗುವಂತೆ ಮಾಡುತ್ತದೆ. |

**ಯುದ್ಧದಲ್ಲಿ ಗೆಲುವನ್ನು ಬಯಸುವವನಿಗೆ ವಿಹಿತವಾದ ಇಷ್ಟಿ; ಪ್ರಶಂಸೆ**

| | |
|---|---|
| ಸಂಗ್ರಾಮೇ ಸಂಯತ್ತೇ ಇಂದ್ರಾಯ ಮನ್ಯುಮತೇ ಮನಸ್ವತೇ ಪುರೋಡಾಶಮ್ ಏಕಾದಶಕಪಾಲಮ್ ನಿರ್ವಪೇತ್ | ಯುದ್ಧವು ಪ್ರಾಪ್ತವಾಗಲಾಗಿ ಮನ್ಯುಮಂತನೂ ಮನಸ್ವಂತನೂ ಆದ ಇಂದ್ರನಿಗಾಗಿ ಏಕಾದಶ ಕಪಾಲಪುರೋಡಾಶಯಾಗವನ್ನು ಮಾಡಬೇಕು. |

---

ಈ ಯಾಗದಲ್ಲಿ ಇಧ್ಮದಲ್ಲಿ ಜೊಂಡುಹುಲ್ಲನ್ನು ಅಂದರೆ ಚಾಪೆಗಳಿಗೆ ಉಪಯೋಗಿಸುವ ಚೇಣೀಹುಲ್ಲನ್ನು ಕಟ್ಟಬೇಕು. ಹೋರಾಡಲು ಸಿದ್ಧವಾದ ಹಸುವು ಎಲ್ಲಿ ಸೆಗಣಿಯನ್ನು

ಇಂದ್ರಿಯೇಣ ವೈ ಮನ್ಯುನಾ ಮನಸಾ ಸಂಗ್ರಾಮಂ

ಜಯತೀಂದ್ರಮೇವ ಮನ್ಯುಮಂತಂ ಮನಸ್ವಂತಗ್ಂ

ಸ್ವೇನ ಭಾಗಧೇಯೇನೋಪಧಾವತಿ

ಸ ಏವಾಸ್ಮಿನ್ನಿಂದ್ರಿಯಂ ಮನ್ಯುಂ ಮನೋ ದಧಾತಿ

---

ಇಂದ್ರಿಯೇಣ । ವೈ । ಮನ್ಯುನಾ । ಮನಸಾ । ಸಂಗ್ರಾಮಮಿತಿ ಸಮ್–ಗ್ರಾಮಮ್ ।

ಜಯತಿ। ಇಂದ್ರಮ್। ಏವ। ಮನ್ಯುಮಂತಮಿತಿ ಮನ್ಯು–ಮಂತಮ್। ಮನಸ್ವಂತಮ್ ।

ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ ।

ಅಸ್ಮಿನ್ನ್। ಇಂದ್ರಿಯಮ್। ಮನ್ಯುಮ್। ಮನಃ। ದಧಾತಿ।

---

| | |
|---|---|
| ಇಂದ್ರಿಯೇಣ ವೈ ಮನ್ಯುನಾ ಮನಸಾ ಸಂಗ್ರಾಮಮ್ ಜಯತಿ | ಈ ಯಾಗದಿಂದ ಇಂದ್ರಿಯಶಕ್ತಿಯಿಂದಲೂ, ಶತ್ರುಗಳ ಮೇಲಿನ ರೋಷಾವೇಶದಿಂದಲೂ ಧೈರ್ಯದಿಂದಲೂ ಯುದ್ಧವನ್ನು ಗೆಲ್ಲುತ್ತಾನೆ. |
| ಮನ್ಯುಮಂತಮ್ ಮನಸ್ವಂತಮ್ ಇಂದ್ರಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದಿಂದ ಯಜಮಾನನು ಮನ್ಯುಮಂತನೂ ಮನಸ್ವಂತನೂ ಆಗಿರುವ ಇಂದ್ರನನ್ನು ಹವಿಃಪ್ರದಾನದಿಂದ ಸೇವಿಸುತ್ತಾನೆ. |
| ಸಃ ಏವ ಅಸ್ಮಿನ್ ಇಂದ್ರಿಯಮ್ ಮನ್ಯುಮ್ ಮನಃ ದಧಾತಿ | ಆ ಇಂದ್ರನೇ ಈ ಯಜಮಾನನಲ್ಲಿ ಇಂದ್ರಿಯ ಶಕ್ತಿಯನ್ನೂ , ಕೋಪವನ್ನೂ, ಧೈರ್ಯವನ್ನೂ ನೆಲೆಗೊಳಿಸುತ್ತಾನೆ, |

---

ಹಾಕಿ ಗಂಜಲವನ್ನು ಸುರಿಸುತ್ತದೆಯೋ ಆ ಪ್ರದೇಶದಿಂದಲೇ ಈ ಬಲ್ಬಜಗಳು ಹುಟ್ಟಿ ಚೆನ್ನಾಗಿ ಬೆಳೆಯುತ್ತವೆ. ಈ ಬಲ್ಬಜಗಳನ್ನು ಇಧ್ಮದೊಡನೆ ಸೇರಿಸಿ ಕಟ್ಟುವುದರಿಂದ ಯಜಮಾನನ ಸೇನೆಯು ಶತ್ರುಸೈನ್ಯದ ಮೇಲೆ ಉತ್ಸಾಹದಿಂದ ನುಗ್ಗುವಂತಾಗುತ್ತದೆ.

ಯುದ್ಧದಲ್ಲಿ ಗೆಲುವನ್ನು ಬಯಸುವ ಯಜಮಾನನು ಕೋಪಶೀಲನೂ, ಧೈರ್ಯಶಾಲಿಯೂ ಆದ ಇಂದ್ರನನ್ನು ಉದ್ದೇಶಿಸಿ ಏಕಾದಶಕಪಾಲಪುರೋಡಾಶಯಾಗವನ್ನು

ಜಯತಿ ತಗ್ಂ [ತಮ್ (೨) ಸಂಗ್ರಾಮಮೇತಾಮೇವ]

ಸಂಗ್ರಾಮಮೇತಾಮೇವ ನಿರ್ವಪೇದ್ಯೋ ಹತಮನಾಃ

ಸ್ವಯಂಪಾಪ ಇವ ಸ್ಯಾದೇತಾನಿ ಹಿ ವಾ ಏತಸ್ಮಾದಪ

ಕ್ರಾಂತಾನ್ಯಥೈಷ

---

ಜಯತಿ। ತಮ್। ಸಂಗ್ರಾಮಮಿತಿ ಸಮ್–ಗ್ರಾಮಮ್। ಏತಾಮ್। ಏವ। ನಿರಿತಿ। ವಪೇತ್। ಯಃ। ಹತಮನಾ ಇತಿ ಹತ–ಮನಾಃ। ಸ್ವಯಂಪಾಪ ಇತಿ ಸ್ವಯಮ್–ಪಾಪಃ। ಇವ। ಸ್ಯಾತ್। ಏತಾನಿ। ಹಿ। ವೈ। ಏತಸ್ಮಾತ್। ಅಪಕ್ರಾಂತಾನೀತ್ಯಪ–ಕ್ರಾಂತಾನಿ। ಅಥ। ಏಷಃ।

---

| | |
|---|---|
| ತಮ್ ಸಂಗ್ರಾಮಮ್ ಜಯತಿ | ಯಜಮಾನನು ಆ ಯುದ್ಧವನ್ನು ಗೆಲ್ಲುತ್ತಾನೆ. |

**ಧೈರ್ಯಚ್ಯುತನಾಗಿ ತಾನು ಪಾಪಿಯಾದೆನೆಂದು ಭ್ರಾಂತನಾದವನಿಗೆ ವಿಹಿತವಾದ ಇದೇ ಇಷ್ಟಿ; ಅರ್ಥವಾದ**

| | |
|---|---|
| ಯಃ ಹತಮನಾಃ ಸ್ವಯಂ ಪಾಪಃ ಇವ ಸ್ಯಾತ್ | ಯಾವನು ಮನೋಧೈರ್ಯವನ್ನು ಕಳೆದುಕೊಂಡವನಾಗಿ ತಾನು ಪಾಪಿಯೆಂಬುದಾಗಿ ಭ್ರಾಂತನಾಗಿರುತ್ತಾನೆಯೋ |
| [ಸಃ] ಏತಾಮ್ ಏವ ನಿರ್ವಪೇತ್ | [ಅವನು] ಈ ಯಾಗವನ್ನೇ ಮಾಡಬೇಕು. |
| ಏತಾನಿ ಹಿ ವೈ ಏತಸ್ಮಾತ್ ಅಪಕ್ರಾಂತಾನಿ | ಈತನ ಬಳಿಯಿಂದ ಇಂದ್ರಿಯಶಕ್ತಿಯೂ, ಕೋಪವೂ/ ಉತ್ಸಾಹವೂ, ಧೈರ್ಯವೂ ಹೊರಟುಹೋಗುತ್ತವೆ. |
| ಅಥ ಏಷಃ | ಬಳಿಕ ಯಜಮಾನನು |

---

ಅನುಷ್ಠಿಸಬೇಕು. ಹವಿರ್ಭಾಗವನ್ನು ಪಡೆದ ಮನ್ಯುಮಂತನೂ, ಮನಸ್ವಂತನೂ ಆದ ಇಂದ್ರನು ಯಜಮಾನನಲ್ಲಿ ಕೋಪ–ಧೈರ್ಯಗಳನ್ನು ನೆಲೆಗೊಳಿಸಿ, ಯುದ್ಧದಲ್ಲಿ ಗೆಲ್ಲುವಂತೆ ಮಾಡುತ್ತಾನೆ.

ಕೆಲವು ವೇಳೆಗಳಲ್ಲಿ ಮನುಷ್ಯನು ಧನಹಾನಿಯಿಂದಲೂ, ವ್ಯಾಧಿಗಳಿಂದಲೂ ತಾನು

ಹತಮನಾಃ ಸ್ವಯಂಪಾಪ ಇಂದ್ರಮೇವ ಮನ್ಯುಮಂತಂ
ಮನಸ್ವಂತಗ್ಗ್‌ಂ ಸ್ವೇನ ಭಾಗಧೇಯೇನೋಪಧಾವತಿ
ಸ ಏವಾಸ್ಮಿನ್ನಿಂದ್ರಿಯಂ ಮನ್ಯುಂ ಮನೋ ದಧಾತಿ ನ
ಹತಮನಾಃ ಸ್ವಯಂಪಾಪೋ ಭವತೀಂದ್ರಾಯ ದಾತ್ರೇ

---

ಹತಮನಾ ಇತಿ ಹತ-ಮನಾಃ । ಸ್ವಯಂಪಾಪ ಇತಿ ಸ್ವಯಮ್-ಪಾಪಃ । ಇಂದ್ರಮ್ । ಏವ । ಮನ್ಯುಮಂತಮಿತಿ ಮನ್ಯು-ಮಂತಮ್ । ಮನಸ್ವಂತಮ್ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮಿನ್ನ್ । ಇಂದ್ರಿಯಮ್ । ಮನ್ಯುಮ್ । ಮನಃ । ದಧಾತಿ । ನ । ಹತಮನಾ ಇತಿ ಹತ-ಮನಾಃ । ಸ್ವಯಂಪಾಪ ಇತಿ ಸ್ವಯಮ್ - ಪಾಪಃ । ಭವತಿ । **ಇಂದ್ರಾಯ** । ದಾತ್ರೇ ।

---

| | |
|---|---|
| ಹತಮನಾಃ ಸ್ವಯಂಪಾಪಃ ಮನ್ಯುಮಂತಮ್ ಮನಸ್ವಂತಮ್ ಸ್ವೇನ ಭಾಗಧೇಯೇನ ಉಪಧಾವತಿ | ಧೈರ್ಯಹೀನನೂ, ಕೀಳರಿಮೆಯವನೂ ಆಗಿರುವುದರಿಂದ ಮನ್ಯುಮಂತನೂ, ಮನಸ್ವಂತನೂ ಆಗಿರುವ ಇಂದ್ರನನ್ನು ಅವನ ಹವಿರ್ಭಾಗವನ್ನಿತ್ತು ಸೇವಿಸುತ್ತಾನೆ. [ಏಕಾದಶಕಪಾಲಪುರೋಡಾಶ ಯಾಗವನ್ನನುಷ್ಠಿಸಬೇಕು.] |
| ಸಃ ಏವ ಅಸ್ಮಿನ್ ಇಂದ್ರಿಯಮ್ ಮನ್ಯುಮ್ ಮನಃ ದಧಾತಿ | ಆ ಇಂದ್ರದೇವನೇ ಈ ಯಜಮಾನನಲ್ಲಿ ಇಂದ್ರಿಯ ಬಲವನ್ನೂ ಕೋಪೋತ್ಸಾಹಗಳನ್ನೂ, ಧೈರ್ಯವನ್ನೂ ತುಂಬುತ್ತಾನೆ. |
| ಹತಮನಾಃ ಸ್ವಯಂಪಾಪಃ ನ ಭವತಿ | ಬಳಿಕ ಯಜಮಾನನು ಧೈರ್ಯಹೀನನೂ, ಕೀಳರಿಮೆಯವನೂ ಆಗುವುದಿಲ್ಲ. |

---

ಪಾಪಿಯೋ ಎಂಬ ಭ್ರಾಂತಿಯನ್ನು ಹೊಂದುತ್ತಾನೆ. ಅವನು ತನಗೆ ತಾನೇ ಹಾನಿಯನ್ನುಂಟುಮಾಡಿಕೊಳ್ಳುತ್ತಾನೆ. ಇಂತಹವನು ಯಾವ ಕೆಲಸವನ್ನೂ ಮಾಡಲಾರನು. ಅವನಿಗೆ ಇಂದ್ರಿಯಶಕ್ತಿಯೂ, ಕೋಪೋತ್ಸಾಹಗಳೂ ಕುಗ್ಗುತ್ತವೆ. ಆಗ ಧೈರ್ಯಹೀನ

ಪುರೋಡಾಶಮೇಕಾದಶಕಪಾಲಂ ನಿರ್ವಪೇದ್ಯಃ

ಕಾಮಯೇತ ದಾನಕಾಮಾ ಮೇ ಪ್ರಜಾಃ ಸ್ಯುರಿತೀಂದ್ರ

ಮೇವ [ಸ್ಯುಃ (೩) ಇತೀಂದ್ರಮೇವ] ದಾತಾರಗ್‌ಂ ಸ್ವೇನ

ಭಾಗಧೇಯೇನೋಪಧಾವತಿ

---

ಪುರೋಡಾಶಮ್ । ಏಕಾದಶಕಪಾಲಮಿತ್ಯೇಕಾದಶ – ಕಪಾಲಮ್ । ನಿರಿತಿ । ವಪೇತ್ । ಯಃ । ಕಾಮಯೇತ । ದಾನಕಾಮಾ ಇತಿ ದಾನ–ಕಾಮಾಃ । ಮೇ । ಪ್ರಜಾ ಇತಿ ಪ್ರ–ಜಾಃ । ಸ್ಯುಃ । ಇತಿ । ಇಂದ್ರಮ್ । ಏವ । ದಾತಾರಮ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

**ದಾನಶೀಲಪ್ರಜೆಗಳನ್ನು ಬಯಸುವವನಿಗೆ ವಿಹಿತವಾದ ಇಷ್ಟಿ; ಪ್ರಶಂಸೆ.**

| | |
|---|---|
| ಯಃ ಮೇ ಪ್ರಜಾಃ ದಾನಕಾಮಾಃ ಸ್ಯುಃ ಇತಿ ಕಾಮಯೇತ [ಸಃ] ಇಂದ್ರಾಯ ದಾತ್ರೇ ಪುರೋಡಾಶಮ್ ಏಕಾದಶಕಪಾಲಮ್ ನಿರ್ವಪೇತ್ | ಯಾವನು ಜನಗಳು ತನಗೆ ದಾನವನ್ನೀಯಲು ಬಯಸುವಂತಾಗಲೆಂದು ಇಚ್ಛಿಸುವನೋ ಅವನು ದಾತೃವಾದ ಇಂದ್ರದೇವನಿಗಾಗಿ ಏಕಾದಶಕಪಾಲಪುರೋಡಾಶ ಯಾಗವನ್ನನುಷ್ಠಿಸಬೇಕು. |
| ದಾತಾರಮ್ ಇಂದ್ರಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದಿಂದ ದಾತೃವಾದ ಇಂದ್ರನನ್ನು ಅವನ ಭಾಗವನ್ನರ್ಪಿಸಿ ತೃಪ್ತಿಪಡಿಸುತ್ತಾನೆ. |

---

ನಾಗಿ ಕೀಳರಿಮೆಗೆ ಒಳಗಾದವನು ಮನ್ಯುಮಂತನೂ, ಮನಸ್ವಂತನೂ ಆದ ಇಂದ್ರನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು.

ಯಾಗಾದಿಪುಣ್ಯಕಾರ್ಯಗಳಿಗಾಗಿ ಧನವನ್ನು ಕೇಳಬೇಕಾಗುತ್ತದೆ. ಹೀಗೆ ದಾನವನ್ನು ಕೇಳಲು ಬಯಸುವವನು ದಾತೃವಾದ ಇಂದ್ರದೇವನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಈ ಯಾಗದಿಂದ ದಾತೃವಾದ ಇಂದ್ರದೇವನು ಪ್ರಸನ್ನನಾಗುತ್ತಾನೆ.

ಸ ಏವಾಸ್ಮೈ ದಾನಕಾಮಾಃ ಪ್ರಜಾಃ ಕರೋತಿ ದಾನಕಾಮಾ

ಅಸ್ಮೈ ಪ್ರಜಾ ಭವಂತೀಂದ್ರಾಯ ಪ್ರದಾತ್ರೇ ಪುರೋಡಾಶ

ಮೇಕಾದಶಕಪಾಲಂ ನಿರ್ವಪೇದ್ಯಸ್ಮೈ ಪ್ರತ್ತಮಿವ

ಸನ್ನ ಪ್ರದೀಯೇತೇಂದ್ರಮೇವ ಪ್ರದಾತಾರಗ್ಗ್ಂ

---

ಸಃ। ಏವ। ಅಸ್ಮೈ। ದಾನಕಾಮಾ ಇತಿ ದಾನ–ಕಾಮಾಃ। ಪ್ರಜಾ ಇತಿ ಪ್ರ–ಜಾಃ। ಕರೋತಿ। ದಾನಕಾಮಾ ಇತಿ ದಾನ–ಕಾಮಾಃ। ಅಸ್ಮೈ। ಪ್ರಜಾ ಇತಿ ಪ್ರ–ಜಾಃ। ಭವಂತಿ। ಇಂದ್ರಾಯ। ಪ್ರದಾತ್ರ ಇತಿ ಪ್ರ–ದಾತ್ರೇ। ಪುರೋಡಾಶಮ್। ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್। ನಿರಿತಿ। ವಪೇತ್। ಯಸ್ಮೈ। ಪ್ರತ್ತಮ್। ಇವ। ಸತ್। ನ। ಪ್ರದೀಯೇತೇತಿ ಪ್ರ–ದೀಯೇತ। ಇಂದ್ರಮ್। ಏವ। ಪ್ರದಾತಾರಮಿತಿ ಪ್ರ–ದಾತಾರಮ್।

---

| | |
|---|---|
| ಸಃ ಏವ ಅಸ್ಮೈ ಪ್ರಜಾಃ ದಾನಕಾಮಾಃ ಕರೋತಿ | ಆ ಇಂದ್ರದೇವನು ಈ ಯಜಮಾನನಿಗೆ ಜನಗಳು ದಾನವನ್ನೀಯಲು ಮುಂದೆ ಬರುವಂತೆ ಮಾಡುತ್ತಾನೆ. |
| ಅಸ್ಮೈ ಪ್ರಜಾಃ ದಾನಕಾಮಾಃ ಭವಂತಿ | ಪ್ರಜೆಗಳು ಈ ಯಜಮಾನನಿಗೆ ದಾನವನ್ನು ಕೊಡಲುಬಯಸುತ್ತಾರೆ. |

**ವಾಗ್ದಾನ ಮಾಡಿ ಕೊಡದಿದ್ದರೆ ಅವನು ಕೊಡುವಂತೆ ಮಾಡಲು ವಿಹಿತವಾದ ಪ್ರದಾತ್ರಿಂದ್ರೇಷ್ಟಿ; ಪ್ರಶಂಸೆ.**

| | |
|---|---|
| ಯಸ್ಮೈ ಪ್ರತ್ತಮ್ ಇವ ಸತ್ ನ ಪ್ರದೀಯೇತ | ಯಾವನಿಗೆ ಕೊಡುತ್ತೇನೆಂದು ವಾಗ್ದಾನ ಮಾಡಿದ ವಸ್ತುವು ಕೊಡಲ್ಪಡುವುದಿಲ್ಲವೋ |
| [ಸಃ] ಪ್ರದಾತ್ರೇ ಇಂದ್ರಾಯ ಪುರೋಡಾಶಮ್ ಏಕಾದಶ ಕಪಾಲಮ್ ನಿರ್ವಪೇತ್ | [ಅವನು] ಪ್ರದಾತನಾದ ಇಂದ್ರನಿಗಾಗಿ ಏಕಾದಶ ಕಪಾಲಪುರೋಡಾಶಯಾಗವನ್ನು ಮಾಡಬೇಕು. |
| ಪ್ರದಾತಾರಮ್ ಇಂದ್ರಮ್ ಏವ | [ಯಜಮಾನನು ಈ ಯಾಗದಿಂದ] ಪ್ರದಾತನಾದ ಇಂದ್ರದೇವನಿಗಾಗಿ |

ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮೈ ಪ್ರದಾಪ

ಯತೀಂದ್ರಾಯ ಸುತ್ರಾಮ್ಣೇ ಪುರೋಡಾಶಮೇಕಾದಶ

ಕಪಾಲಂ ನಿರ್ವಪೇದಪರುದ್ಧೋ ವಾऽಽಪರುಧ್ಯಮಾನೋ

---

ಸ್ವೇನ। ಭಾಗಧೇಯೇನೇತಿ ಭಾಗ–ಧೇಯೇನ। ಉಪೇತಿ। ಧಾವತಿ। ಸಃ। ಏವ। ಅಸ್ಮೈ।

ಪ್ರೇತಿ। ದಾಪಯತಿ। **ಇಂದ್ರಾಯ**। ಸುತ್ರಾಮ್ಣ ಇತಿ ಸು–ತ್ರಾಮ್ಣೇ। ಪುರೋಡಾಶಮ್।

ಏಕಾದಶಕಪಾಲಮಿತ್ಯೇಕಾದಶ – ಕಪಾಲಮ್। ನಿರಿತಿ। ವಪೇತ್। ಅಪರುದ್ಧ ಇತ್ಯಪ–

ರುದ್ಧಃ। ವಾ। ಅಪರುಧ್ಯಮಾನ ಇತ್ಯಪ–ರುಧ್ಯಮಾನಃ।

---

ಸ್ವೇನ ಭಾಗಧೇಯೇನ ಉಪಧಾವತಿ — ತಕ್ಕ ಹವಿರ್ಭಾಗವನ್ನಿತ್ತು ಸೇವಿಸುತ್ತಾನೆ.

ಸಃ ಏವ ಅಸ್ಮೈ ಪ್ರದಾಪಯತಿ — ಆ ಪ್ರದಾತನಾದ ಇಂದ್ರನೇ ಈ ಯಜಮಾನನಿಗಾಗಿ [ಮೊದಲು ಕೊಡುವೆನೆಂದು ಹೇಳಿದ ವಸ್ತುವನ್ನು] ಕೊಡಿಸುತ್ತಾನೆ.

**ಶತ್ರುಗಳಿಂದ ಬಂಧನಕ್ಕೆ ಒಳಗಾದವನು ಅಥವಾ ಒಳಗಾಗುವುದರಲ್ಲಿರುವವನು ಮಾಡಬೇಕಾದ ಸುತ್ರಾವೇಷ್ಟಿ; ಪ್ರಶಂಸೆ.**

ಅಪರುದ್ಧಃ ವಾ ಅಪರುಧ್ಯಮಾನಃ ವಾ — ಚಿರಕಾಲ ರಾಜ್ಯಭ್ರಷ್ಟನೂ, ಬಂಧನಕ್ಕೆ ಒಳಗಾಗುವುದರಲ್ಲಿರುವವನೂ, ರಾಜ್ಯ ಭ್ರಂಶವನ್ನು ಹೊಂದುವುದರಲ್ಲಿರುವವನೂ,

ಇಂದ್ರಾಯ ಸುತ್ರಾಮ್ಣೇ ಪುರೋಡಾಶಮ್ ಏಕಾದಶ ಕಪಾಲಮ್ ನಿರ್ವಪೇತ್ — ಸುತ್ರಾಮನಾದ [ಚೆನ್ನಾಗಿ ರಕ್ಷಿಸುವವನು] ಇಂದ್ರನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನನುಷ್ಠಿಸಬೇಕು.

ಮತ್ತು ಯಜಮಾನನಿಗೆ ಪ್ರಜೆಗಳು ದಾನವನ್ನು ಕೊಡುವಂತೆ ಮಾಡುತ್ತಾನೆ. ಜನಗಳು ಈ ಯಜಮಾನನಿಗೆ ದಾನ ಮಾಡಲು ಇಚ್ಛಿಸುತ್ತಾರೆ.

ಮೊದಲು ಕೊಡುತ್ತೇನೆಂದು ಹೇಳಿ ಬಳಿಕ ಕೊಡದೆ ಹೋದರೆ ಪ್ರದಾತನಾದ ಇಂದ್ರನಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು. ಈ ಯಾಗದಿಂದ ತೃಪ್ತನಾದ ಇಂದ್ರನು ವಾಗ್ದಾನ ಮಾಡಿದ ವಸ್ತುವನ್ನು ಕೊಡಿಸುತ್ತಾನೆ.

[ವಾ (೪) ಅಪರುಧ್ಯಮಾನೋ] ವೇಂದ್ರಮೇವ
ಸುತ್ರಾಮಾಣಗ್ಂ ಸ್ವೇನ ಭಾಗಧೇಯೇನೋಪಧಾವತಿ
ಸ ಏವೈನಂ ತ್ರಾಯತೇಽನಪರುಧ್ಯೋ ಭವತೀಂದ್ರೋ
ವೈ ಸದೃಙ್ದೇವತಾಭಿರಾಸೀತ್ಸ

ವಾ । ಇಂದ್ರಮ್ । ಏವ । ಸುತ್ರಾಮಾಣಮಿತಿ ಸು–ತ್ರಾಮಾಣಮ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಏನಮ್ । ತ್ರಾಯತೇ । ಅನಪರುಧ್ಯ ಇತ್ಯನಪ–ರುಧ್ಯಃ । ಭವತಿ । ಇಂದ್ರಃ । ವೈ । ಸದೃಙ್ಙಿತಿ ಸ–ದೃಙ್ । ದೇವತಾಭಿಃ । ಆಸೀತ್ । ಸಃ ।

| | |
|---|---|
| ಇಂದ್ರಮ್ ಸುತ್ರಾಮಾಣಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದಿಂದ ಸುತ್ರಾಮೇಂದ್ರನ ಭಾಗವನ್ನು ಸಮರ್ಪಿಸಿ ಸೇವಿಸುತ್ತಾನೆ. |
| ಸಃ ಏವ ಏನಮ್ ತ್ರಾಯತೇ | ಆ ಸುತ್ರಾಮೇಂದ್ರನು ಈ ಯಜಮಾನನನ್ನು ರಕ್ಷಿಸುತ್ತಾನೆ. |
| ಅನಪರುಧ್ಯಃ ಭವತಿ | ಯಜಮಾನನು ರಾಜ್ಯಭ್ರಷ್ಟನಾಗುವುದಿಲ್ಲ. |

**ಸಮಾನರ ಮಧ್ಯದಲ್ಲಿ ಶ್ರೇಷ್ಠನಾಗಬಯಸುವವನು ಮಾಡಬೇಕಾದ ಐಂದ್ರಯಾಗ; ಪ್ರಶಂಸೆ**

| | |
|---|---|
| ಇಂದ್ರಃ ದೇವತಾಭಿಃ ಸದೃಙ್ ವೈ ಆಸೀತ್ | ಇಂದ್ರನು ಮಿಕ್ಕ ದೇವತೆಗಳೊಡನೆ ಸಮಾನನಾಗಿದ್ದನು. |
| ಸಃ | ಆ ಇಂದ್ರನು |

ಶತ್ರುಗಳ ಆಕ್ರಮಣಕ್ಕೆ ಒಳಗಾಗಿ ರಾಜ್ಯಭ್ರಷ್ಟನಾದವನೂ, ರಾಜ್ಯಭ್ರಷ್ಟನಾಗುವುದರಲ್ಲಿರುವವನೂ, ಚೆನ್ನಾಗಿ ರಕ್ಷಿಸುವ ಸುತ್ರಾಮೇಂದ್ರದೇವನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. ಇದರಿಂದ ತೃಪ್ತನಾದ ಇಂದ್ರದೇವನು ಯಜಮಾನನನ್ನು ರಾಜ್ಯಭ್ರಂಶದಿಂದ ರಕ್ಷಿಸಿ ಕಾಪಾಡುತ್ತಾನೆ.

ನ ವ್ಯಾವೃತಮಗಚ್ಛತ್ಸ ಪ್ರಜಾಪತಿಮುಪಾಧಾವತ್ತಸ್ಮಾ

ಏತಮೈಂದ್ರಮೇಕಾದಶಕಪಾಲಂ ನಿರವಪತ್ತೇ-

ನೈವಾಸ್ಮಿಂದ್ರಿಯಮದಧಾಚ್ಛಕ್ವರೀ ಯಾಜ್ಯಾನುವಾಕ್ಯೇ

---

ನ। ವ್ಯಾವೃತಮಿತಿ ವಿ–ಆವೃತಮ್। ಅಗಚ್ಛತ್। ಸಃ। ಪ್ರಜಾಪತಿಮಿತಿ ಪ್ರಜಾ–ಪತಿಮ್। ಉಪೇತಿ। ಅಧಾವತ್। ತಸ್ಮೈ। ಏತಮ್। ಐಂದ್ರಮ್। ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್। ನಿರಿತಿ। ಅವಪತ್। ತೇನ। ಏವ। ಅಸ್ಮಿನ್ನ್। ಇಂದ್ರಿಯಮ್। ಅದಧಾತ್। ಶಕ್ವರೀ ಇತಿ। ಯಾಜ್ಯಾನುವಾಕ್ಯೇ ಇತಿ ಯಾಜ್ಯಾ – ಅನುವಾಕ್ಯೇ।

---

| | |
|---|---|
| ವ್ಯಾವೃತಮ್ ನ ಅಗಚ್ಛತ್ | ಉಳಿದ ದೇವತೆಗಳೊಡನೆ ವೈಲಕ್ಷಣ್ಯವನ್ನು ಹೊಂದಲಿಲ್ಲ |
| ಸಃ ಪ್ರಜಾಪತಿಮ್ ಉಪಾಧಾವತ್ | ಆ ಇಂದ್ರನು ಬ್ರಹ್ಮದೇವನನ್ನು ಆಶ್ರಯಿಸಿದನು. |
| ತಸ್ಮೈ ಏತಮ್ ಐಂದ್ರಮ್ ಏಕಾದಶಕಪಾಲಮ್ ನಿರವಪತ್ | ಬ್ರಹ್ಮದೇವನು ಆ ಇಂದ್ರನಿಗಾಗಿ ಏಕಾದಶ ಕಪಾಲಪುರೋಡಾಶಯಾಗವನ್ನು ಅನುಷ್ಠಿಸಿದನು. |
| ತೇನ ಏವ ಅಸ್ಮಿನ್ ಇಂದ್ರಿಯಮ್ ಅದಧಾತ್ | ಆ ಐಂದ್ರಯಾಗದಿಂದ ಇಂದ್ರನಲ್ಲಿ ಇಂದ್ರಿಯಶಕ್ತಿಯನ್ನು ಉಂಟು ಮಾಡಿದನು. |
| ಶಕ್ವರೀ ಯಾಜ್ಯಾನುವಾಕ್ಯೇ | ಯಾಜ್ಯಾನುವಾಕ್ಯೆಗಳಾಗಿ ಶಕ್ವರೀಛಂದಸ್ಸಿನ |

---

ಇಂದ್ರನು ಮಿಕ್ಕ ದೇವತೆಗಳಿಗೆ ಸಮಾನವಾಗಿ ವೈಲಕ್ಷಣ್ಯವಿಲ್ಲದೆ ಇದ್ದನು. ಆ ಇಂದ್ರನು ತಾನು ಶ್ರೇಷ್ಠನಾಗಬೇಕೆಂದು ಬ್ರಹ್ಮದೇವನನ್ನು ಆಶ್ರಯಿಸಿದನು. ಬ್ರಹ್ಮದೇವನು ಇಂದ್ರನಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನು ಮಾಡಿದನು. ಈ ಯಾಗದಿಂದ ಬ್ರಹ್ಮನು ಇಂದ್ರನಲ್ಲಿ ಹೆಚ್ಚಾದ ಇಂದ್ರಿಯಬಲವನ್ನು ಉಂಟು ಮಾಡಿದನು. ಈ ಯಾಗದಲ್ಲಿ ಶಕ್ವರೀ ಛಂದಸ್ಸಿನ ಯಾಜ್ಯಾನುವಾಕ್ಯೆಗಳನ್ನು ಉಪಯೋಗಿಸಿದನು.

ಅಕರೋದ್ವಜ್ರೋ ವೈ ಶಕ್ವರೀ ಸ ಏನಂ ವಜ್ರೋ ಭೂತ್ಯಾ

[ಐಂಧ (೫)] ಐಂಧ ಸೋಽಭವತ್ಸೋಽಬಿಭೇದ್ಭೂತಃ

ಪ್ರ ಮಾ ಧಕ್ಷ್ಯತೀತಿ

---

ಅಕರೋತ್ । ವಜ್ರಃ । ವೈ । ಶಕ್ವರೀ । ಸಃ । ಏನಮ್ । ವಜ್ರಃ । ಭೂತ್ಯೈ । ಐಂಧ ।

ಸಃ । ಅಭವತ್ । ಸಃ । ಅಬಿಭೇತ್ । ಭೂತಃ । ಪ್ರೇತಿ । ಮಾ । ಧಕ್ಷ್ಯತಿ । ಇತಿ ।

---

| | |
|---|---|
| ಅಕರೋತ್ | ಮಂತ್ರಗಳನ್ನು ಉಪಯೋಗಿಸಿದನು. |
| ಶಕ್ವರೀ ವಜ್ರಃ ವೈ | ಶಕ್ವರೀಛಂದಸ್ಸು ವಜ್ರದಂತೆ ಅತಿಬಲಯುಕ್ತವಾದುದು. |
| ಸಃ ವಜ್ರಃ ಏನಮ್ ಭೂತ್ಯೈ ಐಂಧ | ಆ ವಜ್ರರೂಪವಾದ ಶಕ್ವರಿಯು ದೇವತೆಗಳಲ್ಲಿ ಮುಖ್ಯನಾಗುವ ಐಶ್ವರ್ಯವನ್ನು ಕೊಟ್ಟು ಇಂದ್ರನನ್ನು ಪ್ರಕಾಶಿಸುವಂತೆ ಮಾಡಿತು. |

**ಐಂದ್ರೇಷ್ಟಿಯ ಪ್ರಶಂಸೆ**

| | |
|---|---|
| ಸಃ ಅಭವತ್ | ಇಂದ್ರನು ಐಶ್ವರ್ಯವಂತನಾದನು. |
| ಭೂತಃ ಸಃ | ಐಶ್ವರ್ಯವಂತನಾದ ಇಂದ್ರನು |
| ಮಾ ಪ್ರ ಧಕ್ಷ್ಯತಿ ಇತಿ ಅಬಿಭೇತ್ | ವಜ್ರರೂಪವಾದ ಶಕ್ವರಿಯು ತನ್ನನ್ನು ಸುಟ್ಟುಬಿಡಬಹುದೆಂದು ಹೆದರಿದನು. |

---

ಶಕ್ವರೀಛಂದಸ್ಸು ವಜ್ರದಂತೆ ಪ್ರಬಲವಾದುದು. ಆ ಛಂದಸ್ಸು ವಜ್ರವಾಗಿ ಪರಿಣಮಿಸಿ ಇಂದ್ರನನ್ನು ಐಶ್ವರ್ಯವನ್ನು ಹೊಂದಿ ಪ್ರಕಾಶಿಸುವಂತೆ ಮಾಡಿತು.

ಇಂದ್ರನು ಶ್ರೀಮಂತನಾದನು. ಅವನಿಗೆ ವಜ್ರದಂತಿರುವ ಶಕ್ವರಿಯು ತನ್ನನ್ನು ಸುಟ್ಟುಬಿಡಬಹುದೆಂದು ಭಯವುಂಟಾಯಿತು.

ಸ ಪ್ರಜಾಪತಿಂ ಪುನರುಪಾಧಾವತ್ಸ ಪ್ರಜಾಪತಿಃ ಶಕ್ವರ್ಯಾ

ಅಧಿ ರೇವತೀಂ ನಿರಮಿಮೀತ ಶಾಂತ್ಯಾ ಅಪ್ರದಾಹಾಯ

ಯೋಽಲಗ್ಂ ಶ್ರಿಯೈ ಸನ್ತ್ಸದೃಜ್ಕ್ಸಮಾನೈಸ್ಸ್ಯಾತ್ತಸ್ಮಾ

---

ಸಃ । ಪ್ರಜಾಪತಿಮಿತಿ ಪ್ರಜಾ–ಪತಿಮ್ । ಪುನಃ । ಉಪೇತಿ । ಅಧಾವತ್ । ಸಃ । ಪ್ರಜಾ ಪತಿರಿತಿ ಪ್ರಜಾ – ಪತಿಃ । ಶಕ್ವರ್ಯಾಃ । ಅಧೀತಿ । ರೇವತೀಮ್ । ನಿರಿತಿ । ಅಮಿಮೀತ । ಶಾಂತ್ಯೈ । ಅಪ್ರದಾಹಾಯೇತ್ಯಪ್ರ–ದಾಹಾಯ । ಯಃ । ಅಲಮ್ । ಶ್ರಿಯೈ । ಸನ್ । ಸದೃಜ್ಞಿತಿ ಸ–ದೃಜ್ । ಸಮಾನೈಃ । ಸ್ಯಾತ್ । ತಸ್ಮೈ ।

---

| | |
|---|---|
| ಸಃ ಪ್ರಜಾಪತಿಂ ಪುನಃ ಉಪಾಧಾವತ್ | [ಇದರ ಪರಿಹಾರಕ್ಕಾಗಿ] ಆ ಇಂದ್ರನು ಪ್ರಜಾಪತಿಯನ್ನು ಮತ್ತೊಮ್ಮೆ ಆಶ್ರಯಿಸಿದನು. |
| ಸಃ ಪ್ರಜಾಪತಿಃ ಶಕ್ವರ್ಯಾಃ ಅಧಿ ರೇವತೀಂ ನಿರಮಿಮೀತ | ಆ ಪ್ರಜಾಪತಿಯು ಶಕ್ವರಿಯ ಸ್ಥಾನದಲ್ಲಿ ಅಧಿಕವಾಗಿ **'ರೇವತೀರ್ನಃ'** ಎಂಬ ಋಕ್ ಅನ್ನು ನಿರ್ಮಿಸಿದನು. |
| ಶಾಂತ್ಯೈ ಅಪ್ರದಾಹಾಯ | ಇದು ಸುಡುವುದನ್ನು ತಪ್ಪಿಸಿ ಶಾಂತಿಗೆ ಕಾರಣವಾಯಿತು. |
| ಯಃ ಶ್ರಿಯೈ ಅಲಮ್ ಸನ್ ಸಮಾನೈಃ ಸದೃಜ್ ಸ್ಯಾತ್ ತಸ್ಮೈ | ಯಾವನು ಇತರರಿಗಿಂತ ಶ್ರೇಷ್ಠತೆಯನ್ನು ಹೊಂದಲು ಸಮರ್ಥನಾಗಿದ್ದರೂ ಬೇರೆಯವರಿಗೆ ಸಮಾನನಾಗಿಯೇ ಇರುವನೋ, ಅವನಿಗಾಗಿ |

---

ಅವನು ಮತ್ತೆ ಪ್ರಜಾಪತಿಯನ್ನೇ ಸೇವಿಸಿದನು. ಆ ಪ್ರಜಾಪತಿಯು ಶಕ್ವರಿಯ ಸ್ಥಾನದಲ್ಲಿ **'ರೇವತೀರ್ನಃ'** ಎಂಬ ಋಕ್ ಅನ್ನು ಪುರೋನುವಾಕ್ಯೆಯನ್ನಾಗಿ ಮಾಡಿದನು. ಇದು ಶಕ್ವರಿಯು ಸುಡದಂತೆ ಮಾಡಿ ಶಾಂತಿಗೆ ಕಾರಣವಾಯಿತು.

ಏತಮೈಂದ್ರಮೇಕಾದಶಕಪಾಲಂ ನಿರ್ವಪೇದಿಂದ್ರಮೇವ ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮಿನ್ನಿಂದ್ರಿಯಂ ದಧಾತಿ ರೇವತೀ ಪುರೋನುವಾಕ್ಯಾ ಭವತಿ ಶಾಂತ್ಯಾ ಅಪ್ರದಾಹಾಯ

---

ಏತಮ್ । ಐಂದ್ರಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ । ನಿರಿತಿ । ವಪೇತ್ । ಇಂದ್ರಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮಿನ್ । ಇಂದ್ರಿಯಮ್ । ದಧಾತಿ । ರೇವತೀ । ಪುರೋನುವಾಕ್ಯೇತಿ ಪುರಃ-ಅನುವಾಕ್ಯಾ । ಭವತಿ । ಶಾಂತ್ಯೈ । ಅಪ್ರದಾಹಾಯೇತ್ಯಪ್ರ-ದಾಹಾಯ ।

---

| | |
|---|---|
| ಏತಮ್ ಐಂದ್ರಮ್ ಏಕಾದಶ ಕಪಾಲಮ್ ನಿರ್ವಪೇತ್ | ಇಂದ್ರದೇವತಾಕವಾದ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| ಇಂದ್ರಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದಿಂದ ಯಜಮಾನನು ಇಂದ್ರನಿಗೆ ತಕ್ಕ ಹವಿರ್ಭಾಗವನ್ನಿತ್ತು ಸೇವಿಸಿದವನಾಗುತ್ತಾನೆ. |
| ಸಃ ಏವ ಅಸ್ಮಿನ್ ಇಂದ್ರಿಯಮ್ ದಧಾತಿ | ಆ ಇಂದ್ರನೇ ಈ ಯಜಮಾನನಲ್ಲಿ ಇಂದ್ರಿಯ ಸಾಮರ್ಥ್ಯವನ್ನುಂಟುಮಾಡುತ್ತಾನೆ. |
| ರೇವತೀ ಪುರೋನುವಾಕ್ಯಾ ಭವತಿ ಶಾಂತ್ಯೈ ಅಪ್ರದಾಹಾಯ | **'ರೇವತೀರ್ನಃ'** ಎಂಬ ಋಕ್ಕು ಪುರೋನುವಾಕ್ಯೆಯಾಗಿದೆ. ಇದು ಸುಡದಂತೆ ಮಾಡಿ ಶಾಂತಿಗೆ ಕಾರಣವಾಗುತ್ತದೆ. |

---

ಯಾವನು ಐಶ್ವರ್ಯವನ್ನು ಹೊಂದಲು ಸಮರ್ಥನಾಗಿದ್ದರೂ ಬೇರೆಯವರಿಗೆ ಸಮಾನನಾಗಿಯೇ ಇರುವನೋ ಅವನಿಗಾಗಿ ಇಂದ್ರದೇವತಾಕವಾದ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಇಂದ್ರನು ಈ ಯಾಗದಿಂದ ತೃಪ್ತನಾಗಿ ಯಜಮಾನನಲ್ಲಿ ಅಧಿಕವಾದ ಇಂದ್ರಿಯಶಕ್ತಿಯನ್ನು ಅನುಗ್ರಹಿಸುತ್ತಾನೆ. **'ರೇವತೀರ್ನಃ'**

ಶಕ್ವರೀ ಯಾಜ್ಯಾ ವಜ್ರೋ ವೈ ಶಕ್ವರೀ ಸ ಏನಂ

ವಜ್ರೋ ಭೂತ್ಯಾ ಇಂಧೇ ಭವತ್ಯೇವ ||೪೫-8||

[ಅಪಿ ತಗ್‌ಂ ಸ್ಯುರ್ವ್ಯೃಂಧ ಭವತಿ ಚತುರ್ದಶ ಚ |]

---

ಶಕ್ವರೀ | ಯಾಜ್ಯಾ | ವಜ್ರಃ | ವೈ | ಶಕ್ವರೀ | ಸಃ | ಏನವ್‌ | ವಜ್ರಃ | ಭೂತ್ಯೈ | ಇಂಧೇ | ಭವತಿ | ಏವ |

---

**ಯಾಜ್ಯೆಯ ಪ್ರಶಂಸೆ**

| | |
|---|---|
| ಶಕ್ವರೀ ಯಾಜ್ಯಾ | ಶಕ್ವರೀಛಂದಸ್ಸಿನ ಋಕ್ ಯಾಜ್ಯೆಯಾಗುತ್ತದೆ. |
| ವಜ್ರಃ ವೈ ಶಕ್ವರೀ | ಶಕ್ವರಿಯು ಬಲಿಷ್ಠವಾದ ವಜ್ರರೂಪವಾಗಿದೆ. |
| ಸಃ ವಜ್ರಃ ಏನವ್ ಭೂತ್ಯೈ ಇಂಧೇ | ಆ ವಜ್ರರೂಪವಾದ ಶಕ್ವರಿಯು ಈ ಯಜಮಾನನನ್ನು ಐಶ್ವರ್ಯವನ್ನು ಹೊಂದಿ ಪ್ರಕಾಶಿಸುವಂತೆ ಮಾಡುತ್ತದೆ. |
| ಭವತಿ ಏವ | ಯಜಮಾನನು ಬೇರೆಯವರಿಗಿಂತ ಮೇಲಾಗಿ ಶ್ರೀಮಂತನೇ ಆಗುತ್ತಾನೆ. |

---

ಎಂಬ ಋಕ್ಕು ಪುರೋನುವಾಕ್ಯೆಯಾಗುತ್ತದೆ. ಇದು ಶಕ್ವರಿಯು ಸುಡದಂತೆ ಮಾಡಿ ಶಾಂತಿಗೆ ಕಾರಣವಾಗುತ್ತದೆ. '**ಪ್ರೋಷ್ವಸ್ಮೈ**' ಎಂದು ಆರಂಭವಾಗುವ ಏಳು ಪದಗಳುಳ್ಳ ಶಕ್ವರೀ ಛಂದಸ್ಸಿನ ಮಂತ್ರವು ಯಾಜ್ಯಾನುವಾಕ್ಯೆಯಾಗುತ್ತದೆ. ವಜ್ರರೂಪವಾದ ಶಕ್ವರಿಯು ಯಜಮಾನನನ್ನು ಶ್ರೀಮಂತನಾಗಿ ಪ್ರಕಾಶಿಸುವಂತೆ ಮಾಡುತ್ತದೆ. ಯಜಮಾನನು ಬೇರೆಯವರಿಗಿಂತಲೂ ಶ್ರೇಷ್ಠನೇ ಆಗುತ್ತಾನೆ.

* * *

# ಅಷ್ಟಮಾನುವಾಕವಿಷಯಸಂಗ್ರಹ

ಗ್ರಾಮಾರ್ಥ್ಯನ್ವೃಜವೇ ಕುರ್ಯಾದಿಂದ್ರಾಗ್ನ್ಯೇ ಸೈನ್ಯಕಾಮುಕಃ ।
ಯುದ್ಧಾರ್ಥೀ ನಷ್ಟಧೈರ್ಯೋ ವಾ ಕುರ್ಯಾನ್ಮನ್ಯುಮತೇ ಹವಿಃ ॥
ದಾತ್ರೇಽನ್ನದೀಯದಾನಾರ್ಥೀ ಪ್ರದಾತ್ರೇ ತೂತ್ತಮರ್ಣಕಃ ॥

ರಾಜ್ಯಭ್ರಷ್ಟೋ ಭ್ರಶ್ಯಮಾನೋ ವಾ ಸುತ್ರಾಮ್ಣೇ ಚರೇದ್ಧವಿಃ ।
ಸಂಪದ್ಯೋಗ್ಯಸ್ತ್ವನ್ಯಸಾಮ್ಯೇ ಸತ್ಯೈಂದ್ರಂ ಸಂಪದೇ ಚರೇತ್ ॥

ಅಷ್ಟಮೆ ತ್ವನುವಾಕೇಽಸ್ಮಿನ್ನನ್ವೃಜುಪ್ರಮುಖಾಃ ಶ್ರುತಾಃ ।
ತದರ್ಥೋಽನ್ವಹ ಮಾಸಾ ಇತ್ಯತ್ರ ಸಮ್ಯಙ್ನಿರೂಪಿತಾಃ ॥

ಈ ಅನುವಾಕದಲ್ಲಿ ಗ್ರಾಮಸ್ವಾಮಿಯಾಗಬಯಸುವವನು, ಸೇನೆಯನ್ನು ಸಜ್ಜುಗೊಳಿಸುವನು, ಯುದ್ಧದಲ್ಲಿ ಗೆಲುವನ್ನು ಬಯಸುವವನು, ಧೈರ್ಯಗುಂದಿದವನು, ದಾನಶೀಲ ಪ್ರಜೆಗಳನ್ನು ಬಯಸುವವನು, ದಾನ ನೀಡಲು ಪ್ರೇರಣೆಯನ್ನು ನೀಡಬಯಸುವವನು, ರಾಜ್ಯಚ್ಯುತನಾದವನು, ರಾಜ್ಯಚ್ಯುತನಾಗಲಿರುವವನು. ಸಮಾನರಲ್ಲಿ ಶ್ರೇಷ್ಠನಾಗಬಯಸುವವನು – ಇವರಿಗೆ ಇಷ್ಟಿಗಳು ಹೇಳಲ್ಪಟ್ಟವೆ.

ಮಂತ್ರಗಳ ವಿವರಣೆಯು ಅನ್ವಹ ಮಾಸಾ [ತೈ.ಸಂ. 1.7.13] ಅನುವಾಕದಲ್ಲಿದೆ.

* * *

# ॥ ನವಮೋಽನುವಾಕಃ ॥

ಆಗ್ನಾವೈಷ್ಣವಮೇಕಾದಶಕಪಾಲಂ ನಿರ್ವಪೇದಭಿಚರನ್ತ್ಸರ-

ಸ್ವತ್ಯಾಜ್ಯಭಾಗಾ ಸ್ಯಾದ್ಬಾರ್ಹಸ್ಪತ್ಯಶ್ಚರುರ್ಯದಾಗ್ನಾ-

ವೈಷ್ಣವ ಏಕಾದಶಕಪಾಲೋ ಭವತ್ಯಗ್ನಿಃ ಸರ್ವಾ ದೇವತಾ

---

**ಆಗ್ನಾವೈಷ್ಣವಮಿತ್ಯಾಗ್ನಾ-ವೈಷ್ಣವಮ್** । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ । ನಿರಿತಿ । ವಪೇತ್ । ಅಭಿಚರನ್ನಿತ್ಯಭಿ-ಚರನ್ । ಸರಸ್ವತೀ । ಆಜ್ಯಭಾಗೇತ್ಯಾಜ್ಯ-ಭಾಗಾ । ಸ್ಯಾತ್ । ಬಾರ್ಹಸ್ಪತ್ಯಃ । ಚರುಃ । ಯತ್ । ಆಗ್ನಾವೈಷ್ಣವ ಇತ್ಯಾಗ್ನಾ-ವೈಷ್ಣವಃ । ಏಕಾದಶಕಪಾಲ ಇತ್ಯೇಕಾದಶ-ಕಪಾಲಃ । ಭವತಿ । ಅಗ್ನಿಃ । ಸರ್ವಾಃ । ದೇವತಾಃ ।

---

**ಶತ್ರುಗಳ ಮೇಲೆ ಅಭಿಚಾರ ಮಾಡಬೇಕೆಂದಿರುವವನಿಗೆ ವಿಹಿತವಾದ ಮೂರು ಹವಿಸ್ಸುಗಳುಳ್ಳ ಇಷ್ಟಿ; ಪ್ರಶಂಸೆ**

| | |
|---|---|
| ಅಭಿಚರನ್ ಆಗ್ನಾವೈಷ್ಣವಮ್ ಏಕಾದಶಕಪಾಲಮ್ ನಿರ್ವಪೇತ್ | ಶತ್ರುಹಿಂಸೆ ಮಾಡಬೇಕೆಂದಿರುವವನು ಅಗ್ನಾ ವಿಷ್ಣೋ ದೇವತೆಗಳಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| ಸರಸ್ವತೀ ಆಜ್ಯಭಾಗಾ ಸ್ಯಾತ್ | ಸರಸ್ವತೀದೇವತೆಗಾಗಿ ಆಜ್ಯದ್ರವ್ಯಯಾಗವು ಎರಡನೆಯದಾಗುತ್ತದೆ. |
| ಬಾರ್ಹಸ್ಪತ್ಯಃ ಚರುಃ | ಬೃಹಸ್ಪತಿದೇವತೆಗಾಗಿ ಚರುಯಾಗವು ಮೂರನೆಯದಾಗುತ್ತದೆ. |
| ಆಗ್ನಾವೈಷ್ಣವಃ ಏಕಾದಶಕಪಾಲಃ ಭವತಿ [ಇತಿ] ಯತ್ | ಏಕಾದಶಕಪಾಲಪುರೋಡಾಶವು ಅಗ್ನಾವಿಷ್ಣು ದೇವತಾಕವಾಗಬೇಕೆಂದು ಯಾವುದಿದೆಯೋ [ಅದರಿಂದ] |
| ಅಗ್ನಿಃ ಸರ್ವಾಃ ದೇವತಾಃ | ಅಗ್ನಿಯು ಸರ್ವದೇವತಾಸ್ವರೂಪನು [ಇದರಿಂದ] |

---

ಅಭಿಚಾರಕಾಮನಾದವನು ಅಗ್ನಾವಿಷ್ಣುದೇವತೆಗಳಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನೂ, ಸರಸ್ವತೀದೇವತೆಗಾಗಿ ಆಜ್ಯದ್ರವ್ಯಕಯಾಗವನ್ನೂ, ಬೃಹಸ್ಪತಿದೇವನಿಗಾಗಿ ಚರುದ್ರವ್ಯದ ಯಾಗವನ್ನೂ ಅನುಷ್ಠಿಸಬೇಕು.

ವಿಷ್ಣುರ್ಯಜ್ಞೋ ದೇವತಾಭಿಶ್ಚೈವೈನಂ ಯಜ್ಞೇನ ಚಾಭಿ
ಚರತಿ ಸರಸ್ವತ್ಯಾಜ್ಯಭಾಗಾ ಭವತಿ ವಾಗ್ವೈ ಸರಸ್ವತೀ
ವಾಚೈವೈನಮಭಿಚರತಿ ಬಾರ್ಹಸ್ಪತ್ಯಶ್ಚರುರ್ಭವತಿ

---

ವಿಷ್ಣುಃ । ಯಜ್ಞಃ । ದೇವತಾಭಿಃ । ಚ । ಏವ । ಏನಮ್ । ಯಜ್ಞೇನ । ಚ । ಅಭೀತಿ । ಚರತಿ । ಸರಸ್ವತೀ । ಆಜ್ಯಭಾಗೇತ್ಯಾಜ್ಯ–ಭಾಗಾ । ಭವತಿ । ವಾಕ್ । ವೈ । ಸರಸ್ವತೀ । ವಾಚಾ । ಏವ । ಏನಮ್ । ಅಭೀತಿ । ಚರತಿ । ಬಾರ್ಹಸ್ಪತ್ಯಃ । ಚರುಃ । ಭವತಿ ।

---

| | |
|---|---|
| ವಿಷ್ಣುಃ ಯಜ್ಞಃ | ವಿಷ್ಣುವು ಯಜ್ಞಸ್ವರೂಪನು [ಇದರಿಂದ] |
| ದೇವತಾಭಿಃ ಚ ಯಜ್ಞೇನ ಚ ಏನಮ್ ಅಭಿಚರತಿ ಏವ | ಈ ಶತ್ರುವನ್ನು ಯಜಮಾನನು ದೇವತೆಗಳಿಂದಲೂ ಯಜ್ಞದಿಂದಲೂ ಹಿಂಸಿಸಿದವನಾಗುತ್ತಾನೆ. |
| ಸರಸ್ವತೀ ಆಜ್ಯಭಾಗಾ ಭವತಿ ಇತಿ ಯತ್ | ಎರಡನೆಯದಾದ ಆಜ್ಯಹವಿಸ್ಸು ಸರಸ್ವತೀ ದೇವತಾಕವಾಗಿದೆ ಎಂಬುದು ಯಾವುದುಂಟೋ [ಅದರಿಂದ] |
| ವಾಕ್ ವೈ ಸರಸ್ವತೀ ವಾಚಾ ಏವ ಏನಮ್ ಅಭಿಚರತಿ | ಮಾತಿನ ದೇವತೆಯಾದ ಸರಸ್ವತೀದೇವತೆಯಿಂದಲೇ ಈ ಶತ್ರುವನ್ನು ಹಿಂಸಿಸಿದವನಾಗುತ್ತಾನೆ. |
| ಬಾರ್ಹಸ್ಪತ್ಯಃ ಚರುಃ ಭವತಿ ಇತಿ ಯತ್ | ಮೂರನೆಯದಾದ ಚರುಹವಿಸ್ಸು ಬೃಹಸ್ಪತಿ ದೇವತಾಕವಾಗಿದೆಯೆಂಬುದು ಯಾವುದುಂಟೋ [ಅದರಿಂದ] |

---

ಆಗ್ನಾವೈಷ್ಣವಯಾಗದಿಂದ ಸರ್ವದೇವಸ್ವರೂಪನಾದ ಅಗ್ನಿಯೂ ಯಜ್ಞಸ್ವರೂಪನಾದ ವಿಷ್ಣುವೂ ಪ್ರಸನ್ನರಾಗುತ್ತಾರೆ. ಅವರು ದೇವತೆಗಳಿಂದಲೂ ಯಜ್ಞದಿಂದಲೂ ಶತ್ರುವಿಗೆ ಪೀಡೆಯನ್ನುಂಟುಮಾಡುತ್ತಾರೆ. ಆಜ್ಯಹವಿಸ್ಸಿನಿಂದ ವಾಕ್‌ಸ್ವರೂಪಿಣಿಯಾದ ಸರಸ್ವತಿಯು ಪ್ರಸನ್ನಳಾಗಿ ವಾಕ್ಕಿನಿಂದ ಶತ್ರುವನ್ನು ಹಿಂಸಿಸುತ್ತಾಳೆ.

ಬ್ರಹ್ಮವೈ ದೇವಾನಾಂ ಬೃಹಸ್ಪತಿರ್ಬ್ರಹ್ಮಣೈವೈನಮಭಿಚರತಿ

[ಚರತಿ (೧)] ಪ್ರತಿ ವೈ ಪರಸ್ತಾದಭಿಚರಂತಮಭಿಚರಂತಿ

ದ್ವೇದ್ವೇ ಪುರೋಽನುವಾಕ್ಯೇ ಕುರ್ಯಾದತಿಪ್ರಯುಕ್ತ್ಯಾ

---

ಬ್ರಹ್ಮ । ವೈ । ದೇವಾನಾಮ್ । ಬೃಹಸ್ಪತಿಃ । ಬ್ರಹ್ಮಣಾ । ಏವ । ಏನಮ್ । ಅಭೀತಿ । ಚರತಿ । ಪ್ರತೀತಿ । ವೈ । ಪರಸ್ತಾತ್ । ಅಭಿಚರಂತಮಿತ್ಯಭಿ–ಚರಂತಮ್ । ಅಭೀತಿ । ಚರಂತಿ । ದ್ವೇದ್ವೇ ಇತಿ ದ್ವೇ – ದ್ವೇ । ಪುರೋಽನುವಾಕ್ಯೇ ಇತಿ ಪುರಃ – ಅನುವಾಕ್ಯೇ । ಕುರ್ಯಾತ್ । ಅತೀತಿ । ಪ್ರಯುಕ್ತ್ಯಾ ಇತಿ ಪ್ರ–ಯುಕ್ತ್ಯೈ ।

---

| | |
|---|---|
| ಬ್ರಹ್ಮವೈ ದೇವಾನಾಮ್ ಬೃಹಸ್ಪತಿಃ | ದೇವತೆಗಳಲ್ಲಿ ಬೃಹಸ್ಪತಿಯೇ ಬ್ರಹ್ಮಶಕ್ತಿಯಾಗಿದ್ದಾನೆ. |
| ಬ್ರಹ್ಮಣಾ ಏವ ಏನಮ್ ಅಭಿಚರತಿ | ಬೃಹಸ್ಪತಿದೇವನಿಂದಲೇ ಈ ಶತ್ರುವನ್ನು ಯಜಮಾನನು ಹಿಂಸಿಸುತ್ತಾನೆ. |

**ಪ್ರಯೋಗವಿಶೇಷವಿಧಿ; ಪ್ರಶಂಸೆ**

| | |
|---|---|
| ಅಭಿಚರಂತಮ್ ಪ್ರತಿ ಪರಸ್ತಾತ್ ವೈ ಅಭಿಚರಂತಿ | ಅಭಿಚಾರವನ್ನು ಮಾಡಬೇಕೆಂದಿರುವ ಶತ್ರುವು ಅಭಿಚಾರವನ್ನು ಮಾಡುವ ಮೊದಲೇ ದೇವತೆಗಳು ಅವನನ್ನು ಹಿಂಸಿಸುತ್ತಾರೆ. |
| ಅತಿಪ್ರಯುಕ್ತ್ಯೈ ದ್ವೇ ದ್ವೇ ಪುರೋಽನುವಾಕ್ಯೇ ಕುರ್ಯಾತ್ | ಅತಿಶಯವಾದ ಪ್ರಯೋಗಕ್ಕಾಗಿ ಒಂದೊಂದು ಪುರೋಽನುವಾಕ್ಯೆಯ ಬದಲು ಎರಡೆರಡು ಪುರೋಽನುವಾಕ್ಯೆಗಳನ್ನು ಹೇಳಬೇಕು. |

---

ಬೃಹಸ್ಪತಿದೇವತಾಕವಾದ ಚರುಯಾಗದಿಂದ ದೇವತೆಗಳಲ್ಲಿ ಬ್ರಹ್ಮಶಕ್ತಿಸ್ವರೂಪನಾದ ಬೃಹಸ್ಪತಿಯು ತೃಪ್ತನಾಗುತ್ತಾನೆ. ಆ ಬ್ರಹ್ಮಶಕ್ತಿಯಿಂದ ಶತ್ರುವು ಪೀಡೆಗೆ ಗುರಿಯಾಗುವಂತೆ ಮಾಡುತ್ತಾನೆ.

ಹೀಗೆ ಯಜಮಾನನು ಅಭಿಚಾರಯಾಗ ಮಾಡುವುದರಿಂದ ಶತ್ರುವು ಮಾಡಬಹುದಾದ ಅಭಿಚಾರಕ್ಕೆ ಮೊದಲೇ ಯಜಮಾನನು ಮಾಡುವ ಯಾಗದಿಂದ ಪ್ರಸನ್ನರಾದ

ಏತಯೈವ ಯಜೇತಾಭಿಚರ್ಯಮಾಣೋ ದೇವತಾಭಿ

ರೇವ ದೇವತಾಃ ಪ್ರತಿಚರತಿ ಯಜ್ಞೇನ ಯಜ್ಞಂ ವಾಚಾ

ವಾಚಂ ಬ್ರಹ್ಮಣಾ ಬ್ರಹ್ಮ

---

ಏತಯಾ । ಏವ । ಯಜೇತ । ಅಭಿಚರ್ಯಮಾಣ ಇತ್ಯಭಿ–ಚರ್ಯಮಾಣಃ । ದೇವತಾಭಿಃ । ಏವ । ದೇವತಾಃ । ಪ್ರತಿಚರತೀತಿ ಪ್ರತಿ –ಚರತಿ । ಯಜ್ಞೇನ । ಯಜ್ಞಮ್ । ವಾಚಾ । ವಾಚಮ್ । ಬ್ರಹ್ಮಣಾ । ಬ್ರಹ್ಮ ।

---

**ಶತ್ರುಗಳ ಅಭಿಚಾರಕ್ಕೆ ಗುರಿಯಾದವನಿಗೆ ಏಹಿತವಾದ ಯಾಗ; ಸ್ತುತಿ.**

| | |
|---|---|
| ಅಭಿಚರ್ಯಮಾಣಃ ಏತಯಾ ಏವ ಯಜೇತ | ಶತ್ರುವಿನ ಅಭಿಚಾರಕ್ಕೆ ಗುರಿಯಾದವನು ಹಿಂದಿನ ತ್ರಿಹವಿಷ್ಯೇಷ್ಟಿಯನ್ನೇ ಮಾಡಬೇಕು. |
| ದೇವತಾಭಿಃ ಏವ ದೇವತಾಃ ಪ್ರತಿಚರತಿ | ದೇವತೆಗಳಿಂದಲೇ ದೇವತೆಗಳನ್ನು ನಿವಾರಿಸಿದಂತಾಗುತ್ತದೆ. |
| ಯಜ್ಞೇನ ಯಜ್ಞಮ್ ವಾಚಾ ವಾಚಮ್ ಬ್ರಹ್ಮಣಾ ಬ್ರಹ್ಮ ಪ್ರತಿಚರತಿ | ಯಜ್ಞದಿಂದ ಶತ್ರುವಿನ ಯಜ್ಞವನ್ನೂ, ವಾಕ್ಕಿನಿಂದ ಶತ್ರುವಿನ ವಾಕ್ಕನ್ನೂ, ಬ್ರಹ್ಮಶಕ್ತಿಯಿಂದ ಬ್ರಹ್ಮಶಕ್ತಿಯನ್ನೂ ನಿವಾರಿಸಿ ಪ್ರತೀಕಾರ ಮಾಡಿದಂತಾಗುತ್ತದೆ. |

---

ದೇವತೆಗಳು ಶತ್ರುವಿಗೆ ಪ್ರತೀಕಾರವನ್ನು ಮಾಡಿದಂತಾಗಿ ಶತ್ರುಹಿಂಸೆಯಾಗುತ್ತದೆ. ಯಾಗವು ಅತಿಶಯಫಲವನ್ನು ಕೊಡುವುದಕ್ಕಾಗಿ ಒಂದೊಂದು ಪುರೋನುವಾಕ್ಯೆಯ ಸ್ಥಾನದಲ್ಲಿ ಎರಡೆರಡು ಪುರೋನುವಾಕ್ಯೆಗಳನ್ನು ಹೇಳಬೇಕು. ಎರಡು ಬಾರಿ ಅವದಾನ ಮಾಡುವ ಸಮಯದಲ್ಲಿ ಮೂರು ಸಲ ಅವದಾನವನ್ನು ಮಾಡಬೇಕು. ಇದರಿಂದ ಬೇಗನೇ ಫಲಸಿದ್ಧಿಯಾಗುತ್ತದೆ.

ಶತ್ರುಗಳ ಅಭಿಚಾರಕ್ಕೆ ಪ್ರತೀಕಾರ ಮಾಡಬೇಕೆಂದಿರುವವನೂ ಈ ಇಷ್ಟಿಯನ್ನೇ ಮಾಡಬೇಕು. ದೇವತೆಗಳಿಂದ ದೇವತೆಗಳಿಗೂ, ಯಜ್ಞದಿಂದ ಯಜ್ಞಕ್ಕೂ, ವಾಕ್ಕಿನಿಂದ

ಸ ದೇವತಾಶ್ಚೈವ ಯಜ್ಞಂ ಚ ಮಧ್ಯತೋ ವ್ಯವಸರ್ಪತಿ

ತಸ್ಯ ನ ಕುತಶ್ಚ ನೋಪಾವ್ಯಾಧೋ ಭವತಿ

ನೈನಮಭಿಚರನ್ತ್ಸೃಣುತ

---

ಸಃ। ದೇವತಾಃ। ಚ। ಏವ। ಯಜ್ಞಮ್। ಚ। ಮಧ್ಯತಃ। ವ್ಯವಸರ್ಪತೀತಿ ವಿ—ಅವಸರ್ಪತಿ।

ತಸ್ಯ। ನ। ಕುತಃ। ಚ-ನ। ಉಪಾವ್ಯಾಧ ಇತ್ಯುಪ — ಅವ್ಯಾಧಃ। ಭವತಿ। ನ। ಏನಮ್।

ಅಭಿಚರನ್ನಿತ್ಯಭಿ—ಚರನ್। ಸ್ತೃಣುತೇ।

---

| | |
|---|---|
| ಸಃ ದೇವತಾಃ ಚ ಯಜ್ಞಮ್ ಚ ಏವ ಮಧ್ಯತಃ ವ್ಯವಸರ್ಪತಿ | ಆ ಯಜಮಾನನು ಹಿಂಸಿಸಲು ಬರುವ ದೇವತಾದಿಗಳನ್ನು ತನ್ನ ಬಳಿ ಬರದೇ ಮಧ್ಯದಲ್ಲಿಯೇ ತಿರುಗಾಡುವಂತೆ ಮಾಡುತ್ತಾನೆ. |
| ತಸ್ಯ ನ ಕುತಃಚನ ಉಪಾವ್ಯಾಧೋ ಭವತಿ | ಆ ಯಜಮಾನನಿಗೆ ಯಾವುದರಿಂದಲೂ ಯಾವ ವಿಧವಾದ ಪೀಡೆಯೂ ಸಂಭವಿಸುವುದಿಲ್ಲ. |
| ಏನಮ್ ಅಭಿಚರನ್ ನ ಸ್ತೃಣುತೇ | ಈ ಯಜಮಾನನನ್ನು ಅಭಿಚಾರ ಮಾಡುವ ಶತ್ರುವು ಹಿಂಸಿಸಲು ಸಮರ್ಥನಾಗುವುದಿಲ್ಲ. |

---

ವಾಕ್ಕಿಗೂ ಬ್ರಹ್ಮಶಕ್ತಿಯಿಂದ ಬ್ರಹ್ಮಶಕ್ತಿಗೂ ಪ್ರತೀಕಾರ ಮಾಡಿ ಹಿಂಸಿಸಲು ಹತ್ತಿರಕ್ಕೆ ಬರದಂತೆ ನಿವಾರಿಸಿ ದೂರ ಮಾಡುತ್ತಾನೆ. ಇದರಿಂದ ಯಜಮಾನನಿಗೆ ಯಾವುದರಿಂದಲೂ ಪೀಡೆಯಾಗುವುದಿಲ್ಲ, ಶತ್ರುವು ಇವನನ್ನು ಹಿಂಸಿಸಲು ಸಮರ್ಥನಾಗುವುದಿಲ್ಲ.

ಆಗ್ನಾವೈಷ್ಣವಮೇಕಾದಶಕಪಾಲಂ ನಿರ್ವಪೇದ್ಯಂ ಯಜ್ಞೋ [ಯಜ್ಞೋ ನ (೨) ಉಪನಮೇದಗ್ನಿಃ] ನೋಪನಮೇದಗ್ನಿಃ ಸರ್ವಾ ದೇವತಾ ವಿಷ್ಣುರ್ಯಜ್ಞೋಽಗ್ನಿಂ ಚೈವ ವಿಷ್ಣುಂ ಚ

---

ಆಗ್ನಾವೈಷ್ಣವಮಿತ್ಯಾಗ್ನಾ – ವೈಷ್ಣವಮ್ । ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್ । ನಿರಿತಿ । ವಪೇತ್ । ಯಮ್ । ಯಜ್ಞಃ । ನ । ಉಪನಮೇದಿತ್ಯುಪ–ನಮೇತ್ । ಅಗ್ನಿಃ । ಸರ್ವಾಃ । ದೇವತಾಃ । ವಿಷ್ಣುಃ । ಯಜ್ಞಃ । ಅಗ್ನಿಮ್ । ಚ । ಏವ । ವಿಷ್ಣುಮ್ । ಚ ।

---

**ಸೋಮಯಾಗವು ತನಗೆ ಪ್ರಾಪ್ತವಾಗಬೇಕೆಂದು ಬಯಸುವವನಿಗೆ ವಿಹಿತವಾದ ಇಷ್ಟಿ; ಪ್ರಶಂಸೆ**

| | |
|---|---|
| ಯಮ್ ಯಜ್ಞಃ ನ ಉಪನಮೇತ್ [ಸಃ] ಆಗ್ನಾವೈಷ್ಣವಮ್ ಏಕಾದಶಕಪಾಲಮ್ ನಿರ್ವಪೇತ್ | ಯಾವನನ್ನು ಸೋಮಯಾಗವು ಕಾರಣಾಂತರಗಳಿಂದ ಹೊಂದುವುದಿಲ್ಲವೋ [ಅವನು] ಅಗ್ನಾವಿಷ್ಣುದೇವತೆಗಳಿಗಾಗಿ ಏಕಾದಶಕಪಾಲ ಪುರೋಡಾಶದ್ರವ್ಯವುಳ್ಳ ಯಾಗವನ್ನು ಮಾಡಬೇಕು. |
| ಅಗ್ನಿಃ ಸರ್ವಾಃ ದೇವತಾಃ ವಿಷ್ಣುಃ ಯಜ್ಞಃ | ಅಗ್ನಿಯು ಸರ್ವದೇವತಾಸ್ವರೂಪನು. ವಿಷ್ಣುವು ಯಜ್ಞಸ್ವರೂಪನು. |
| ಅಗ್ನಿಮ್ ಚ ಏವ ವಿಷ್ಣುಮ್ ಚ | ಯಜಮಾನನು ಈ ಯಾಗದಿಂದ ಅಗ್ನಿಯನ್ನೂ, ವಿಷ್ಣುವನ್ನೂ, |

---

ಕಾರಣಾಂತರಗಳಿಂದ ಸೋಮಯಾಗವನ್ನು ಮಾಡಲು ಆಗದೆ ಇರುವವನು ಅಗ್ನಾವಿಷ್ಣುದೇವತೆಗಳಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನನುಷ್ಠಿಸಬೇಕು. ಇದರಿಂದ ಯಜಮಾನನು ಅಗ್ನಿ–ವಿಷ್ಣುಗಳನ್ನು ಆರಾಧಿಸಿ, ತೃಪ್ತಿಪಡಿಸುತ್ತಾನೆ. ಪ್ರಸನ್ನರಾದ

ಸ್ವೇನ ಭಾಗಧೇಯೇನೋಪಧಾವತಿ ತಾವೇವಾಸ್ಮೈ ಯಜ್ಞಂ

ಪ್ರಯಚ್ಛತ ಉಪ್ಯೆನಂ ಯಜ್ಞೋ ನಮತ್ಯಾಗ್ನಾವೈಷ್ಣವಂ

ಘೃತೇ ಚರುಂ ನಿರ್ವಪೇಚ್ಚಕ್ಷುಷ್ಕಾಮೋಽಗ್ನೇರ್ವೈ ಚಕ್ಷುಷಾ

ಮನುಷ್ಯಾ ವಿಪಶ್ಯಂತಿ

---

ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ತೌ । ಏವ । ಅಸ್ಮೈ । ಯಜ್ಞಮ್ । ಪ್ರೇತಿ । ಯಚ್ಛತಃ । ಉಪೇತಿ । ಏನಮ್ । ಯಜ್ಞಃ । ನಮತಿ । ಆಗ್ನಾವೈಷ್ಣವ ಮಿತ್ಯಾಗ್ನಾ–ವೈಷ್ಣವಮ್ । ಘೃತೇ । ಚರುಮ್ । ನಿರಿತಿ । ವಪೇತ್ । ಚಕ್ಷುಷ್ಕಾಮ ಇತಿ ಚಕ್ಷುಃ–ಕಾಮಃ । ಅಗ್ನೇಃ । ವೈ । ಚಕ್ಷುಷಾ । ಮನುಷ್ಯಾಃ । ವೀತಿ । ಪಶ್ಯಂತಿ ।

---

| | |
|---|---|
| ಸ್ವೇನ ಭಾಗಧೇಯೇನ ಉಪಧಾವತಿ | ಅವರವರ ಹವಿರ್ಭಾಗಗಳನ್ನು ಸಮರ್ಪಿಸಿ ಸೇವಿಸುತ್ತಾನೆ. |
| ತೌ ಏವ ಅಸ್ಮೈ ಯಜ್ಞಮ್ ಪ್ರಯಚ್ಛತಃ | ಆ ಅಗ್ನಿ – ವಿಷ್ಣುಗಳೇ ಯಜಮಾನನಿಗೆ ಯಜ್ಞವು ಪ್ರಾಪ್ತವಾಗುವಂತೆ ಮಾಡುತ್ತಾರೆ. |
| ಏನಮ್ ಯಜ್ಞಃ ಉಪನಮತಿ | ಯಜ್ಞವು ಯಜಮಾನನಿಗೆ ಪ್ರಾಪ್ತವಾಗುತ್ತದೆ. |

**ಚಕ್ಷುಷ್ಕಾಮನಿಗೆ ವಿಹಿತವಾದ ಚರುಯಾಗ; ಪ್ರಶಂಸೆ**

| | |
|---|---|
| ಚಕ್ಷುಷ್ಕಾಮಃ ಆಗ್ನಾವೈಷ್ಣವಮ್ ಘೃತೇ ಚರುಮ್ ನಿರ್ವಪೇತ್ | ಒಳ್ಳೆಯ ಕಣ್ಣುಗಳನ್ನು ಬಯಸುವವನು ಅಗ್ನಾ ವಿಷ್ಣುದೇವತೆಗಳಿಗಾಗಿ ತುಪ್ಪದಲ್ಲಿ ಬೇಯಿಸಿದ ಚರುದ್ರವ್ಯವುಳ್ಳ ಯಾಗವನ್ನು ಮಾಡಬೇಕು. |
| ಅಗ್ನೇಃ ವೈ ಚಕ್ಷುಷಾ ಮನುಷ್ಯಾಃ ವಿಪಶ್ಯಂತಿ | ಅಗ್ನಿದೇವನ ಕಣ್ಣುಗಳಿಂದಲೇ ಮನುಷ್ಯರು ಚೆನ್ನಾಗಿ ನೋಡುತ್ತಾರೆ. |

---

ಅಗ್ನಿ–ವಿಷ್ಣುಗಳು ಯಜಮಾನನಿಗೆ ಯಜ್ಞವು ಪ್ರಾಪ್ತವಾಗುವಂತೆ ಮಾಡುತ್ತಾರೆ. ಯಜಮಾನನು ಸೋಮಯಾಜಿಯಾಗುತ್ತಾನೆ.

ಒಳ್ಳೆಯ ದೃಷ್ಟಿಪಾಟವವನ್ನು ಬಯಸುವವನು ಅಗ್ನಾವಿಷ್ಣುದೇವತೆಗಳಿಗಾಗಿ ಘೃತಪಕ್ವವಾದ ಚರುಯಾಗವನ್ನು ಮಾಡಬೇಕು. ಅಗ್ನಿಯು ಪ್ರಕಾಶಕ್ಕೆ ಅಧಿಪತಿ.

ಯಜ್ಞಸ್ಯ ದೇವಾ ಅಗ್ನಿಂ ಚೈವ ವಿಷ್ಣುಂ ಚ ಸ್ವೇನ ಭಾಗ

ಧೇಯೇನೋಪಧಾವತಿ [ತಾವೇವ (೩) ಅಸ್ಮಿನ್ಚಕ್ಷುರ್ಧತ್ತಃ]

ತಾವೇವಾಸ್ಮಿನ್ಚಕ್ಷುರ್ಧತ್ತಶ್ಚಕ್ಷುಷ್ಮಾನೇವ ಭವತಿ

---

ಯಜ್ಞಸ್ಯ । ದೇವಾಃ । ಅಗ್ನಿಮ್ । ಚ । ಏವ । ವಿಷ್ಣುಮ್ । ಚ । ಸ್ವೇನ । ಭಾಗಧೇಯೇ

ನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ತೌ । ಏವ । ಅಸ್ಮಿನ್ । ಚಕ್ಷುಃ । ಧತ್ತಃ ।

ಚಕ್ಷುಷ್ಮಾನ್ । ಏವ । ಭವತಿ ।

---

| | |
|---|---|
| ಯಜ್ಞಸ್ಯ ವೈ ಚಕ್ಷುಷಾ ದೇವಾಃ ವಿಪಶ್ಯಂತಿ | ದೇವತೆಗಳು ಯಜ್ಞರೂಪವಾದ ಕಣ್ಣಿನಿಂದ ಚೆನ್ನಾಗಿ ನೋಡುತ್ತಾರೆ. |
| ಅಗ್ನಿಮ್ ಚ ವಿಷ್ಣುಮ್ ಚ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಯಜಮಾನನು ಈ ಯಾಗದಿಂದ] ಅಗ್ನಿಯನ್ನೂ, ವಿಷ್ಣುವನ್ನೂ ಅವರವರ ಭಾಗವನ್ನಿತ್ತು ಸೇವಿಸುತ್ತಾನೆ. |
| ತೌ ಏವ ಅಸ್ಮಿನ್ ಚಕ್ಷುಃ ಧತ್ತಃ | ಆ ಅಗ್ನಿ–ವಿಷ್ಣುಗಳು ಈ ಯಜಮಾನನಿಗೆ ದೃಷ್ಟಿಪಾಟವವನ್ನುಂಟುಮಾಡುತ್ತಾರೆ. |
| ಚಕ್ಷುಷ್ಮಾನ್ ಏವ ಭವತಿ | ಯಜಮಾನನು ಒಳ್ಳೆಯ ಕಣ್ಣುಳ್ಳವನಾಗಿ ಆಗುತ್ತಾನೆ. |

---

ಪ್ರಕಾಶಾಧಿಪತಿಯಾದ ಅಗ್ನಿಯ ಚಕ್ಷುಸ್ಸಿನಿಂದಲೇ ಮನುಷ್ಯರು ಚೆನ್ನಾಗಿ ನೋಡುತ್ತಾರೆ. ಯಜ್ಞರೂಪವಾದ ವಿಷ್ಣುವಿನ ಕಣ್ಣಿನಿಂದಲೇ ದೇವತೆಗಳು ನೋಡುತ್ತಾರೆ.

ಈ ಯಾಗದಿಂದ ಯಜಮಾನನು ಅಗ್ನಿಯನ್ನೂ, ವಿಷ್ಣುವನ್ನೂ, ತೃಪ್ತಿಪಡಿಸುತ್ತಾನೆ. ಅವರು ಪ್ರಸನ್ನರಾಗಿ ಈ ಯಜಮಾನನಿಗೆ ಒಳ್ಳೆಯ ಕಣ್ಣುಗಳನ್ನು ಕೊಡುತ್ತಾರೆ. ಯಜಮಾನನು ಒಳ್ಳೆಯ ಕಣ್ಣುಳ್ಳವನೇ ಆಗುತ್ತಾನೆ.

ಧೇನ್ವೈ ವಾ ಏತದ್ರೇತೋ ಯದಾಜ್ಯಮನಡು

ಹಸ್ತಂಡುಲಾ ಮಿಥುನಾದೇವಾಸ್ಮೈ ಚಕ್ಷುಃ ಪ್ರಜನಯತಿ

ಘೃತೇ ಭವತಿ ತೇಜೋ ವೈ ಘೃತಂ ತೇಜಶ್ಚಕ್ಷುಸ್ತೇಜ

ಸೈವಾಸ್ಮೈ ತೇಜಶ್ಚಕ್ಷುರವರುಂಧ

---

ಧೇನ್ವೈ । ವೈ । ಏತತ್ । ರೇತಃ । ಯತ್ । ಆಜ್ಯಮ್ । ಅನಡುಹಃ । ತಂಡುಲಾಃ ।

ಮಿಥುನಾತ್ । ಏವ । ಅಸ್ಮೈ । ಚಕ್ಷುಃ । ಪ್ರೇತಿ । ಜನಯತಿ । ಘೃತೇ । ಭವತಿ । ತೇಜಃ । ವೈ ।

ಘೃತಮ್ । ತೇಜಃ । ಚಕ್ಷುಃ । ತೇಜಸಾ । ಏವ । ಅಸ್ಮೈ । ತೇಜಃ । ಚಕ್ಷುಃ । ಅವೇತಿ । ರುಂಧೇ ।

---

### ಹಿಂದಿನ ಋಕ್ಕಿಯ ಅರ್ಥವಾದ

| | |
|---|---|
| ಯತ್ ಆಜ್ಯಮ್ | ಆಜ್ಯವೆನ್ನುವುದು ಯಾವುದುಂಟೋ ಅದು |
| ಧೇನ್ವೈ ವೈ ಏತತ್ ರೇತಃ | ಹಸುವಿನ ಉತ್ಪಾದಕಶಕ್ತಿಯಷ್ಟೆ. ಅಕ್ಕಿಯು |
| ಅನಡುಹಃ ತಂಡುಲಾಃ | ಹೋರಿಯ ಉತ್ಪಾದಕಶಕ್ತಿಯಾಗಿದೆ. |
| ಮಿಥುನಾತ್ ಏವ ಅಸ್ಮೈ | ಈ ಗೋವೃಷಭಯುಗ್ಮದಿಂದಲೇ |
| ಚಕ್ಷುಃ ಪ್ರಜನಯತಿ | ಯಜಮಾನನು ಕಣ್ಣನ್ನು ಉಂಟುಮಾಡು |
| ಘೃತೇ ಭವತಿ | ತ್ತಾನೆ. ಚರುವು ತುಪ್ಪದಲ್ಲಿ ಪಕ್ವವಾಗುತ್ತದೆ. |
| ತೇಜಃ ವೈ ಘೃತಮ್ | ಘೃತವು ತೇಜೋರೂಪವಷ್ಟೆ. |
| ತೇಜಃ ಚಕ್ಷುಃ | ಕಣ್ಣು ತೇಜಸ್ಸ್ವರೂಪವಾಗಿದೆ. |
| ತೇಜಸಾ ಏವ ಅಸ್ಮೈ | ಹೀಗೆ ತೇಜಃಸ್ವರೂಪವಾದ ಆಜ್ಯದಿಂದಲೇ |
| ತೇಜಃ ಚಕ್ಷುಃ ಅವರುಂಧೇ | ಯಜಮಾನನು ತೇಜಃಸ್ವರೂಪವಾದ ಕಣ್ಣುಗಳನ್ನು ಹೊಂದುತ್ತಾನೆ. |

---

ತುಪ್ಪವು ಹಸುವಿನಿಂದ ಉಂಟಾದ ಉತ್ಪಾದಕಶಕ್ತಿಯಾಗಿದೆ. ಕೃಷಿಯಿಂದ ಉಂಟಾಗುವ ತಂಡುಲಗಳು ವೃಷಭದಿಂದ ಉಂಟಾಗುವುದರಿಂದ ಅವು ವೃಷಭದಿಂದಾದ ಉತ್ಪಾದಕಶಕ್ತಿಗಳೆನಿಸಿವೆ. ಇಂತಹ ಚರುಯಾಗದಿಂದ ಗೋವೃಷಭಮಿಥುನದಿಂದಲೇ ಕಣ್ಣನ್ನು ಉಂಟು ಮಾಡಿದಂತಾಗುತ್ತದೆ. ತುಪ್ಪದಿಂದ ಚರುವು ಸಿದ್ಧವಾಗಬೇಕು. ತುಪ್ಪವೂ

ಇಂದ್ರಿಯಂ ವೈ ವೀರ್ಯಂ ವೃಂಕ್ತೇ ಭ್ರಾತೃವ್ಯೋ

ಯಜಮಾನೋಽಯಜಮಾನಸ್ಯಾಧ್ವರಕಲ್ಪಾಂ

ಪ್ರತಿ ನಿರ್ವಪೇದ್ಭ್ರಾತೃವ್ಯೇ ಯಜಮಾನೇ ನಾಸ್ಯೇಂದ್ರಿಯಂ

(೪) ವೀರ್ಯಂ ವೃಂಕ್ತೇ

---

**ಇಂದ್ರಿಯಮ್** । ವೈ । ವೀರ್ಯಮ್ । ವೃಂಕ್ತೇ । ಭ್ರಾತೃವ್ಯಃ । ಯಜಮಾನಃ । ಅಯಜಮಾನಸ್ಯ । ಅಧ್ವರಕಲ್ಪಾಮಿತ್ಯಧ್ವರ-ಕಲ್ಪಾಮ್ । ಪ್ರತಿ । ನಿರಿತಿ । ವಪೇತ್ । ಭ್ರಾತೃವ್ಯೇ । ಯಜಮಾನೇ । ನ । ಅಸ್ಯ । ಇಂದ್ರಿಯಮ್ । ವೀರ್ಯಮ್ । ವೃಂಕ್ತೇ ।

---

***ಅಧ್ವರಕಲ್ಪೇಷ್ಟಿವಿಧಿ; ಪ್ರಶಂಸೆ**

| | |
|---|---|
| ಭ್ರಾತೃವ್ಯಃ ಯಜಮಾನಃ | ಸೋಮಯಾಗವನ್ನು ಮಾಡಿದ ಶತ್ರುವು |
| ಅಯಜಮಾನಸ್ಯ | ಸೋಮಯಾಗವನ್ನು ಮಾಡದಿರುವ ಶತ್ರುವಿನ |
| ಇಂದ್ರಿಯಮ್ ವೀರ್ಯಮ್ ವೃಂಕ್ತೇ ವೈ | ವಾಗಾದಿ ಇಂದ್ರಿಯಶಕ್ತಿಯನ್ನೂ, ಸಾಮರ್ಥ್ಯವನ್ನೂ ತನ್ನದಾಗಿಸಿಕೊಳ್ಳುತ್ತಾನೆ. |
| ಅಯಜಮಾನಸ್ಯ ಅಧ್ವರಕಲ್ಪಾಮ್ ಪ್ರತಿ ನಿರ್ವಪೇತ್ | [ಆಗ] ಸೋಮಯಾಗವನ್ನು ಮಾಡದಿರುವವನಿಗಾಗಿ ಅಧ್ವರಕಲ್ಪೇಷ್ಟಿಯನ್ನು ಮಾಡಬೇಕು. |
| ಯಜಮಾನೇ ಭ್ರಾತೃವ್ಯೇ [ಸತಿ] | ಸೋಮಯಾಗ ಮಾಡಿದವನು ಶತ್ರುವಾದರೂ |

---

ತೇಜಸ್ಸ್ವರೂಪ. ಕಣ್ಣೂ ತೇಜಸ್ಸ್ವರೂಪ. ಇದರಿಂದ ತೇಜಸ್ಸ್ವರೂಪವಾದ ಘೃತದಿಂದಲೇ ಯಜಮಾನನು ತೇಜಃಸ್ವರೂಪವಾದ ಕಣ್ಣನ್ನು ಪಡೆಯುತ್ತಾನೆ. ಒಳ್ಳೆಯ ದೃಷ್ಟಿಯುಳ್ಳವನಾಗುತ್ತಾನೆ.

ಸೋಮಯಾಗವನ್ನು ಮಾಡಿರುವ ಶತ್ರುವು ಸೋಮಯಾಗವನ್ನು ಮಾಡದಿರುವ

---

* ಸೋಮಯಾಗಕ್ಕಿಂತ ಸ್ವಲ್ಪ ನ್ಯೂನವಾದ ಇಷ್ಟಿ.

ಪುರಾ ವಾಚಃ ಪ್ರವದಿತೋರ್ನಿರ್ವಪೇದ್ಯಾವತ್ಯೇವ ವಾಕ್ತಾಮಪ್ರೋದಿತಾಂ ಭ್ರಾತೃವ್ಯಸ್ಯ ವೃಂಕ್ತೇ ತಾಮಸ್ಯ ವಾಚಂ ಪ್ರವದಂತೀಮನ್ಯಾ ವಾಚೋಽನು ಪ್ರವದಂತಿ

ಪುರಾ । ವಾಚಃ । ಪ್ರವದಿತೋರಿತಿ ಪ್ರ-ವದಿತೋಃ । ನಿಃ । ವಪೇತ್ । ಯಾವತೀ । ಏವ । ವಾಕ್ । ತಾಮ್ । ಅಪ್ರೋದಿತಾಮಿತ್ಯಪ್ರ-ಉದಿತಾಮ್ । ಭ್ರಾತೃವ್ಯಸ್ಯ । ವೃಂಕ್ತೇ । ತಾಮ್ । ಅಸ್ಯ । ವಾಚಮ್ । ಪ್ರವದಂತೀಮಿತಿ ಪ್ರ-ವದಂತೀಮ್ । ಅನ್ಯಾಃ । ವಾಚಃ । ಅನು । ಪ್ರೇತಿ । ವದಂತಿ ।

**ಅಧ್ವರಕಲ್ಪೇಷ್ಟಿಯ ಕಾಲವಿಧಿ; ಪ್ರಶಂಸೆ**

| | |
|---|---|
| ಪುರಾ ವಾಚಃ ಪ್ರವದಿತೋಃ ನಿರ್ವಪೇತ್ | ಹಕ್ಕಿಗಳು ಎಚ್ಚರಗೊಂಡು ಶಬ್ದ ಮಾಡುವ ಮೊದಲೇ ಈ ಇಷ್ಟಿಯನ್ನು ಅನುಷ್ಠಿಸಬೇಕು. |
| ಯಾವತೀ ಏವ ವಾಕ್ | [ಶತ್ರುವಿನ] ಮಾತೆಂಬುದು ಏನುಂಟೋ |
| ಭ್ರಾತೃವ್ಯಸ್ಯ ಅಪ್ರೋದಿತಾಮ್ ತಾಮ್ ವೃಂಕ್ತೇ | ಶತ್ರುವಿನ ಆ ಮಾತು ಹೊರಡದಂತೆಯೇ ಮಾಡಿ ತನ್ನ ವಶಪಡಿಸಿಕೊಳ್ಳುತ್ತಾನೆ. |
| ಅಸ್ಯ ಪ್ರವದಂತೀಮ್ ತಾಮ್ ವಾಚಮ್ ಅನ್ಯಾಃ ವಾಚಃ ಅನುಪ್ರವದಂತಿ | ಸ್ಪಷ್ಟವಾಗಿ ಉಚ್ಚರಿಸಲ್ಪಟ್ಟ ಈತನ ಮಾತುಗಳನ್ನು ಉಳಿದ ಮಾತುಗಳೂ ಅನುಸರಿಸುತ್ತವೆ. |

ಶತ್ರುವಿನ ಇಂದ್ರಿಯ ವೀರ್ಯಾದಿಗಳನ್ನು ತಾನೇ ಹೊಂದುತ್ತಾನೆ. ಆಗ ಯಾಗ ಮಾಡದಿರುವ ಯಜಮಾನನು ಪ್ರತೀಕಾರಕ್ಕಾಗಿ ಅಧ್ವರಕಲ್ಪೇಷ್ಟಿಯನ್ನು ಅನುಷ್ಠಿಸಬೇಕು. ಇದರಿಂದ ಸೋಮಯಾಗವನ್ನು ಮಾಡಿರುವ ಶತ್ರುವು ಯಾಗ ಮಾಡದಿರುವ ತನ್ನ ಶತ್ರುವಿನ ಇಂದ್ರಿಯ ಬಲಾದಿಗಳನ್ನು ಪಡೆಯಲಾರನು.

ಅಧ್ವರಕಲ್ಪೇಷ್ಟಿಯನ್ನು ಹಕ್ಕಿಗಳು ಎಚ್ಚರಗೊಂಡು ಕೂಗುವ ಕಾಲಕ್ಕೆ ಅಂದರೆ ಪ್ರಾತರನುವಾಕಕಾಲಕ್ಕೆ ಮೊದಲೇ ಆರಂಭಿಸಬೇಕು. ಇದರಿಂದ ಶತ್ರುವಾದ

ತಾ ಇಂದ್ರಿಯಂ ವೀರ್ಯಂ ಯಜಮಾನೇ ದಧತ್ಯಾಗ್ನಾ

ವೈಷ್ಣವಮಷ್ಟಾಕಪಾಲಂ ನಿರ್ವಪೇತ್ಪ್ರಾತಃ ಸವನಸ್ಯಾಕಾಲೇ

---

ತಾಃ । ಇಂದ್ರಿಯಮ್ । ವೀರ್ಯಮ್ । ಯಜಮಾನೇ । ದಧತಿ । ಆಗ್ನಾವೈಷ್ಣವಮಿತ್ಯಾಗ್ನಾ – ವೈಷ್ಣವಮ್ । ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ । ನಿರಿತಿ । ವಪೇತ್ । ಪ್ರಾತಃ ಸವನಸ್ಯೇತಿ ಪ್ರಾತಃ–ಸವನಸ್ಯ । ಆಕಾಲ ಇತ್ಯಾ–ಕಾಲೇ ।

---

| | |
|---|---|
| ತಾಃ ಇಂದ್ರಿಯಮ್ ವೀರ್ಯಮ್ ಯಜಮಾನೇ ದಧತಿ | ಆ ಮಾತುಗಳು ಇಂದ್ರಿಯವೀರ್ಯಾದಿಗಳನ್ನು ಯಜಮಾನನಲ್ಲಿ ನೆಲೆಗೊಳಿಸುತ್ತವೆ. |

**ಅಧ್ವರಕಲ್ಪೇಷ್ಟಿಯ ವಿಧಾನ; ಪ್ರಶಂಸೆ**

| | |
|---|---|
| ಪ್ರಾತಃಸವನಸ್ಯ ಆಕಾಲೇ | ಸೋಮಯಾಗದ ಪ್ರಾತಃಸವನಕಾಲವು ಮುಗಿಯುವ ಕಾಲದ ಒಳಗೇ |
| ಆಗ್ನಾವೈಷ್ಣವಮ್ ಅಷ್ಟಾಕಪಾಲಮ್ ನಿರ್ವಪೇತ್ | ಅಗ್ನಾವಿಷ್ಣುದೇವತಾಕವಾದ ಅಷ್ಟಾಕಪಾಲ ಪುರೋಡಾಶದ್ರವ್ಯವುಳ್ಳ ಯಾಗವನ್ನು ಅನುಷ್ಠಿಸಬೇಕು. |

---

ಸೋಮಯಾಜಿಯ ಮಾತುಗಳನ್ನೇ ತಡೆಗಟ್ಟಿದಂತಾಗುತ್ತದೆ. ಅಧ್ವರಕಲ್ಪೇಷ್ಟಿಯನ್ನು ಅನುಷ್ಠಿಸುವವನ ಮಾತುಗಳನ್ನೇ ಇತರ ಎಲ್ಲ ಮಾತುಗಳೂ ಅನುಸರಿಸುತ್ತವೆ. ಆ ಮಾತುಗಳು ಅಧ್ವರಕಲ್ಪೇಷ್ಟಿಕರ್ತೃವಿನಲ್ಲಿ ಇಂದ್ರಿಯ–ವೀರ್ಯಾದಿಗಳು ನೆಲೆಗೊಳ್ಳುವಂತೆ ಮಾಡುತ್ತವೆ.

ಅಧ್ವರಕಲ್ಪೇಷ್ಟಿಯ ಕ್ರಮವು ಹೀಗಿದೆ; ಸೋಮಯಾಗದ ಪ್ರಾತಃಸವನಕಾಲವು ಮುಗಿಯುವುದರೊಳಗಾಗಿ ಅಂದರೆ ಆ ಕಾಲದಲ್ಲಿ ಅಗ್ನಾವಿಷ್ಣುದೇವತೆಗಳಿಗಾಗಿ ಅಷ್ಟಾಕಪಾಲಪುರೋಡಾಶಯಾಗವನ್ನು ಮಾಡಬೇಕು. ಸರಸ್ವತೀದೇವತೆಗಾಗಿ ಆಜ್ಯ

ಸರಸ್ವತ್ಯಾಜ್ಯಭಾಗಾ ಸ್ಯಾದ್ಬಾರ್‌ಹಸ್ಪತ್ಯಶ್ಚರುರ್ಯದಷ್ಟಾ

ಕಪಾಲೋ ಭವತ್ಯಷ್ಟಾಕ್ಷರಾ ಗಾಯತ್ರೀ ಗಾಯತ್ರಂ

ಪ್ರಾತಃಸವನಂ ಪ್ರಾತಃಸವನಮೇವ

॥ [ತೇನಾಪ್ನೋತಿ (೫) ಆಗ್ನಾವೈಷ್ಣವ...]

---

ಸರಸ್ವತೀ । ಆಜ್ಯಭಾಗೇತ್ಯಾಜ್ಯ–ಭಾಗಾ । ಸ್ಯಾತ್ । ಬಾರ್‌ಹಸ್ಪತ್ಯಃ । ಚರುಃ । ಯತ್ । ಅಷ್ಟಾಕಪಾಲ ಇತ್ಯಷ್ಟಾ–ಕಪಾಲಃ । ಭವತಿ । ಅಷ್ಟಾಕ್ಷರೇತ್ಯಷ್ಟಾ–ಅಕ್ಷರಾ । ಗಾಯತ್ರೀ । ಗಾಯತ್ರಮ್ । ಪ್ರಾತಃಸವನಮಿತಿ ಪ್ರಾತಃ – ಸವನಮ್ । ಪ್ರಾತಃ ಸವನಮಿತಿ ಪ್ರಾತಃ– ಸವನಮ್ । ಏವ ।

---

| | |
|---|---|
| ಸರಸ್ವತೀ ಆಜ್ಯಭಾಗಾ ಸ್ಯಾತ್ | ಆಜ್ಯದ್ರವ್ಯಕವಾದ ಯಾಗವನ್ನು ಸರಸ್ವತೀ ದೇವತೆಗಾಗಿ ಮಾಡಬೇಕು. |
| ಬಾರ್‌ಹಸ್ಪತ್ಯಃ ಚರುಃ | ಬೃಹಸ್ಪತಿದೇವತೆಗಾಗಿ ಚರುಯಾಗವನ್ನು ಮಾಡಬೇಕು. |
| ಯತ್ ಅಷ್ಟಾಕಪಾಲಃ ಭವತಿ | ಅಷ್ಟಾಕಪಾಲಪುರೋಡಾಶದ್ರವ್ಯವು ಇದೆ. |
| ಅಷ್ಟಾಕ್ಷರಾ ಗಾಯತ್ರೀ | ಗಾಯತ್ರಿಯು ಎಂಟು ಅಕ್ಷರದ ಪಾದ ಗಳಿಂದ ಕೂಡಿದೆ. |
| ಗಾಯತ್ರಮ್ ಪ್ರಾತಃಸವನಮ್ | ಪ್ರಾತಃಸವನವು ಗಾಯತ್ರಿಗೆ ಸಂಬಂಧಿಸಿದೆ. |
| ಪ್ರಾತಃ ಸವನಮ್ ಏವ | [ಅಷ್ಟಾಕಪಾಲಪುರೋಡಾಶದ್ರವ್ಯದಿಂದ] ಪ್ರಾತಃಸವನವನ್ನು |

---

ದ್ರವ್ಯಯಾಗವನ್ನು ಮಾಡಬೇಕು. ಬೃಹಸ್ಪತಿದೇವತೆಗಾಗಿ ಚರುಯಾಗವನ್ನು ಮಾಡಬೇಕು.

ಈ ಅಷ್ಟಸಂಖ್ಯೆಯು ಪ್ರಶಸ್ತವಾದುದು. ಗಾಯತ್ರಿಯ ಪಾದಗಳೂ ಎಂಟು ಅಕ್ಷರ ಗಳಿಂದ ಕೂಡಿವೆ. ಪ್ರಾತಃಸವನವೂ ಗಾಯತ್ರಿಗೆ ಸಂಬಂಧಿಸಿದೆ. ಈ ಅಷ್ಟಾಕಪಾಲ ಪುರೋಡಾಶಯಾಗದಿಂದ ಸೋಮಯಾಗದ ಪ್ರಾತಃಸವನವನ್ನು ಮಾಡಿದಂತಾಗುತ್ತದೆ.

# ತೇನಾಪ್ನೋತ್ಯಾಗ್ನಾವೈಷ್ಣವಮೇಕಾದಶಕಪಾಲಂ ನಿರ್ವಪೇನ್ಮಾಧ್ಯಂದಿನಸ್ಯ ಸವನಸ್ಯಾಕಾಲೇ ಸರಸ್ವತ್ಯಾಜ್ಯ ಭಾಗಾ ಸ್ಯಾದ್ಬಾರ್‌ಹಸ್ಪತ್ಯಶ್ಚರುರ್ಯದೇಕಾದಶಕಪಾಲೋ

---

ತೇನ। ಆಪ್ನೋತಿ। **ಆಗ್ನಾವೈಷ್ಣವಮಿತ್ಯಾಗ್ನಾ – ವೈಷ್ಣವಮ್** । ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್ । ನಿರಿತಿ। ವಪೇತ್। ಮಾಧ್ಯಂದಿನಸ್ಯ। ಸವನಸ್ಯ। ಅಕಾಲ ಇತ್ಯಾ–ಕಾಲೇ। ಸರಸ್ವತೀ। ಆಜ್ಯಭಾಗೇತ್ಯಾಜ್ಯ–ಭಾಗಾ। ಸ್ಯಾತ್। ಬಾರ್‌ಹಸ್ಪತ್ಯಃ। ಚರುಃ। ಯತ್। ಏಕಾದಶಕಪಾಲ ಇತ್ಯೇಕಾದಶ–ಕಪಾಲಃ।

---

| | |
|---|---|
| ತೇನ ಆಪ್ನೋತಿ | ಮಾಡಿದಂತಾಗುತ್ತದೆ. |

**ಅಧ್ವರಕಲ್ಪೇಷ್ಟಿಯ ಮಾಧ್ಯಂದಿನಕರ್ತವ್ಯ; ಅರ್ಥವಾದ.**

| | |
|---|---|
| ಆಗ್ನಾವೈಷ್ಣವಮ್ ಏಕಾದಶಕಪಾಲಮ್ ನಿರ್ವಪೇತ್ ಮಾಧ್ಯಂದಿನಸ್ಯ ಸವನಸ್ಯ ಅಕಾಲೇ | ಮಾಧ್ಯಂದಿನಸವನದ ಕಾಲವು ಮುಗಿಯುವುದರೊಳಗೆ ಅಗ್ನಾವಿಷ್ಣು ದೇವತೆಗಳಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು. |
| ಸರಸ್ವತೀ ಆಜ್ಯಭಾಗಾ ಸ್ಯಾತ್ | ಸರಸ್ವತೀದೇವತೆಗಾಗಿ ಆಜ್ಯದ್ರವ್ಯಯಾಗವನ್ನು ಅನುಷ್ಠಿಸಬೇಕು. |
| ಬಾರ್‌ಹಸ್ಪತ್ಯಃ ಚರುಃ | ಬೃಹಸ್ಪತಿದೇವತೆಗಾಗಿ ಚರುಯಾಗವನ್ನು ಮಾಡಬೇಕು. |
| ಯತ್ ಏಕಾದಶಕಪಾಲಃ | ಏಕಾದಶಕಪಾಲಪುರೋಡಾಶ ಯಾಗವು |

---

ಈ ಅಧ್ವರಕಲ್ಪೇಷ್ಟಿಯ ಮಧ್ಯಾಹ್ನಕಾಲದ ಕರ್ತವ್ಯವು ಹೀಗಿದೆ. ಅಗ್ನಾವಿಷ್ಣು ದೇವತೆಗಳಿಗಾಗಿ ಮಾಧ್ಯಂದಿನಸವನಕಾಲವು ಮುಗಿಯವುದರೊಳಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಸರಸ್ವತೀದೇವತೆಗಾಗಿ ಆಜ್ಯದ್ರವ್ಯಯಾಗವನ್ನು ಮಾಡಭೇಕು. ಬೃಹಸ್ಪತಿದೇವತೆಗಾಗಿ ಚರುದ್ರವ್ಯಯಾಗವನ್ನು ಮಾಡಬೇಕು.

ಭವತ್ಯೇಕಾದಶಾಕ್ಷರಾ ತ್ರಿಷ್ಟುಪ್ತ್ರೈಷ್ಟುಭಂ ಮಾಧ್ಯಂದಿನಗ್ಂ

ಸವನಂ ಮಾಧ್ಯಂದಿನಮೇವ ಸವನಂ ತೇನಾಪ್ನೋತ್ಯಾಗ್ನಾ

ವೈಷ್ಣವಂ ದ್ವಾದಶಕಪಾಲಂ ನಿರ್ವಪೇತ್ತೃತೀಯಸವನಸ್ಯಾಕಾಲೇ

---

ಭವತಿ । ಏಕಾದಶಾಕ್ಷರೇತ್ಯೇಕಾದಶ–ಅಕ್ಷರಾ । ತ್ರಿಷ್ಟುಪ್ । ತ್ರೈಷ್ಟುಭಮ್ ।

ಮಾಧ್ಯಂದಿನಮ್ । ಸವನಮ್ । ಮಾಧ್ಯಂದಿನಮ್ । ಏವ । ಸವನಮ್ । ತೇನ । ಆಪ್ನೋತಿ ।

ಆಗ್ನಾವೈಷ್ಣವಮಿತ್ಯಾಗ್ನಾ–ವೈಷ್ಣವಮ್ । ದ್ವಾದಶಕಪಾಲಮಿತಿ ದ್ವಾದಶ–ಕಪಾಲಮ್ ।

ನಿರಿತಿ । ವಪೇತ್ । ತೃತೀಯಸವನಸ್ಯೇತಿ ತೃತೀಯ–ಸವನಸ್ಯ । ಆಕಾಲ ಇತ್ಯಾ–ಕಾಲೇ ।

---

| | |
|---|---|
| ಭವತಿ | ಯಾವುದುಂಟೋ ಅದರ ಫಲವು ಹೀಗಿದೆ |
| ಏಕಾದಶಾಕ್ಷರಾ ತ್ರಿಷ್ಟುಪ್ | ತ್ರಿಷ್ಟುಪ್‌ಛಂದಸ್ಸು ಹನ್ನೊಂದು ಅಕ್ಷರಗಳುಳ್ಳ ಪಾದಗಳುಳ್ಳದ್ದು. |
| ಮಾಧ್ಯಂದಿನಮ್ ಸವನಮ್ ತ್ರೈಷ್ಟುಭಮ್ | ಮಾಧ್ಯಂದಿನಸವನವೂ ತ್ರಿಷ್ಟುಪ್ ಛಂದಸ್ಸಿಗೆ ಸಂಬಂಧಿಸಿದೆ. |
| ಮಾಧ್ಯಂದಿನಮ್ ಸವನಮ್ ಏವ ತೇನ ಆಪ್ನೋತಿ | ಮಾಧ್ಯಂದಿನಸವನವನ್ನೇ ಹನ್ನೊಂದು ಸಂಖ್ಯೆಯ ಪುರೋಡಾಶವಿರುವುದರಿಂದ ಹೊಂದಿದಂತಾಗುತ್ತದೆ. |

**ಈ ಯಾಗದ ಸಾಯಂಕಾಲದ ಕರ್ತವ್ಯ; ಪ್ರಶಂಸೆ**

| | |
|---|---|
| ತೃತೀಯಸವನಸ್ಯ ಆಕಾಲೇ ಆಗ್ನಾವೈಷ್ಣವಮ್ ದ್ವಾದಶಕಪಾಲಮ್ ನಿರ್ವಪೇತ್ | ಸೋಮಯಾಗದ ತೃತೀಯಸವನವು ಮುಗಿಯುವ ಕಾಲದೊಳಗೆ ಅಗ್ನಾವಿಷ್ಣು ದೇವತೆಗಳಿಗಾಗಿ ದ್ವಾದಶಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. |

---

ಕಪಾಲಗಳ ಹನ್ನೊಂದು ಸಂಖ್ಯೆಯ ಫಲವು ಹೀಗಿದೆ : ತ್ರಿಷ್ಟುಪ್‌ಛಂದಸ್ಸಿನಲ್ಲಿ ಹನ್ನೊಂದು ಅಕ್ಷರಗಳ ಪಾದಗಳಿವೆ. ಮಾಧ್ಯಂದಿನಸವನವು ತ್ರಿಷ್ಟುಪ್‌ಛಂದಸ್ಸಿಗೆ ಸಂಬಂಧಿಸಿದೆ. ಆದುದರಿಂದ – ಏಕಾದಶಕಪಾಲಪುರೋಡಾಶಯಾಗದಿಂದ ಸೋಮಯಾಗದ – ಮಾಧ್ಯಂದಿನಸವನವನ್ನು ಮಾಡಿದಂತಾಗುತ್ತದೆ.

ಸರಸ್ವತ್ಯಾಜ್ಯಭಾಗಾ ಸ್ಯಾದ್ಬಾರ್ಹಸ್ಪತ್ಯಶ್ಚರುರ್ಯದ್ದ್ವಾದಶ ಕಪಾಲೋ ಭವತಿ ದ್ವಾದಶಾಕ್ಷರಾ ಜಗತೀ ಜಾಗತಂ ತೃತೀಯಸವನಂ ತೃತೀಯಸವನಮೇವ ತೇನಾಪ್ನೋತಿ

---

ಸರಸ್ವತೀ । ಆಜ್ಯಭಾಗೇತ್ಯಾಜ್ಯ–ಭಾಗಾ । ಸ್ಯಾತ್ । ಬಾರ್ಹಸ್ಪತ್ಯಃ । ಚರುಃ । ಯತ್ । ದ್ವಾದಶಕಪಾಲ ಇತಿ ದ್ವಾದಶ–ಕಪಾಲಃ । ಭವತಿ । ದ್ವಾದಶಾಕ್ಷರೇತಿ ದ್ವಾದಶ–ಅಕ್ಷರಾ । ಜಗತೀ । ಜಾಗತಮ್ । ತೃತೀಯಸವನಮಿತಿ ತೃತೀಯ–ಸವನಮ್ । ತೃತೀಯ ಸವನಮಿತಿ ತೃತೀಯ–ಸವನಮ್ । ಏವ । ತೇನ । ಆಪ್ನೋತಿ ।

---

| | |
|---|---|
| ಸರಸ್ವತೀ ಆಜ್ಯಭಾಗಾ ಸ್ಯಾತ್ ಬಾರ್ಹಸ್ಪತ್ಯಃ ಚರುಃ | ಸರಸ್ವತೀದೇವತೆಗಾಗಿ ಆಜ್ಯದ್ರವ್ಯಯಾಗವನ್ನು ಮಾಡಬೇಕು. ಬೃಹಸ್ಪತಿದೇವತೆಗಾಗಿ ಚರು ಯಾಗವನ್ನು ಮಾಡಬೇಕು. |
| ಯತ್ ದ್ವಾದಶಕಪಾಲಃ ಭವತಿ | ದ್ವಾದಶಕಪಾಲಪುರೋಡಾಶವು ಯಾಗದ್ರವ್ಯ ವಾಗಿರುವುದರ [ಫಲವು ಹೀಗಿದೆ] |
| ದ್ವಾದಶಾಕ್ಷರಾ ಜಗತೀ | ಜಗತೀಛಂದಸ್ಸು ಹನ್ನೆರಡು ಅಕ್ಷರಗಳ ಪಾದ ಗಳನ್ನು ಹೊಂದಿರುವುದಾಗಿದೆ. |
| ಜಾಗತಮ್ ತೃತೀಯ ಸವನಮ್ | ತೃತೀಯಸವನವೂ ಜಗತೀಛಂದಸ್ಸಿಗೆ ಸಂಬಂಧಿಸಿದುದಾಗಿದೆ. |
| ತೇನ ತೃತೀಯಸವನಮ್ ಏವ ಆಪ್ನೋತಿ | ದ್ವಾದಶಸಂಖ್ಯೆಯಿಂದ ಸೋಮಯಾಗದ ತೃತೀಯಸವನವನ್ನು ಹೊಂದಿದಂತಾಗುತ್ತದೆ. |

---

ಈ ಯಾಗದ ಸಾಯಂಕಾಲದ ಕರ್ತವ್ಯವು ಹೀಗಿದೆ; ಸೋಮಯಾಗದ ತೃತೀಯ ಸವನದ ಕಾಲವು ಮುಗಿಯುವುದರೊಳಗೆ ಅಗ್ನಾವಿಷ್ಣುದೇವತೆಗಳಿಗಾಗಿ ದ್ವಾದಶಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. ಬೃಹಸ್ಪತಿದೇವತೆಗಾಗಿ ಚರುಹವಿರ್ಯಾಗವನ್ನು ಮಾಡಬೇಕು. ಪುರೋಡಾಶದಲ್ಲಿ ದ್ವಾದಶಕಪಾಲಸಂಖ್ಯೆಯಿರುವುದರ ಫಲವು ಹೀಗಿದೆ;

ಜಗತೀಛಂದಸ್ಸಿನಲ್ಲಿ ಹನ್ನೆರಡು ಅಕ್ಷರಗಳ ಪಾದಗಳಿವೆ. ತೃತೀಯಸವನವೂ ಜಗತೀ

ದೇವತಾಭಿರೇವ ದೇವತಾಃ [ದೇವತಾಃ (೬) ಪ್ರತಿಚರತಿ]

ಪ್ರತಿಚರತಿ ಯಜ್ಞೇನ ಯಜ್ಞಂ ವಾಚಾ ವಾಚಂ ಬ್ರಹ್ಮಣಾ

ಬ್ರಹ್ಮ ಕಪಾಲೈರೇವ ಛಂದಾಗ್ಂಸ್ಯಾಪ್ನೋತಿ

---

ದೇವತಾಭಿಃ । ಏವ । ದೇವತಾಃ । ಪ್ರತಿಚರತೀತಿ ಪ್ರತಿ–ಚರತಿ । ಯಜ್ಞೇನ । ಯಜ್ಞಮ್ ।

ವಾಚಾ । ವಾಚಮ್ । ಬ್ರಹ್ಮಣಾ । ಬ್ರಹ್ಮ । ಕಪಾಲೈಃ । ಏವ । ಛಂದಾಗ್ಂಸಿ । ಆಪ್ನೋತಿ ।

---

**ಈ ಇಷ್ಟಿಯು ಅಧ್ವರಕಲ್ಪವಾಗುವುದು ಹೇಗೆ ?**

| | |
|---|---|
| ದೇವತಾಭಿಃ ಏವ ದೇವತಾಃ ಪ್ರತಿಚರತಿ | ಈ ಅಧ್ವರಕಲ್ಪೇಷ್ಟಿಯು ದೇವತೆಗಳಿಂದಲೇ ದೇವತೆಗಳಿಗೆ ಪ್ರತೀಕಾರ ಮಾಡಿದಂತಾಗುತ್ತದೆ. |
| ಯಜ್ಞೇನ ಯಜ್ಞಮ್ ವಾಚಾ ವಾಚಮ್ ಬ್ರಹ್ಮಣಾ ಬ್ರಹ್ಮ [ಪ್ರತಿಚರತಿ] | *ಯಜ್ಞದಿಂದ ಯಜ್ಞಕ್ಕೆ, *ಮಾತಿನಿಂದ ಮಾತಿಗೆ, *ಮಂತ್ರಶಕ್ತಿಯಿಂದ ಮಂತ್ರಶಕ್ತಿಗೆ ಪ್ರತೀಕಾರ ಮಾಡಿದಂತಾಗುತ್ತದೆ. |
| ಕಪಾಲೈಃ ಏವ ಛಂದಾಗ್ಂಸಿ ಆಪ್ನೋತಿ | ಕಪಾಲಸಂಖ್ಯೆಯಿಂದಲೇ ಸೋಮಯಾಗದ ಛಂದಸ್ಸುಗಳನ್ನು ಹೊಂದುತ್ತಾನೆ. |

---

ಛಂದಸ್ಸಿಗೆ ಸಂಬಂಧಿಸಿದೆ. ಆದುದರಿಂದ ಈ ದ್ವಾದಶಸಂಖ್ಯೆಯಿಂದ ಸೋಮಯಾಗದ ತೃತೀಯಸವನವನ್ನು ಮಾಡಿದಂತಾಗುತ್ತದೆ.

ಅಧ್ವರಕಲ್ಪೇಷ್ಟಿಯ ಫಲವು ಹೀಗಿದೆ; ಈ ಯಾಗದೇವತೆಗಳಿಂದ ಶತ್ರುಯಾಗದ ದೇವತೆಗಳಿಗೆ ಪ್ರತೀಕಾರ ಮಾಡಿದಂತಾಯಿತು. ವಾಕ್ಕಿನಿಂದ ವಾಕ್ಕಿಗೂ, ಮಂತ್ರಶಕ್ತಿಯಿಂದ ಮಂತ್ರಶಕ್ತಿಗೂ ಪ್ರತೀಕಾರ ಮಾಡಿದಂತಾಯಿತು. ಕಪಾಲಗಳಿಂದಲೇ ಸೋಮಯಾಗದ ಗಾಯತ್ರ್ಯಾದಿಛಂದಸ್ಸುಗಳನ್ನು ಹೊಂದಿದಂತಾಯಿತು. ಅಷ್ಟಾಕಪಾಲಾದಿಪುರೋಡಾಶದಿಂದ ಪ್ರಾತಃಸವನಾದಿಸವನಗಳನ್ನೂ ಪಡೆದಂತಾಯಿತು. ಹೀಗೆ ಅಧ್ವರಕಲ್ಪೇಷ್ಟಿಯು ಅನ್ವರ್ಥವಾಗಿದೆ.

---

* ಇಲ್ಲಿ ಸಾರಸ್ವತಯಾಗದ ಮತ್ತು ಬಾರ್ಹಸ್ಪತ್ಯಯಾಗದ ಫಲದ ವಿವರಣೆಯಿಲ್ಲ, ಮೂರು ಸವನಗಳಲ್ಲಿಯೂ ಸಾರಸ್ವತಯಾಗದಿಂದ ವಾಕ್‌ಸ್ತಂಭನ, ಬೃಹಸ್ಪತಿಯಾಗದಿಂದ ಶತ್ರುವಿನ ಮಂತ್ರಶಕ್ತಿ ಪ್ರತಿಬಂಧ ಎಂದಿಟ್ಟುಕೊಳ್ಳಬೇಕು.

ಪುರೋಡಾಶೈಸ್ಸವನಾನಿ ಮೈತ್ರಾವರುಣಮೇಕಕಪಾಲಂ

ನಿರ್ವಪೇದ್ವಶಾಯೈ ಕಾಲೇ ಯೈವಾಸೌ ಭ್ರಾತೃವ್ಯಸ್ಯ

ವಶಾನೂಬಂಧ್ಯಾ ಸೋ ಏವೈಷೈತಸ್ಯೈಕಕಪಾಲೋ ಭವತಿ

---

ಪುರೋಡಾಶೈಃ। ಸವನಾನಿ। **ಮೈತ್ರಾವರುಣಮಿತಿ ಮೈತ್ರಾ–ವರುಣಮ್।** ಏಕಕಪಾಲ ಮಿತ್ಯೇಕ–ಕಪಾಲಮ್। ನಿರಿತಿ। ವಪೇತ್। ವಶಾಯೈ। ಕಾಲೇ। ಯಾ। ಏವ। ಅಸೌ। ಭ್ರಾತೃವ್ಯಸ್ಯ। ವಶಾ। ಅನೂಬಂಧ್ಯೇತ್ಯನು–ಬಂಧ್ಯಾ। ಸೋ ಇತಿ। ಏವ। ಏಷಾ। ಏತಸ್ಯ। ಏಕಕಪಾಲ ಇತ್ಯೇಕ–ಕಪಾಲಃ। ಭವತಿ।

---

| | |
|---|---|
| **ಪುರೋಡಾಶೈಃ ಸವನಾನಿ [ಆಪ್ನೋತಿ]** | ಅಷ್ಟಾಕಪಾಲಾದಿಪುರೋಡಾಶಗಳಿಂದಲೇ ಪ್ರಾತಃಸವನಾದಿಸವನಗಳನ್ನು ಯಜಮಾನನು ಹೊಂದುತ್ತಾನೆ. |

**ಮೈತ್ರಾವರುಣಯಾಗವಿಧಾನ; ಪ್ರಶಂಸೆ**

| | |
|---|---|
| **ವಶಾಯೈ ಕಾಲೇ** | ಸೋಮಯಾಗದ ಅನುಬಂಧ್ಯಪಶುಯಾಗದ ಕಾಲದಲ್ಲಿ |
| **ಮೈತ್ರಾವರುಣಮ್ ಏಕಕಪಾಲಮ್ ನಿರ್ವಪೇತ್** | ಏಕಕಪಾಲಪುರೋಡಾಶದ್ರವ್ಯದಿಂದ ಮಿತ್ರಾವರುಣದೇವತೆಗಳಿಗಾಗಿ ಯಾಗವನ್ನು ಮಾಡಬೇಕು. |
| **ಯಾ ಏವ ಅಸೌ ಭ್ರಾತೃವ್ಯಸ್ಯ ವಶಾ ಅನೂಬಂಧ್ಯಾ** | ಶತ್ರುವಿನ ಸೋಮಯಾಗದ ಅಂಗವಾಗಿ ಯಾವ ಅನೂಬಂಧ್ಯವಶಾಯಾಗವುಂಟೋ ಇದೇ, |
| **ಸೋ ಏವ ಏಷಾ ಏತಸ್ಯ ಏಕಕಪಾಲಃ ಭವತಿ** | ಈ ಅಧ್ವರಕಲ್ಪೇಷ್ಟಿಕರ್ತೃವಿಗೆ ಈ ಏಕಕಪಾಲವೇ ವಶಾಯಾಗಸಮಾನವಾಗುತ್ತದೆ. |

---

ಸೋಮಯಾಗದ ಅಂಗವಾಗಿ ಆನೂಬಂಧ್ಯವಶಾಯಾಗವಿದೆ. ಅದರ ಕಾಲದಲ್ಲಿ ಮಿತ್ರಾವರುಣದೇವತೆಗಳಿಗಾಗಿ ಏಕಕಪಾಲಪುರೋಡಾಶಯಾಗವನ್ನು ಮಾಡಬೇಕು. ಇದೇ ಶತ್ರುವು ಮಾಡುವ ಆನೂಬಂಧ್ಯಪಶುಯಾಗಸಮಾನವಾಗುತ್ತದೆ. ಏಕಸಂಖ್ಯೆಯ

# ನ ಹಿ ಕಪಾಲೈಃ ಪಶುಮರ್ಹತ್ಯಾಪ್ತುಮ್ ॥೫೨–೧॥

[ಬ್ರಹ್ಮಣೈವೈನಮಭಿಚರತಿ ಯಜ್ಞೋ ನ ತಾವೇವಾವಸ್ಯೇಂದ್ರಿಯ

ಮಾಪ್ನೋತಿ ದೇವತಾಸ್ಸಪ್ತತ್ರಿಗ್ಂಶಚ್ಚ ।]

---

ನ । ಹಿ । ಕಪಾಲೈಃ । ಪಶುಮ್ । ಅರ್ಹತಿ । ಆಪ್ತುಮ್ ॥೧॥

---

| | |
|---|---|
| ಕಪಾಲೈಃ ಪಶುಮ್ | ಅಷ್ಟಾಕಪಾಲಾದಿ ಕಪಾಲಯಾಗಗಳಿಂದಲೇ |
| ಆಪ್ತುಮ್ ನ ಅರ್ಹತಿ | ಅಧ್ವರಕಲ್ಪೇಷ್ಟಿಕರ್ತೃವು ಪಶುಯಾಗದ ಫಲವನ್ನು ಹೊಂದತಕ್ಕವನಲ್ಲ. |

---

ಕಪಾಲದ ಪುರೋಡಾಶವು ಏಕಪಶುವಿನ ಸಮಾನವಾಗುವುದು ಯುಕ್ತವಾಗಿದೆ. ಅಷ್ಟಾಕಪಾಲಾದಿಗಳಿಂದ ಏಕಪಶುಯಾಗದ ಫಲವನ್ನು ಹೊಂದಲು ಸಾಧ್ಯವಿಲ್ಲ. ಹೀಗೆ ಅಧ್ವರಕಲ್ಪೇಷ್ಟಿಯು ಶತ್ರುವಿನ ಸೋಮಯಾಗಕ್ಕೆ ಸರ್ವವಿಧದಿಂದಲೂ ಸಮಾನವಾಗಿದೆ.

* * *

## ನವಮಾನುವಾಕವಿಷಯಸಂಗ್ರಹ

ಆಗ್ನಾವೈಷ್ಣವ ಆದ್ಯಃ ಸ್ಯಾತ್ ಆಜ್ಯಂ ಸಾರಸ್ವತಂ ತತಃ ।
ಬಾರ್ಹಸ್ಪತ್ಯಶ್ಚರುಶ್ಚೈತತ್ ಕುರ್ಯಾದಭಿಚರಂಸ್ತ್ರಯಮ್ ॥

ಯಃ ಪ್ರತ್ಯಭಿಚರೇತ್ಸೋಽಪಿ ಕುರ್ಯಾದೇತದ್ಧವಿಸ್ತ್ರಯಮ್ ।
ಪೀಡಿತೋಽನಾಭಿಚಾರೇಣ ಶಾಂತ್ಯೈ ತಾಮಿಷ್ಟಿಮಾಚರೇತ್ ॥
ಯಜ್ಞೋಪನತಿಕಾಮಃ ಸನ್ ಆಗ್ನಾವೈಷ್ಣವಮಾಚರೇತ್ ॥

ಘೃತೇ ಚರುಂ ದೃಷ್ಟಿಕಾಮೋಽಧ್ವರಕಲ್ಪಾಂ ಚರೇದ್ಧವಿಃ ।
ಅಂತ್ಯಾನುಬಂಧ್ಯಕಾಲೇಽಯಂ ಮೈತ್ರಾವರುಣಮಾಚರೇತ್ ॥
ಅನುವಾಕೇ ತು ನವಮೇಽಭಿಚಾರಾದಯ ಈರಿತಾಃ ॥

* * *

## ॥ ದಶಮೋಽನುವಾಕಃ ॥

ಅಸಾವಾದಿತ್ಯೋ ನ ವ್ಯರೋಚತ ತಸ್ಮೈ ದೇವಾಃ

ಪ್ರಾಯಶ್ಚಿತ್ತಿಮೈಚ್ಛನ್ತಸ್ಮಾ ಏತಗ್ಂ ಸೋಮಾರೌದ್ರಂ

ಚರುಂ ನಿರವಪನ್ತೇನೈವಾಸ್ಮಿನ್ರುಚಮದಧುರ್ಯೋ

---

ಅಸೌ । ಆದಿತ್ಯಃ । ನ । ವೀತಿ । ಅರೋಚತ । ತಸ್ಮೈ । ದೇವಾಃ । ಪ್ರಾಯಶ್ಚಿತ್ತಿಮ್ ।
ಐಚ್ಛನ್ನ್ । ತಸ್ಮೈ । ಏತಮ್ । ಸೋಮಾರೌದ್ರಮಿತಿ ಸೋಮಾ – ರೌದ್ರಮ್ ।
ಚರುಮ್ । ನಿರಿತಿ । ಅವಪನ್ನ್ । ತೇನ । ಏವ । ಅಸ್ಮಿನ್ನ್ । ರುಚಮ್ । ಅದಧುಃ । ಯಃ ।

---

ಈ ಹತ್ತನೆಯ ಅನುವಾಕದಲ್ಲಿ ಸೋಮಾರೌದ್ರಾದಿಯಾಗಗಳು ಹೇಳಲ್ಪಟ್ಟಿವೆ.

**ಬ್ರಹ್ಮವರ್ಚಸಕಾಮನಿಗೆ ವಿಹಿತವಾದ ಸೋಮಾರೌದ್ರೇಷ್ಟಿ; ಉಪಾಖ್ಯಾನ**

| | |
|---|---|
| ಅಸೌ ಆದಿತ್ಯಃ ನ ವಿ ಅರೋಚತ | *ಒಂದು ಸಮಯದಲ್ಲಿ ಈ ಸೂರ್ಯನು ಪ್ರಕಾಶಹೀನನಾದನು. |
| ತಸ್ಮೈ ದೇವಾಃ ಪ್ರಾಯಶ್ಚಿತ್ತಿಮ್ ಐಚ್ಛನ್ನ್ | ಅದಕ್ಕಾಗಿ ದೇವತೆಗಳು ಪರಿಹಾರವನ್ನು ಇಚ್ಛಿಸಿದರು. |
| ತಸ್ಮೈ ಏತಮ್ ಸೋಮಾರೌದ್ರಮ್ ಚರುಮ್ ನಿರವಪನ್ ತೇನ ಏವ ಅಸ್ಮಿನ್ ರುಚಮ್ ಅದಧುಃ | ಅವನಿಗಾಗಿ ಸೋಮರುದ್ರದೇವತಾಕವಾದ ಚರುಯಾಗವನ್ನು ಮಾಡಿದರು. ಆ ಯಾಗದಿಂದಲೇ ಈ ಸೂರ್ಯನಲ್ಲಿ ತೇಜಸ್ಸನ್ನು ನೆಲೆಗೊಳಿಸಿದರು. |

---

* ಸೂರ್ಯನು ತೇಜೋಹೀನನಾದಂತೆ ಹಲವು ಕಡೆಗಳಲ್ಲಿ ಉಪಾಖ್ಯಾನಗಳು ಬರುತ್ತವೆ. ಕಲ್ಪಾಂತರಗಳಲ್ಲಿ ಹೀಗಾಯಿತೆಂದು ಕಲ್ಪಭೇದದಿಂದ ವ್ಯವಸ್ಥೆಯೆಂದು ವಿವರಿಸಿರುತ್ತಾರೆ.

ಅರ್ಥವಾದವಾದುದರಿಂದ ಅಕ್ಷರಾರ್ಥಕ್ಕೆ ಗಮನ ಕೊಡಬೇಕಾಗಿಲ್ಲವೆಂದು ಮತ್ತೊಂದು ಪಕ್ಷ.

ಬ್ರಹ್ಮವರ್ಚಸಕಾಮಃ ಸ್ಯಾತ್ತಸ್ಮಾ ಏತಗ್ಂ ಸೋಮಾರೌದ್ರಂ

ಚರುಂ ನಿರ್ವಪೇತ್ಸೋಮಂ ಚೈವ ರುದ್ರಂ ಚ ಸ್ವೇನ

ಭಾಗಧೇಯೇನೋಪಧಾವತಿ

---

ಬ್ರಹ್ಮವರ್ಚಸಕಾಮ ಇತಿ ಬ್ರಹ್ಮವರ್ಚಸ-ಕಾಮಃ । ಸ್ಯಾತ್ । ತಸ್ಮೈ । ಏತಮ್ । ಸೋಮಾರೌದ್ರಮಿತಿ ಸೋಮಾ-ರೌದ್ರಮ್ । ಚರುಮ್ । ನಿರಿತಿ । ವಪೇತ್। ಸೋಮಮ್ । ಚ । ಏವ । ರುದ್ರಮ್ । ಚ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಯಃ ಬ್ರಹ್ಮವರ್ಚಸಕಾಮಃ ಸ್ಯಾತ್ ತಸ್ಮೈ | ಯಾವನು ಬ್ರಹ್ಮವರ್ಚಸವನ್ನು ಬಯಸುವವನೋ ಅವನಿಗಾಗಿ |
| ಏತಮ್ ಸೋಮಾರೌದ್ರಮ್ ಚರುಮ್ ನಿರ್ವಪೇತ್ | ಈ ಸೋಮಾರುದ್ರದೇವತಾಕವಾದ ಚರುಯಾಗವನ್ನು ಅನುಷ್ಠಿಸಬೇಕು. |
| ಸೋಮಮ್ ಚ ಏವ ರುದ್ರಮ್ ಚ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದಿಂದ ಯಜಮಾನನು ಸೋಮನನ್ನೂ, ರುದ್ರನನ್ನೂ ಅವರಿಗೆ ತಕ್ಕ ಹವಿರ್ಭಾಗವನ್ನಿತ್ತು ಸೇವಿಸುತ್ತಾನೆ. |

---

ಒಂದು ಕಾಲದಲ್ಲಿ ಸೂರ್ಯನು ತೇಜೋಹೀನನಾದನು. ದೇವತೆಗಳು ಪರಿಹಾರೋಪಾಯವನ್ನು ಇಚ್ಛಿಸಿದರು. ಪರಿಹಾರವಾಗಿ ಸೋಮಾರುದ್ರದೇವತಾಕವಾದ ಚರುಯಾಗವನ್ನು ಮಾಡಿದರು. ಇದರ ಫಲವಾಗಿ ಸೂರ್ಯನಲ್ಲಿ ಸ್ವಾಭಾವಿಕವಾದ ತೇಜಸ್ಸು ಉಂಟಾಯಿತು. ಯಾವನು ತನಗೆ ಬ್ರಹ್ಮವರ್ಚಸವು ಬೇಕೆಂದು ಬಯಸುವನೋ ಅವನಿಗಾಗಿ ಅಧ್ವರ್ಯುವು ಸೋಮಾರುದ್ರದೇವತಾಕವಾದ ಚರುಯಾಗವನ್ನು ಮಾಡಬೇಕು. ಈ ಸೋಮಾರೌದ್ರಯಾಗದಿಂದ ಯಜಮಾನನು ಸೋಮನನ್ನೂ , ರುದ್ರನನ್ನೂ ಹವಿರ್ಭಾಗಪ್ರದಾನದಿಂದ ಆರಾಧಿಸುತ್ತಾನೆ. ಅವರಿಬ್ಬರೂ ಸುಪ್ರೀತರಾಗಿ

ತಾವೇವಾಸ್ಮಿನ್ಬ್ರಹ್ಮವರ್ಚಸಂ ಧತ್ತೋ ಬ್ರಹ್ಮವರ್ಚಸ್ಯೇವ

ಭವತಿ ತಿಷ್ಯಾಪೂರ್ಣಮಾಸೇ ನಿರ್ವಪೇದ್ರುದ್ರೋ

[ನಿರ್ವಪೇದ್ರುದ್ರಃ (೧) ವೈ] ವೈ ತಿಷ್ಯಸ್ಸೋಮಃ

ಪೂರ್ಣಮಾಸಃ

---

ತೌ । ಏವ । ಅಸ್ಮಿನ್ನ್ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ಧತ್ತಃ । ಬ್ರಹ್ಮವರ್ಚಸೀತಿ ಬ್ರಹ್ಮ-ವರ್ಚಸೀ । ಏವ । ಭವತಿ । ತಿಷ್ಯಾಪೂರ್ಣಮಾಸ ಇತಿ ತಿಷ್ಯಾ-ಪೂರ್ಣಮಾಸೇ । ನಿರಿತಿ । ವಪೇತ್ । ರುದ್ರಃ । ವೈ । ತಿಷ್ಯಃ । ಸೋಮಃ । ಪೂರ್ಣಮಾಸ ಇತಿ ಪೂರ್ಣ-ಮಾಸಃ ।

---

**ಕಾಲವಿಶೇಷವಿಧಾನ; ಸ್ತುತಿ**

| | |
|---|---|
| ತೌ ಏವ ಅಸ್ಮಿನ್ ಬ್ರಹ್ಮವರ್ಚಸಮ್ ಧತ್ತಃ | ಆ ಈರ್ವರು ದೇವತೆಗಳೇ ಈ ಯಜಮಾನನಲ್ಲಿ ಬ್ರಹ್ಮವರ್ಚಸವನ್ನು ಸ್ಥಾಪಿಸುತ್ತಾರೆ. |
| ಬ್ರಹ್ಮವರ್ಚಸೀ ಏವ ಭವತಿ | ಯಜಮಾನನು ಬ್ರಹ್ಮವರ್ಚಸಿಯೇ ಆಗುತ್ತಾನೆ. |
| ತಿಷ್ಯಾಪೂರ್ಣಮಾಸೇ ನಿರ್ವಪೇತ್ | ಪುಷ್ಯನಕ್ಷತ್ರಯುಕ್ತವಾದ ಹುಣ್ಣಿಮೆಯ ದಿನ ಈ ಯಾಗವನ್ನು ಮಾಡಬೇಕು. |
| ರುದ್ರಃ ವೈ ತಿಷ್ಯಃ | ರುದ್ರನು ಪುಷ್ಯನಕ್ಷತ್ರಸ್ವರೂಪನಷ್ಟೆ. |
| ಸೋಮಃ ಪೂರ್ಣಮಾಸಃ | ಸೋಮನು ಪೂರ್ಣಮಾಸಸ್ವರೂಪನು. |

---

ಯಜಮಾನನಿಗೆ ಬ್ರಹ್ಮವರ್ಚಸವನ್ನು ಉಂಟುಮಾಡುತ್ತಾರೆ. ಯಜಮಾನನು ಬ್ರಹ್ಮವರ್ಚಸಿಯೇ ಆಗುತ್ತಾನೆ.

ಪುಷ್ಯನಕ್ಷತ್ರವಿರುವ ಹುಣ್ಣಿಮೆಯ ದಿನ ಈ ಯಾಗವನ್ನು ಅನುಷ್ಠಿಸಬೇಕು. ರುದ್ರನು ಪುಷ್ಯನಕ್ಷತ್ರಸ್ವರೂಪನು. ಸೋಮನು ಪೂರ್ಣಮಾಸಸ್ವರೂಪನು. ಆ ಕಾಲದಲ್ಲಿ ಈ

ಸಾಕ್ಷಾದೇವ ಬ್ರಹ್ಮವರ್ಚಸಮವರುಂಧೇ

ಪರಿಶ್ರಿತೇ ಯಾಜಯತಿ ಬ್ರಹ್ಮವರ್ಚಸಸ್ಯ ಪರಿಗೃಹೀತ್ಯೈ

ಶ್ವೇತಾಯ್ಯೆ ಶ್ವೇತವತ್ಸಾಯೈ

---

ಸಾಕ್ಷಾದಿತಿ ಸ–ಅಕ್ಷಾತ್ । ಏವ । ಬ್ರಹ್ಮವರ್ಚಸಮಿತಿ ಬ್ರಹ್ಮ–ವರ್ಚಸಮ್ । ಅವೇತಿ । ರುಂಧೇ । ಪರಿಶ್ರಿತ ಇತಿ ಪರಿ–ಶ್ರಿತೇ । ಯಾಜಯತಿ । ಬ್ರಹ್ಮವರ್ಚಸಸ್ಯೇತಿ ಬ್ರಹ್ಮ–ವರ್ಚಸಸ್ಯ । ಪರಿಗೃಹೀತ್ಯಾ ಇತಿ ಪರಿ–ಗೃಹೀತ್ಯೈ । ಶ್ವೇತಾಯ್ಯೈ । ಶ್ವೇತವತ್ಸಾಯಾ ಇತಿ ಶ್ವೇತ – ವತ್ಸಾಯೈ ।

---

| | |
|---|---|
| ಸಾಕ್ಷಾತ್ ಏವ, ಬ್ರಹ್ಮವರ್ಚಸಮ್ ಅವರುಂಧೇ | ಯಜಮಾನನು (ಅವರ ಅನುಗ್ರಹದಿಂದ) ಒಡನೆಯೇ ಬ್ರಹ್ಮವರ್ಚಸವನ್ನು ಹೊಂದುತ್ತಾನೆ. |

**ಸ್ಥಳಾದಿವಿಧಾನ; ಸ್ತುತಿ**

| | |
|---|---|
| ಪರಿಶ್ರಿತೇ ಯಾಜಯತಿ | ಸುತ್ತಲೂ ಆವರಣದಿಂದ ಕೂಡಿರುವ ವೇದಿಯಲ್ಲಿ ಈ ಯಾಗವನ್ನು ಮಾಡಬೇಕು. |
| ಬ್ರಹ್ಮವರ್ಚಸಸ್ಯ ಪರಿಗೃಹೀತ್ಯೈ | ಇದು ಸುತ್ತಲೂ ಬ್ರಹ್ಮವರ್ಚಸವನ್ನು ಹೊಂದಲು ಕಾರಣವಾಗುತ್ತದೆ. |
| ಶ್ವೇತಾಯ್ಯೈ ಶ್ವೇತವತ್ಸಾಯೈ | ಬಿಳಿಯ ಕರುವನ್ನು ಹೊಂದಿದ ಬಿಳಿಯ ಹಸುವಿನ |

---

ಸೋಮಾರೌದ್ರ ಯಾಗವನ್ನು ಅನುಷ್ಠಿಸುವುದರಿಂದ ತೇಜೋರೂಪರಾದ ಸೋಮಾರುದ್ರರ ಅನುಗ್ರಹದಿಂದ ಯಜಮಾನನು ಒಡನೆಯೇ ಬ್ರಹ್ಮವರ್ಚಸವನ್ನು ಪಡೆಯುವನು.

ಸುತ್ತಲೂ ಆಚ್ಛಾದನವುಳ್ಳ ವೇದಿಯಲ್ಲಿ ಈ ಯಾಗವನ್ನು ಮಾಡಬೇಕು. ಇದು ಬ್ರಹ್ಮವರ್ಚಸವನ್ನು ಸುತ್ತಲೂ ಹೊಂದಲು ಸಾಧನವಾಗುತ್ತದೆ. ಬಿಳಿಯ ಬಣ್ಣದ ಕರುವುಳ್ಳ

ದುಗ್ಧಂ ಮಥಿತಮಾಜ್ಯಂ ಭವತ್ಯಾಜ್ಯಂ ಪ್ರೋಕ್ಷಣಮಾಜ್ಯೇನ

ಮಾರ್ಜಯಂತೇ ಯಾವದೇವ ಬ್ರಹ್ಮವರ್ಚಸಂ

ತತ್ಸರ್ವಂ ಕರೋತ್ಯತಿ ಬ್ರಹ್ಮವರ್ಚಸಂ

---

ದುಗ್ಧಮ್। ಮಥಿತಮ್। ಆಜ್ಯಮ್। ಭವತಿ। ಆಜ್ಯಮ್। ಪ್ರೋಕ್ಷಣಮಿತಿ ಪ್ರ–ಉಕ್ಷಣಮ್।

ಆಜ್ಯೇನ। ಮಾರ್ಜಯಂತೇ। ಯಾವತ್। ಏವ। ಬ್ರಹ್ಮವರ್ಚಸಮಿತಿ ಬ್ರಹ್ಮ–ವರ್ಚಸಮ್।

ತತ್। ಸರ್ವಮ್। ಕರೋತಿ। ಅತೀತಿ। ಬ್ರಹ್ಮವರ್ಚಸಮಿತಿ ಬ್ರಹ್ಮ–ವರ್ಚಸಮ್।

---

| | |
|---|---|
| ದುಗ್ಧಮ್ ಮಥಿತಮ್ ಆಜ್ಯಮ್ ಭವತಿ | ಹಾಲನ್ನು ಕರೆದು ಕಡೆದು ಹೊಂದಿದ ತುಪ್ಪವೇ ಯಾಗದಲ್ಲಿ ತುಪ್ಪವಾಗುತ್ತದೆ. |
| ಆಜ್ಯಮ್ ಪ್ರೋಕ್ಷಣಮ್ ಆಜ್ಯೇನ ಮಾರ್ಜಯಂತೇ | [ನೀರಿನ ಬದಲು] ಆಜ್ಯವೇ ಪ್ರೋಕ್ಷಣಸಾಧನವಾಗುತ್ತದೆ. ತುಪ್ಪದಿಂದಲೇ ಋತ್ವಿಜರು ಮಾರ್ಜನ ಮಾಡಿಕೊಳ್ಳಬೇಕು. |
| ಯಾವತ್ ಏವ ಬ್ರಹ್ಮವರ್ಚಸಮ್ | ಬ್ರಹ್ಮವರ್ಚಸಸಾಧನವು ಯಾವುದುಂಟೋ |
| ತತ್ ಸರ್ವಮ್ ಕರೋತಿ | ಅದೆಲ್ಲವನ್ನೂ ಯಜಮಾನನು ಮಾಡುತ್ತಾನೆ. |

**ಸಾಮಿಧೇನಿಗಳಲ್ಲಿ ವಿಶೇಷವಿಧಾನ; ಸ್ತುತಿ**

| | |
|---|---|
| ಅತಿ ಬ್ರಹ್ಮವರ್ಚಸಮ್ | [ಹೀಗೆ ಮಾಡುವುದರಿಂದ] ಬ್ರಹ್ಮವರ್ಚಸ ಸಾಧನವು ಮಿತಿಮೀರಿ |

---

ಬಿಳಿಯ ಹಸುವಿನ ಹಾಲಿನಿಂದಾದ ತುಪ್ಪವೇ ಈ ಯಾಗದಲ್ಲಿ ತುಪ್ಪವಾಗುತ್ತದೆ. ಈ ತುಪ್ಪವೇ ಪ್ರೋಕ್ಷಣಸಾಧನ; ಅದು ಋತ್ವಿಜರಿಗೆ ನೀರಿನಂತೆ ಮಾರ್ಜನಸಾಧನವಾಗಿರುತ್ತದೆ. ಅದೆಲ್ಲವನ್ನೂ ಯಜಮಾನನು ಮಾಡುತ್ತಾನೆ.

ಹೀಗೆ ಎಲ್ಲವೂ ಬ್ರಹ್ಮವರ್ಚಸಸಾಧನಗಳಾದಾಗ ಅದು ಅತಿಯಾಗಿ

ಕ್ರಿಯತ ಇತ್ಯಾಹುರೀಶ್ವರೋ ದುಶ್ಚರ್ಮಾ ಭವಿತೋರಿತಿ

ಮಾನವೀ ಋಚೌ ಧಾಯ್ಯೇ ಕುರ್ಯಾದ್ಯದ್ವೈ ಕಿಂಚ ಮನು

ರವದತ್ತದ್ಭೇಷಜಂ [ಭೇಷಜಮ್ (–೨) ಭೇಷಜಮೇವಾಸ್ಮೈ]

---

ಕ್ರಿಯತೇ । ಇತಿ । ಆಹುಃ । ಈಶ್ವರಃ । ದುಶ್ಚರ್ಮೇತಿ ದುಃ–ಚರ್ಮಾ । ಭವಿತೋಃ । ಇತಿ ।

ಮಾನವೀ ಇತಿ । ಋಚೌ । ಧಾಯ್ಯೇ ಇತಿ । ಕುರ್ಯಾತ್ । ಯತ್ । ವೈ । ಕಿಮ್ । ಚ ।

ಮನುಃ । ಅವದತ್ । ತತ್ । ಭೇಷಜಮ್ ।

---

| | |
|---|---|
| ಕ್ರಿಯತೇ ಇತಿ ಆಹುಃ | ಮಾಡಲ್ಪಟ್ಟಿತೆಂದು (ಬ್ರಹ್ಮವಿದರು) ಹೇಳುತ್ತಾರೆ. |
| ದುಶ್ಚರ್ಮಾ ಭವಿತೋಃ ಈಶ್ವರಃ ಇತಿ [ಆಹುಃ] | ಇದರ ಫಲವಾಗಿ ಯಜಮಾನನು ಕೆಟ್ಟ ಚರ್ಮವುಳ್ಳವನಾಗುತ್ತಾನೆಂದೂ ಅವರೇ ಹೇಳುತ್ತಾರೆ. |
| ಮಾನವೀ ಋಚೌ ಧಾಯ್ಯೇ ಕುರ್ಯಾತ್ | ಇದರ ಪರಿಹಾರಕ್ಕಾಗಿ ಮನುದೃಷ್ಟವಾದ * *ಎರಡು ಋಕ್‌ಗಳನ್ನು ಧಾಯ್ಯೆಗಳನ್ನಾಗಿ* ಸೇರಿಸಿಕೊಳ್ಳಬೇಕು. |
| ಯತ್ ವೈ ಕಿಂಚ ಮನುಃ ಅವದತ್ ತತ್ ಭೇಷಜಮ್ | ಮನಸ್ವಂತನಾದ ಪ್ರಜಾಪತಿಯು ಏನು ಹೇಳುತ್ತಾನೆಯೋ ಅದು ರೋಗಪರಿಹಾರಕವಾದ ಭೇಷಜವಾಗುತ್ತದೆ. |

---

ಯಜಮಾನನು ಚರ್ಮರೋಗಕ್ಕೆ ತುತ್ತಾಗಬಹುದೆಂದು ಬ್ರಹ್ಮವಾದಿಗಳು ಹೇಳುತ್ತಾರೆ.

ಈ ರೋಗಪರಿಹಾರಕ್ಕಾಗಿ **'ಮಕ್ಷೂ ದೇವವತಃ'** ಮೊದಲಾದ ಎರಡು ಋಕ್‌ಗಳನ್ನು ಸಾಮಿಧೇನೀಮಂತ್ರಗಳಲ್ಲಿ ಸೇರಿಸಿಕೊಳ್ಳಬೇಕು. ಮನಸ್ವಂತನಾದ ಪ್ರಜಾಪತಿಯು/

---

* 'ಮನ' ಧಾತುವಿನ ಸಂಬಂಧವುಳ್ಳ ಋಕ್‌ಗಳಲ್ಲಿ 'ದೇವಾನಾಂ ಯ ಇನ್ಮನಃ' ಎಂದಿದೆ.

* **ಮಕ್ಷೂ ದೇವವತೋ ರಥಃ........ ಭುವತ್ । ತೈ. ಸಂ. 1.8.22**
**ನ ಯಜಮಾನ.................. ಭುವತ್ ।**
'ಮಕ್ಷೂ.....' ಎಂಬ ಋಕ್ಕಿನಿಂದ ಆರಂಭಿಸಿ ಮೊದಲನೆಯ ಎರಡು ಋಕ್‌ಗಳೆಂದೂ, ಕಡೆಯ ಎರಡು ಋಕ್‌ಗಳೆಂದೂ ಮತಭೇದವನ್ನು ಭ.ಭಾ. ಭಾಷ್ಯದಲ್ಲಿ ಹೇಳಿದೆ.

* **'ಸಮಿಧ್ಯಮಾನಃ........' 'ಸಮಿದ್ಧೋ ಅಗ್ನೇ.......'** ಈ ಎರಡು ಸಾಮಿಧೇನೀಮಂತ್ರಗಳ ಮಧ್ಯದಲ್ಲಿ ಸೇರಿಸಿಕೊಳ್ಳುವ ಸಾಮಿಧೇನೀ ಮಂತ್ರಗಳಿಗೆ 'ಧಾಯ್ಯೇ' ಎಂದು ಹೆಸರು.

ಭೇಷಜಮೇವಾಸ್ಮೈ ಕರೋತಿ ಯದಿ ಬಿಭೀಯಾದ್ದುಶ್ಚರ್ಮಾ ಭವಿಷ್ಯಾಮೀತಿ ಸೋಮಾಪೌಷ್ಣಂ ಚರುಂ ನಿರ್ವಪೇತ್ಸೌಮ್ಯೋ ವೈ ದೇವತಯಾ ಪುರುಷಃ

---

ಭೇಷಜಮ್ । ಏವ । ಅಸ್ಮೈ । ಕರೋತಿ । ಯದಿ । ಬಿಭೀಯಾತ್ । ದುಶ್ಚರ್ಮೇತಿ ದುಃ-ಚರ್ಮಾ । ಭವಿಷ್ಯಾಮಿ । ಇತಿ । ಸೋಮಾಪೌಷ್ಣಮಿತಿ ಸೋಮಾ-ಪೌಷ್ಣಮ್ । ಚರುಮ್ । ನಿರಿತಿ । ವಪೇತ್ । ಸೌಮ್ಯಃ । ವೈ । ದೇವತಯಾ । ಪುರುಷಃ ।

---

| | |
|---|---|
| ಅಸ್ಮೈ ಭೇಷಜಮ್ ಏವ ಕರೋತಿ | ಇದರಿಂದ ಯಜಮಾನನಿಗೆ ರೋಗಚಿಕಿತ್ಸೆಯನ್ನು ಮಾಡಿದಂತಾಗುತ್ತದೆ. |

**ಚರ್ಮರೋಗನಿವಾರಣೆಗಾಗಿ ಯಾಗವಿಧಿ; ಪ್ರಶಂಸೆ**

| | |
|---|---|
| ಯದಿ ದುಶ್ಚರ್ಮಾ ಭವಿಷ್ಯಾಮಿ ಇತಿ ಬಿಭೀಯಾತ್ | ಯಜಮಾನನು ತಾನು ಚರ್ಮರೋಗ ಪೀಡಿತನಾಗಬಹುದೆಂದು ಹೆದರಿದವನಾದರೆ |
| ಸೋಮಾಪೌಷ್ಣಮ್ ಚರುಮ್ ನಿರ್ವಪೇತ್ | ಸೋಮ-ಪೂಷ ದೇವತೆಗಳಿಗಾಗಿ ಚರುಯಾಗವನ್ನು ಮಾಡಬೇಕು. |
| ಪುರುಷಃ ದೇವತಯಾ ಸೌಮ್ಯಃ ವೈ | ಪುರುಷನು ಸೋಮದೇವತೆಯುಳ್ಳವನಾಗಿರುವನಷ್ಟೆ. |

---

ಮಂತ್ರವು ಹೇಳುವುದೇ ರೋಗಚಿಕಿತ್ಸೆಗಾಗಿ ಮಾಡುವ ಭೇಷಜವಾಗುತ್ತದೆ. ಯಜಮಾನನಿಗೆ ಚರ್ಮರೋಗವು ಬರುವುದಿಲ್ಲ.

ಚರ್ಮರೋಗಕ್ಕೆ ತಾನು ಗುರಿಯಾಗಬಹುದೆಂದು ಹೆದರಿದವನು ಸೋಮ-ಪೂಷ ದೇವತೆಗಳಿಗಾಗಿ ಚರುಯಾಗವನ್ನು ಮಾಡಬೇಕು. ಪುರುಷನಿಗೆ ಸೋಮನು ದೇವತೆ.

ಪೌಷ್ಣಾಃ ಪಶವಸ್ಸ್ವಯೈವಾಸ್ಮೈ ದೇವತಯಾ ಪಶುಭಿಸ್ತ್ವಚಂ

ಕರೋತಿ ನ ದುಶ್ಚರ್ಮಾ ಭವತಿ ಸೋಮಾರೌದ್ರಂ

ಚರುಂ ನಿರ್ವಪೇತ್ಪ್ರಜಾಕಾಮ ಸ್ಸೋಮೋ ವೈ ರೇತೋಧಾ

---

ಪೌಷ್ಣಾಃ । ಪಶವಃ । ಸ್ವಯಾ । ಏವ । ಅಸ್ಮೈ । ದೇವತಯಾ । ಪಶುಭಿರಿತಿ ಪಶು-ಭಿಃ । ತ್ವಚಮ್ । ಕರೋತಿ । ನ । ದುಶ್ಚರ್ಮೇತಿ ದುಃ-ಚರ್ಮಾ । ಭವತಿ । **ಸೋಮಾರೌದ್ರಮಿತಿ ಸೋಮಾ-ರೌದ್ರಮ್** । ಚರುಮ್ । ನಿರಿತಿ । ವಪೇತ್ । ಪ್ರಜಾಕಾಮ ಇತಿ ಪ್ರಜಾ-ಕಾಮಃ । ಸೋಮಃ । ವೈ । ರೇತೋಧಾ ಇತಿ ರೇತಃ - ಧಾಃ ।

---

| | |
|---|---|
| **ಪಶವಃ ಪೌಷ್ಣಾಃ** | ಪಶುಗಳು ಪೂಷನೇ ದೇವತೆಯಾಗಿ ಉಳ್ಳವುಗಳು. |
| ಸ್ವಯಾ ದೇವತಯಾ ಏವ ಅಸ್ಮೈ ಪಶುಭಿಃ ತ್ವಚಮ್ ಕರೋತಿ ದುಶ್ಚರ್ಮಾ ನ ಭವತಿ | [ಈ ಯಾಗದಿಂದ ಯಜಮಾನನಿಗೆ] ತನ್ನ ದೇವತೆಯ ಮತ್ತು ಪಶುದೇವತೆಯ ಅನುಗ್ರಹದಿಂದ ಒಳ್ಳೆಯ ಚರ್ಮವುಂಟಾಗುತ್ತದೆ. ಯಜಮಾನನು ಚರ್ಮರೋಗಪೀಡಿತನಾಗುವುದಿಲ್ಲ. |

**ಪ್ರಜಾಕಾಮನಿಗೆ ವಿಹಿತವಾದ ಇಷ್ಟಿ; ಪ್ರಶಂಸೆ**

| | |
|---|---|
| ಪ್ರಜಾಕಾಮಃ ಸೋಮಾರೌದ್ರಮ್ ಚರುಮ್ ನಿರ್ವಪೇತ್ | ಒಳ್ಳೆಯ ಮಕ್ಕಳನ್ನು ಬಯಸುವವನು ಸೋಮ-ರುದ್ರರಿಗಾಗಿ ಚರುಯಾಗವನ್ನು ಅನುಷ್ಠಿಸಬೇಕು. |
| ಸೋಮಃ ವೈ ರೇತೋಧಾಃ | ಸೋಮದೇವನು ಗರ್ಭಾಶಯದಲ್ಲಿ ರೇತಸ್ಸನ್ನು ನಿಲ್ಲಿಸುವವನು. |

---

ಪಶುಗಳಿಗೆ ಪೂಷನು ದೇವತೆ. ಈ ದೇವತೆಗಳ ಅನುಗ್ರಹದಿಂದ ಯಜಮಾನನು ಒಳ್ಳೆಯ ಚರ್ಮವನ್ನು ಪಡೆಯುತ್ತಾನೆ. ಚರ್ಮರೋಗಕ್ಕೆ ಗುರಿಯಾಗುವುದಿಲ್ಲ.

ಮಕ್ಕಳನ್ನು ಬಯಸುವವನು ಸೋಮ-ರುದ್ರ ದೇವತೆಗಳನ್ನು ಉದ್ದೇಶಿಸಿ, ಚರುಯಾಗವನ್ನು ಮಾಡಬೇಕು. ಸೋಮದೇವನು ಗರ್ಭಾಶಯದಲ್ಲಿ ಪುರುಷನ ರೇತಸ್ಸು

# ಅಗ್ನಿಃ ಪ್ರಜಾನಾಂ ಪ್ರಜನಯಿತಾ ಸೋಮ ಏವಾಸ್ಮೈ ರೇತೋ ದಧಾತ್ಯಗ್ನಿಃ ಪ್ರಜಾಂ ಪ್ರಜನಯತಿ ವಿಂದತೇ ಪ್ರಜಾಗ್ಂ [ವಿಂದತೇ (೩) ಪ್ರಜಾಗ್ಂ] ಸೋಮಾರೌದ್ರಂ ಚರುಂ ನಿರ್ವಪೇದಭಿಚರನ್ಥ್ಸೌಮ್ಯೋ

---

ಅಗ್ನಿಃ । ಪ್ರಜಾನಾಮಿತಿ ಪ್ರ-ಜಾನಾಮ್ । ಪ್ರಜನಯಿತೇತಿ ಪ್ರ-ಜನಯಿತಾ । ಸೋಮಃ । ಏವ । ಅಸ್ಮೈ । ರೇತಃ । ದಧಾತಿ । ಅಗ್ನಿಃ । ಪ್ರಜಾಮಿತಿ ಪ್ರ-ಜಾಮ್ । ಪ್ರೇತಿ । ಜನಯತಿ । ವಿಂದತೇ । ಪ್ರಜಾಮಿತಿ ಪ್ರ-ಜಾಮ್ । **ಸೋಮಾರೌದ್ರಮಿತಿ ಸೋಮಾ-ರೌದ್ರಮ್** । ಚರುಮ್ । ನಿರಿತಿ । ವಪೇತ್ । ಅಭಿಚರನ್ನಿತ್ಯಭಿ-ಚರನ್ । ಸೌಮ್ಯಃ ।

---

| | |
|---|---|
| ಅಗ್ನಿಃ ಪ್ರಜಾನಾಮ್ | ಅಗ್ನಿಯು ಪ್ರಜೆಗಳ ಉತ್ಪತ್ತಿಗೆ ಕಾರಣನು. |
| ಪ್ರಜನಯಿತಾ ಸೋಮಃ ಏವ ಅಸ್ಮೈ ರೇತಃ ದಧಾತಿ | ಸೋಮದೇವನೇ ಈ ಯಜಮಾನನಿಗೆ ಗರ್ಭಾಶಯದಲ್ಲಿ ರೇತಸ್ಸು ನಿಲ್ಲುವಂತೆ ಮಾಡುತ್ತಾನೆ. |
| ಅಗ್ನಿಃ ಪ್ರಜಾಮ್ ಪ್ರಜನಯತಿ | ಅಗ್ನಿದೇವನು ಮಕ್ಕಳನ್ನು ಉಂಟುಮಾಡುತ್ತಾನೆ. |
| ಪ್ರಜಾಮ್ ವಿಂದತೇ | ಯಜಮಾನನು ಒಳ್ಳೆಯ ಮಕ್ಕಳನ್ನು ಪಡೆಯುತ್ತಾನೆ. |

**ಅಭಿಚಾರಕಾಮನಿಗೆ ವಿಹಿತವಾದ ಇಷ್ಟಿ; ಅರ್ಥವಾದ**

| | |
|---|---|
| ಅಭಿಚರನ್ ಸೋಮಾರೌದ್ರಮ್ ಚರುಮ್ ನಿರ್ವಪೇತ್ | ಶತ್ರುಗಳ ಮಾರಣವನ್ನು ಅಪೇಕ್ಷಿಸುವವನು ಸೋಮ-ರುದ್ರ ದೇವತೆಗಳಿಗಾಗಿ ಚರು ಯಾಗವನ್ನು ಮಾಡಬೇಕು. |

---

ನಿಲ್ಲುವಂತೆ ಮಾಡುತ್ತಾನೆ. ಅಗ್ನಿಯು ಪ್ರಜೆಗಳನ್ನು ಕೊಡುತ್ತಾನೆ. ಹೀಗೆ ಯಜಮಾನನು ಪುತ್ರವಂತನಾಗುತ್ತಾನೆ.

ಶತ್ರುಮಾರಣಕಾಮನಾದವನು ಸೋಮಾರುದ್ರರನ್ನು ಉದ್ದೇಶಿಸಿ, ಚರುಯಾಗ

ವೈ ದೇವತಯಾ ಪುರುಷ ಏಷ ರುದ್ರೋ ಯದಗ್ನಿಃ

ಸ್ವಾಯಾ ಏವೈನಂ ದೇವತಾಯೈ ನಿಷ್ಕ್ರೀಯ

ರುದ್ರಾಯಾಪಿ ದಧಾತಿ ತಾಜಗಾರ್ತಿಮಾರ್ಛತಿ

---

ವೈ । ದೇವತಯಾ । ಪುರುಷಃ । ಏಷಃ । ರುದ್ರಃ । ಯತ್ । ಅಗ್ನಿಃ । ಸ್ವಾಯಾಃ । ಏವ । ಏನವ್ । ದೇವತಾಯೈ । ನಿಷ್ಕ್ರೀಯೇತಿ ನಿಃ– ಕ್ರೀಯ । ರುದ್ರಾಯ । ಅಪೀತಿ । ದಧಾತಿ । ತಾಜಕ್ । ಆರ್ತಿಮ್ । ಏತಿ । ಋಚ್ಛತಿ ।

---

| | |
|---|---|
| ದೇವತಯಾ ಪುರುಷಃ ಸೌಮ್ಯಃ ವೈ | ಪುರುಷನು ಸೋಮದೇವತೆಗೆ ಸಂಬಂಧಿಸಿದವನು. |
| ಯತ್ ಅಗ್ನಿಃ ಏಷಃ ರುದ್ರಃ | ಅಗ್ನಿಯು ಈ ರುದ್ರನೇ ಆಗಿರುತ್ತಾನೆ. |
| ಸ್ವಾಯಾಃ ಏವ ಏನವ್ ದೇವತಾಯೈ ನಿಷ್ಕ್ರೀಯ | ಈ ಯಾಗದಿಂದ ಶತ್ರುಪುರುಷನನ್ನು ಸ್ವೀಯದೇವತೆಯಾದ ಸೋಮನಿಂದ ಬೇರ್ಪಡಿಸಿ |
| ರುದ್ರಾಯ ಅಪಿ ದಧಾತಿ | ಮಾರಣಕ್ಕಾಗಿ ರುದ್ರನಿಗೆ ಸಮರ್ಪಿಸುತ್ತಾನೆ. |
| ತಾಜಕ್ ಆರ್ತಿಮ್ ಆರ್ಛತಿ | ಶತ್ರುವು ಒಡನೆಯೇ ಹಿಂಸೆಗೆ ಗುರಿಯಾಗುತ್ತಾನೆ. |

---

ವನ್ನು ಮಾಡಬೇಕು. ಪುರುಷನಿಗೆ ಸೋಮನು ದೇವತೆ. ಈ ಅಗ್ನಿಯೇ ರುದ್ರಸ್ವರೂಪನು. ಈ ಯಾಗವನ್ನು ಮಾಡುವುದರಿಂದ ಯಜಮಾನನು ತನ್ನ ದೇವತೆಯಾದ ಸೋಮನಿಂದ ಶತ್ರುಪುರುಷನನ್ನು ಬೇರ್ಪಡಿಸಿ, ಹಿಂಸೆಗಾಗಿ ರುದ್ರನಿಗೆ ಒಪ್ಪಿಸುತ್ತಾನೆ. ಶತ್ರುವು ಕೂಡಲೇ ಹಿಂಸೆಗೆ ಗುರಿಯಾಗುತ್ತಾನೆ.

# ಸೋಮಾರೌದ್ರಂ ಚರುಂ ನಿರ್ವಪೇಜ್ಜ್ಯೋಗಾಮಯಾವೀ ಸೋಮಂ ವಾ ಏತಸ್ಯ ರಸೋ ಗಚ್ಛತ್ಯಗ್ನಿಗ್ಂ ಶರೀರಂ ಯಸ್ಯ ಜ್ಯೋಗಾಮಯತಿ

---

ಸೋಮಾರೌದ್ರಮಿತಿ ಸೋಮಾ-ರೌದ್ರಮ್ । ಚರುಮ್ । ನಿರಿತಿ । ವಪೇತ್ । ಜ್ಯೋಗಾಮಯಾವೀತಿ ಜ್ಯೋಕ್-ಆಮಯಾವೀ । ಸೋಮಮ್ । ವೈ । ಏತಸ್ಯ । ರಸಃ । ಗಚ್ಛತಿ । ಅಗ್ನಿಮ್ । ಶರೀರಮ್ । ಯಸ್ಯ । ಜ್ಯೋಕ್ । ಆಮಯತಿ ।

---

**ದೀರ್ಘಕಾಲರೋಗಿಯಾದವನಿಗೆ ವಿಹಿತವಾದ ಇಷ್ಟಿ; ಅರ್ಥವಾದ**

| | |
|---|---|
| ಜ್ಯೋಕ್ ಆಮಯಾವೀ | ದೀರ್ಘಕಾಲ ಅಜ್ಞಾತರೋಗಕ್ಕೆ ಗುರಿಯಾದವನು |
| ಸೋಮಾರೌದ್ರಮ್ ಚರುಮ್ ನಿರ್ವಪೇತ್ | ಸೋಮರುದ್ರದೇವತಾಕವಾದ ಚರು ಯಾಗವನ್ನು ಅನುಷ್ಠಿಸಬೇಕು. |
| ಯಸ್ಯ ಜ್ಯೋಕ್ ಆಮಯತಿ ಏತಸ್ಯ ರಸಃ ಸೋಮಮ್ ವೈ ಗಚ್ಛತಿ | ಯಾವನಿಗೆ ದೀರ್ಘರೋಗವುಂಟೋ ಅವನ ಸಾರವಾದ ರಸವು/ಬಲವು ಸೋಮದೇವನನ್ನು ಹೊಂದುತ್ತದೆ. |
| ಶರೀರಮ್ ಅಗ್ನಿಮ್ ಗಚ್ಛತಿ | ಶರೀರವು ಅಗ್ನಿಯನ್ನು ಹೊಂದುತ್ತದೆ. |

---

ಚಿರಕಾಲ ತಿಳಿಯದಿರುವ ರೋಗದಿಂದ ಪೀಡಿತನಾದವನು ಸೋಮಾರುದ್ರರಿಗಾಗಿ ಚರುಯಾಗವನ್ನು ಮಾಡಬೇಕು. ಬಹುದಿನಗಳು ರೋಗಗ್ರಸ್ತನಾದವನ ದೇಹದ ಸಾರವಾದ ಅಂಶವು ಸೋಮನನ್ನು ಹೊಂದುತ್ತದೆ. ಶರೀರವು ಅಗ್ನಿಯನ್ನು ಹೊಂದುತ್ತದೆ.

ಸೋಮಾದೇವಾಸ್ಯ ರಸಂ ನಿಷ್ಕ್ರೀಣಾತ್ಯಗ್ನೇಃ ಶರೀರಮುತ

ಯದೀತಾಸುರ್ಭವತಿ [ಯದಿ (೪) ಇತಾಸುರ್ಭವತಿ]

ಜೀವತ್ಯೇವ ಸೋಮಾರುದ್ರಯೋರ್ವಾ ಏತಂ

ಗ್ರಸಿತಗ್‌ಂ ಹೋತಾ ನಿಷ್ಖಿದತಿ

---

ಸೋಮಾತ್ । ಏವ । ಅಸ್ಯ । ರಸಮ್ । ನಿಷ್ಕ್ರೀಣಾತೀತಿ ನಿಃ–ಕ್ರೀಣಾತಿ । ಅಗ್ನೇಃ । ಶರೀರಮ್ । ಉತ । ಯದಿ । ಇತಾಸುರಿತೀತ–ಅಸುಃ । ಭವತಿ । ಜೀವತಿ । ಏವ । **ಸೋಮಾರುದ್ರಯೋರಿತಿ ಸೋಮಾ–ರುದ್ರಯೋಃ** । ವೈ । ಏತಮ್ । ಗ್ರಸಿತಮ್ । ಹೋತಾ । ನಿರಿತಿ । ಖಿದತಿ ।

---

| | |
|---|---|
| ಸೋಮಾತ್ ಏವ ಅಸ್ಯ ರಸಮ್ ನಿಷ್ಕ್ರೀಣಾತಿ ಅಗ್ನೇಃ ಶರೀರಮ್ [ನಿಷ್ಕ್ರೀಣಾತಿ] | ಯಜಮಾನನು ತನ್ನ ಶರೀರದ ಸಾರವನ್ನು ಸೋಮನಿಂದ ಬಿಡಿಸಿಕೊಳ್ಳುತ್ತಾನೆ. ಅಗ್ನಿಯಿಂದ ತನ್ನ ದೇಹವು ಒಣಗದಂತೆ ಮಾಡಿಕೊಳ್ಳುತ್ತಾನೆ. |
| ಉತ ಯದಿ ಇತಾಸುಃ ಭವತಿ ಜೀವತಿ ಏವ | ಪ್ರಾಣಗಳು ಹೋಗುವ ಸ್ಥಿತಿಯಲ್ಲಿರುವವನೂ ಬದುಕಿಯೇ ಬದುಕುತ್ತಾನೆ. |

**ಈ ಯಾಗದಲ್ಲಿ ಹೋತೃವಿಗೆ ವಿಹಿತವಾದ ವೃಷಭದಾನ**

| | |
|---|---|
| ಸೋಮಾರುದ್ರಯೋಃ ಗ್ರಸಿತಮ್ ಏತಮ್ ಹೋತಾ ನಿಷ್ಖಿದತಿ | ಹೋತೃವು ಸೋಮಾರುದ್ರರ ದವಡೆಯಲ್ಲಿ ತುತ್ತಾಗಿ ಸಿಕ್ಕಿಕೊಂಡಿದ್ದ ಯಜಮಾನನನ್ನು ಹೊರಕ್ಕೆ ಎಳೆದುಕೊಳ್ಳುತ್ತಾನೆ. |

---

ಅವನ ದೇಹವು ಒಣಗಿ ಹೋಗಿ ಬಲಹೀನವಾಗುತ್ತದೆ. ಈ ಸೋಮಾರೌದ್ರಯಾಗದ ಯಜಮಾನನು ಸೋಮನ ಅನುಗ್ರಹದಿಂದ ಸಾರ/ಬಲವನ್ನೂ ಅಗ್ನಿಯ ಅನುಗ್ರಹದಿಂದ ಬಲಿಷ್ಠವಾದ ದೇಹವನ್ನೂ ಮರಳಿ ಪಡೆಯುತ್ತಾನೆ. ಯಜಮಾನನು ಸಾಯುವ ಸ್ಥಿತಿಯಲ್ಲಿ ಇದ್ದರೂ ಮತ್ತೆ ರೋಗರಹಿತನಾಗಿ ಜೀವಿಸುತ್ತಾನೆ.

ಸ ಈಶ್ವರ ಆರ್ತಿಮಾರ್ತೋ॰ರನಡ್ವಾನ್ ಹೋತ್ರಾ

ದೇಯೋ ವಹ್ನಿರ್ವಾ ಅನಡ್ವಾನ್ ವಹ್ನಿರ್ ಹೋತಾ

ವಹ್ನಿನೈವ ವಹ್ನಿಮಾತ್ಮಾನಗ್ಂ ಸ್ಪೃಣೋತಿ

---

ಸಃ । ಈಶ್ವರಃ । ಆರ್ತಿಮ್ । ಆರ್ತೋ॰ರಿತ್ಯಾ – ಅರ್ತೋ॰ಃ । ಅನಡ್ವಾನ್ । ಹೋತ್ರಾ । ದೇಯಃ । ವಹ್ನಿಃ । ವೈ । ಅನಡ್ವಾನ್ । ವಹ್ನಿಃ । ಹೋತಾ । ವಹ್ನಿನಾ । ಏವ । ವಹ್ನಿಮ್ । ಆತ್ಮಾನಮ್ । ಸ್ಪೃಣೋತಿ ।

---

| | |
|---|---|
| ಸಃ ಆರ್ತಿಮ್ ಆರ್ತೋ॰ಃ ಈಶ್ವರಃ | [ಇದರಿಂದ] ಹೋತೃವು [ದೇವತೆಗಳ ಕೋಪಕ್ಕೆ ಗುರಿಯಾಗಿ] ಪೀಡೆಯನ್ನು ಹೊಂದುವನು. |
| ಹೋತ್ರಾ ಅನಡ್ವಾನ್ ದೇಯಃ | [ಇದರ ಪರಿಹಾರಕ್ಕಾಗಿ] ಎತ್ತು ಹೋತೃವಿನಿಂದ ಕೊಡಲ್ಪಡಬೇಕು. |
| ಅನಡ್ವಾನ್ ವಹ್ನಿಃ ವೈ | ಅಗ್ನಿಯೇ ವೃಷಭವಾಗಿದೆ. |
| ಹೋತಾ ವಹ್ನಿಃ | ಹೋತೃವೂ ವಹ್ನಿಯೇ ಆಗಿರುತ್ತಾನೆ. |
| ವಹ್ನಿನಾ ಏವ ವಹ್ನಿಮ್ ಆತ್ಮಾನಮ್ ಸ್ಪೃಣೋತಿ | ಹೀಗೆ ವಹ್ನಿರೂಪನಾದ ತನ್ನನ್ನು ವಹ್ನಿಯಿಂದ ಸಂತೋಷದಿಂದಿರುವಂತೆ ಮಾಡಿಕೊಳ್ಳುತ್ತಾನೆ. |

---

ಈ ಯಾಗದಲ್ಲಿ ಹೋತೃವು ಭಾರವನ್ನು ಹೊರಲು ಸಮರ್ಥವಾದ ಹೋರಿಯನ್ನು ದಾನ ಮಾಡಬೇಕು. ಏಕೆಂದರೆ ಈ ರೋಗಪೀಡಿತನಾದ ಯಜಮಾನನು ಸೋಮಾರುದ್ರರ ಆಹಾರವಾಗಿ ಅವರ ದವಡೆಯಲ್ಲಿ ಸಿಕ್ಕಿಕೊಂಡಿರುತ್ತಾನೆ. ಹೋತೃವು ಯಾಜ್ಯೆ–ಪುರೋನುವಾಕ್ಯೆಗಳನ್ನು ಹೇಳುವ ಮೂಲಕ ಅವರ ತುತ್ತಾದ ಯಜಮಾನನನ್ನು ಬಿಡಿಸಿಕೊಳ್ಳುತ್ತಾನೆ. ಇದರಿಂದ ಕುಪಿತರಾದ ಸೋಮ–ರುದ್ರರು ಹೋತೃವನ್ನೇ ಪೀಡಿಸಬಹುದು. ಈ ಕೋಪಪರಿಹಾರಕ್ಕಾಗಿ ಭಾರವನ್ನು ಹೊರಲು ಸಮರ್ಥವಾದ ಎತ್ತನ್ನು ಹೋತೃವು ದಾನ ಮಾಡಬೇಕು. ಈ ವೃಷಭದಾನದಿಂದ ಸೋಮಾರುದ್ರರು ಪ್ರೀತರಾಗುತ್ತಾರೆ.

ದೇವತೆಗಳಿಗಾಗಿ ಹವ್ಯವನ್ನು ಒಯ್ಯುವ ಅಗ್ನಿಯು ವೃಷಭವೇ. ಮಂತ್ರಗಳನ್ನು ಹೇಳುವ ಮೂಲಕ ದೇವತೆಗಳಿಗೆ ಹವ್ಯವನ್ನು ಸಮರ್ಪಿಸುವ ಹೋತೃವೂ ವಹ್ನಿಯೇ

# ಸೋಮಾರೌದ್ರಂ ಚರುಂ ನಿರ್ವಪೇದ್ಯಃ ಕಾಮಯೇತ ಸ್ವೇಽಸ್ಮಾ ಆಯತನೇ ಭ್ರಾತೃವ್ಯಂ ಜನಯೇಯಮಿತಿ ವೇದಿಂ ಪರಿಗೃಹ್ಯಾರ್ಧಮುದ್ಧನ್ಯಾದರ್ಧಂ ನಾರ್ಧಂ ಬರ್ಹಿಷಃ

**ಸೋಮಾರೌದ್ರಮಿತಿ ಸೋಮಾ–ರೌದ್ರಮ್** । ಚರುಮ್ । ನಿರಿತಿ । ವಪೇತ್ । ಯಃ । ಕಾಮಯೇತ । ಸ್ವೇ । ಅಸ್ಮೈ । ಆಯತನ ಇತ್ಯಾ–ಯತನೇ । ಭ್ರಾತೃವ್ಯಮ್ । ಜನಯೇಯಮ್ । ಇತಿ । ವೇದಿಮ್ । ಪರಿಗೃಹ್ಯೇತಿ ಪರಿ–ಗೃಹ್ಯ । ಅರ್ಧಮ್ । ಉದ್ಧನ್ಯಾದಿತ್ಯುತ್ – ಹನ್ಯಾತ್ । ಅರ್ಧಮ್ । ನ । ಅರ್ಧಮ್ । ಬರ್ಹಿಷಃ ।

**ಮತ್ತೊಂದು ಕಾಮನೆಗಾಗಿ ಸೋಮಾರೌದ್ರಯಾಗವಿಧಿ; ಸ್ತುತಿ**

| | |
|---|---|
| ಯಃ ಸ್ವೇ ಏವ ಆಯತನೇ ಅಸ್ಮೈ ಭ್ರಾತೃವ್ಯಮ್ ಜನಯೇಯಮ್ ಇತಿ ಕಾಮಯೇತ | ಯಾವನು ಶತ್ರುವಿಗೆ ಅವನ ಕ್ಷೇತ್ರದಲ್ಲಿಯೇ ಶತ್ರುವು ಉಂಟಾಗಬೇಕೆಂದು ಬಯಸುತ್ತಾನೆಯೋ [ಅವನು] |
| ಸೋಮಾರೌದ್ರಮ್ ಚರುಮ್ ನಿರ್ವಪೇತ್ | ಸೋಮಾರುದ್ರ ದೇವತೆಗಳಿಗಾಗಿ ಚರುಯಾಗವನ್ನು ಅನುಷ್ಠಿಸಬೇಕು. |
| ವೇದಿಮ್ ಪರಿಗೃಹ್ಯ ಅರ್ಧಮ್ ಉದ್ಧನ್ಯಾತ್ ಅರ್ಧಮ್ ನ ಉದ್ಧನ್ಯಾತ್ | [ಈ ಯಾಗದಲ್ಲಿ] ವೇದಿಯನ್ನು ಗೊತ್ತುಪಡಿಸಿ, ದಕ್ಷಿಣಾರ್ಧವನ್ನು ಮಾತ್ರ ಕೆತ್ತಬೇಕು. ಉಳಿದ ಅರ್ಧಭಾಗವನ್ನು ಕೆತ್ತಬಾರದು. |
| ಬರ್ಹಿಷಃ ಅರ್ಧಮ್ | ಬರ್ಹಿಸ್ಸಿನ ಅರ್ಧವನ್ನು |

ಆಗಿರುತ್ತಾನೆ. ಭಾರವನ್ನು ಹೊರುವ ವೃಷಭವೂ ವಹ್ನಿಯೇ ಆಗಿದೆ. ಹೀಗೆ ವೃಷಭ ದಾನದಿಂದ ದೇವತೆಗಳನ್ನು ತೃಪ್ತಿಪಡಿಸಿ, ತನಗೆ ಪೀಡೆಯಾಗದಂತೆ ಮಾಡಿಕೊಂಡು ಸಂತೋಷವಾಗಿರುತ್ತಾನೆ.

ಶತ್ರುವಿಗೆ ಅವನದಾದ ಕ್ಷೇತ್ರದಲ್ಲಿಯೇ ಶತ್ರುವು ಹುಟ್ಟಿಕೊಳ್ಳಬೇಕೆಂದು ಇಚ್ಛಿಸುವವನು ಸೋಮಾರುದ್ರದೇವತೆಗಳಿಗಾಗಿ ಚರುಯಾಗವನ್ನು ಮಾಡಬೇಕು. ಈ ಯಾಗದಲ್ಲಿ ವೇದಿಯನ್ನು ಗುರುತಿಸಿ, ದಕ್ಷಿಣಾರ್ಧವನ್ನು ಮಾತ್ರ ಕೆತ್ತಬೇಕು. ಉಳಿದ

ಸ್ತೃಣೀಯಾದರ್ಧಂ ನಾರ್ಧಮಿಧ್ಮಸ್ಯಾಭ್ಯಾದಧ್ಯಾದರ್ಧಂ

ನ ಸ್ವ ಏವಾಸ್ಮಾ ಆಯತನೇ ಭ್ರಾತೃವ್ಯಂ

ಜನಯತಿ ॥೫೭–10॥

[ರುದ್ರೋ ಭೇಷಜಂ ಏಂದತೇ ಯದಿ ಸ್ತೃಣೀಯಾದರ್ಧಂ ದ್ವಾದಶ ಚ]

---

ಸ್ತೃಣೀಯಾತ್ । ಅರ್ಧಮ್ । ನ । ಅರ್ಧಮ್ । ಇಧ್ಮಸ್ಯ । ಅಭ್ಯಾದಧ್ಯಾದಿತ್ಯಭಿ–ಆದಧ್ಯಾತ್ । ಅರ್ಧಮ್ । ನ । ಸ್ವೇ । ಏವ । ಅಸ್ಮೈ । ಆಯತನ ಇತ್ಯಾ–ಯತನೇ । ಭ್ರಾತೃವ್ಯಮ್ । ಜನಯತಿ ॥10॥

---

| | |
|---|---|
| ಸ್ತೃಣೀಯಾತ್ | [ಮಾತ್ರ ವೇದಿಯಲ್ಲಿ] ಹರಡಬೇಕು. |
| ಅರ್ಧಮ್ ನ ಸ್ತೃಣೀಯಾತ್ | ಉಳಿದ ಅರ್ಧಭಾಗವನ್ನು ಹರಡಬಾರದು. |
| ಇಧ್ಮಸ್ಯ ಅರ್ಧಮ್ ಅಭ್ಯಾದಧ್ಯಾತ್ | ಇಧ್ಮದ ಅರ್ಧವನ್ನು ಅಗ್ನಿಯಲ್ಲಿ ಹಾಕಬೇಕು. |
| ಅರ್ಧಮ್ ನ ಅಭ್ಯಾದಧ್ಯಾತ್ | ಉಳಿದ ಅರ್ಧವನ್ನು ಅಗ್ನಿಯಲ್ಲಿ ಹಾಕಬಾರದು. |
| ಸ್ವೇ ಆಯತನೇ ಏವ ಅಸ್ಮೈ ಭ್ರಾತೃವ್ಯಮ್ ಜನಯತಿ | [ಹೀಗೆ ಮಾಡುವುದರಿಂದ] ಯಜಮಾನನು ಶತ್ರುವಿನ ಕ್ಷೇತ್ರದಲ್ಲಿಯೇ ಅವನ ಶತ್ರುವು ಹುಟ್ಟುವಂತೆ ಮಾಡುತ್ತಾನೆ. |

---

ಅರ್ಧವನ್ನು ಕೆತ್ತಬಾರದು. ಬರ್ಹಿಸ್ಸಿನ ಅರ್ಧವನ್ನು ವೇದಿಯಲ್ಲಿ ಹರಡಬೇಕು. ಉಳಿದರ್ಧವನ್ನು ಹರಡದೆ ಉತ್ಕರದಲ್ಲಿ ಹಾಕಬೇಕು. ಇಧ್ಮದ ಅರ್ಧವನ್ನು ಮಾತ್ರ ಅಗ್ನಿಯಲ್ಲಿ ಹಾಕಬೇಕು. ಉಳಿದ ಅರ್ಧವನ್ನು ಅಗ್ನಿಯಲ್ಲಿ ಹಾಕದೇ ಉತ್ಕರಪ್ರದೇಶದಲ್ಲಿ ಹಾಕಬೇಕು. ಹೀಗೆ ಮಾಡುವುದರಿಂದ ಶತ್ರುವಿಗೆ ಸ್ವಕ್ಷೇತ್ರದಲ್ಲಿಯೇ ಶತ್ರುವು ಹುಟ್ಟಿಕೊಳ್ಳುವಂತೆ ಮಾಡುತ್ತಾನೆ. ಇದರಿಂದ ತನಗೆ ಶತ್ರುಪೀಡೆಯಾಗದಂತೆ ಮಾಡಿಕೊಳ್ಳುತ್ತಾನೆ.

# ದಶಮಾನುವಾಕವಿಷಯಸಂಗ್ರಹ

**ಬ್ರಹ್ಮವರ್ಚಸಕಾಮಸ್ತು ಸೋಮಾರೌದ್ರಂ ಚರುಂ ಚರೇತ್ ।**
**ಚರ್ಮರೋಗಾದ್ವಿಭೀತಸ್ತು ಸೋಮಾಪೌಷ್ಣಂ ಸಮಾಚರೇತ್ ॥**

**ಪ್ರಜಾಕಾಮೋಽಭಿಚಾರೀ ಚ ದೀರ್ಘರೋಗಯುತಸ್ತಥಾ ।**
**ಪರಸ್ಯ ವೈರಿಜನಕೋ ವಾ ಸೋಮಾರೌದ್ರಮಾಚರೇತ್ ॥**

**ದಶಮೇ ತ್ವನುವಾಕೇಽಸ್ಮಿನ್ ಸೋಮಾರೌದ್ರಾದಯಃ ಶ್ರುತಾಃ ॥**
**ಅಗ್ನಾವಿಷ್ಣೂ ಮಹೀತ್ಯತ್ರ ವರ್ಣಿತೋಽರ್ಥೋಽನುವಾಕಯೋಃ ॥**

ಈ ಹತ್ತನೆಯ ಅನುವಾಕದಲ್ಲಿ – ಬ್ರಹ್ಮವರ್ಚಸವನ್ನು ಬಯಸುವವನಿಗಾಗಿ, ಚರ್ಮರೋಗದ ಭೀತಿಯಿರುವವನಿಗೆ, ಮಕ್ಕಳನ್ನು ಬಯಸುವವನಿಗೆ, ದೀರ್ಘರೋಗಿಯಾದವನಿಗೆ, ಶತ್ರುವಿಗೆ ಸ್ವಕ್ಷೇತ್ರದಲ್ಲಿಯೇ ಶತ್ರುವು ಹುಟ್ಟಬೇಕೆಂದು ಬಯಸುವವನಿಗೆ – ಯಾಗಗಳು ಹೇಳಲ್ಪಟ್ಟಿವೆ. **'ಅಗ್ನಾವಿಷ್ಣೂ ಮಹಿ'** ಅನುವಾಕದಲ್ಲಿ ಮಂತ್ರಾರ್ಥವು ಹೇಳಲ್ಪಟ್ಟಿದೆ.

* * *



## ॥ ಏಕಾದಶೋಽನುವಾಕಃ ॥

ಐಂದ್ರಮೇಕಾದಶಕಪಾಲಂ ನಿರ್ವಪೇನ್ಮಾರುತಗ್ಂ

ಸಪ್ತಕಪಾಲಂ ಗ್ರಾಮಕಾಮ ಇಂದ್ರಂ ಚೈವ ಮರುತಶ್ಚ

ಸ್ವೇನ ಭಾಗಧೇಯೇನೋಪಧಾವತಿ

---

ಐಂದ್ರಮ್ । ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್ । ನಿರಿತಿ । ವಪೇತ್ । ಮಾರುತಮ್ । ಸಪ್ತಕಪಾಲಮಿತಿ ಸಪ್ತ–ಕಪಾಲಮ್ । ಗ್ರಾಮಕಾಮ ಇತಿ ಗ್ರಾಮ–ಕಾಮಃ । ಇಂದ್ರಮ್ । ಚ । ಏವ । ಮರುತಃ । ಚ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

ಈ ಹನ್ನೊಂದನೆಯ ಅನುವಾಕದಲ್ಲಿ ಐಂದ್ರಾದೀಷ್ಟಿಗಳು ಹೇಳಲ್ಪಟ್ಟಿವೆ.

**ಗ್ರಾಮಕಾಮನಿಗೆ ವಿಹಿತವಾದ ಇಷ್ಟಿ; ಅರ್ಥವಾದ**

| | |
|---|---|
| ಗ್ರಾಮಕಾಮಃ ಐಂದ್ರಮ್ ಏಕಾದಶಕಪಾಲಮ್ ನಿರ್ವಪೇತ್ | ಗ್ರಾಮಕ್ಕೆ ಒಡೆಯನಾಗಬೇಕೆಂದು ಬಯಸುವವನು ಇಂದ್ರದೇವನಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು. |
| ಮಾರುತಮ್ ಸಪ್ತಕಪಾಲಮ್ [ನಿರ್ವಪೇತ್] | ಮರುದ್ದೇವತೆಗಳಿಗಾಗಿ ಸಪ್ತಕಪಾಲ ಪುರೋಡಾಶಯಾಗವನ್ನು ಮಾಡಬೇಕು. |
| ಇಂದ್ರಮ್ ಮರುತಮ್ ಚ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದಿಂದ ಇಂದ್ರನನ್ನೂ ಮರುತ್ತುಗಳನ್ನೂ ಅವರಿಗೆ ತಕ್ಕ ಹವಿಸ್ಸನ್ನಿತ್ತು ಸೇವಿಸುತ್ತಾನೆ. |

---

ಗ್ರಾಮದ ಒಡೆಯನಾಗಬಯಸುವವನು ಇಂದ್ರದೇವನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನೂ , ಮರುದ್ದೇವತೆಗಳಿಗಾಗಿ ಸಪ್ತಕಪಾಲಪುರೋಡಾಶ ಯಾಗವನ್ನೂ ಮಾಡಬೇಕು. ಇದರಿಂದ ಯಜಮಾನನು ಇಂದ್ರನನ್ನೂ , ಮರುತ್ತುಗಳನ್ನೂ ಉಚಿತಹವಿಃಪ್ರದಾನದಿಂದ ಸೇವಿಸಿದಂತಾಗುತ್ತದೆ.

ತ ಏವಾಸ್ಮೈ ಸಜಾತಾನ್ಪ್ರಯಚ್ಛಂತಿ ಗ್ರಾಮ್ಯೇವ

ಭವತ್ಯಾಹವನೀಯ ಐಂದ್ರಮಧಿಶ್ರಯತಿ ಗಾರ್ಹಪತ್ಯೇ

ಮಾರುತಂ ಪಾಪವಸ್ಯಸಸ್ಯ ವಿಧೃತ್ಯೈ

---

ತೇ। ಏವ। ಅಸ್ಮೈ। ಸಜಾತಾನಿತಿ ಸ-ಜಾತಾನ್। ಪ್ರೇತಿ। ಯಚ್ಛಂತಿ। ಗ್ರಾಮೀ। ಏವ। ಭವತಿ। ಆಹವನೀಯ ಇತ್ಯಾ-ಹವನೀಯೇ। ಐಂದ್ರಮ್। ಅಧೀತಿ। ಶ್ರಯತಿ। ಗಾರ್ಹಪತ್ಯ ಇತಿ ಗಾರ್ಹ-ಪತ್ಯೇ। ಮಾರುತಮ್। ಪಾಪವಸ್ಯಸಸ್ಯೇತಿ ಪಾಪ-ವಸ್ಯಸಸ್ಯ। ವಿಧೃತ್ಯಾ ಇತಿ ವಿ-ಧೃತ್ಯೈ।

---

| | |
|---|---|
| ತೇ ಏವ ಅಸ್ಮೈ ಸಜಾತಾನ್ ಪ್ರಯಚ್ಛಂತಿ ಗ್ರಾಮೀ ಏವ ಭವತಿ | ಆ ಇಂದ್ರ-ಮರುತ್ತುಗಳು ಈ ಯಜಮಾನನಿಗೆ ಭ್ರಾತೃಮಿತ್ರಾದಿಗಳನ್ನು ಅನುಯಾಯಿಗಳನ್ನಾಗಿ ಮಾಡುತ್ತಾರೆ. ಯಜಮಾನನು ಗ್ರಾಮದ ಒಡೆಯನೇ ಆಗುತ್ತಾನೆ. |

**ಪಾಕದಲ್ಲಿ ವಿಶೇಷವಿಧಿ; ಅದರ ವಿವರಣೆ**

| | |
|---|---|
| ಆಹವನೀಯೇ ಐಂದ್ರಮ್ ಅಧಿಶ್ರಯತಿ | ಐಂದ್ರಪುರೋಡಾಶವನ್ನು ಆಹವನೀಯಾಗ್ನಿಯಲ್ಲಿ ಪಚನ ಮಾಡಬೇಕು. |
| ಗಾರ್ಹಪತ್ಯೇ ಮಾರುತಮ್ [ಅಧಿಶ್ರಯತಿ] | ಗಾರ್ಹಪತ್ಯಾಗ್ನಿಯಲ್ಲಿ ಮಾರುತಸಪ್ತಕಪಾಲವನ್ನು ಬೇಯಿಸಬೇಕು. |
| ಪಾಪವಸ್ಯಸಸ್ಯ ವಿಧೃತ್ಯೈ | ಇದು ಶ್ರೇಷ್ಠ-ಕನಿಷ್ಠರ ವಿಭಾಗಕ್ಕೆ ಕಾರಣವಾಗುತ್ತದೆ. |

---

ಸುಪ್ರೀತರಾದ ಇಂದ್ರ-ಮರುತ್ತುಗಳು ತೃಪ್ತರಾಗಿ ಭ್ರಾತೃ-ಮಿತ್ರಾದಿಗಳನ್ನು ಈ ಯಜಮಾನನ ಅನುಯಾಯಿಗಳನ್ನಾಗಿ ಮಾಡುತ್ತಾರೆ. ಯಜಮಾನನು ಗ್ರಾಮಸ್ವಾಮಿಯಾಗುತ್ತಾನೆ.

ಆಹವನೀಯಾಗ್ನಿಯಲ್ಲಿ ಐಂದ್ರಪುರೋಡಾಶವನ್ನೂ, ಗಾರ್ಹಪತ್ಯಾಗ್ನಿಯಲ್ಲಿ ಮಾರುತಸಪ್ತಕಪಾಲವನ್ನೂ ಪಕ್ವ ಮಾಡಬೇಕು. ಇದು ಜ್ಯೇಷ್ಠ ಒಡೆಯ ಮತ್ತು ಕನಿಷ್ಠ ಅನುಯಾಯಿ ಇವರ ವ್ಯತ್ಯಾಸಕ್ಕೆ ಕಾರಣವಾಗುತ್ತದೆ.

ಸಪ್ತಕಪಾಲೋ ಮಾರುತೋ ಭವತಿ ಸಪ್ತಗಣಾ ವೈ

ಮರುತೋ ಗಣಶ ಏವಾಸ್ಮೈ ಸಜಾತಾನವ

ರುಂಧೇಽನೂಚ್ಯಮಾನ ಆಸಾದಯತಿ ವಿಶಮೇವಾಸ್ಮಾ

[ವಿಶಮೇವ (೧) ಅಸ್ಮಾ] ಅನುವರ್ತ್ಮಾನಂ

---

ಸಪ್ತಕಪಾಲ ಇತಿ ಸಪ್ತ–ಕಪಾಲಃ। ಮಾರುತಃ। ಭವತಿ। ಸಪ್ತಗಣಾ ಇತಿ ಸಪ್ತ–ಗಣಾಃ। ವೈ। ಮರುತಃ। ಗಣಶ ಇತಿ ಗಣ–ಶಃ। ಏವ। ಅಸ್ಮೈ। ಸಜಾತಾನಿತಿ ಸ–ಜಾತಾನ್। ಅವೇತಿ। ರುಂಧೇ। ಅನೂಚ್ಯಮಾನ ಇತ್ಯನು–ಉಚ್ಯಮಾನೇ। ಏತಿ। ಸಾದಯತಿ। ವಿಶಮ್। ಏವ। ಅಸ್ಮೈ। ಅನುವರ್ತ್ಮಾನಮಿತ್ಯನು– ವರ್ತ್ಮಾನಮ್।

---

| | |
|---|---|
| ಮಾರುತಃ ಸಪ್ತಕಪಾಲಃ ಭವತಿ | ಸಪ್ತಕಪಾಲಪುರೋಡಾಶಯಾಗವು ಮರುದ್ದೇವತಾಕವಾಗಿದೆ. |
| ಮರುತಃ ಸಪ್ತಗಣಾಃ ವೈ | ಮರುತ್ತುಗಳು **'ಈದೃಙ್'** ಮುಂತಾದ *ಏಳು ಗುಂಪುಗಳಾಗಿವೆ. |
| ಗಣಶಃ ಏವ ಅಸ್ಮೈ ಸಜಾತಾನ್ ಅವರುಂಧೇ | ಯಜಮಾನನು ಜ್ಞಾತಿ–ಮಿತ್ರ–ಭ್ರಾತ್ರಾದಿಗಳನ್ನು ಗುಂಪುಗುಂಪುಗಳಾಗಿಯೇ ತನ್ನ ಅನುಯಾಯಿಗಳನ್ನಾಗಿ ಮಾಡಿಕೊಳ್ಳುತ್ತಾನೆ. |
| ಅನೂಚ್ಯಮಾನೇ ಆಸಾದಯತಿ | ಹೋತೃವು ಸಾಮಿಧೇನೀಮಂತ್ರಗಳನ್ನು ಹೇಳುತ್ತಿರುವಾಗ ಹವಿರಾಸಾದನವನ್ನು ಮಾಡಬೇಕು. |
| ಅಸ್ಮೈ ವಿಶಮ್ ಏವ ಅನುವರ್ತ್ಮಾನಮ್ | ಇದರಿಂದ ಪ್ರಜೆಗಳನ್ನು ಯಜಮಾನನ ಅನುಯಾಯಿಗಳನ್ನಾಗಿ |

---

ಸಪ್ತಕಪಾಲಪುರೋಡಾಶಯಾಗವು ಮರುದ್ದೇವತಾಕವಾದುದು. ಮರುತ್ತುಗಳೂ **'ಈದೃಙ್'** ಮುಂತಾದ ಏಳು ಗುಂಪುಗಳಾಗಿವೆ. ಈ ಸಪ್ತಕಪಾಲಪುರೋಡಾಶಯಾಗದ

---

* ವಿಶೇಷ ವಿಷಯದಲ್ಲಿ ವಿವರಿಸಿದೆ.

ಕರೋತ್ಯೇತಾಮೇವ ನಿರ್ವಪೇದ್ಯಃ ಕಾಮಯೇತ

ಕ್ಷತ್ರಾಯ ಚ ವಿಶೇ ಚ ಸಮದಂ ದಧ್ಯಾಮಿತ್ಯೈಂದ್ರ-

ಸ್ಯಾವದ್ಯನ್ಬ್ರೂಯಾದಿಂದ್ರಾಯಾನು ಬ್ರೂಹೀತ್ಯಾಶ್ರಾವ್ಯ

ಬ್ರೂಯಾನ್ಮರುತೋ ಯಜೇತಿ

---

ಕರೋತಿ । ಏತಾಮ್ । ಏವ । ನಿರಿತಿ । ವಪೇತ್ । ಯಃ । ಕಾಮಯೇತ । ಕ್ಷತ್ರಾಯ । ಚ । ವಿಶೇ । ಚ । ಸಮದಮಿತಿ ಸ-ಮದಮ್ । ದಧ್ಯಾಮ್ । ಇತಿ । ಐಂದ್ರಸ್ಯ । ಅವದ್ಯನ್ನಿತ್ಯವ -ದ್ಯನ್ । ಬ್ರೂಯಾತ್ । ಇಂದ್ರಾಯ । ಅನ್ವಿತಿ । ಬ್ರೂಹಿ । ಇತಿ । ಆಶ್ರಾವ್ಯೇತ್ಯಾ- ಶ್ರಾವ್ಯ । ಬ್ರೂಯಾತ್ । ಮರುತಃ । ಯಜ । ಇತಿ ।

---

| | |
|---|---|
| ಕರೋತಿ | ಮಾಡಿದಂತಾಗುತ್ತದೆ. |

**ಮತ್ತೊಂದು ಕಾಮನೆಗಾಗಿ ಈ ಯಾಗವಿಧಿ; ಪ್ರಶಂಸೆ**

| | |
|---|---|
| ಯಃ ಕ್ಷತ್ರಾಯ ಚ ವಿಶೇ ಚ ಸಮದಮ್ ದಧ್ಯಾಮ್ ಇತಿ ಕಾಮಯೇತ | ಪ್ರಜಾಪಾಲಕರಾದ ಕ್ಷತ್ರಿಯರಿಗೂ, ಬೇರೆಯ ಪ್ರಜೆಗಳಿಗೂ ಕಲಹವನ್ನು ಉಂಟು ಮಾಡುವೆನೆಂದು ಬಯಸುವವನು |
| ಏತಾಮ್ ಏವ ನಿರ್ವಪೇತ್ | ಈ ಐಂದ್ರಮಾರುತಯಾಗವನ್ನೇ ಅನುಷ್ಠಿಸಬೇಕು. |
| ಇಂದ್ರಾಯ ಅನುಬ್ರೂಹಿ ಇತಿ ಐಂದ್ರಸ್ಯ ಅವದ್ಯನ್ ಬ್ರೂಯಾತ್ ಮರುತಃ ಯಜ ಇತಿ ಆಶ್ರಾವ್ಯ ಬ್ರೂಯಾತ್ | ಇಂದ್ರನಿಗಾಗಿ ಹವಿಸ್ಸನ್ನು ಅವದಾನ ಮಾಡುತ್ತಾ **'ಇಂದ್ರಾಯ ಅನುಬ್ರೂಹಿ'** ಎಂದು ಪ್ರೈಷವನ್ನು ಹೇಳಬೇಕು. **'ಆಶ್ರಾವಯ'** ಎಂದು ಹೇಳಿದ ನಂತರ **'ಮರುತಃ ಯಜ'** ಎಂದು ಹೇಳಬೇಕು. |

---

ಪ್ರಭಾವದಿಂದ ಯಜಮಾನನು ಪ್ರಜೆಗಳನ್ನು ಗುಂಪುಗುಂಪಾಗಿಯೇ ಅಧೀನರನ್ನಾಗಿ ಮಾಡಿಕೊಳ್ಳುತ್ತಾನೆ. ಐಂದ್ರಹವಿಸ್ಸನ್ನು ಕಾಲದಲ್ಲಿ ಆಸಾದನ ಮಾಡಿ, ಮಾರುತ ಸಪ್ತಕಪಾಲವನ್ನು ಹೋತೃವು ಸಾಮಿಧೇನೀಮಂತ್ರಗಳನ್ನು ಹೇಳುತ್ತಿರುವಾಗ ವೇದಿಯಲ್ಲಿ ಆಸಾದನ ಮಾಡಬೇಕು. ಇದರಿಂದ ಅಧ್ವರ್ಯುವು ಪ್ರಜೆಗಳನ್ನು ಯಜಮಾನನ ಅನುಯಾಯಿಗಳನ್ನಾಗಿ ಮಾಡುತ್ತಾನೆ.

## ಮಾರುತಸ್ಯಾವದ್ಯನ್ಬ್ರೂಯಾನ್ಮರುದ್ಭ್ಯೋಽನುಬ್ರೂಹೀತ್ಯಾ

## ಶ್ರಾವ್ಯಬ್ರೂಯಾದಿಂದ್ರಂ ಯಜೇತಿ

---

ಮಾರುತಸ್ಯ । ಅವದ್ಯನ್ನಿತ್ಯವ–ದ್ಯನ್ । ಬ್ರೂಯಾತ್ । ಮರುದ್ಭ್ಯ ಇತಿ ಮರುತ್–ಭ್ಯಃ । ಅನ್ವಿತಿ । ಬ್ರೂಹಿ । ಇತಿ । ಆಶ್ರಾವ್ಯೇತ್ಯಾ–ಶ್ರಾವ್ಯ । ಬ್ರೂಯಾತ್ । ಇಂದ್ರಮ್ । ಯಜ । ಇತಿ ।

---

| | |
|---|---|
| ಮರುದ್ಭ್ಯಃ ಅನುಬ್ರೂಹಿ ಇತಿ ಮಾರುತಸ್ಯ ಅವದ್ಯನ್ ಬ್ರೂಯಾತ್ | ಮಾರುತಸಪ್ತಕಪಾಲವನ್ನು ಅವದಾನ ಮಾಡುತ್ತಾ **'ಮರುದ್ಭ್ಯಃ ಅನುಬ್ರೂಹಿ'** ಎಂಬ ಪ್ರೈಷವನ್ನು ಹೇಳಬೇಕು. |
| 'ಇಂದ್ರಮ್ ಯಜ' ಇತಿ ಆಶ್ರಾವ್ಯ ಬ್ರೂಯಾತ್ | **'ಆಶ್ರಾವಯ'** ಎಂದು ಹೇಳಿದ ಮೇಲೆ **'ಇಂದ್ರಮ್ ಯಜ'** ಎಂದು ಹೇಳಬೇಕು. |

---

ಪ್ರಜಾಪಾಲಕರಾದ ಕ್ಷತ್ರಿಯರಲ್ಲಿಯೂ ಪ್ರಜೆಗಳಲ್ಲಿಯೂ ಪರಸ್ಪರ ಕಲಹ ವುಂಟಾಗಿ, ಅವರೆಲ್ಲರೂ ತನ್ನನ್ನು ಒಟ್ಟಾಗಿ ಎದುರಿಸದಿರಲಿ ಎಂದು ಬಯಸುವವನು ಈ ಐಂದ್ರಮಾರುತೇಷ್ಟಿಯನ್ನು ಅನುಷ್ಠಿಸಬೇಕು.

ಐಂದ್ರಪುರೋಡಾಶದ ಅವದಾನಕಾಲದಲ್ಲಿ ಪುರೋನುವಾಕ್ಯೆಗಾಗಿ **'ಇಂದ್ರಾಯಾನುಬ್ರೂಹಿ'** ಎಂದು ಪ್ರೈಷವನ್ನು ಕೊಡಬೇಕು. ಆಗ ಹೋತೃವು ***'ಇಂದ್ರಂ ವೋ ವಿಶ್ವತಸ್ಪರಿ'** ಎಂದು ಪುರೋನುವಾಕ್ಯೆಯನ್ನು ಹೇಳಬೇಕು.

**'ಆಶ್ರಾವಯ'** ಎಂದು ಹೇಳಿದ ನಂತರ **'ಮರುತಃ ಯಜ'** ಎಂದು ಯಾಜ್ಯಾನುವಾಕ್ಯೆಗಾಗಿ ಪ್ರೈಷವನ್ನು ಕೊಡಬೇಕು. ಆಗ ಹೋತೃವು *ಯಾ ವಃ ಶರ್ಮ– ಎಂದು ಯಾಜ್ಯೆಯನ್ನು ಹೇಳಬೇಕು.

ಅನಂತರ ಮಾರುತಪುರೋಡಾಶದ ಅವದಾನದ ಕಾಲದಲ್ಲಿ **'ಮರುದ್ಭ್ಯೋಽನು ಬ್ರೂಹಿ'** ಎಂದು ಪುರೋನುವಾಕ್ಯೆಗಾಗಿ ಪ್ರೈಷವನ್ನು ಕೊಡಬೇಕು. ಬಳಿಕ ಹೋತೃವು ***'ಮರುತೋ ಯದ್ಧ ವೋ ದಿವಃ'** ಎಂದು ಪುರೋನುವಾಕ್ಯೆಯನ್ನು ಹೇಳಬೇಕು.

**'ಆಶ್ರಾವಯ'** ಎಂದು ಹೇಳಿದನಂತರ **'ಇಂದ್ರಂ ಯಜ'** ಎಂದು ಯಾಜ್ಯೆಗಾಗಿ ಪ್ರೈಷವನ್ನು ಕೊಡಬೇಕು. ಆಗ ಹೋತೃವು ***'ಇಂದ್ರಂ ನರಃ'** ಎಂದು ಯಾಜ್ಯೆಯನ್ನು ಹೇಳಬೇಕು.

---

* ತೈ.ಸಂ. 1.6.12 *ತೈ.ಸಂ. 1.5.11 * ತೈ.ಸಂ. 1.5.11 * ತೈ.ಸಂ. 1.6.12

ಸ್ವ ಏವೈಭ್ಯೋ ಭಾಗಧೇಯೇ ಸಮದಂ ದಧಾತಿ

ವಿತೃಗ್ಂಹಾಣಾಸ್ತಿಷ್ಠಂತ್ಯೇತಾಮೇವ [೨] ನಿರ್ವಪೇದ್ಯಃ

ಕಾಮಯೇತ ಕಲ್ಪೇರನ್ನಿತಿ

---

ಸ್ವೇ । ಏವ । ಏಭ್ಯಃ । ಭಾಗಧೇಯ ಇತಿ ಭಾಗ-ಧೇಯೇ । ಸಮದಮಿತಿ ಸ-ಮದಮ್ । ದಧಾತಿ । ವಿತೃಗ್ಂಹಾಣಾ ಇತಿ ವಿ-ತೃಗ್ಂಹಾಣಾಃ । ತಿಷ್ಠಂತಿ । ಏತಾಮ್ । ಏವ । ನಿರಿತಿ । ವಪೇತ್ । ಯಃ । ಕಾಮಯೇತ । ಕಲ್ಪೇರನ್ । ಇತಿ ।

---

| | |
|---|---|
| ಏಭ್ಯಃ ಸ್ವೇ ಭಾಗಧೇಯೇ ಏವ ಸಮದಮ್ ದಧಾತಿ | [ಹೀಗೆ] ಇಂದ್ರನಿಗೂ ಮರುತ್ತುಗಳಿಗೂ ತಮ್ಮ ತಮ್ಮ ಭಾಗದ ವಿಷಯದಲ್ಲಿ ಜಗಳವನ್ನುಂಟು ಮಾಡಿದ ಹಾಗಾಗುತ್ತದೆ. |
| ವಿತೃಗ್ಂಹಾಣಾಃ ತಿಷ್ಠಂತಿ | [ಇದರಿಂದ ಪಾಲಕರೂ ಪ್ರಜೆಗಳೂ] ಜಗಳವಾಡುತ್ತಲೇ ಇರುತ್ತಾರೆ. |

**ಇನ್ನೊಂದು ಕಾಮನೆಗಾಗಿ ಇಷ್ಟಿವಿಧಾನ; ಅರ್ಥವಾದ**

| | |
|---|---|
| ಯಃ ಕಲ್ಪೇರನ್ ಇತಿ ಕಾಮಯೇತ | ಪಾಲಕರಾದ ಅಧಿಕಾರಿಗಳೂ ಪ್ರಜೆಗಳೂ ಅನ್ಯೋನ್ಯವಾಗಿ ಪ್ರೀತಿಯಿಂದ ಬಾಳ ಬೇಕೆಂದು ಬಯಸುವವನು |
| ಏತಾಮ್ ಏವ ನಿರ್ವಪೇತ್ | ಈ ಐಂದ್ರಾಮಾರುತೇಷ್ಟಿಯನ್ನೇ ಮಾಡ ಬೇಕು. |

---

ಇದರಿಂದ ಇಂದ್ರನಿಗೂ ಮರುತ್ತುಗಳಿಗೂ ತಮ್ಮ ಭಾಗದ ವಿಷಯದಲ್ಲಿ ಜಗಳವನ್ನು ಕಲ್ಪಿಸಿದಂತೆ ಆಗುತ್ತದೆ. ಇದರ ಫಲವಾಗಿ ಪ್ರಜಾಪಾಲಕರೂ, ಪ್ರಜೆಗಳೂ ಅನ್ಯೋನ್ಯ ವಾಗಿ ಹಿಂಸಿಸುತ್ತಲೇ ಇರುತ್ತಾರೆ. ಇದರಿಂದ ಯಜಮಾನನ ಮೇಲೆ ಅವರು ಒಟ್ಟಾಗಿ ದಂಗೆಯೇಳದಂತಾಗುತ್ತದೆ.

ಪ್ರಜಾಪಾಲಕರೂ, ಪ್ರಜೆಗಳೂ ಅನ್ಯೋನ್ಯಪ್ರೀತಿವಂತರಾಗಿ ಇರುವಂತೆ ಮಾಡಬಯಸುವವನೂ ಸಹ ಈ ಇಷ್ಟಿಯನ್ನೇ ಅನುಷ್ಠಿಸಬೇಕು.

# ಯಥಾದೇವತಮವದಾಯ ಯಥಾದೇವತಂ ಯಜೇದ್ಭಾಗ

# ಧೇಯೇನೈವೈನಾನ್ ಯಥಾಯಥಂ ಕಲ್ಪಯತಿ ಕಲ್ಪಂತ

# ಏವೈಂದ್ರಮೇಕಾದಶಕಪಾಲಂ ನಿರ್ವಪೇದ್ವೈಶ್ವ

# ದೇವಂ ದ್ವಾದಶಕಪಾಲಂ ಗ್ರಾಮಕಾಮ

---

ಯಥಾ ದೇವತಮಿತಿ ಯಥಾ–ದೇವತಮ್ । ಅವದಾಯೇತ್ಯವ–ದಾಯ । ಯಥಾ ದೇವತಮಿತಿ ಯಥಾ–ದೇವತಮ್ । ಯಜೇತ್ । ಭಾಗಧೇಯೇನೇತಿ ಭಾಗ–ಧೇಯೇನ । ಏವ । ಏನಾನ್ । ಯಥಾಯಥಮಿತಿ ಯಥಾ–ಯಥಮ್ । ಕಲ್ಪಯತಿ । ಕಲ್ಪಂತೇ । ಏವ । ಐಂದ್ರಮ್ । ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್ । ನಿರಿತಿ । ವಪೇತ್ । ವೈಶ್ವ ದೇವಮಿತಿ ವೈಶ್ವ–ದೇವಮ್ । ದ್ವಾದಶಕಪಾಲಮಿತಿ ದ್ವಾದಶ–ಕಪಾಲಮ್ । ಗ್ರಾಮ ಕಾಮ ಇತಿ ಗ್ರಾಮ–ಕಾಮಃ ।

---

| | |
|---|---|
| ಯಥಾದೇವತಮ್ ಅವದಾಯ ಯಥಾದೇವತಮ್ ಯಜೇತ್ | ದೇವತೆಗಳಿಗೆ ಅನುಗುಣವಾಗಿ ಅವದಾನ ಮಾಡಿ, ದೇವತೆಗಳಿಗೆ ತಕ್ಕಂತೆ ಯಾಜ್ಯೆಯನ್ನು ಹೇಳಿ ಯಾಗವನ್ನು ಮಾಡಬೇಕು. |
| ಭಾಗಧೇಯೇನ ಏವ ಏನಾನ್ ಯಥಾಯಥಮ್ ಕಲ್ಪಯತಿ | ಈ ದೇವತೆಗಳಿಗೆ ಅವರವರ ಭಾಗವೇ ದೊರಕುವಂತೆ ಮಾಡುತ್ತಾನೆ. |
| ಕಲ್ಪಂತೇ ಏವ | ಪ್ರಜಾಪಾಲಕರೂ, ಪ್ರಜೆಗಳೂ ವೈರವನ್ನು ಕಳೆದುಕೊಂಡವರಾಗುತ್ತಾರೆ. |

### ಗ್ರಾಮಕಾಮನಿಗೆ ವಿಹಿತವಾದ ಇನ್ನೊಂದು ಇಷ್ಟಿ; ಅರ್ಥವಾದ

| | |
|---|---|
| ಗ್ರಾಮಕಾಮಃ ಐಂದ್ರಮ್ ಏಕಾದಶಕಪಾಲಮ್ ನಿರ್ವಪೇತ್ | ಗ್ರಾಮದ ಒಡೆಯನಾಗಲು ಬಯಸುವವನು ಇಂದ್ರದೇವನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. |
| ವೈಶ್ವದೇವಮ್ ದ್ವಾದಶಕಪಾಲಮ್ [ನಿರ್ವಪೇತ್] | ವಿಶ್ವೇದೇವರಿಗಾಗಿ ದ್ವಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. |

ಇಂದ್ರಂ ಚೈವ ವಿಶ್ವಾಗ್ಂಶ್ಚ ದೇವಾನ್ಥ್ಸ್ವೇನ ಭಾಗ

ಧೇಯೇನೋಪಧಾವತಿ ತ ಏವಾಸ್ಮೈ ಸಜಾತಾನ್ಪ್ರಯ

ಚ್ಛಂತಿ ಗ್ರಾಮ್ಯೇವ ಭವತ್ಯೈಂದ್ರಸ್ಯಾವದಾಯ

---

ಇಂದ್ರಮ್ । ಚ । ಏವ । ವಿಶ್ವಾನ್ । ಚ । ದೇವಾನ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ತೇ । ಏವ । ಅಸ್ಮೈ । ಸಜಾತಾನಿತಿ ಸ–ಜಾತಾನ್ । ಪ್ರೇತಿ । ಯಚ್ಛಂತಿ । ಗ್ರಾಮೀ । ಏವ । ಭವತಿ । **ಐಂದ್ರಸ್ಯ** । ಅವದಾಯೇತ್ಯವ–ದಾಯ ।

---

| | |
|---|---|
| ಇಂದ್ರಮ್ ಚ ಏವ ವಿಶ್ವಾನ್ ಚ ದೇವಾನ್ ಸ್ವೇನ ಭಾಗಧೇಯೇನ ಉಪಧಾವತಿ | ಇಂದ್ರನನ್ನೂ ವಿಶ್ವೇದೇವರುಗಳನ್ನೂ ಅವರವರ ಭಾಗವನ್ನಿತ್ತು ಯಜಮಾನನು ಸೇವಿಸುತ್ತಾನೆ. |
| ತೇ ಏವ ಅಸ್ಮೈ ಸಜಾತಾನ್ ಪ್ರಯಚ್ಛಂತಿ | ಅವರು ಭ್ರಾತೃಮಿತ್ರಾದಿಗಳನ್ನು ಈ ಯಜಮಾನನ ಅನುಯಾಯಿಗಳನ್ನಾಗಿ ಮಾಡುತ್ತಾರೆ. |
| ಗ್ರಾಮೀ ಏವ ಭವತಿ | ಯಜಮಾನನು ಗ್ರಾಮಸ್ವಾಮಿಯೇ ಆಗುತ್ತಾನೆ. |

**ಪ್ರಯೋಗವಿಶೇಷವಿಧಿ; ಅರ್ಥವಾದ**

| | |
|---|---|
| ಐಂದ್ರಸ್ಯ ಅವದಾಯ | ಮೊದಲು ಐಂದ್ರಹವಿಸ್ಸಿನಿಂದ ಒಮ್ಮೆ ಅವದಾನ ಮಾಡಿ, |

---

ಆಯಾ ದೇವತೆಗಳಿಗೆ ಅನುಗುಣವಾಗಿ ಅವದಾನವನ್ನು ಮಾಡಿ, ದೇವತೆಗಳಿಗೆ ಅನುಗುಣವಾಗಿ ಯಾಜ್ಯಾ–ಪುರೋನುವಾಕ್ಯೆಗಳನ್ನು ಪ್ರಯೋಗಿಸಿ, ಯಾಗವನ್ನು ಮಾಡಬೇಕು. ಇದರಿಂದ ದೇವತೆಗಳು ತಮ್ಮ ತಮ್ಮ ಭಾಗಗಳನ್ನು ಪಡೆದು ತೃಪ್ತರಾಗುತ್ತಾರೆ. ಕ್ಷತ್ರಿಯರೂ, ಪ್ರಜೆಗಳೂ ದೇವತಾನುಗ್ರಹದಿಂದ ತಮ್ಮ ತಮ್ಮ ಭಾಗಗಳನ್ನು ಹೊಂದಿ ಅನ್ಯೋನ್ಯಸ್ನೇಹದಿಂದ ಬಾಳುತ್ತಾರೆ.

ಗ್ರಾಮಕಾಮನು ಇಂದ್ರನಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನೂ ವಿಶ್ವೇದೇವರಿಗಾಗಿ ದ್ವಾದಶಕಪಾಲಪುರೋಡಾಶಯಾಗವನ್ನೂ ಮಾಡಬೇಕು.

# ವೈಶ್ವದೇವಸ್ಯಾವದ್ಯೇದಥೈಂದ್ರಸ್ಯೋ

# [..... ಥೈಂದ್ರಸ್ಯ (೩) ಉಪರಿಷ್ಟಾದಿಂದ್ರಿಯೇಣೈವಾಸ್ಮಾ]

# ಪರಿಷ್ಟಾದಿಂದ್ರಿಯೇಣೈವಾಸ್ಮಾ ಉಭಯತಸ್ಸಜಾತಾನ್ಪರಿ

# ಗೃಹ್ಣಾತ್ಯುಪಾಧ್ಯಾಯ್ಯಪೂರ್ವಯಂ ವಾಸೋ ದಕ್ಷಿಣಾ

---

ವೈಶ್ವದೇವಸ್ಯೇತಿ ವೈಶ್ವ–ದೇವಸ್ಯ। ಅವೇತಿ। ದ್ಯೇತ್। ಅಥ। ಐಂದ್ರಸ್ಯ। ಉಪರಿಷ್ಟಾತ್। ಇಂದ್ರಿಯೇಣ। ಏವ। ಅಸ್ಮೈ। ಉಭಯತಃ। ಸಜಾತಾನಿತಿ ಸ–ಜಾತಾನ್। ಪರೀತಿ। ಗೃಹ್ಣಾತಿ। ಉಪಾಧ್ಯಾಯ್ಯಪೂರ್ವಯಮಿತ್ಯುಪಾಧ್ಯಾಯ್ಯ–ಪೂರ್ವಯಮ್। ವಾಸಃ। ದಕ್ಷಿಣಾ।

---

| | |
|---|---|
| ವೈಶ್ವದೇವಸ್ಯ ಅವದ್ಯೇತ್ | ವೈಶ್ವದೇವಹವಿಸ್ಸಿನಿಂದ ಎರಡು ಬಾರಿ ಅವದಾನವನ್ನು ಮಾಡಬೇಕು. |
| ಅಥ ಉಪರಿಷ್ಟಾತ್ ಐಂದ್ರಸ್ಯ ಅವದ್ಯೇತ್ | ಬಳಿಕ ಮೇಲುಗಡೆ ಐಂದ್ರಹವಿಸ್ಸಿನಿಂದ ಅವದಾನವನ್ನು ಮಾಡಬೇಕು. |
| ಇಂದ್ರಿಯೇಣ ಏವ ಅಸ್ಮೈ ಉಭಯತಃ ಸಜಾತಾನ್ ಪರಿಗೃಹ್ಣಾತಿ | ಇಂದ್ರದತ್ತವಾದ ವೀರ್ಯದಿಂದ ಭ್ರಾತೃ – ಮಿತ್ರಾದಿಗಳನ್ನು ಎರಡು ಕಡೆಗಳಿಂದಲೂ ಅಧೀನರನ್ನಾಗಿ ಮಾಡಿದಂತಾಗುತ್ತದೆ. |
| ಉಪಾಧ್ಯಾಯ್ಯಪೂರ್ವಯಮ್ ವಾಸಃ ದಕ್ಷಿಣಾ | ಎರಡು ಕಡೆಯಲ್ಲಿಯೂ ಕೆಂಪು ಅಂಚು ಇರುವ ವಸ್ತ್ರವು ಈ ಯಾಗದ ವಿಶೇಷದಕ್ಷಿಣೆ. |

---

ಈ ಯಾಗದಿಂದ ಅವರು ತಮ್ಮ ಭಾಗವನ್ನು ಪಡೆದು ತೃಪ್ತರಾಗುತ್ತಾರೆ. ಅವರ ಅನುಗ್ರಹದಿಂದ ಭ್ರಾತೃ–ಮಿತ್ರ–ಭೃತ್ಯಾದಿಗಳು ಯಜಮಾನನ ಅನುಯಾಯಿಗಳಾಗುತ್ತಾರೆ. ಯಜಮಾನನು ಗ್ರಾಮದ ಒಡೆಯನಾಗುತ್ತಾನೆ.

ಈ ಯಾಗದಲ್ಲಿ ಮೊದಲು ಐಂದ್ರಪುರೋಡಾಶದಿಂದ ಒಂದು ಬಾರಿ ಅವದಾನ ಮಾಡಬೇಕು. ಬಳಿಕ ವೈಶ್ವದೇವಹವಿಸ್ಸಿನಿಂದ ಎರಡು ಬಾರಿ ಅವದಾನವನ್ನು ಮಾಡ

ಸಜಾತಾನಾಮುಪಹಿತ್ಯೈ ಪೃಶ್ನಿಯ್ಯೈ ದುಗ್ಧೇ ಪ್ರೈಯಂಗವಂ

ಚರುಂ ನಿರ್ವಪೇನ್ಮರುದ್ಭ್ಯೋ ಗ್ರಾಮಕಾಮಃ ಪೃಶ್ನಿಯ್ಯೈ

ವೈ ಪಯಸೋ ಮರುತೋ ಜಾತಾಃ ಪೃಶ್ನಿಯ್ಯೈ ಪ್ರಿಯಂಗವೋ

---

ಸಜಾತಾನಾಮಿತಿ ಸ–ಜಾತಾನಾಮ್ । ಉಪಹಿತ್ಯಾ ಇತ್ಯುಪ–ಹಿತ್ಯೈ । **ಪೃಶ್ನಿಯ್ಯೈ** । ದುಗ್ಧೇ । ಪ್ರೈಯಂಗವಮ್ । ಚರುಮ್ । ನಿರಿತಿ । ವಪೇತ್ । ಮರುದ್ಭ್ಯ ಇತಿ ಮರುತ್–ಭ್ಯಃ । ಗ್ರಾಮಕಾಮ ಇತಿ ಗ್ರಾಮ–ಕಾಮಃ । ಪೃಶ್ನಿಯ್ಯೈ । ವೈ । ಪಯಸಃ । ಮರುತಃ । ಜಾತಾಃ । ಪೃಶ್ನಿಯ್ಯೈ । ಪ್ರಿಯಂಗವಃ ।

---

| | |
|---|---|
| ಸಜಾತಾನಾಮ್ ಉಪಹಿತ್ಯೈ | [ಇದು] ಭ್ರಾತೃ–ಮಿತ್ರಾದಿಗಳು [ಯಜಮಾನನ] ಸೇವೆಯಲ್ಲಿ ಆಸಕ್ತರಾಗಿರುವುದಕ್ಕೆ ಕಾರಣ ವಾಗುತ್ತದೆ. |

**ಗ್ರಾಮಕಾಮನಿಗೆ ವಿಹಿತವಾದ ಮಾರುತೇಷ್ಟಿ; ಅರ್ಥವಾದ**

| | |
|---|---|
| ಗ್ರಾಮಕಾಮಃ ಮರುದ್ಭ್ಯಃ ಪೃಶ್ನಿಯ್ಯೈ ದುಗ್ಧೇ ಪ್ರೈಯಂಗವಮ್ ಚರುಮ್ ನಿರ್ವಪೇತ್ | ಗ್ರಾಮಸ್ವಾಮಿಯಾಗಬಯಸುವವನು ಮರುದ್ದೇವತೆಗಳಿಗಾಗಿ ಬಿಳಿಯ/ ಬಿಳಿಯ ಚುಕ್ಕೆಗಳುಳ್ಳ ಹಸುವಿನ ಹಾಲಿನಲ್ಲಿ ಬೇಯಿಸಿದ ನವಣೆಯ ಧಾನ್ಯದ ಚರುವನ್ನು ಯಾಗ ಮಾಡಬೇಕು. |
| ಪೃಶ್ನಿಯ್ಯೈ ವೈ ಪಯಸಃ ಮರುತಃ ಜಾತಾಃ | ಬಿಳಿಯ ಹಸುವಿನ ಹಾಲಿನಿಂದಲೇ ಮರುತ್ತುಗಳು ಹುಟ್ಟುತ್ತಾರೆ. |
| ಪೃಶ್ನಿಯ್ಯೈ ಪ್ರಿಯಂಗವಃ ಜಾತಾಃ | ಬಿಳಿಯ ಹಸುವಿನ ಹಾಲಿನಿಂದಲೇ ನವಣೆ ಧಾನ್ಯಗಳೂ ಹುಟ್ಟಿವೆ. |

---

ಬೇಕು. ಬಳಿಕ ಐಂದ್ರಹವಿಸ್ಸಿನಿಂದ ಮೇಲ್ಭಾಗದಲ್ಲಿ ಮತ್ತೊಮ್ಮೆ ಅವದಾನವನ್ನು ಮಾಡಬೇಕು. ಇದರಿಂದ ಭ್ರಾತೃ–ಮಿತ್ರ–ಭೃತ್ಯಾದಿಗಳನ್ನು ಎರಡು ಕಡೆಗಳಿಂದಲೂ ಇಂದ್ರದತ್ತವಾದ ಇಂದ್ರಿಯಶಕ್ತಿಯಿಂದ ವಶಪಡಿಸಿಕೊಂಡಂತೆ ಆಗುತ್ತದೆ. ಎರಡು ಕಡೆಯಲ್ಲಿಯೂ ಅಂಚು ಇರುವ ವಸ್ತ್ರವು ಈ ಯಾಗದ ವಿಶೇಷದಕ್ಷಿಣೆ. ಇದರಿಂದ ಭ್ರಾತೃ–ಮಿತ್ರಾದಿಗಳು ಯಜಮಾನನ ಸೇವೆಯಲ್ಲಿರುವಂತೆ ಆಗುತ್ತದೆ.

ಮಾರುತಾಃ ಖಲು ವೈ ದೇವತಯಾ ಸಜಾತಾ ಮರುತ ಏವ
ಸ್ವೇನ ಭಾಗಧೇಯೇನೋಪಧಾವತಿ ತ ಏವಾಸ್ಮೈ ಸಜಾತಾ
ನ್ಪ್ರಯಚ್ಛಂತಿ ಗ್ರಾಮ್ಯೇವ ಭವತಿ

---

ಮಾರುತಾಃ । ಖಲು । ವೈ । ದೇವತಯಾ । ಸಜಾತಾ ಇತಿ ಸ-ಜಾತಾಃ । ಮರುತಃ । ಏವ ।
ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ತೇ । ಏವ । ಅಸ್ಮೈ ।
ಸಜಾತಾನಿತಿ ಸ-ಜಾತಾನ್ । ಪ್ರೇತಿ । ಯಚ್ಛಂತಿ । ಗ್ರಾಮೀ । ಏವ । ಭವತಿ ।

---

| | |
|---|---|
| ಮಾರುತಾಃ ಖಲು ವೈ ದೇವತಯಾ ಸಜಾತಾಃ | ಭ್ರಾತೃ - ಮಿತ್ರ - ಭೃತ್ಯಾದಿಗಳು ಮರುದ್ದೇವತೆಗಳ ಸಂಬಂಧಿಗಳಾಗಿರುತ್ತಾರೆ. |
| ಮರುತಃ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದಿಂದ ಯಜಮಾನನು ಮರುದ್ದೇವತೆಗಳಿಗೆ ತಕ್ಕ ಭಾಗವನ್ನಿತ್ತು ಸೇವಿಸುತ್ತಾನೆ. |
| ತೇ ಏವ ಅಸ್ಮೈ ಸಜಾತಾನ್ ಪ್ರಯಚ್ಛಂತಿ | ಆ ಮರುತ್ತುಗಳೇ ಈ ಯಜಮಾನನಿಗೆ ಜ್ಞಾತಿ - ಮಿತ್ರ - ಭೃತ್ಯಾದಿಗಳನ್ನು ಅನುಯಾಯಿಗಳನ್ನಾಗಿ ಕೊಡುತ್ತಾರೆ. |
| ಗ್ರಾಮೀ ಏವ ಭವತಿ | ಯಜಮಾನನು ಗ್ರಾಮಸ್ವಾಮಿಯೇ ಆಗುತ್ತಾನೆ. |

---

ಗ್ರಾಮಸ್ವಾಮಿಯಾಗಬಯಸುವವನು ಬಿಳಿಯ ಹಸುವಿನ/ಬಿಳಿಯ ಚುಕ್ಕೆಗಳುಳ್ಳ ಹಸುವಿನ ಹಾಲಿನಲ್ಲಿ ಬೇಯಿಸಿದ ನವಣೆಧಾನ್ಯದ ಚರುವನ್ನು ಮರುದ್ದೇವತೆಗಳಿಗಾಗಿ ಯಾಗ ಮಾಡಬೇಕು. ಬಿಳಿಯ ಹಸುವಿನ ಹಾಲಿನಿಂದಲೇ ಮರುತ್ತುಗಳು ಹುಟ್ಟಿರುತ್ತಾರೆ. ಬಿಳಿಯ ಹಸುವಿನ ಹಾಲಿನಿಂದಲೇ ನವಣೆಗಳೂ ಹುಟ್ಟಿವೆ. ಭ್ರಾತೃ-ಮಿತ್ರ-ಜ್ಞಾತ್ಯಾದಿಗಳು ಮರುದ್ದೇವತಾಸಂಬಂಧಿಗಳಾಗಿರುತ್ತಾರೆ. ಹೀಗಿರುವುದರಿಂದ ಯಜಮಾನನು ಮರುತ್ತುಗಳಿಗೆ ಅವರ ಭಾಗವನ್ನು ಕೊಟ್ಟು ಸೇವಿಸುತ್ತಾನೆ. ತೃಪ್ತರಾದ ಮರುತ್ತುಗಳು ಸಜಾತರನ್ನು ಹಿಂಬಾಲಕರನ್ನಾಗಿ ಮಾಡುತ್ತಾರೆ. ಯಜಮಾನನು ಗ್ರಾಮಸ್ವಾಮಿಯಾಗುತ್ತಾನೆ.

# ಪ್ರಿಯವತೀ ಯಾಜ್ಯಾನುವಾಕ್ಯೇ [ಯಾಜ್ಯಾನುವಾಕ್ಯೇ (೪) ಭವತಃ] ಭವತಃ ಪ್ರಿಯಮೇವೈನಗ್‌ಂ ಸಮಾನಾನಾಂ ಕರೋತಿ

---

**ಪ್ರಿಯವತೀ ಇತಿ ಪ್ರಿಯ–ವತೀ ।** ಯಾಜ್ಯಾನುವಾಕ್ಯೇ ಇತಿ ಯಾಜ್ಯಾ–ಅನುವಾಕ್ಯೇ ।

ಭವತಃ । ಪ್ರಿಯಮ್ । ಏವ । ಏನಮ್ । ಸಮಾನಾನಾಮ್ । ಕರೋತಿ ।

---

**ಈ ಯಾಗದಲ್ಲಿ ಯಾಜ್ಯಾ–ಪುರೋನುವಾಕ್ಯಗಳ ವಿಧಿ; ಪ್ರಶಂಸೆ**

| | |
|---|---|
| ಪ್ರಿಯವತೀ ಯಾಜ್ಯಾನುವಾಕ್ಯೇ ಭವತಃ | *ಪ್ರಿಯ ಎಂಬ ಶಬ್ದವುಳ್ಳ ಯಾಜ್ಯಾ–ಪುರೋನುವಾಕ್ಯಗಳಿರುತ್ತವೆ. |
| ಏನಮ್ ಸಮಾನಾನಾಮ್ ಪ್ರಿಯಮ್ ಏವ ಕರೋತಿ | ಇದು ಈ ಯಜಮಾನನನ್ನು ಸಮಾನರಾದ ಜ್ಞಾತಿ ಮೊದಲಾದವರಿಗೆ ಪ್ರಿಯನನ್ನಾಗಿ ಮಾಡುತ್ತದೆ. |
| ದ್ವಿಪದಾ ಪುರೋನುವಾಕ್ಯಾ ಭವತಿ | *ಎರಡು ಪಾದಗಳುಳ್ಳ ಋಕ್ಕು ಪುರೋನುವಾಕ್ಯೆಯಾಗುತ್ತದೆ. [ಇದರಿಂದ] ಮನುಷ್ಯರೇ |
| ದ್ವಿಪದಃ ಏವ ಅವರುಂಧೇ | ಮೊದಲಾದ ಎರಡು ಕಾಲುಗಳುಳ್ಳ ಪ್ರಾಣಿಗಳನ್ನು ಹೊಂದುತ್ತಾನೆ. |

---

ಈ ಇಷ್ಟಿಯಲ್ಲಿ 'ಪ್ರಿಯಾವೋ ನಾಮ' 'ಶ್ರಿಯಸೇ ಕಮ್' ಎಂಬ ಪ್ರಿಯಶಬ್ದವುಳ್ಳ ಪುರೋನುವಾಕ್ಯೆ – ಯಾಜ್ಯಾನುವಾಕ್ಯೆಗಳನ್ನು ಪ್ರಯೋಗಿಸಬೇಕು. ಇದು ಈ ಯಜಮಾನನನ್ನು ಸಮಾನರಿಗೆ ಪ್ರಿಯನನ್ನಾಗಿ ಮಾಡುತ್ತದೆ.

---

* ಪ್ರಿಯಶಬ್ದವನ್ನು ಒಳಗೊಂಡ ಪುರೋನುವಾಕ್ಯೆ; **ಪ್ರಿಯಾ ವೋ ನಾಮ..... ನಾವಶಾನಾಃ ।**
ತೈ.ಸಂ. 2.1.11

ಪ್ರಿಯಶಬ್ದವನ್ನು ಒಳಗೊಂಡ ಯಾಜ್ಯಾನುವಾಕ್ಯೆ; **ಶ್ರಿಯಸೇ..... ಪ್ರಿಯಸ್ಯ..... ಧಾಮ್ನಃ ॥**
ತೈ.ಸಂ. 2.1.11

* **'ಪ್ರಿಯಾ ವೋ......'** ಎಂಬ ಹಿಂದಿನ ಋಕ್ಕೇ ಇದಾಗಿದೆ.

ದ್ವಿಪದಾ ಪುರೋನುವಾಕ್ಯಾ ಭವತಿ ದ್ವಿಪದ ಏವಾವರುಂಧೇ

ಚತುಷ್ಪದಾ ಯಾಜ್ಯಾ ಚತುಷ್ಪದ ಏವ ಪಶೂನವರುಂಧೇ

ದೇವಾಸುರಾಸ್ಸಂಯತ್ತಾ ಆಸನ್ತೇ ದೇವಾ ಮಿಥೋ ವಿಪ್ರಿಯಾ

---

ದ್ವಿಪದೇತಿ ದ್ವಿ–ಪದಾ । ಪುರೋನುವಾಕ್ಯೇತಿ ಪುರಃ – ಅನುವಾಕ್ಯಾ । ಭವತಿ । ದ್ವಿಪದ ಇತಿ ದ್ವಿ–ಪದಃ । ಏವ । ಅವೇತಿ । ರುಂಧೇ । ಚತುಷ್ಪದೇತಿ ಚತುಃ–ಪದಾ । ಯಾಜ್ಯಾ । ಚತುಷ್ಪದ ಇತಿ ಚತುಃ–ಪದಃ । ಏವ । ಪಶೂನ್ । ಅವೇತಿ । ರುಂಧೇ । **ದೇವಾಸುರಾ ಇತಿ ದೇವ–ಅಸುರಾಃ** । ಸಂಯತ್ತಾ ಇತಿ ಸಮ್–ಯತ್ತಾಃ । ಆಸನ್ । ತೇ । ದೇವಾಃ । ಮಿಥಃ । ವಿಪ್ರಿಯಾ ಇತಿ ವಿ–ಪ್ರಿಯಾಃ ।

---

| | |
|---|---|
| ಚತುಷ್ಪದಾ ಯಾಜ್ಯಾ | *ನಾಲ್ಕು ಪಾದಗಳುಳ್ಳ ಋಕ್ಕು ಯಾಜ್ಯಾನುವಾಕ್ಯೆಯಾಗುತ್ತದೆ. |
| ಚತುಷ್ಪದಃ ಪಶೂನ್ ಅವರುಂಧೇ ಏವ | [ಇದರಿಂದ] ಗೋವು ಮುಂತಾದ ನಾಲ್ಕು ಪಾದಗಳ ಪ್ರಾಣಿಗಳನ್ನು ಹೊಂದುತ್ತಾನೆ. |

**ಜ್ಯೇಷ್ಠತೆಯನ್ನು ಬಯಸುವವನಿಗೆ ವಿಹಿತವಾದ ಸಂಜ್ಞಾನೀಷ್ಟಿ; ಇತಿಹಾಸ**

| | |
|---|---|
| ದೇವಾಸುರಾಃ ಸಂಯತ್ತಾ ಆಸನ್ | ದೇವತೆಗಳೂ ಅಸುರರೂ ಯುದ್ಧಕ್ಕೆ ಸಿದ್ಧರಾದರು. |
| ತೇ ದೇವಾಃ ಮಿಥಃ ವಿಪ್ರಿಯಾಃ ಆಸನ್ | ಆ ದೇವತೆಗಳು ಪರಸ್ಪರ ಪ್ರೀತಿಯುಳ್ಳವರಾಗಿರಲಿಲ್ಲ. |

---

ಪುರೋನುವಾಕ್ಯೆಯು ಎರಡು ಪಾದಗಳಿಂದ ಕೂಡಿರುವುದರಿಂದ ಯಜಮಾನನು ಎರಡು ಕಾಲಿನ ಪ್ರಾಣಿಗಳನ್ನೂ, ಯಾಜ್ಯೆಯು ನಾಲ್ಕು ಪಾದಗಳನ್ನು ಹೊಂದಿರುವುದರಿಂದ ನಾಲ್ಕು ಕಾಲಿನ ಪ್ರಾಣಿಗಳನ್ನೂ ಪಡೆಯುತ್ತಾನೆ. ಗ್ರಾಮಸ್ವಾಮಿಯಾಗುತ್ತಾನೆ.

ಒಂದು ಕಾಲದಲ್ಲಿ ದೇವತೆಗಳು ಅಸುರರೂ ಯುದ್ಧಕ್ಕೆ ಸಿದ್ಧರಾದರು. ಆಗ ದೇವತೆ

---

* 'ಶ್ರಿಯಸೇ ಕಮ್......' ಎಂಬ ಹಿಂದಿನ ಋಕ್ಕೇ ಇದಾಗಿದೆ.

ಆಸನ್ತೇಽನ್ಯೋಽನ್ಯಸ್ಮೈ ಜ್ಯೈಷ್ಠ್ಯಾಯಾತಿಷ್ಠಮಾನಾಶ್ಚತುರ್ಧಾ

ವ್ಯಕ್ರಾಮನ್ನಗ್ನಿರ್ವಸುಭಿಸ್ಸೋಮೋ ರುದ್ರೈರಿಂದ್ರೋ

ಮರುದ್ಭಿರ್ವರುಣ ಆದಿತ್ಯೈಸ್ಸ ಇಂದ್ರಃ ಪ್ರಜಾಪತಿಮುಪಾ

ಧಾವತ್ತಮೇತಯಾ [ತಮ್ (೫) ಏತಯಾ]

---

ಆಸನ್ । ತೇ । ಅನ್ಯಃ । ಅನ್ಯಸ್ಮೈ । ಜ್ಯೈಷ್ಠ್ಯಾಯ । ಅತಿಷ್ಠಮಾನಾಃ । ಚತುರ್ಧೇತಿ ಚತುಃ–ಧಾ । ವೀತಿ । ಅಕ್ರಾಮನ್ । ಅಗ್ನಿಃ । ವಸುಭಿರಿತಿ ವಸು–ಭಿಃ । ಸೋಮಃ । ರುದ್ರೈಃ । ಇಂದ್ರಃ । ಮರುದ್ಭಿರಿತಿ ಮರುತ್–ಭಿಃ । ವರುಣಃ । ಆದಿತ್ಯೈಃ । ಸಃ । ಇಂದ್ರಃ । ಪ್ರಜಾಪತಿಮಿತಿ ಪ್ರಜಾ–ಪತಿಮ್ । ಉಪೇತಿ । ಅಧಾವತ್ । ತಮ್ । ಏತಯಾ ।

---

| | |
|---|---|
| ತೇ ಅನ್ಯಃ ಅನ್ಯಸ್ಮೈ ಜ್ಯೈಷ್ಠ್ಯಾಯ ಅತಿಷ್ಠಮಾನಾಃ | ಆ ದೇವತೆಗಳು ಒಬ್ಬರು ಇನ್ನೊಬ್ಬರ ಹಿರಿತನವನ್ನು ಸಹಿಸದವರಾಗಿ |
| ಚತುರ್ಧಾ ವ್ಯಕ್ರಾಮನ್ ಅಗ್ನಿಃ ವಸುಭಿಃ | ನಾಲ್ಕು ಗುಂಪಾಗಿ ಒಡೆದು ಹೋದರು. ಅಗ್ನಿಯು ವಸುಗಳೊಡನೆ [ಒಂದು ಗುಂಪು ಮಾಡಿಕೊಂಡನು]. |
| ಸೋಮಃ ರುದ್ರೈಃ ಇಂದ್ರಃ ಮರುದ್ಭಿಃ ವರುಣಃ ಆದಿತ್ಯೈಃ | ಸೋಮದೇವನು ರುದ್ರರೊಡನೆಯೂ, ಇಂದ್ರನು ಮರುತ್ತುಗಳೊಡನೆಯೂ, ವರುಣನು ಆದಿತ್ಯರೊಡನೆಯೂ [ಒಂದೊಂದು ಗುಂಪನ್ನು ಮಾಡಿಕೊಂಡರು] |
| ಸಃ ಇಂದ್ರಃ ಪ್ರಜಾಪತಿಮ್ ಉಪಾಧಾವತ್ | [ಈ ದ್ವೇಷಪರಿಹಾರೋಪಾಯಕ್ಕಾಗಿ] ಇಂದ್ರನು ಪ್ರಜಾಪತಿಬ್ರಹ್ಮನ ಬಳಿಗೆ ಹೋದನು. |
| ತಮ್ ಏತಯಾ | [ಪ್ರಜಾಪತಿಯು] ಇಂದ್ರನಿಂದ |

---

ಗಳಲ್ಲಿ ನಾಯಕತ್ವದ ವಿಷಯದಲ್ಲಿ ಪರಸ್ಪರ ವಿರೋಧವು ತಲೆದೋರಿತು. ದೇವತೆಗಳು ನಾಲ್ಕು ಗುಂಪಾದರು. ಅಗ್ನಿಯು ವಸುಗಳೊಡನೆ ಕೂಡಿಕೊಂಡನು. ಸೋಮನು ರುದ್ರರೊಡನೆಯೂ, ಇಂದ್ರನು ಮರುತ್ತುಗಳೊಡನೆಯೂ, ವರುಣನು ಆದಿತ್ಯರೊಡನೆಯೂ

ಸಂಜ್ಞಾನ್ಯಾऽಯಾಜಯದಗ್ನಯೇ ವಸುಮತೇ ಪುರೋಡಾಶ

ಮಷ್ಟಾಕಪಾಲಂ ನಿರವಪತ್ಸೋಮಾಯ ರುದ್ರವತೇ

ಚರುಮಿಂದ್ರಾಯ ಮರುತ್ವತೇ

ಪುರೋಡಾಶಮೇಕಾದಶಕಪಾಲಂ

---

ಸಂಜ್ಞಾನ್ಯೇತಿ ಸಮ್-ಜ್ಞಾನಾ । ಅಯಾಜಯತ್ । ಅಗ್ನಯೇ । ವಸುಮತ ಇತಿ ವಸು-ಮತೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ನಿರಿತಿ । ಅವಪತ್ । ಸೋಮಾಯ । ರುದ್ರವತ ಇತಿ ರುದ್ರ-ವತೇ । ಚರುಮ್ । ಇಂದ್ರಾಯ । ಮರುತ್ವತೇ । ಪುರೋಡಾಶಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ ।

---

| | |
|---|---|
| ಸಂಜ್ಞಾನ್ಯಾ ಅಯಾಜಯತ್ | ಸಂಜ್ಞಾನೀಷ್ಟಿಯನ್ನು ಮಾಡಿಸಿದನು. |
| ಅಗ್ನಯೇ ವಸುಮತೇ ಪುರೋಡಾಶಮ್ ಅಷ್ಟಾಕಪಾಲಮ್ ನಿರವಪತ್ | ವಸುಗಳಿಂದ ಕೂಡಿದ ಅಗ್ನಿದೇವನಿಗಾಗಿ ಅಷ್ಟಾಕಪಾಲಪುರೋಡಾಶಯಾಗವನ್ನು ಮಾಡಿಸಿದನು. |
| ಸೋಮಾಯ ರುದ್ರವತೇ ಚರುಮ್ [ನಿರವಪತ್] | ರುದ್ರರ ಸಹಿತನಾದ ಸೋಮದೇವನಿಗಾಗಿ ಚರುಯಾಗವನ್ನು ಮಾಡಿಸಿದನು. |
| ಇಂದ್ರಾಯ ಮರುತ್ವತೇ ಏಕಾದಶಕಪಾಲಮ್ ಪುರೋಡಾಶಮ್ [ನಿರವಪತ್] | ಮರುತ್ವಂತನಾದ ಇಂದ್ರನಿಗಾಗಿ ಏಕಾದಶ ಕಪಾಲಪುರೋಡಾಶಯಾಗವನ್ನು ಮಾಡಿಸಿದನು. |

---

ಸೇರಿದರು. ಈ ವಿರೋಧಪರಿಹಾರಕ್ಕಾಗಿ ಇಂದ್ರನು ಪ್ರಜಾಪತಿ ಬ್ರಹ್ಮನನ್ನು ಆಶ್ರಯಿಸಿದನು. ಆಗ ಪ್ರಜಾಪತಿಯು ಇಂದ್ರನಿಂದ ಈ ಸಂಜ್ಞಾನೀಷ್ಟಿಯನ್ನು ಮಾಡಿಸಿದನು. ವಸುಮಂತನಾದ ಅಗ್ನಿಗಾಗಿ ಅಷ್ಟಾಕಪಾಲಪುರೋಡಾಶಯಾಗವನ್ನೂ, ರುದ್ರವಂತನಾದ ಸೋಮನಿಗಾಗಿ ಚರುಯಾಗವನ್ನೂ , ಆದಿತ್ಯವಂತನಾದ ವರುಣನಿಗಾಗಿ ಚರುಯಾಗವನ್ನೂ ಮಾಡಿಸಿದನು. ಈ ಯಾಗದ ಪ್ರಭಾವದಿಂದ ಇಂದ್ರನನ್ನು ಉಳಿದ

ವರುಣಾಯಾಽಽದಿತ್ಯವತೇ ಚರುಂ ತತೋ ವಾ ಇಂದ್ರಂ
ದೇವಾ ಜ್ಯೈಷ್ಠ್ಯಾಯಾಭಿ ಸಮಜಾನತ ಯಸ್ಸಮಾನೈರ್ಮಿಥೋ
ವಿಪ್ರಿಯಸ್ಸ್ಯಾತ್ತಮೇತಯಾ ಸಂಜ್ಞಾನ್ಯಾ ಯಾಜಯೇದಗ್ನಯೇ
ವಸುಮತೇ ಪುರೋಡಾಶಮಷ್ಟಾಕಪಾಲಂ

---

ವರುಣಾಯ। ಆದಿತ್ಯವತ ಇತ್ಯಾದಿತ್ಯ–ವತೇ। ಚರುಮ್। ತತಃ। ವೈ। ಇಂದ್ರಮ್। ದೇವಾಃ। ಜ್ಯೈಷ್ಠ್ಯಾಯ। ಅಭಿ। ಸಮಿತಿ। ಅಜಾನತ। ಯಃ। ಸಮಾನೈಃ। ಮಿಥಃ। ವಿಪ್ರಿಯ ಇತಿ ವಿ–ಪ್ರಿಯಃ। ಸ್ಯಾತ್। ತಮ್। ಏತಯಾ। ಸಂಜ್ಞಾನ್ಯೇತಿ ಸಮ್–ಜ್ಞಾನ್ಯಾ। ಯಾಜಯೇತ್। ಅಗ್ನಯೇ। ವಸುಮತ ಇತಿ ವಸು–ಮತೇ। ಪುರೋಡಾಶಮ್। ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್।

---

| | |
|---|---|
| ತತಃ ವೈ ಜ್ಯೈಷ್ಠ್ಯಾಯ ದೇವಾಃ ಇಂದ್ರಮ್ ಅಭಿಸಮಜಾನತ | ಅನಂತರ ದೇವತೆಗಳು ಇಂದ್ರನನ್ನು ತಮ್ಮ ನಾಯಕನನ್ನಾಗಿ ಅಂಗೀಕರಿಸಿದರು. |

**ಸಂಜ್ಞಾನೀಯಾಗವಿಧಿ; ಪ್ರಶಂಸೆ**

| | |
|---|---|
| ಯಃ ಸಮಾನೈಃ ಮಿಥಃ ವಿಪ್ರಿಯಃ ಸ್ಯಾತ್ ತಮ್ ಏತಯಾ ಸಂಜ್ಞಾನ್ಯಾ ಯಾಜಯೇತ್ | ಯಾವನು ಸಮಾನರೊಡನೆ ಪರಸ್ಪರ ವಿರೋಧಕ್ಕೆ ಗುರಿಯಾಗುತ್ತಾನೆಯೋ ಅವನಿಂದ ಈ ಸಂಜ್ಞಾನೀಯಾಗವನ್ನು ಮಾಡಿಸಬೇಕು/ ಮಾಡಬೇಕು.* |
| ಅಗ್ನಯೇ ವಸುಮತೇ ಪುರೋಡಾಶಮ್ ಅಷ್ಟಾಕಪಾಲಮ್ | ವಸುಮಂತನಾದ ಅಗ್ನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನು |

---

ದೇವತೆಗಳು ತಮ್ಮ ನಾಯಕನನ್ನಾಗಿ ಅಂಗೀಕರಿಸಿದರು.

---

* ''**ಯಾಜಯೇತ್**'' ಎಂಬ ಪದಕ್ಕೆ ಯಾಗ ಮಾಡಿಸಬೇಕು ಎಂದು ಶಬ್ದಾರ್ಥವಾದರೂ ಯಾಗ ಮಾಡಬೇಕು ಎಂದು ಅರ್ಥವನ್ನು ತಿಳಿಯಬೇಕು. ಯಜನವು ವಿಹಿತ. ಯಾಜನವು ವಿಹಿತವಲ್ಲ. ಹೀಗೆಯೇ ಮುಂದಿನ '**ನಿರ್ವಪೇತ್**' ಎಂದರೆ ಯಾಗ ಮಾಡಬೇಕೆಂದು ಅರ್ಥ.

ನಿರ್ವಪೇತ್ಸೋಮಾಯ ರುದ್ರವತೇ ಚರುಮಿಂದ್ರಾಯ

ಮರುತ್ವತೇ ಪುರೋಡಾಶಮೇಕಾದಶಕಪಾಲಂ

ವರುಣಾಯಾಽಽದಿತ್ಯವತೇ

---

ನಿರಿತಿ । ವಪೇತ್ । ಸೋಮಾಯ । ರುದ್ರವತ ಇತಿ ರುದ್ರ–ವತೇ । ಚರುಮ್ ।

ಇಂದ್ರಾಯ । ಮರುತ್ವತೇ । ಪುರೋಡಾಶಮ್ । ಏಕಾದಶಕಪಾಲಮಿತ್ಯೇಕಾದಶ–

ಕಪಾಲಮ್ । ವರುಣಾಯ । ಆದಿತ್ಯವತ ಇತ್ಯಾದಿತ್ಯ–ವತೇ ।

---

| | |
|---|---|
| ನಿರ್ವಪೇತ್ | ಮಾಡಿಸಬೇಕು. |
| ಸೋಮಾಯ ರುದ್ರವತೇ ಚರುಮ್ [ನಿರ್ವಪೇತ್] | ರುದ್ರವಂತನಾದ ಸೋಮನಿಗಾಗಿ ಚರು ಯಾಗವನ್ನು ಮಾಡಿಸಬೇಕು. |
| ಇಂದ್ರಾಯ ಮರುತ್ವತೇ | ಮರುತ್ವಂತನಾದ ಇಂದ್ರನಿಗಾಗಿ |
| ಪುರೋಡಾಶಮ್ ಏಕಾದಶಕಪಾಲಮ್ ವರುಣಾಯ ಆದಿತ್ಯವತೇ | ಏಕಾದಶಕಪಾಲಪುರೋಡಾಶಯಾಗ ವನ್ನೂ , ಆದಿತ್ಯವಂತನಾದ ವರುಣನಿಗಾಗಿ |

---

ಯಾವನಿಗೆ ಸಮಾನರೊಡನೆ ನಾಯಕತ್ವದ ವಿಷಯದಲ್ಲಿ ವಿವಾದವಿದೆಯೋ ಅವನು ಈ ಸಂಜ್ಞಾನೀಷ್ಟಿಯನ್ನು ಅನುಷ್ಠಿಸಬೇಕು. ವಸುಮಂತನಾದ ಅಗ್ನಿಗಾಗಿ ಅಷ್ಟಾಕಪಾಲಪುರೋಡಾಶಯಾಗವನ್ನೂ, ರುದ್ರವಂತನಾದ ಸೋಮನಿಗಾಗಿ ಚರುಯಾಗವನ್ನೂ , ಮರುತ್ವಂತನಾದ ಇಂದ್ರನಿಗಾಗಿ ಏಕಾದಶಕಪಾಲಪುರೋಡಾಶ ಯಾಗವನ್ನೂ , ಆದಿತ್ಯವಂತನಾದ ವರುಣನಿಗಾಗಿ ಚರುಯಾಗವನ್ನೂ ಮಾಡಿಸಬೇಕು/ ಮಾಡಬೇಕು.

ಚರುಮಿಂದ್ರಮೇವೈನಂ ಭೂತಂ ಜ್ಯೈಷ್ಠ್ಯಾಯ ಸಮಾನಾ

ಅಭಿಸಂಜಾನತೇ ವಸಿಷ್ಠಸ್ಸಮಾನಾನಾಂ ಭವತಿ ||೬೩-11||

[ವಿಶಮೇವ ಶಿಷ್ಯಂತ್ಯೇಶಾಮೇವಾಥ್ಯೆಂದ್ರಸ್ಯ ಯಾಜ್ಯಾನುವಾಕ್ಯೇ ತಂ

ವರುಣಾಯ ಚತುರ್ದಶ ಚ ||]

---

ಚರುಮ್ | ಇಂದ್ರಮ್ | ಏವ | ಏನಮ್ | ಭೂತಮ್ | ಜ್ಯೈಷ್ಠ್ಯಾಯ | ಸಮಾನಾಃ |

ಅಭಿ | ಸಮಿತಿ | ಜಾನತೇ | ವಸಿಷ್ಠಃ | ಸಮಾನಾನಾಮ್ | ಭವತಿ ||11||

---

**ಈ ಯಾಗದ ಫಲಶ್ರುತಿ**

| | |
|---|---|
| ಚರುಮ್ [ನಿರ್ವಪೇತ್] | ಚರುಯಾಗವನ್ನೂ ಮಾಡಿಸಬೇಕು/ ಮಾಡಬೇಕು. |
| ಏನಮ್ ಇಂದ್ರಮ್ ಏವ ಭೂತಮ್ | ಇಂದ್ರನಂತೆ ಬಲಶಾಲಿಯಾದ ಈ ಯಜಮಾನನನ್ನು |
| ಜ್ಯೈಷ್ಠ್ಯಾಯ ಸಮಾನಾಃ ಅಭಿಸಂಜಾನತೇ | ಸಮಾನರಾದವರು ತಮ್ಮಲ್ಲಿ ಜ್ಯೇಷ್ಠನೆಂದು ಅಂಗೀಕರಿಸುತ್ತಾರೆ. |
| ಸಮಾನಾನಾಮ್ ವಸಿಷ್ಠಃ ಭವತಿ | ಈ ಯಜಮಾನನು ಸಮಾನರಾದವರ ಮಧ್ಯದಲ್ಲಿ ಶ್ರೇಷ್ಠನಾಗುತ್ತಾನೆ. |

---

ಈ ಯಾಗದ ಪ್ರಭಾವದಿಂದ ಈ ಯಜಮಾನನನ್ನು ಸಮಾನರಾದವರು ಶ್ರೇಷ್ಠನೆಂದು ಒಪ್ಪಿಕೊಳ್ಳುತ್ತಾರೆ. ಸಮಾನರ ನಡುವೆ ಈ ಯಜಮಾನನು ಶ್ರೇಷ್ಠ ನೆನಿಸುತ್ತಾನೆ.

* * *

# ಏಕಾದಶಾನುವಾಕವಿಷಯಸಂಗ್ರಹ

ಗ್ರಾಮಾರ್ಥ್ಯೈಂದ್ರಂ ಮಾರುತಂ ಚ ಕುರ್ಯಾದೇತದ್ದ್ವಿರ್ದ್ವಯಮ್ ।
ವಿಡ್ರಾಜ್ಞೋಃ ಕಲಹಂ ವಾಂಛನ್ನಪಿ ತಾವೇವ ನಿರ್ವಪೇತ್ ॥
ಕಲಹಂ ಚ ಸಮಾಧಾತುಂ ವಾಂಛನ್ನಪಿ ಚರೇದಮೂಮ್ ।
ಐಂದ್ರಂ ಚ ವೈಶ್ವದೇವಂ ಚ ಗ್ರಾಮಕಾಮಶ್ಚರೇದ್ದ್ವಿಃ ॥

ಪ್ರೈಯಂಗವಂ ಮರುದ್ಭ್ಯಸ್ತು ಗ್ರಾಮಕಾಮಶ್ಚರುಂ ಚರೇತ್ ।
ಸಮಾನೈರಪ್ರಿಯೇ ಪ್ರಾಪ್ತೇ ಸಂಜ್ಞಾನ್ಯಾ ತು ಸಮಾಚರೇತ್ ॥
ಏಕಾದಶಾನುವಾಕೇಽಸ್ಮಿನ್ನುಕ್ತಾ ಐಂದ್ರಾದಯೋಽಖಿಲಾಃ ॥
ಪೂರ್ವಪ್ರಪಾಠಕಾಂತ್ಯಾನುವಾಕೇಽಸ್ಯಾರ್ಥ ಉದೀರಿತಃ ॥

ಗ್ರಾಮಸ್ವಾಮಿಯಾಗಬಯಸುವವನು, ಪ್ರಜಾಪಾಲಕರಿಗೂ ಪ್ರಜೆಗಳಿಗೂ ಕಲಹವುಂಟಾಗಬೇಕೆಂದು ಬಯಸುವವನು, ಅವರಿಬ್ಬರಿಗೂ ಕಲಹವನ್ನು ನಿವಾರಿಸಲು ಬಯಸುವವನು, ಗ್ರಾಮಕ್ಕೆ ಒಡೆಯನಾಗಬಯಸುವವನು, ಜ್ಯೇಷ್ಠತೆಯನ್ನು ಬಯಸುವವನು, ಸಮಾನರಲ್ಲಿ ಅಪ್ರಿಯತೆಯನ್ನು ಹೊಂದಿದವನು – ಇವರಿಗೆ ಇಷ್ಟಿಗಳು ಈ ಅನುವಾಕದಲ್ಲಿ ಹೇಳಲ್ಪಟ್ಟಿವೆ.

ಹಿಂದಿನ ಪ್ರಪಾಠಕದ ಕಡೆಯ ಅನುವಾಕದಲ್ಲಿ ಈ ಇಷ್ಟಿಯ ಮಂತ್ರಾರ್ಥವು ಹೇಳಲ್ಪಟ್ಟಿದೆ.

* * *

## ॥ ದ್ವಾದಶೋಽನುವಾಕಃ ॥

## *ಹಿರಣ್ಯಗರ್ಭ

ವೈ॥ ಹಿರಣ್ಯಗರ್ಭ ಇತಿ ಹಿರಣ್ಯಗರ್ಭಃ ।

*ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ ।

ಸ ದಾಧಾರ ಪೃಥಿವೀಂ ದ್ಯಾಮುತೇಮಾಂ ಕಸ್ಮೈ ದೇವಾಯ ಹವಿಷಾ

ವಿಧೇಮ ।

**ಪದಪಾಠ :** ಹಿರಣ್ಯಗರ್ಭ ಇತಿ ಹಿರಣ್ಯ–ಗರ್ಭಃ । ಸಮಿತಿ । ಅವರ್ತತ । ಅಗ್ರೇ । ಭೂತಸ್ಯ । ಜಾತಃ । ಪತಿಃ । ಏಕಃ । ಆಸೀತ್॥ ಸಃ । ದಾಧಾರ । ಪೃಥಿವೀಮ್ । ದ್ಯಾಮ್ । ಉತ । ಇಮಾಮ್ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥

| ಮಂತ್ರ | ವಿನಿಯೋಗ |
| --- | --- |
| ಹಿರಣ್ಯಗರ್ಭಃ ......... ವಿಧೇಮ ॥ | ಪ್ರಾಜಾಪತ್ಯೇಷ್ಟಿಯ ಪುರೋನುವಾಕ್ಯೆ. [ಪ್ರತೀಕ] |

*** ಹಿರಣ್ಯಗರ್ಭಃ** = ಲೋಕಸೃಷ್ಟಿಗೆ ಕಾರಣವಾದ ಹಿರಣ್ಮಯವಾದ ಅಂಡರೂಪವಾದ ಗರ್ಭವನ್ನು ಧರಿಸಿರುವ ಪ್ರಜಾಪತಿಬ್ರಹ್ಮನು; **ಅಗ್ರೇ ಸಮವರ್ತತ** = ಮೊದಲು ಒಬ್ಬನೇ ಇದ್ದನು. **ಜಾತಃ** = ಮೊದಲು ಹುಟ್ಟಿದ ಆ ಪ್ರಜಾಪತಿಯು; **ಭೂತಸ್ಯ** = ಪಂಚಭೂತಗಳಿಗೂ; **ಏಕಃ ಪತಿಃ ಆಸೀತ್** = ಒಬ್ಬನೇ ಪಾಲಕನಾಗಿರುತ್ತಾನೆ. **ಸಃ ಪೃಥಿವೀಮ್ ದ್ಯಾಮ್** = ಆತನು ವಿಸ್ತೀರ್ಣವಾದ ದ್ಯುಲೋಕವನ್ನೂ , **ಉತ ಇಮಾಮ್** = ಈ ಭೂಲೋಕವನ್ನೂ ; **ದಾಧಾರ** = ಧರಿಸಿರುತ್ತಾನೆ. **ಕಸ್ಮೈ ದೇವಾಯ** = ಅನಿರ್ವಾಚ್ಯ ಪ್ರಭಾವವುಳ್ಳ ಬ್ರಹ್ಮದೇವನಿಗೆ; **ಹವಿಷಾ ವಿಧೇಮ** = ಈ ಹವಿಸ್ಸಿನಿಂದ ಸೇವೆಯನ್ನು ಸಲ್ಲಿಸುತ್ತೇವೆ.

* ಕಾಮ್ಯೇಷ್ಟಿಯ ಯಾಜ್ಯಾಕಾಂಡಕ್ಕೆ ಸೇರಿದ ಈ ಅನುವಾಕದಲ್ಲಿ ಮಂತ್ರಗಳ ಪ್ರತೀಕವನ್ನು ಮಾತ್ರ ಪಾಠ ಮಾಡಲಾಗಿದೆ. ಶ್ರುತಿಯಲ್ಲಿ ಪಾಠವು ಅದೇ ರೀತಿ ಇದ್ದರೂ ಪಾಠಕರ ಸೌಕರ್ಯಕ್ಕಾಗಿ ಮಂತ್ರಪಾಠವನ್ನೂ ಅದರ ಪದಪಾಠವನ್ನೂ ನೀಡಿ ನಂತರ ಪದಶಃ ಅರ್ಥವನ್ನು ನೀಡಲಾಗಿದೆ. ಮಂತ್ರಗಳ ಪ್ರಪಾಠಕಗಳಲ್ಲಿಯೂ ಇದೇ ಕ್ರಮವನ್ನು ಅನುಸರಿಸಲಾಗುವುದು.

# ಆಪೋ ಹ ಯತ್ಪ್ರಜಾಪತೇ ।

ಆಪಃ । ಹ । ಯತ್ । ಪ್ರಜಾಪತ ಇತಿ ಪ್ರಜಾ – ಪತೇ ॥

ಆಪೋ ಹ ಯನ್ಮಹತೀರ್ವಿಶ್ವಮಾಯನ್ದಕ್ಷನ್ದಧಾನಾ ಜನಯಂತೀರಗ್ನಿಮ್ ।

ತತೋ ದೇವಾನಾಂ ನಿರವರ್ತತಾಸುರೇಕಃ ಕಸ್ಮೈ ದೇವಾಯ ಹವಿಷಾ ವಿಧೇಮ ॥

ಆಪಃ । ಹ । ಯತ್ । ಮಹತೀಃ । ವಿಶ್ವಮ್ । ಆಯನ್ನ್ । ದಕ್ಷಮ್ । ದಧಾನಾಃ । ಜನಯಂತೀಃ । ಅಗ್ನಿಮ್ ॥ ತತಃ । ದೇವಾನಾಮ್ । ನಿರಿತಿ । ಅವರ್ತತ । ಅಸುಃ । ಏಕಃ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥

ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ ।

ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಗ್ಂ ಸ್ಯಾಮ ಪತಯೋ ರಯೀಣಾಮ್ ॥

ಪ್ರಜಾಪತ ಇತಿ ಪ್ರಜಾ–ಪತೇ । ನ । ತ್ವತ್ । ಏತಾನಿ । ಅನ್ಯಃ । ವಿಶ್ವಾ । ಜಾತಾನಿ । ಪರೀತಿ । ತಾ । ಬಭೂವ ॥ ಯತ್ಕಾಮಾ ಇತಿ ಯತ್–ಕಾಮಾಃ । ತೇ । ಜುಹುಮಃ । ತತ್ । ನಃ । ಅಸ್ತು । ವಯಮ್ । ಸ್ಯಾಮ । ಪತಯಃ । ರಯೀಣಾಮ್ ॥

| ಮಂತ್ರ | ವಿನಿಯೋಗ |
|---|---|
| ಆಪೋ ಹ ಯತ್ ......... ವಿಧೇಮ ॥ | ಪ್ರಾಜಾಪತ್ಯೇಷ್ಟಿಯ ವಿಕಲ್ಪಿತ ಪುರೋನುವಾಕ್ಯ [ಪ್ರತೀಕ] |
| ಪ್ರಜಾಪತೇ..... ರಯೀಣಾಮ್ ॥ | ಈ ಯಾಗದ ವಿಕಲ್ಪಿತ ಯಾಜ್ಯಾಘುವಾಕ್ಯ [ಪ್ರತೀಕ] |

* ತೈ. ಸಂ. 4.1.8.

* ತೈ. ಸಂ. 4.1.8; * ತೈ. ಸಂ. 1.8.14

* **ಯತ್** = ಯಾವ ಪ್ರಜಾಪತಿಬ್ರಹ್ಮನಿಂದ; **ದಕ್ಷಮ್ ಅಗ್ನಿಮ್ ದಧಾನಾಃ** = ಸರ್ವ ಸಮರ್ಥನಾದ ಅಗ್ನಿದೇವನನ್ನು ಧರಿಸಿರುವ; **ಮಹತೀಃ ಆಪಃ** = ಮಹತ್ತಾದ ನೀರುಗಳು; [ಅಗ್ನಿಮ್] **ಜನಯಂತೀಃ ವಿಶ್ವಮ್ ಆಯನ್ಹ** = ಅಗ್ನಿಯನ್ನು ಉತ್ಪಾದಿಸುತ್ತಾ ಬ್ರಹ್ಮ ಸೃಷ್ಟವಾಗಿ ವಿಶ್ವಕ್ಕೆ ಬಂದವೋ; **ತತಃ** = ಬಳಿಕ; **ದೇವಾನಾಮ್ ಅಸುಃ ಏಕಃ ನಿರವರ್ತತ** = [ಪ್ರಜಾಪತಿಯಿಂದ] ದೇವತೆಗಳಿಗೆ ಪ್ರಾಣಭೂತನಾದ ವಾಯುವು ಉತ್ಪನ್ನನಾದನೋ; **ಕಸ್ಮೈ ದೇವಾಯ** = ಅಂತಹ ಅನಿರ್ವಾಚ್ಯಪ್ರಭಾವವುಳ್ಳ ಪ್ರಜಾಪತಿ ದೇವನಿಗೆ; **ಹವಿಷಾ ವಿಧೇಮ** = ಈ ಹವಿಸ್ಸನ್ನು ಸಮರ್ಪಿಸಿ ಸೇವಿಸುತ್ತೇವೆ.

* **ಪ್ರಜಾಪತೇ** = ಪ್ರಜಾಪತಿದೇವನೇ ! **ತ್ವತ್ ಅನ್ಯಃ** = ನಿನಗಿಂತ ಬೇರೆ ಯಾರೂ; **ಏತಾನಿ ವಿಶ್ವಾ ಜಾತಾನಿ ತಾ ನ ಪರಿಬಭೂವ** = ಈ ಹುಟ್ಟಿರುವ ಎಲ್ಲಾ ಪ್ರಾಣಿಗಳನ್ನೂ ಮೀರಿ ಇರಲಿಲ್ಲ; **ಯತ್ಕಾಮಾಃ ತೇ ಜುಹುಮಃ** = ಯಾವ ಫಲವನ್ನು ಅಪೇಕ್ಷಿಸಿ ನಿನ್ನನ್ನು ಸೇವಿಸುತ್ತೇವೆಯೋ; **ತತ್ ನಃ ಅಸ್ತು** = ಅದು ನಮಗೆ ಪ್ರಾಪ್ತವಾಗಲಿ. **ವಯಮ್ ರಯೀಣಾಮ್ ಪತಯಃ ಸ್ಯಾಮ** = ನಾವು ಸರ್ವವಿಧವಾದ ಧನವನ್ನು ಹೊಂದುವಂತಾಗಲಿ.

---

**ತಾತ್ಪರ್ಯ** : ಈ ಬ್ರಹ್ಮಾಂಡದಲ್ಲಿ ಬ್ರಹ್ಮನು ಒಬ್ಬನೇ ಇದ್ದನು. ಅವನು ಹುಟ್ಟಿದವನಾಗಿ ಎಲ್ಲ ಭೂತಗಳನ್ನೂ ಸೃಷ್ಟಿಸಿ, ಆ ಭೂತಸಮೂಹಕ್ಕೆ ಪಾಲಕನಾದನು. ಆ ಬ್ರಹ್ಮನೇ ವಿಸ್ತೀರ್ಣವಾದ ದ್ಯುಲೋಕವನ್ನೂ , ಭೂಲೋಕವನ್ನೂ ಧರಿಸಿರುತ್ತಾನೆ. ಇಂತಹ ಅನಿರ್ವಾಚ್ಯಪ್ರಭಾವಶಾಲಿಯಾದ ಬ್ರಹ್ಮದೇವನನ್ನು ಈ ಹವಿಸ್ಸಿನಿಂದ ಸೇವಿಸುತ್ತೇವೆ.

ಆ ಬ್ರಹ್ಮನಿಂದ ಸರ್ವಕಾರಣವಾದ ಅಗ್ನಿಯ ಉತ್ಪತ್ತಿಗೆ ಕಾರಣವಾದ ನೀರುಗಳು ವಿಶ್ವದಲ್ಲಿ ಉತ್ಪನ್ನವಾದವು. ಬಳಿಕ ದೇವತೆಗಳಿಗೆ ಪ್ರಾಣಭೂತನಾದ ಒಬ್ಬ ವಾಯುದೇವನು ಜನಿಸಿದನು. ಅಂತಹ ಮಹಾಪ್ರಭಾರಶಾಲಿಯಾದ ಬ್ರಹ್ಮನಿಗೆ ಹವಿಸ್ಸನ್ನು ಅರ್ಪಿಸಿ ಸೇವಿಸುತ್ತೇವೆ.

ಎಲೈ ! ಪ್ರಜಾಪತಿದೇವನೇ ! ನಿನ್ನ ಹೊರತು ಬೇರೆ ಯಾವನೂ ವಿಶ್ವದಲ್ಲಿ ಜನಿಸಿದ ಎಲ್ಲಾ ಪ್ರಾಣಿಗಳನ್ನೂ ಮೀರಿ ಇಲ್ಲ. ನೀನು ಸರ್ವಾಧೀಶನು. ಯಾವ ಫಲವನ್ನು ಬಯಸಿ ನಿನ್ನನ್ನು ಸೇವಿಸುವೆವೋ ಅದು ನಮಗೆ ಒದಗಲಿ. ನಿನ್ನ ಅನುಗ್ರಹದಿಂದ ನಾವು ಎಲ್ಲ ವಿಧವಾದ ಸಂಪತ್ತಿಗೆ ಒಡೆಯರಾಗೋಣ.

# ಸ ವೇದ ಪುತ್ರಃ ಪಿತರಗ್ಂ ಸ ಮಾತರಗ್ಂ ಸ ಸೂನುರ್ಭುವತ್ಸ ಭುವತ್ಪುನರ್ಮಘಃ। ಸದ್ಯಾಮೌರ್ಣೋದಂತರಿಕ್ಷಗ್ಂ ಸ ಸುವಃ

ಸಃ। ವೇದ। ಪುತ್ರಃ। ಪಿತರಮ್। ಸಃ। ಮಾತರಮ್। ಸಃ। ಸೂನುಃ। ಭುವತ್। ಸಃ। ಭುವತ್। ಪುನರ್ಮಘ ಇತಿ ಪುನಃ – ಮಘಃ॥ ಸಃ। ದ್ಯಾಮ್। ಔರ್ಣೋತ್। ಅಂತರಿಕ್ಷಮ್। ಸಃ। ಸುವಃ।

❖ **ಸಃ ಪುತ್ರಃ** = [ಬ್ರಹ್ಮಾಂಡದಲ್ಲಿ ಮೊದಲು ಜನಿಸಿ] ಪುತ್ರರೂಪನಾದ ಪ್ರಜಾಪತಿಯು; **ಪಿತರಮ್** = [ಬ್ರಹ್ಮಾಂಡದ ಮೇಲುಭಾಗದಲ್ಲಿರುವ] *ಪಿತೃರೂಪವಾದ ದ್ಯುಲೋಕವನ್ನೂ ; **ಮಾತರಮ್** = [ಬ್ರಹ್ಮಾಂಡದ ಕೆಳಭಾಗದಲ್ಲಿರುವ] *ಮಾತೃರೂಪಳಾದ ಪೃಥಿವಿಯನ್ನೂ ; **ವೇದ** = ತಿಳಿದಿರುತ್ತಾನೆ. **ಸಃ** = ಅವನು; **ಸೂನುಃ ಭುವತ್** = ಪುತ್ರರೂಪನು/ಸೋಮಾಭಿಷವವನ್ನು ಮಾಡುವ ಯಜಮಾನರೂಪನು; **ಸಃ ಪುನರ್ಮಘಃ ಭುವತ್** = ಅವನು [ಯಜಮಾನನಿಗೆ] ಮತ್ತೆ ಮತ್ತೆ ಧನವನ್ನೀಯಲು ಸಮರ್ಥನು; **ಸಃ** = ಅವನು; **ದ್ಯಾಮ್** = ದ್ಯುಲೋಕವನ್ನು ; **ಅಂತರಿಕ್ಷಮ್** = ಅಂತರಿಕ್ಷಲೋಕವನ್ನೂ ; **ಔರ್ಣೋತ್** = ಆವರಿಸಿರುತ್ತಾನೆ. **ಸಃ ಸುವಃ** ಔರ್ಣೋತ್ = ಅವನು ಭೂಲೋಕವನ್ನೂ ಆವರಿಸಿರುತ್ತಾನೆ.

ಈ ಋಕ್ಕಿನಲ್ಲಿ ಪ್ರಜಾಪತಿಯು ಸರ್ವಾತ್ಮಕನೆಂದು ಸ್ತುತಿಸಲಾಗಿದೆ. ಪ್ರಜಾಪತಿ ಬ್ರಹ್ಮನು ಬ್ರಹ್ಮಾಂಡದಲ್ಲಿ ಮೊದಲು ಜನಿಸಿ, ದ್ಯುಲೋಕ–ಭೂಲೋಕಗಳಿಗೆ ಮಗನಂತೆ ಆಗಿರುತ್ತಾನೆ. ಅವನು ಎಲ್ಲವನ್ನೂ ತಿಳಿದಿರುತ್ತಾನೆ. ಅವನು ಯಜಮಾನನಸ್ವರೂಪನೂ ಆಗಿರುತ್ತಾನೆ. ಯಜಮಾನನಿಗೆ ಮತ್ತೆ ಮತ್ತೆ ಧನವನ್ನು ನೀಡುವವನೂ ಆಗಿರುತ್ತಾನೆ.

* **ದ್ಯೌಃ ಪಿತಾ। ಪೃಥಿವೀ ಮಾತಾ। ತೈ ಬ್ರಾ. 3.7.5**

**ಸ ವಿಶ್ವಾ ಭುವೋ ಅಭವತ್ಸ ಆಽಭವತ್ ॥**

## *ಉದು ತ್ಯಂ

ಸಃ। ವಿಶ್ವಾಃ। ಭುವಃ। ಅಭವತ್। ಸಃ। ಏತಿ। ಅಭವತ್॥ **ಉದಿತಿ**। ಉ। ತ್ಯಮ್॥

**ಪ್ರತೀಕದ ಮಂತ್ರಪಾಠ :**

**ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ। ದೃಶೇ ವಿಶ್ವಾಯ ಸೂರ್ಯಮ್ ॥**

ಉದಿತಿ। ಉ। ತ್ಯಮ್। ಜಾತವೇದಸಮಿತಿ ಜಾತ–ವೇದಸಮ್। ದೇವಮ್। ವಹಂತಿ। ಕೇತವಃ॥ ದೃಶೇ। ವಿಶ್ವಾಯ। ಸೂರ್ಯಮ್॥

| ಮಂತ್ರ | ವಿನಿಯೋಗ |
|---|---|
| ಉದು ತ್ಯಂ........ ಸೂರ್ಯಮ್ ॥ | ಸೌರ್ಯೇಷ್ಟಿಯ ಯಾಜ್ಯಾನುವಾಕ್ಯ. [ಪ್ರತೀಕ] |

**ಸಃ** = ಅವನು; **ವಿಶ್ವಾಃ ಭುವಃ** = ಸರ್ವಲೋಕಗಳೂ; **ಅಭವತ್** = ಆಗಿರುತ್ತಾನೆ. **ಸಃ ಆಽಽಭವತ್** = ಅವನೇ ಸರ್ವಾತ್ಮನಾಗಿರುತ್ತಾನೆ/ಸೃಷ್ಟಿ ಮಾಡುತ್ತಾ ಚತುರ್ಮುಖ ರೂಪನಾಗಿರುತ್ತಾನೆ. ✤ **ದೃಶೇ ವಿಶ್ವಾಯ** = ವಿಶ್ವವೆಲ್ಲವನ್ನೂ ನೋಡುವುದಕ್ಕಾಗಿ; **ಕೇತವಃ** = ಕಿರಣಗಳು; **ತ್ಯಮ್ ಜಾತವೇದಸಮ್ ಸೂರ್ಯಮ್ ದೇವಮ್** = ಆ ಅಗ್ನಿಸದೃಶನಾದ ಸೂರ್ಯದೇವನನ್ನು ; **ಉತ್ ಉ ವಹಂತಿ** = ಮೇಲಕ್ಕೆ ತರುತ್ತವೆ.

ಅವನು ಎಲ್ಲ ಲೋಕಗಳನ್ನು ಸೃಷ್ಟಿಸಿ ಅವುಗಳೊಂದಿಗೆ ಎಲ್ಲವನ್ನೂ ಆಚ್ಛಾದಿಸಿರುವ ಭೂಲೋಕವನ್ನೂ ಆವರಿಸಿರುತ್ತಾನೆ. ಅವನು ಸರ್ವೋತ್ಕೃಷ್ಟನಾಗಿ ಬ್ರಹ್ಮಲೋಕದಲ್ಲಿ ಇರುತ್ತಾನೆ. ಆತನು ನಮ್ಮ ಕಾಮನೆಗಳನ್ನು ಪೂರ್ಣಗೊಳಿಸಲಿ.

ಹುಟ್ಟುತ್ತಿರುವ ಸೂರ್ಯನ ಕಿರಣಗಳು ಸರ್ವಚೈತನ್ಯದಾಯಕನಾದ ಅಗ್ನಿಸದೃಶನಾದ ಸೂರ್ಯದೇವನನ್ನು ಲೋಕವು ನೋಡುವುದಕ್ಕಾಗಿ ಮೇಲಕ್ಕೆ ತರುತ್ತವೆ.

* ತೈ. ಸಂ. 1.4.43

# ಚಿತ್ರಮ್ ॥ ಸ ಪ್ರತ್ನವನ್ನವೀಯಸಾಽಗ್ನೇ

---

ಚಿತ್ರಮ್ । ಸಃ । ಪ್ರತ್ನವದಿತಿ ಪ್ರತ್ನ–ವತ್ । ನವೀಯಸಾ । ಅಗ್ನೇ ।

---

**ಪ್ರತೀಕದ ಮಂತ್ರಪಾಠ :**

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ । ಆಽಽಽಪ್ರಾ ದ್ಯಾವಾಪೃಥಿವೀ ಅಂತರಿಕ್ಷಗ್ಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥**

---

ಚಿತ್ರಮ್ । ದೇವಾನಾಮ್ । ಉದಿತಿ । ಅಗಾತ್ । ಅನೀಕಮ್ । ಚಕ್ಷುಃ । ಮಿತ್ರಸ್ಯ । ವರುಣಸ್ಯ । ಅಗ್ನೇಃ ॥ ಏತಿ । ಅಪ್ರಾಃ । ದ್ಯಾವಾಪೃಥಿವೀ ಇತಿ ದ್ಯಾವಾ–ಪೃಥಿವೀ । ಅಂತರಿಕ್ಷಮ್ । ಸೂರ್ಯಃ । ಆತ್ಮಾ । ಜಗತಃ । ತಸ್ಥುಷಃ । ಚ ॥

---

| ಮಂತ್ರ | ವಿನಿಯೋಗ |
|---|---|
| ಚಿತ್ರಮ್ ........ ಚ ॥ | ಸೌರ್ಯೇಷ್ಟಿಯ ಯಾಜ್ಯಾನುವಾಕ್ಯೆ. [ಪ್ರತೀಕ] |
| ಸ........ ಭಾನುನಾ ॥ | *ಹಿರಣ್ಯಕಾಮನಿಗೆ ವಿಹಿತವಾದ ತ್ರಿಹವಿಷ್ಕೇಷ್ಟಿಯ ಆಗ್ನೇಯೇಷ್ಟಿಯ ಪುರೋನುವಾಕ್ಯೆ |

---

❖ **ಚಿತ್ರಮ್** = ಬಗೆ ಬಗೆಯ ಬಣ್ಣಗಳುಳ್ಳ; **ದೇವಾನಾಮ್ ಅನೀಕಮ್** = ಕಿರಣಗಳ ಸೇನೆಯಂತಿರುವ, **ಮಿತ್ರಸ್ಯ ವರುಣಸ್ಯ ಅಗ್ನೇಃ ಚಕ್ಷುಃ** = ಮಿತ್ರನ, ವರುಣನ ಹಾಗೂ ಅಗ್ನಿಯೇ ಮೊದಲಾದ ಸಮಸ್ತಲೋಕಗಳ ಕಣ್ಣಾಗಿರುವ ಸೂರ್ಯಮಂಡಲವು; **ಉತ್ ಅಗಾತ್** = ಉದಯಿಸಿ ಮೇಲಕ್ಕೆ ಬಂದಿತು. **ಜಗತಃ ತಸ್ಥುಷಃ ಚ ಆತ್ಮಾ** = ಚರಾಚರಜಗತ್ತಿನ ಆತ್ಮಸ್ವರೂಪನಾದ; **ಸೂರ್ಯಃ** = ಸೂರ್ಯದೇವನು;

---

* ಆಗ್ನೇಯ ಅಷ್ಟಾಕಪಾಲ, ಸಾವಿತ್ರದ್ವಾದಶಕಪಾಲ ಮತ್ತು ಭೌಮ ಚರು – ಈ ಮೂರು ಹವಿಸ್ಸುಳ್ಳ ಮೂರು ಇಷ್ಟಿಗಳು ವಿಹಿತವಾಗಿವೆ. ಇವು ಕ್ರಮವಾಗಿ ಹಿರಣ್ಯವು ಬೇಕೆನ್ನುವವನಿಗೆ, ಸಿಕ್ಕಿರುವ ಹಿರಣ್ಯವು ಚೋರಾದಿಗಳಿಂದ ನಾಶವಾಗಬಾರದೆನ್ನುವವನಿಗೆ ಮತ್ತು ಹಿರಣ್ಯವು ಕಳೆದುಹೋದವನಿಗೆ ವಿಹಿತವಾಗಿವೆ.

**ದ್ಯುಮ್ನೇನ ಸಂಯತಾ । ಬೃಹತ್ತತಂಥ ಭಾನುನಾ ॥**

---

ದ್ಯುಮ್ನೇನ । ಸಂಯತೇತಿ ಸಮ್-ಯತಾ ॥ ಬೃಹತ್ । ತತಂಥ । ಭಾನುನಾ ॥

---

**ದ್ಯಾವಾಪೃಥಿವೀ ಅಂತರಿಕ್ಷವಮ್** = ಲೋಕತ್ರಯವನ್ನೂ ; **ಆ ಅಪ್ರಾಃ** = [ತನ್ನ ಕಿರಣಗಳಿಂದ] ತುಂಬುತ್ತಾನೆ. ✤ **ಅಗ್ನೇ** = ಹೇ ಅಗ್ನಿದೇವನೇ ! **ಸಃ ತ್ವಮ್** = ಆ ಪ್ರಸಿದ್ಧನಾದ ನೀನು; **ಪ್ರತ್ನವತ್** = ಪ್ರಾಚೀನರಾದ ಉದಾರರಾದ ಧನಿಕರಂತೆ; ಹಿಂದಿನವರಿಂದ ಬಂದಿರುವ ಹಣದಂತೆ; **ನವೀಯಸಾ** = ನೂತನವಾದ; **ಭಾನುನಾ** = ಪಾಪರಹಿತವಾಗಿ ಪ್ರಕಾಶಮಾನವಾದ; **ಸಂಯತಾ** = ನಮ್ಮನ್ನು ಹೊಂದುವ; **ದ್ಯುಮ್ನೇನ** = ಹಿರಣ್ಯದಿಂದ; **ಬೃಹತ್ ತತಂಥ** = ನಮ್ಮ ಐಶ್ವರ್ಯವನ್ನು ವಿಸ್ತಾರ ಗೊಳಿಸು.

---

ಸೂರ್ಯಮಂಡಲವು ಬಗೆಬಗೆಯ ಬಣ್ಣಗಳಿಂದ ತುಂಬಿದೆ. ಕಿರಣಗಳ ಸೇನೆಯಿಂದ ಯುಕ್ತವಾಗಿದೆ. ನೇತ್ರೇಂದ್ರಿಯಕ್ಕೆ ಅಧಿಷ್ಠಾನವಾಗಿದೆ. ಮಿತ್ರ, ಅಗ್ನಿ , ವರುಣ ಮೊದಲಾದ ದೇವತೆಗಳ ಹಾಗೂ ಸಮಸ್ತ ವಿಶ್ವದ ಕಣ್ಣೂ ಆಗಿದೆ. ಈ ಸೂರ್ಯ ಮಂಡಲವು ತನ್ನ ಕಿರಣಗಳಿಂದ ದ್ಯುಲೋಕ, ಭೂಲೋಕ ಹಾಗೂ ಅಂತರಿಕ್ಷಲೋಕ ಗಳೆಂಬ ಲೋಕತ್ರಯವನ್ನೂ ತುಂಬಿದೆ. ಈ ಸೂರ್ಯದೇವನು ಸ್ಥಾವರಜಂಗಮಾತ್ಮಕ ಜಗತ್ತಿನ ಆತ್ಮಸ್ವರೂಪನಾಗಿರುತ್ತಾನೆ. ಆತನು ನಮಗೆ ಬ್ರಹ್ಮವರ್ಚಸವನ್ನು ಕೊಡಲಿ. ನಮ್ಮ ಎಲ್ಲ ಇಷ್ಟಾರ್ಥವನ್ನೂ ಪೂರೈಸಲಿ.

ಹಿರಣ್ಯಕಾಮನಿಗೆ ಆಗ್ನೇಯಾಷ್ಟಾಕಪಾಲ, ಸಾವಿತ್ರದ್ವಾದಶಕಪಾಲ ಹಾಗೂ ಭೌಮಚರುವುಳ್ಳ ತ್ರಿಹವಿಷ್ಕವಾದ ಇಷ್ಟಿಯು ವಿಹಿತವಾಗಿದೆ. ಆಗ್ನೇಯಾಷ್ಟಾಕಪಾಲ ಯಾಗದಲ್ಲಿನ ಪುರೋನುವಾಕ್ಯೆಯ ತಾತ್ಪರ್ಯ ಹೀಗಿದೆ :

ಅಗ್ನಿದೇವನೇ ! ಪ್ರಸಿದ್ಧನಾದ ನೀನು ಉದಾರರಾದ ಹಿಂದಿನ ಧನಿಕರಂತೆ/ ಹಿಂದಿನಿಂದ ಬಂದಿರುವ ಐಶ್ವರ್ಯದಂತೆ ನೂತನವಾದ, ಪ್ರಕಾಶಮಾನವಾದ ನಮ್ಮನ್ನು ಹೊಂದುತ್ತಿರುವ ಹಿರಣ್ಯದಿಂದ ನಮ್ಮ ಐಶ್ವರ್ಯವನ್ನು ಅಧಿಕಗೊಳಿಸು.

ನಿ ಕಾವ್ಯಾ ವೇಧಸಶ್ಶಶ್ವತಸ್ಕರ್ ಹಸ್ತೇ ದಧಾನೋ

[ದಧಾನಃ (೧) ನರ್‍ಯಾ] ನರ್‍ಯಾ ಪುರೂಣಿ ।

ಅಗ್ನಿರ್ಭುವದ್ರಯಿಪತೀ ರಯೀಣಾಗ್ಂ ಸತ್ರಾ

ಚಕ್ರಾಣೋ ಅಮೃತಾನಿ ವಿಶ್ವಾ ॥

---

ನೀತಿ । ಕಾವ್ಯಾ । ವೇಧಸಃ । ಶಶ್ವತಃ । ಕಃ । ಹಸ್ತೇ । ದಧಾನಃ । ನರ್‍ಯಾ । ಪುರೂಣಿ ॥ ಅಗ್ನಿಃ । ಭುವತ್ । ರಯಿಪತಿರಿತಿ ರಯಿ–ಪತಿಃ । ರಯೀಣಾಮ್ । ಸತ್ರಾ । ಚಕ್ರಾಣಃ । ಅಮೃತಾನಿ । ವಿಶ್ವಾ ॥

---

| ಮಂತ್ರ | ವಿನಿಯೋಗ |
|---|---|
| ನಿ ಕಾವ್ಯಾ.... ವಿಶ್ವಾ ॥ | ಹಿಂದಿನ ಆಗ್ನೇಯೇಷ್ಟಿಯ ಯಾಜ್ಯಾನುವಾಕ್ಯೆ. |

---

✦ **ರಯೀಣಾಮ್ ರಯಿಪತಿಃ** = ಎಲ್ಲ ಧನಗಳಿಗೂ ಅಧಿಪತಿಯಾದ/ಧನಪತಿಗಳಲ್ಲಿ ಧನಪತಿಯಾದ; **ಅಗ್ನಿಃ** = ಅಗ್ನಿದೇವನು; **ವಿಶ್ವಾ ಅಮೃತಾನಿ** = ನಾಶವಾಗದ ಎಲ್ಲಾ ಹಿರಣ್ಯಗಳನ್ನೂ; **ಸತ್ರಾ ಚಕ್ರಾಣಃ** = ಒಟ್ಟಿಗೆ ಕೊಡಲು ಸಮರ್ಥನಾಗಿ; **ಭುವತ್** = ಆಗಿರುತ್ತಾನೆ. [ಆ ಅಗ್ನಿಯು] **ಕಾವ್ಯಾ** = ತನ್ನ ಜ್ಞಾನಾತಿಶಯದಿಂದ ಕೂಡಿ; **ನರ್‍ಯಾ ಪುರೂಣಿ** = ಮನುಷ್ಯರಿಗೆ ಬೇಕಾದ ಹೆಚ್ಚಾದ ಐಶ್ವರ್ಯವನ್ನು ; **ಹಸ್ತೇ ದಧಾನಃ** = ಕೈಯಲ್ಲಿಯೇ ಧರಿಸಿದವನಾಗಿರುತ್ತಾನೆ. [ಆತನು] **ವೇಧಸಃ ಶಶ್ವತಃ** = ಯಜಮಾನರನ್ನು [ನಿರಂತರಯಾಗಾನುಷ್ಠಾನದಿಂದ] ಬ್ರಹ್ಮಸದೃಶರನ್ನಾಗಿ; **ನಿ ಕಃ** = ಹೆಚ್ಚಾಗಿ ಮಾಡಲಿ.

---

ಅಗ್ನಿದೇವನು ಸರ್ವವಿಧಧನಗಳಿಗೂ ಅಧಿಪತಿಯು. ಶ್ರೀಮಂತರಲ್ಲಿ ಶ್ರೀಮಂತನು. ಆತನು ಮನುಷ್ಯರಿಗೆ ಬೇಕಾದ ಕ್ಷಯರಹಿತವಾದ, ಹಿರಣ್ಯಾದಿಧನವನ್ನು ಯಜಮಾನರಿಗೆ ಒಟ್ಟಿಗೆ ಕೊಡುವುದಕ್ಕಾಗಿ ಕೈಯಲ್ಲಿಯೇ ಇಟ್ಟುಕೊಂಡಿರುತ್ತಾನೆ. ಆತನು ತನ್ನ ಅತಿಶಯ ಜ್ಞಾನದಿಂದ ಯಜಮಾನರಿಗೆ ಬೇಕಾದುದನ್ನು ತಿಳಿದು, ಅವರಿಗೆ ಕೊಟ್ಟು, ಅವರು ಯಾಗಾನುಷ್ಠಾನ ಮಾಡುತ್ತಾ ಬ್ರಹ್ಮಸದೃಶರಾಗಿ ಇರುವಂತೆ ಮಾಡಲಿ. ಆತನು ನಮಗೆ ವಿಪುಲವಾಗಿ ಹಿರಣ್ಯವನ್ನು ನೀಡಲಿ.

**ಹಿರಣ್ಯಪಾಣಿಮೂತಯೇ ಸವಿತಾರಮುಪಹ್ವಯೇ ।**

**ಸ ಚೇತ್ತಾ ದೇವತಾ ಪದಮ್ ॥ ವಾಮಮದ್ಯ**

**ಸವಿತರ್ವಾಮಮು ಶ್ವೋ ದಿವೇದಿವೇ**

**ವಾಮಮಸ್ಮಭ್ಯಗ್ಂ ಸಾವೀಃ ।**

---

**ಹಿರಣ್ಯಪಾಣಿಮಿತಿ ಹಿರಣ್ಯ-ಪಾಣಿಮ್** । ಊತಯೇ ॥ ಸವಿತಾರಮ್ । ಉಪೇತಿ । ಹ್ವಯೇ ॥ ಸಃ । ಚೇತ್ತಾ । ದೇವತಾ । ಪದಮ್ ॥ **ವಾಮಮ್** । ಅದ್ಯ । ಸವಿತಃ । ವಾಮಮ್ । ಉ । ಶ್ವಃ । ದಿವೇದಿವ ಇತಿ ದಿವೇ-ದಿವೇ । ವಾಮಮ್ । ಅಸ್ಮಭ್ಯ-ಮಿತ್ಯಸ್ಮ- ಭ್ಯಮ್ । ಸಾವೀಃ ॥

---

| ಮಂತ್ರ | ವಿನಿಯೋಗ |
| --- | --- |
| **ಹಿರಣ್ಯಪಾಣಿಮ್ ..... ಪದಮ್ ॥** | ಹಿರಣ್ಯಕಾಮನಿಗೆ ವಿಹಿತವಾದ ಇಷ್ಟಿಯ ಪುರೋನುವಾಕ್ಯೆ |
| **ವಾಮಮದ್ಯ.... ಸ್ಯಾಮ ॥** | ಸಾವಿತ್ರದ್ವಾದಶಕಪಾಲಯಾಗದ ಯಾಜ್ಯಾನುವಾಕ್ಯೆ |

---

✤ **ಹಿರಣ್ಯಪಾಣಿಮ್** = ಭಕ್ತರಿಗೆ ನೀಡಲು ಹಿರಣ್ಯವನ್ನು ಕೈಯಲ್ಲಿಯೇ ಇಟ್ಟುಕೊಂಡಿರುವ; **ಸವಿತಾರಮ್** = ಸವಿತೃದೇವನನ್ನು / ಸೂರ್ಯದೇವನನ್ನು ; **ಊತಯೇ** = ನಮ್ಮ ರಕ್ಷಣೆಗಾಗಿ; **ಉಪಹ್ವಯೇ** = ಸಮೀಪಿಸಿ ಪ್ರಾರ್ಥಿಸಿಕೊಳ್ಳುತ್ತೇವೆ. **ದೇವತಾ** = ದೇವತಾಸ್ವರೂಪನಾದ; **ಸಃ** = ಆ ಸವಿತೃದೇವನು; **ಪದಮ್ ಚೇತ್ತಾ** = ನಮಗೆ ದೊರಕಬೇಕಾದ ಸ್ಥಾನವನ್ನು ತಿಳಿದಿರುತ್ತಾನೆ. ✤ **ಸವಿತಃ** = ಸವಿತೃದೇವನೇ ! **ವಾಮಮ್** = ಸೇವನೀಯವಾದ ಈ ಯಾಗಫಲವನ್ನು / ಹಿರಣ್ಯವನ್ನು ; **ಅದ್ಯ** = ಈಗ; **ಅಸ್ಮಭ್ಯಮ್ ಸಾವೀಃ** = ನಮಗೆ ಕೊಡು. **ವಾಮಮ್ ಉ ಶ್ವಃ** = ಆ ಕರ್ಮಫಲವನ್ನು ನಾಳೆಯೂ; ಸಾವೀಃ = ಕೊಡು; **ದಿವೇ ದಿವೇ ವಾಮಮ್** ಸಾವೀಃ = ಮುಂದೆ ದಿನದಿನಗಳಲ್ಲಿಯೂ ಆ ಪುಣ್ಯಫಲವನ್ನು ನಮಗೆ ನೀಡು.

**ವಾಮಸ್ಯ ಹಿ ಕ್ಷಯಸ್ಯ ದೇವ ಭೂರೇರಯಾ ಧಿಯಾ**

**ವಾಮಭಾಜಃ ಸ್ಯಾಮ || ಬಡಿತ್ಥಾ ಪರ್ವತಾನಾಂ**

**ಖಿದ್ರಂ ಬಿಭರ್ಷಿ ಪೃಥಿವಿ |**

---

ವಾಮಸ್ಯ | ಹಿ | ಕ್ಷಯಸ್ಯ | ದೇವ | ಭೂರೇಃ | ಅಯಾ | ಧಿಯಾ | ವಾಮಭಾಜ ಇತಿ ವಾಮ–ಭಾಜಃ | ಸ್ಯಾಮ | **ಬಟ್** | ಇತ್ಥಾ | ಪರ್ವತಾನಾಮ್ | ಖಿದ್ರಮ್ | ಬಿಭರ್ಷಿ | ಪೃಥಿವಿ ||

---

| ಮಂತ್ರ | ವಿನಿಯೋಗ |
|---|---|
| **ಬಡಿತ್ಥಾ..... ಮಹಿನಿ |** | ಭೌಮಚರುವಿನ ಪುರೋನುವಾಕ್ಯೆ. |

---

**ದೇವ** = ಸವಿತೃದೇವನೇ ! **ವಾಮಸ್ಯ ಹಿ ಕ್ಷಯಸ್ಯ ಭೂರೇಃ** = ಪ್ರಾರ್ಥನೀಯವಾದ, ಶಾಶ್ವತವಾದ ಸ್ವರ್ಗದ ಪ್ರಾಪ್ತಿಗಾಗಿ; **ಅಯಾ ಧಿಯಾ** = ಈ ಶ್ರದ್ಧಾಯುಕ್ತವಾದ ಬುದ್ಧಿಯಿಂದ; **ವಾಮಭಾಜಃ ಸ್ಯಾಮ** = ಸೇವ್ಯವಾದ ಈ ಯಾಗವನ್ನು ಮಾಡುವವರಾಗೋಣ. ❖ **ಪೃಥಿವಿ** = ವಿಸ್ತೀರ್ಣಳಾದ ಭೂದೇವಿಯೇ ! **ಪರ್ವತಾನಾಮ್ ಖಿದ್ರಮ್ ಬಿಭರ್ಷಿ** = ಖೇದವನ್ನುಂಟುಮಾಡುವ ಪರ್ವತಗಳ ಹೊರೆಯನ್ನು ನೀನು ಧರಿಸಿರುವೆ/ಪರ್ವತಗಳಿಂದ ಸುರಿಯುತ್ತಿರುವ ಮಳೆಯ ನೀರನ್ನು ಹೊಂದಿರುವೆ. **ಇತ್ಥಾ** = ಹೀಗೆ ನಾನು ಹೇಳುವುದು; **ಬಟ್** = ಸತ್ಯವಾದುದು.

---

ಸವಿತೃದೇವನು ತನ್ನನ್ನು ಸೇವಿಸಿದವರಿಗೆ ಕೊಡುವುದಕ್ಕಾಗಿ ಚಿನ್ನವನ್ನು ಕೈಯಲ್ಲಿಯೇ ಇಟ್ಟುಕೊಂಡಿರುತ್ತಾನೆ. ಆತನನ್ನು ನಮ್ಮ ರಕ್ಷಣೆಗಾಗಿ ಪ್ರಾರ್ಥಿಸುತ್ತೇವೆ. ನಮಗೆ ಏನನ್ನು ಕೊಡಬೇಕೆಂಬುದನ್ನು ಆತನೇ ತಿಳಿದಿರುತ್ತಾನೆ. ಆತನು ನಮಗೆ ಹಿರಣ್ಯವನ್ನು ಅನುಗ್ರಹಿಸಲಿ.

ಪ್ರೇರಕನಾದ ಸವಿತೃದೇವನೇ ! ಬೇಡಲು ಯೋಗ್ಯವಾದ ಹಿರಣ್ಯಾದಿಗಳನ್ನು ಈಗ ಕರುಣಿಸು. ನಾಳೆಯೂ ಕರುಣಿಸು. ಮುಂದೆ ಪ್ರತಿದಿನವೂ ಕರುಣಿಸು. ಸ್ವರ್ಗಲೋಕದ ಪ್ರಾಪ್ತಿಯಾಗುವಂತೆ ಯಾಗಾನುಷ್ಠಾನವನ್ನು ಮಾಡಲು ಹಿರಣ್ಯಾದಿಗಳನ್ನು ಅನುಗ್ರಹಿಸು.

ಎಲೈ! ವಿಸ್ತೀರ್ಣಳಾದ ಭೂಮಿಯೇ ! ನೀನು ಪರ್ವತಗಳ ಭಾರವನ್ನು ಹೊರುತ್ತಿದ್ದೀಯೆ. ಪರ್ವತಗಳಿಂದ ಹರಿದು ಬರುವ ನೀರನ್ನು ಧರಿಸಿದ್ದೀಯೆ. ಇದು

**ಪ್ರ ಯಾ ಭೂಮಿ ಪ್ರವತ್ವತಿ ಮಹ್ನಾ ಜಿನೋಷಿ [ಜಿನೋಷಿ (೨) ಮಹಿನಿ] ಮಹಿನಿ ॥ ಸ್ತೋಮಾ ಸಸ್ತ್ವಾ ವಿಚಾರಿಣಿ ಪ್ರತಿಷ್ಟೋಭಂತ್ಯಕ್ತುಭಿಃ ।**

ಪ್ರೇತಿ । ಯಾ । ಭೂಮಿ । ಪ್ರವತ್ವತಿ । ಮಹ್ನಾ । ಜಿನೋಷಿ । ಮಹಿನಿ ॥ ಸ್ತೋಮಾಸಃ । ತ್ವಾ । ವಿಚಾರಿಣೀತಿ ವಿ–ಚಾರಿಣಿ । ಪ್ರತೀತಿ । ಸ್ತೋಭಂತಿ । ಅಕ್ತುಭಿರಿತ್ಯಕ್ತು–ಭಿಃ ॥

| ಮಂತ್ರ | ವಿನಿಯೋಗ |
|---|---|
| ಸ್ತೋಮಾಸಸ್ತ್ವಾ...... ಅರ್ಜುನಿ ॥ | ಭೌಮಚರುಯಾಗದ ಯಾಜ್ಯಾನುವಾಕ್ಯೆ |

**ಪ್ರವತ್ವತಿ** = ಹಳ್ಳಕ್ಕೆ ಹರಿಯುವ ನೀರನ್ನು ತುಂಬಿಕೊಂಡವಳೇ !/ಪ್ರಾರ್ಥಿಸುವವರಿಗೆ ಅಭಿಮುಖಿಳಾಗಿರತಕ್ಕವಳೇ ! **ಮಹಿನಿ** = ಪೂಜ್ಯಳೇ ! **ಭೂಮಿ** = ಭೂದೇವಿಯೇ ! **ಯಾ** = ಯಾವ ನೀನು; **ಮಹ್ನಾ** = ಮಹಿಮೆಯಿಂದ/ಮಹತ್ತಾದ ನೀರಿನಿಂದ; **ಪ್ರ ಜಿನೋಷಿ** = ಸಸ್ಯಾಭಿವೃದ್ಧಿಗೆ ಕಾರಣಳಾಗಿ ಜನರನ್ನು ತೃಪ್ತಿಪಡಿಸುತ್ತೀಯೋ [ಆ ನೀನು ನಮಗೆ ಹಿರಣ್ಯವನ್ನು ನೀಡು]. ✤ **ವಿಚಾರಿಣಿ** = ಜನರ ವಿವಿಧಸಂಚಾರಕ್ಕೆ ಆಶ್ರಯಳಾದ ಭೂಮಿಯೇ ! **ಸ್ತೋಮಾಸಃ** = ಜನರ ಗುಂಪುಗಳು/ಸ್ತುತಿಗಳು; **ತ್ವಾ** = ನಿನ್ನನ್ನು ; **ಅಕ್ತುಭಿಃ** = ಸಸ್ಯನಿಮಿತ್ತವಾದ ಕಾರ್ಯಗಳಿಂದ; **ಪ್ರತಿಷ್ಟೋಭಂತಿ** = ಪ್ರತ್ಯೇಕವಾಗಿ ಆಶ್ರಯಿಸುತ್ತಾರೆ/ನಿನ್ನ ಮಹಾಕಾರ್ಯಗಳನ್ನು ಹೊಗಳುತ್ತಾರೆ. **ಅರ್ಜುನಿ** = ಶುಭ್ರಳಾದ, ನಿರ್ಮಲಳಾದ ಭೂದೇವಿಯೇ !

---

ಸತ್ಯವಾದುದು. ನಿನ್ನ ಮಹಿಮೆಯು ಅಪಾರವಾದುದು. ನೀನು ಪೂಜ್ಯಳು. ಸಸ್ಯಗಳನ್ನು ಜನಗಳಿಗೆ ಒದಗಿಸಿ ಸಂತೋಷಪಡಿಸತಕ್ಕವಳು. ನೀನು ನಮಗೆ ಹಿರಣ್ಯವನ್ನು ಕೊಡು.

ಜನರ ವಿವಿಧಸಂಚಾರಕ್ಕೆ ದಾರಿ ಮಾಡಿಕೊಡತಕ್ಕ ಭೂದೇವಿಯೇ ! ಜನಸಮೂಹಗಳು ನಿನ್ನನ್ನು ಸಸ್ಯಾದಿಗಳಿಗಾಗಿ ವಿವಿಧಕರ್ಮಗಳಿಂದ ಆಶ್ರಯಿಸುತ್ತವೆ. ಸ್ತೋತ್ರಗಳಿಂದ ನಿನ್ನ ಮಹಾಕಾರ್ಯಗಳನ್ನು ಹೊಗಳುತ್ತಾರೆ. ಪಾನಭೋಗಾಸಕ್ತನಾಗಿ ಕೆನೆಯುತ್ತಿರುವ ಕುದುರೆಯಂತೆ ನಿರರ್ಥಕವಾಗಿ ಕೂಗಾಡುತ್ತಿರುವ ಅಜ್ಞನನ್ನು ನೀನು ದೂರ ಮಾಡುತ್ತೀಯೆ. ಸುಖಾಭಿಲಾಷಿಗಳಾದ ಜನರಿಗೆ ಸಸ್ಯಲೋಹಾದಿಗಳ ಮೂಲಕವಾಗಿ ಸುಖಸಾಧನವಾದ

# ಪ್ರ ಯಾ ವಾಜಂ ನ ಹೇಷಂತಂ ಪೇರುಮಸ್ಯಸ್ಯರ್ಜುನಿ॥ ಖುದೂದರೇಣ ಸಖ್ಯಾ ಸಚೇಯ ಯೋ ಮಾ ನ ರಿಷ್ಯೇದ್ಧರ್ಯಶ್ವ ಪೀತಃ।

ಪ್ರೇತಿ। ಯಾ। ವಾಜಮ್। ನ। ಹೇಷಂತಮ್। ಪೇರುಮ್। ಅಸ್ಯಸಿ। ಅರ್ಜುನಿ॥ ಖುದೂದರೇಣ। ಸಖ್ಯಾ। ಸಚೇಯ। ಯಃ। ಮಾ। ನ। ರಿಷ್ಯೇತ್। ಹರ್ಯಶ್ವೇತಿ ಹರಿ–ಅಶ್ವ। ಪೀತಃ॥

| ಮಂತ್ರ | ವಿನಿಯೋಗ |
|---|---|
| *ಖುದೂದರೇಣ....... ಅಚ್ಛ॥ | ಸೋಮವನ್ನು ವಮನ ಮಾಡಿದವನಿಗೆ ವಿಹಿತವಾದ ಪ್ರಾಯಶ್ಚಿತ್ತೇಷ್ಟಿಯ ಪುರೋನುವಾಕ್ಯೆ. |

**ಯಾ** = ಯಾವ ನೀನು; **ಪೇರುಮ್** = ನೀರನ್ನು ಕುಡಿಯಲು ಅಪೇಕ್ಷಿಸುವ; **ಹೇಷಂತಮ್** = ಕೆನೆಯುತ್ತಿರುವ; **ವಾಜಮ್** ನ = ಕುದುರೆಯಂತಿರುವ ಅಜ್ಞನನ್ನು ; **ಪ್ರ ಅಸ್ಯಸಿ** = ದೂರ ಮಾಡುತ್ತೀಯೋ/ಹಿರಣ್ಯವನ್ನು ಕೊಡುತ್ತೀಯೋ [ಅಂತಹ ನೀನು ಹಿರಣ್ಯವನ್ನು ನೀಡು] ✤ **ಹರ್ಯಶ್ವ** = ಇಂದ್ರನೇ ! **ಖುದೂದರೇಣ** = ಮೃದುವಾದ ಉದರವುಳ್ಳ/ವಮನಕ್ಕೆ ಕಾರಣವಾಗದ; **ಸಖ್ಯಾ**= ಸ್ನೇಹಿತನಂತೆ ಹಿತಕಾರಿಯಾದ ಸೋಮನಿಂದ; **ಸಚೇಯ** = ಕೂಡಿದವನಾಗುವಂತಾಗಲಿ. **ಪೀತಃ** = ಕುಡಿಯಲ್ಪಟ್ಟ; **ಯಃ** = ಯಾವ ಸೋಮರಸವು; **ಮಾ ನ ರಿಷ್ಯೇತ್** = ನನ್ನನ್ನು ಹಿಂಸಿಸುವುದಿಲ್ಲವೋ; [ಆ ಸೋಮರಸವು ನನಗೆ ಮಿತ್ರನಂತಾಗಲಿ].

ಹಿರಣ್ಯವನ್ನು ನೀನು ಕೊಡುತ್ತೀಯೆ. ಶುಭ್ರಳಾದ ಭೂದೇವಿಯೇ ! ನೀನು ನಮಗೆ ಯಜ್ಞಾದಿಪುಣ್ಯಕಾರ್ಯಗಳಿಗಾಗಿ ಹಿರಣ್ಯವನ್ನು ಕರುಣಿಸು.

ಎಲೈ ! ಇಂದ್ರನೇ ! ಸೋಮನು ಮಿತ್ರನಂತೆ ಹಿತಕಾರಿಯಾದವನು. ಆತನು ವಮನಕ್ಕೆ ಕಾರಣನಾಗದಂತೆ ಮೃದುವಾದ ಮಧ್ಯವುಳ್ಳವನಾಗಲಿ. ಕುಡಿದ ಸೋಮರಸವು ವಮನಕ್ಕೆ ಕಾರಣವಾಗಿ ನನ್ನನ್ನು ಹಿಂಸಿಸದಿರಲಿ / ವಮನದೋಷವನ್ನು ಪರಿಹರಿಸಲಿ.

* ಈ ಯಾಗಕ್ಕೆ ಸೋಮ–ಇಂದ್ರರು ದೇವತೆಗಳಾದುದರಿಂದ ಈ ಪುರೋನುವಾಕ್ಯೆಯಲ್ಲಿ ಈರ್ವರ ಸ್ತುತಿಯಿದೆ.

**ಅಯಂ ಯಸ್ಸೋಮೋ ನ್ಯಧಾಯ್ಯಸ್ಮೇ ತಸ್ಮಾ ಇಂದ್ರಂ ಪ್ರತಿರಮೇವ್ಯಚ್ಛ ॥ ಆಪಾಂತಮನ್ಯುಸ್ತೃಪಲ ಪ್ರಭರ್ಮಾ ಧುನಿಃ ಶಿಮೀವಾಞ್ಛರುಮಾಗ್ಂ ಋಜೀಷೀ ।**

---

ಅಯಮ್ । ಯಃ । ಸೋಮಃ । ನ್ಯಧಾಯೀತಿ ನಿ–ಅಧಾಯಿ । ಅಸ್ಮೇ ಇತಿ । ತಸ್ಮೈ । ಇಂದ್ರಮ್ । ಪ್ರತಿರಮಿತಿ ಪ್ರ–ತಿರಮ್ । ವಿಮಿ । ಅಚ್ಛ । **ಆಪಾಂತಮನ್ಯುರಿತ್ಯಾಪಾಂತ–ಮನ್ಯುಃ** । ತೃಪಲಪ್ರಭರ್ಮೇತಿ ತೃಪಲ–ಪ್ರಭರ್ಮಾ । ಧುನಿಃ । ಶಿಮೀವಾನ್ । ಶರುಮಾನಿತಿ ಶರು–ಮಾನ್ । ಋಜೀಷೀ ॥

---

| ಮಂತ್ರ | ವಿನಿಯೋಗ |
|---|---|
| ಆಪಾಂತಮನ್ಯುಃ ..... ದೇಭುಃ ॥ | ಸೋಮೇಂದ್ರಯಾಗದ ಯಾಜ್ಯಾನುವಾಕ್ಯೆ |

---

**ಅಯಮ್ ಯಃ ಸೋಮಃ** = ಯಾವ ಈ ಸೋಮವು; **ಅಸ್ಮೇ** = ಈ ನನ್ನ ಹೊಟ್ಟೆಯಲ್ಲಿ; **ನ್ಯಧಾಯಿ** = ಸ್ಥಾಪಿಸಲ್ಪಟ್ಟಿತೋ; **ತಸ್ಮೈ** = ಆ ಸೋಮರಸಕ್ಕಾಗಿ [ಸೋಮ ರಸವು ಜೀರ್ಣವಾಗುವುದಕ್ಕಾಗಿ] [ನಾನು]; **ಪ್ರತಿರಮ್** = ಸೋಮವಮನಬಾಧೆಯನ್ನು ಹೋಗಲಾಡಿಸುವ; **ಇಂದ್ರಮ್** = ಇಂದ್ರನನ್ನು ; **ಅಚ್ಛ ವಿಮಿ** = ಸ್ತೋತ್ರ ಮಾಡುವುದಕ್ಕಾಗಿ ಎದುರುಗೊಳ್ಳುತ್ತೇನೆ. ✣ **ಆಪಾಂತಮನ್ಯುಃ** = [ತಾನು ಹಿಂಸೆಗೆ ಗುರಿಯಾದರೂ] ಸಂಪೂರ್ಣವಾಗಿ ಕೋಪವನ್ನು ತ್ಯಜಿಸಿರುವ; **ತೃಪಲಪ್ರಭರ್ಮಾ** = ಮೂರು ಸವನಗಳಲ್ಲಿಯೂ ರಸವನ್ನು ತೆಗೆಯುವುದಕ್ಕಾಗಿ ಕಲ್ಲುಗಳಿಂದ ಕುಟ್ಟಲ್ಪಟ್ಟಿರುವ; **ಧುನಿಃ** = ಶಿಲಾಪ್ರಹಾರದಿಂದ ಕಂಪಿಸುತ್ತಿರುವ; **ಶಿಮೀವಾನ್** = ಶೋಧನ–ಗ್ರಹಣಾದಿ ನಾನಾ ಕರ್ಮಗಳನ್ನು ಹೊಂದಿರುವ, **ಶರುಮಾನ್** = ಪ್ರಹಾರದಿಂದ ಚೂರಾಗಿರುವ ಭಾಗಗಳುಳ್ಳ; **ಋಜೀಷೀ** = ರಸರಹಿತವಾದ ಭಾಗಗಳನ್ನೂ ಹೊಂದಿರುವ, ಸೋಮಃ = ಸೋಮನು

**ಸೋಮೋ ವಿಶ್ವಾನ್ಯತಸಾ ವನಾನಿ ನಾರ್ವಾಗಿಂದ್ರಂ**

**ಪ್ರತಿಮಾನಾನಿ ದೇಭುಃ ॥ ಪ್ರ [(೩) ಸುವಾನಃ]**

**ಸುವಾನಸ್ಸೋಮ ಋತಯುಶ್ಚಿಕೇತೇಂದ್ರಾಯ**

**ಬ್ರಹ್ಮ ಜಮದಗ್ನಿರರ್ಚನ್ ॥**

---

ಸೋಮಃ । ವಿಶ್ವಾನಿ । ಅತಸಾ । ವನಾನಿ । ನ । ಅರ್ವಾಕ್ । ಇಂದ್ರಮ್ । ಪ್ರತಿಮಾನಾನೀತಿ ಪ್ರತಿ–ಮಾನಾನಿ । ದೇಭುಃ ॥ **ಪ್ರೇತಿ** । ಸುವಾನಃ । ಸೋಮಃ । ಋತಯುರಿತ್ಯೃತ–ಯುಃ । ಚಿಕೇತ । ಇಂದ್ರಾಯ । ಬ್ರಹ್ಮ । ಜಮದಗ್ನಿಃ । ಅರ್ಚನ್ ॥

---

| ಮಂತ್ರ | ವಿನಿಯೋಗ |
|---|---|
| **ಪ್ರ ಸುವಾನಃ .... ದೃಗ್ಂಹ** ॥ | ಸೋಮೇಂದ್ರಯಾಗದ ವಿಕಲ್ಪಿತ ಪುರೋನುವಾಕ್ಯೆ. |

---

**ಅತಸಾ** = ಎಲ್ಲೆಲ್ಲಿಯೂ ಹರಡಿಕೊಂಡಿರುವ; **ವಿಶ್ವಾನಿ ವನಾನಿ** = ಎಲ್ಲ ಕಾಡುಗಳನ್ನೂ ; ವರ್ಧಯತಿ = ವೃದ್ಧಿಗೊಳಿಸುತ್ತಾನೆ; [ಇಂತಹ ಮಹಿಮೆಯುಳ್ಳವನು ಸೋಮದೇವನು] **ಅರ್ವಾಕ್ ಪ್ರತಿಮಾನಾನಿ** = ಇತ್ತೀಚಿನ ಹೀನವಾದ ಉಪಮಾನಗಳು; **ಇಂದ್ರಮ್** = ಇಂದ್ರದೇವನನ್ನು ; **ನ ದೇಭುಃ** = ಹಿಂಸಿಸಲಾರವು/ ಅವನು ಅಪ್ರತಿಮನು. **✣ ಜಮದಗ್ನಿಃ** = ಜಮದಗ್ನಿಸದೃಶನಾದ; ***ಸೋಮಃ** = ಸೋಮನನ್ನು; **ಪ್ರಸುವಾನಃ** = ಅಧಿಕವಾಗಿ ಅಭಿಷವ ಮಾಡುತ್ತಿರುವ; **ಋತಯುಃ** = ಯಜ್ಞದ ಫಲವನ್ನು ಅಪೇಕ್ಷಿಸುತ್ತಿರುವ ಯಜಮಾನನು; **ಅರ್ಚನ್** = ಸ್ತುತಿಗಳಿಂದ ಪೂಜಿಸುತ್ತಾ; **ಇಂದ್ರಾಯ** = ಇಂದ್ರನಿಗಾಗಿ, **ಬ್ರಹ್ಮ** = ಹೆಚ್ಚಾದ ಸೋಮಪಾನವನ್ನು; **ಚಿಕೇತ** = ಅಪೇಕ್ಷಿಸಿದನು.

---

ನನ್ನ ಹೊಟ್ಟೆಯಲ್ಲಿರುವ ಸೋಮರಸವು ಜೀರ್ಣವಾಗಲು ವಮನದೋಷವನ್ನು ಪರಿಹರಿಸುವ ಇಂದ್ರನನ್ನು ಸ್ತುತಿಸುತ್ತೇನೆ.

ಇಲ್ಲಿಯೂ ಸೋಮನನ್ನೂ ಇಂದ್ರನನ್ನೂ ಸ್ತುತಿಸಲಾಗಿದೆ. ಸೋಮನನ್ನು

---

* **ದ್ವಿತೀಯಾವಿಭಕ್ತಿಯ ಅರ್ಥದಲ್ಲಿ ಪ್ರಥಮಾವಿಭಕ್ತಿಯು ಶ್ರುತಿಯಲ್ಲಿದೆ.**

**ವೃಷಾ ಯಂತಾಽಸಿ ಶವಸಸ್ತುರಸ್ಯಾಂತರ್ಯಚ್ಛ**

**ಗೃಣತೇ ಧರ್ತ್ರಂ ದೃಗ್ಂಹ ॥**

---

ವೃಷಾ । ಯಂತಾ । ಅಸಿ । ಶವಸಃ । ತುರಸ್ಯ । ಅಂತಃ । ಯಚ್ಛ । ಗೃಣತೇ । ಧರ್ತ್ರಮ್ । ದೃಗ್ಂಹ ॥

---

[ಎಲೈ ಇಂದ್ರನೇ ! ನೀನು] **ವೃಷಾ** = ಫಲಗಳನ್ನು ಸುರಿಸುವವನಾಗಿದ್ದೀಯೆ. **ಶವಸಃ** = ಬಲಿಷ್ಠವಾದ; **ತುರಸ್ಯ** = ಹೊರಕ್ಕೆ ಹೋಗಲು ಯತ್ನಿಸುತ್ತಿರುವ ಸೋಮರಸವನ್ನು ; **ಯಂತಾ ಅಸಿ** = ತಡೆಯಬಲ್ಲ ಸಮರ್ಥನಾಗಿದ್ದೀಯೆ. **ಅಂತಃ ಯಚ್ಛ** = ಸೋಮರಸವು ಹೊರಬಾರದಂತೆ ಒಳಗೇ ತಡೆ. **ಗೃಣತೇ** = ನಿನ್ನನ್ನು ಸ್ತುತಿಸುತ್ತಿರುವ ಯಜಮಾನನಿಗೆ; **ಧರ್ತ್ರಮ್** = ಸೋಮವನ್ನು ತಡೆಯಬಲ್ಲ ವಾಯುವನ್ನು; **ದೃಗ್ಂಹ** = ಬಲಪಡಿಸು.

---

ಲತೆಯನ್ನಾಗಿಯೂ ಓಷಧೀಶನಾದ ಚಂದ್ರನನ್ನಾಗಿಯೂ ಹೊಗಳಲಾಗಿದೆ.

ಸೋಮಯಾಗಕ್ಕಾಗಿ ರಸವನ್ನು ತೆಗೆಯುವುದಕ್ಕಾಗಿ ಕಲ್ಲುಗಳಿಂದ ಕುಟ್ಟುತ್ತಿದ್ದರೂ ಸೋಮನು ಕೋಪರಹಿತನು. ಮೂರು ಸವನಗಳಲ್ಲಿಯೂ ಕಲ್ಲುಗಳ ಪ್ರಹಾರಕ್ಕೆ ಗುರಿಯಾಗಿದ್ದಾನೆ. ಕಲ್ಲುಗಳ ಹೊಡೆತದಿಂದ ಕಂಪಿಸುತ್ತಿದ್ದಾನೆ. ಈ ಸೋಮನು ಗ್ರಹಣ – ಶೋಧನಾದಿ ನಾನಾಕರ್ಮಗಳುಳ್ಳವನು. ಭಿನ್ನಭಿನ್ನವಾದ ಅವಯವವುಳ್ಳವನು. ರಸರಹಿತವಾದ ಭಾಗಗಳುಳ್ಳವನೂ ಆಗಿರುತ್ತಾನೆ. ದೇವಸ್ವರೂಪನಾದ, ಓಷಧೀಶನಾದ ಚಂದ್ರನು ತನ್ನ ಕಿರಣಗಳಿಂದ ಎಲ್ಲೆಲ್ಲಿಯೂ ಹರಡಿಕೊಂಡಿರುವ ವನಗಳ ಅಭಿವೃದ್ಧಿಗೆ ಕಾರಣನಾಗಿದ್ದಾನೆ. ಇಂದ್ರನು ಅಪ್ರತಿಮನು. ಅವನಿಗೆ ಹೀನವಾದ ಹೋಲಿಕೆಯನ್ನು ಕೊಟ್ಟು ಯಾರೂ ಹಿಂಸಿಸಲಾರರು. ಇಂತಹ ಸೋಮ–ಇಂದ್ರರು ಸೋಮವಮನ ದೋಷವನ್ನು ಹೋಗಲಾಡಿಸಲಿ.

ಜಮದಗ್ನಿಯಂತೆ ಯಾಗಾನುಷ್ಠಾನತತ್ಪರನಾದ ಯಜಮಾನನು ಯಜ್ಞದ ಫಲವನ್ನು ಕೋರುತ್ತಿದ್ದಾನೆ. ಇಂದ್ರನಿಗೆ ಅಧಿಕವಾದ ಸೋಮರಸವನ್ನು ಕೊಡಬೇಕೆಂದು ಸೋಮಾಭಿಷವದಲ್ಲಿ ನಿರತನಾಗಿದ್ದಾನೆ. ಇಂದ್ರನನ್ನು ಮಂತ್ರಗಳಿಂದ ಸ್ತುತಿಸುತ್ತಿದ್ದಾನೆ.

# ಸಬಾಧಸ್ತೇ ಮದಂ ಚ ಶುಷ್ಮಯಂ ಚ ಬ್ರಹ್ಮ ನರೋ ಬ್ರಹ್ಮಕೃತಸ್ಸಪರ್ಯನ್ನ್। ಅರ್ಕೋ ವಾ ಯತ್ತುರತೇ ಸೋಮಚಕ್ಷಾಸ್ತತ್ರೇದಿಂದ್ರೋ

---

**ಸಬಾಧ ಇತಿ ಸ–ಬಾಧಃ** । ತೇ । ಮದಮ್ । ಚ । ಶುಷ್ಮಯಮ್ । ಚ । ಬ್ರಹ್ಮ । ನರಃ । ಬ್ರಹ್ಮಕೃತ ಇತಿ ಬ್ರಹ್ಮ–ಕೃತಃ । ಸಪರ್ಯನ್ನ್ ॥ ಅರ್ಕಃ । ವಾ । ಯತ್ । ತುರತೇ । ಸೋಮಚಕ್ಷಾ ಇತಿ ಸೋಮ–ಚಕ್ಷಾಃ । ತತ್ರ । ಇತ್ । ಇಂದ್ರಃ ।

---

| ಮಂತ್ರ | ವಿನಿಯೋಗ |
| --- | --- |
| ಸಬಾಧಸ್ತೇ...... ತುರ್ಯಾಮ್ ॥ | ಹಿಂದಿನ ಯಾಗದ ವಿಕಲ್ಪಿತ ಯಾಜ್ಯಾನುವಾಕ್ಯೆ |

---

✤ ಎಲೈ ಸೋಮನೇ ! **ಬ್ರಹ್ಮಕೃತಃ** = ಬೃಹತ್ತಾದ ಇಷ್ಟಿಯನ್ನು ಮಾಡುತ್ತಿರುವ; **ನರಃ** = ಮನುಷ್ಯರು/ಋತ್ವಿಜರು; **ಸಬಾಧಃ ತೇ** = ಅಭಿಷವಾದಿಗಳಿಂದ ಪೀಡಿತನಾದ ನಿನಗೆ; **ಮದಮ್ ಚ** = ದೇವತೆಗಳಿಗೆ ಅತಿಶಯತೃಪ್ತಿಯಿಂದ ಮದವನ್ನೂ; **ಶುಷ್ಮಯಮ್ ಚ** = ಬಲವನ್ನೂ ಕೊಡುವ; **ಬ್ರಹ್ಮ** = ವ್ಯಾಪಕವಾದ/ಸೋಮರಸದಿಂದ ಹುಟ್ಟಿದ ಶ್ಯಾಮಾಕಚರುವನ್ನು; **ಸಪರ್ಯನ್** = ಪೂಜಾರೂಪವಾಗಿ ಸಮರ್ಪಿಸುತ್ತಾರೆ. **ಯತ್** = ಯಾವ ಸೋಮರಸವು/ಶ್ಯಾಮಾಕಹವಿಸ್ಸು; **ಸೋಮಚಕ್ಷಾಃ** = ಸೋಮಶಬ್ದ ವಾಚ್ಯವಾಗಿ; **ಅರ್ಕಃ ವಾ** = ಸೂರ್ಯನಂತೆ/ಅನ್ನದಂತೆ; / ಪ್ರಕಾಶಮಾನವಾಗಿ; **ತುರತೇ** = ಹೊರಗೆ ಹೋಗಲು ಹವಣಿಸುತ್ತಿದೆಯೋ; **ತತ್ರ ಇತ್** = ಆ ಜಠರದಲ್ಲಿಯೇ; **ಇಂದ್ರಃ** = ಇಂದ್ರನು;

---

ಓ ! ಇಂದ್ರನೇ ! ನೀನು ಸೇವಿಸುವವರಿಗೆ ಇಚ್ಛಿಸಿದುದನ್ನು ಮಳೆಯಂತೆ ಸುರಿಸತಕ್ಕವನು. ಸೋಮರಸವು ಹೊರಗೆ ಹೋಗದಂತೆ ತಡೆಯಬಲ್ಲವನು. ನಿನ್ನನ್ನು ಸ್ತುತಿಸುತ್ತಿರುವ ಯಜಮಾನನು ಪಾನ ಮಾಡಿದ ರಸವು ಒಳಗೇ ಇರುವಂತೆ ನೀನು ಮಾಡು. ಹೊರಗೆ ಹೋಗದಂತೆ ತಡೆಯುವ ವಾಯುವನ್ನು ಬಲಪಡಿಸು ಮತ್ತು ವಮನ ದೋಷವನ್ನು ಪರಿಹರಿಸು.

**ದಧತೇ ಪೃತ್ಸು ತುರ್ಯಾವ್ ॥ ವಷಟ್ತೇ**

**ವಿಷ್ಣವಾಸ ಆ ಕೃಣೋಮಿ**

---

ದಧತೇ । ಪೃತ್ಸ್ವಿತಿ ಪೃತ್–ಸು । ತುರ್ಯಾವ್ ॥ **ವಷಟ್** । ತೇ । ವಿಷ್ಣೋ । ಆಸಃ ।

ಏತಿ । ಕೃಣೋಮಿ ।

---

| **ಮಂತ್ರ** | **ವಿನಿಯೋಗ** |
|---|---|
| **ವಷಟ್ತೇ ....... ನಃ ॥** | *ಅಭ್ಯುದಿತೇಷ್ಟಿಯ ಮೂರನೆಯ ವೈಷ್ಣವ ಯಾಗದ ಪುರೋನುವಾಕ್ಯೆ |

---

**ಪೃತ್ಸು ತುರ್ಯಾವ್** = ಯುದ್ಧದಲ್ಲಿ ವೇಗವಾಗಿ ತಡೆದು ನಿಲ್ಲಿಸುವಂತೆ **ದಧತೇ** = ವಮನವನ್ನು ತಡೆಯುವ ವಾಯುವನ್ನು ಪ್ರೇರಿಸುತ್ತಾನೆ. ✦ **ವಿಷ್ಣೋ** = ವಿಷ್ಣುವೇ ! **ಆಸಃ** = ದೇವಪ್ರೇರಿತನಾದ ನಾನು; **ತೇ** = ನಿನಗಾಗಿ; **ವಷಟ್ ಆಕೃಣೋಮಿ** = ವಷಟ್ಕಾರ ಪೂರ್ವಕವಾಗಿ ಹವಿಸ್ಸನ್ನು ಸಮರ್ಪಿಸುತ್ತೇನೆ.

---

ಈ ಶ್ಯಾಮಾಕಚರುಯಾಗಕ್ಕೆ ಸೋಮ–ಇಂದ್ರರು ದೇವತೆಗಳಾದುದರಿಂದ ಅವರನ್ನು ಸ್ತುತಿಸಲಾಗಿದೆ. ಇಂದ್ರನು ಕುಡಿದು ಹೆಚ್ಚಾದ ಸೋಮರಸವನ್ನು ವಮನ ಮಾಡಿದನೆಂದೂ ಅದರಿಂದ ಶ್ಯಾಮಾಕವು [ಸಾಮೆ ಅಕ್ಕಿ] ಹುಟ್ಟಿತೆಂದೂ ಉಪಾಖ್ಯಾನ ವಿದೆ. ಅದರಿಂದ ಶ್ಯಾಮಾಕವು ಸೋಮವೆಂದು ಭಾವಿಸಿ ಸ್ತುತಿಸಲಾಗಿದೆ.

---

* ಅಮಾವಾಸ್ಯೆಯೆಂಬ ಭ್ರಾಂತಿಯಿಂದ ಚತುರ್ದಶಿಯ ದಿನ ಹವಿರ್ನಿರ್ವಾಪ ಮಾಡಿದಾಗ ಚಂದ್ರೋದಯವಾದರೆ ವಿಹಿತವಾದ ಪ್ರಾಯಶ್ಚಿತ್ತೇಷ್ಟಿ;

**ತನ್ಮೇ ಜುಷಸ್ವ ಶಿಪಿವಿಷ್ಟ ಹವ್ಯಮ್ [೪] । ವರ್ಧಂತು ತ್ವಾ ಸುಷ್ಟುತಯೋ ಗಿರೋ ಮೇ ಯೂಯಂ ಪಾತಸ್ವಸ್ತಿಭಿಸ್ಸದಾ ನಃ ॥**

---

ತತ್ । ಮೇ । ಜುಷಸ್ವ । ಶಿಪಿವಿಷ್ಟೇತಿ ಶಿಪಿ–ವಿಷ್ಟ । ಹವ್ಯಮ್ ॥ ವರ್ಧಂತು । ತ್ವಾ । ಸುಷ್ಟುತಯ ಇತಿ ಸು–ಸ್ತುತಯಃ । ಗಿರಃ । ಮೇ । ಯೂಯಮ್ । ಪಾತ । ಸ್ವಸ್ತಿಭಿರಿತಿ ಸ್ವಸ್ತಿ–ಭಿಃ । ಸದಾ । ನಃ ॥

---

**ಶಿಪಿವಿಷ್ಟ** = ಯಜ್ಞಸ್ವರೂಪನಾದ ವಿಷ್ಣುವೇ ! **ತತ್ ಮೇ ಹವ್ಯಮ್** = ಆ ನನ್ನ ಹವ್ಯವನ್ನು ; **ಜುಷಸ್ವ** = ಸೇವಿಸು. **ಮೇ** = ನನ್ನ ; **ಸುಷ್ಟುತಯಃ ಗಿರಃ** = ಒಳ್ಳೆಯ ಸ್ತುತಿರೂಪವಾದ ಮಾತುಗಳು; **ತ್ವಾ ವರ್ಧಂತು** = ನಿನ್ನನ್ನು ಸಂತೋಷಪಡಿಸಿ ವೃದ್ಧಿ ಪಡಿಸಲಿ. * **ಯೂಯಮ್** = ನೀವು; **ನಃ** = ನಮ್ಮನ್ನು; **ಸದಾ ಸ್ವಸ್ತಿಭಿಃ ಪಾತ** = ಯಾವಾಗಲೂ ಶ್ರೇಯಸ್ಸನ್ನಿತ್ತು ಕಾಪಾಡಿರಿ.

---

ಅಭಿಷವಾದಿಗಳಿಂದ ಪೀಡಿತನಾದ ಸೋಮನೇ ! ನಿನಗಾಗಿ – ದೇವತೆಗಳಿಗೆ ಬಲವನ್ನೂ ತೃಪ್ತಿಯನ್ನೂ ಉಂಟುಮಾಡುವ ಶ್ಯಾಮಾಕಹವಿಸ್ಸನ್ನು ಯಾಗವನ್ನು ನಿರ್ವಹಿಸುತ್ತಿರುವ ಋತ್ವಿಜರು ಪೂಜಾರೂಪವಾಗಿ – ಸಮರ್ಪಿಸುತ್ತಾರೆ. ನೀನು ಸೋಮಶಬ್ದವಾಚ್ಯನು. ಸೂರ್ಯನಂತೆ ತೇಜಸ್ವಿಯಾಗಿರುವೆ. ಹೊರಕ್ಕೆ ವಮನರೂಪದಿಂದ ಹೊರಡಲು ತವಕಿಸುವ ನಿನ್ನನ್ನು ಉದರದಲ್ಲಿ ತಡೆದು ನಿಲ್ಲಿಸಬಲ್ಲ ವಾಯುವನ್ನು ಇಂದ್ರನು ಪ್ರೇರಿಸುತ್ತಾನೆ. ಆತನು ಯುದ್ಧದಲ್ಲಿ ಶತ್ರುವನ್ನು ತಡೆದು ನಿಲ್ಲಿಸುವಂತೆ ವಮನವಾಗದಂತೆ ತಡೆದು ನಿಲ್ಲಿಸುತ್ತಾನೆ.

ಸೋಮ–ಇಂದ್ರರೇ ! ನೀವು ಸೋಮವಮನದೋಷವನ್ನು ಪರಿಹರಿಸಿ, ಇಂದ್ರಿಯಶಕ್ತಿಯನ್ನೂ , ಸೋಮರಸಪಾನಫಲವನ್ನೂ ಅನುಗ್ರಹಿಸಿರಿ.

---

* ಪೂಜಾರ್ಥದಲ್ಲಿ ಬಹುವಚನ.

## ಪ್ರ ತತ್ತೇ ಅದ್ಯ ಶಿಪಿವಿಷ್ಟ ನಾಮಾರ್ಯಶ್ಶಗ್^ಂಸಾಮಿ ವಯುನಾನಿ ವಿದ್ವಾನ್ ।

---

**ಪ್ರೇತಿ** । ತತ್ । ತೇ । ಅದ್ಯ । ಶಿಪಿವಿಷ್ಟೇತಿ ಶಿಪಿ-ವಿಷ್ಟ । ನಾಮ । ಅರ್ಯಃ । ಶಗ್^ಂಸಾಮಿ । ವಯುನಾನಿ । ವಿದ್ವಾನ್ ।

---

| ಮಂತ್ರ | ವಿನಿಯೋಗ |
|---|---|
| ಪ್ರ ತತ್ತೇ ......... ಪರಾಕೇ ॥ | ವೈಷ್ಣವಯಾಗದ ಯಾಜ್ಯಾನುವಾಕ್ಯೆ. |

---

✤ **ಶಿಪಿವಿಷ್ಟ** = ಪಶುಸಾಧ್ಯವಾದ ಯಜ್ಞಗಳಿಂದ ಆರಾಧಿಸಲ್ಪಡುವ ವಿಷ್ಣುವೇ ! **ಅದ್ಯ** = ಈಗ; **ವಯುನಾನಿ ವಿದ್ವಾನ್** = ಶಬ್ದನಿರ್ವಚನಗಳನ್ನು ತಿಳಿದಿರುವ; **ಅರ್ಯಃ** = ಯಜ್ಞಸ್ವಾಮಿಯಾದ ನಾನು; **ತೇ ತತ್ ನಾಮ** = ನಿನ್ನ ಆ ಶಿಪಿವಿಷ್ಟನಾಮವನ್ನು; **ಪ್ರ ಶಂಸಾಮಿ** = ಹೊಗಳುತ್ತೇನೆ.

---

ಎರಡನೆಯ ಕಾಂಡದ ಐದನೆಯ ಪ್ರಶ್ನದಲ್ಲಿ ಅಮಾವಾಸ್ಯೆಯೆಂಬ ಭ್ರಾಂತಿಯಿಂದ ಚತುರ್ದಶಿಯಂದು ಹವಿರ್ನಿರ್ವಾಪ ಮಾಡಿದಾಗ ಚಂದ್ರೋದಯವಾದರೆ **'ವಿ ವಾ ಏತಂ ಪ್ರಜಯಾ ಪಶುಭಿರರ್ಧಯತಿ ವರ್ಧಯತ್ಯಸ್ಯ ಭ್ರಾತೃವ್ಯಮ್'** ಎಂದು ಹೇಳಿದೆ. ಯಜಮಾನನ ಪ್ರಜೆ-ಪಶುಗಳು ದೂರಾಗುತ್ತವೆ. ಶತ್ರುಗಳು ಹೆಚ್ಚುತ್ತಾರೆ ಎಂದು ಅದರ ಅರ್ಥ. ಅದರ ಪ್ರಾಯಶ್ಚಿತ್ತವಾಗಿ ಮೂರು ಹವಿಸ್ಸುಗಳುಳ್ಳ ಅಭ್ಯುದಯೇಷ್ಟಿಯೆಂದು ಪ್ರಸಿದ್ಧವಾದ ಇಷ್ಟಿಯು ವಿಹಿತವಾಗಿದೆ. ಅದರ ಮೂರನೆಯ ವೈಷ್ಣವಯಾಗದ ಯಾಜ್ಯಾ-ಪುರೋನುವಾಕ್ಯವನ್ನು ಮುಂದೆ ಹೇಳಬೇಕಾಗಿರುವುದನ್ನು ಇಲ್ಲಿಯೇ ಶ್ರುತಿಯು ಹೇಳಿದೆ.

ಹೇ ! ವಿಷ್ಣುವೇ ! ದೇವಪ್ರೇರಿತನಾದ ನಾನು ನಿನಗಾಗಿ ವಷಟ್ಕಾರಪೂರ್ವಕವಾಗಿ ಹವ್ಯವನ್ನು ಅರ್ಪಿಸುತ್ತೇನೆ. ಈ ನನ್ನ ಹವ್ಯವನ್ನು ಸೇವಿಸಿ ತೃಪ್ತನಾಗು.

ತಂ ತ್ವಾ ಗೃಣಾಮಿ ತವಸಮತವೀಯಾನ್ಕ್ಷಯಂತ
ಮಸ್ಯ ರಜಸಃ ಪರಾಕೇ ॥ ಕಿಮಿತ್ತೇ ವಿಷ್ಣೋ ಪರಿ
ಚಕ್ಷ್ಯಂ ಭೂತ್ಪ್ರ ಯದ್ವವಕ್ಷೇ ಶಿಪಿವಿಷ್ಟೋ ಅಸ್ಮಿ ।

ತಮ್ । ತ್ವಾ । ಗೃಣಾಮಿ । ತವಸಮ್ । ಅತವೀಯಾನ್ । ಕ್ಷಯಂತಮ್ । ಅಸ್ಯ । ರಜಸಃ । ಪರಾಕೇ ॥ **ಕಿಮ್** । ಇತ್ । ತೇ । ವಿಷ್ಣೋ ಇತಿ । ಪರಿಚಕ್ಷ್ಯಮಿತಿ ಪರಿ–ಚಕ್ಷ್ಯಮ್ । ಭೂತ್ । ಪ್ರೇತಿ । ಯತ್ । ವವಕ್ಷೇ । ಶಿಪಿವಿಷ್ಟ ಇತಿ ಶಿಪಿ–ವಿಷ್ಟಃ । ಅಸ್ಮಿ ॥

| ಮಂತ್ರ | ವಿನಿಯೋಗ |
|---|---|
| ಕಿಮಿತ್ತೇ ........ ಬಭೂಥ ॥ | ಹಿಂದಿನ ಯಾಗದ ವಿಕಲ್ಪಿತ ಯಾಜ್ಯಾನುವಾಕ್ಯೆ |

**ಅಸ್ಯ ರಜಸಃ** = ಈ ರಜೋಯುಕ್ತವಾದ ಲೋಕದಿಂದ / ಅಜ್ಞಾನಯುಕ್ತವಾಗಿ ಮಲಿನವಾದ ಈ ಲೋಕದಿಂದ; **ಪರಾಕೇ** = ದೂರದಲ್ಲಿ; **ಕ್ಷಯಂತಮ್** = ವಾಸಿಸುವ; **ತವಸಮ್** = ತಪಸ್ವಿಯಾದ; **ತಮ್ ತ್ವಾ** = ಆ ಪ್ರಸಿದ್ಧನಾದ ನಿನ್ನನ್ನು; **ಅತವೀಯಾನ್** = ತಪಸ್ವಿಯಲ್ಲದಿದ್ದರೂ ಭಕ್ತನಾದ ನಾನು; **ಗೃಣಾಮಿ** = ಸ್ತುತಿಸುತ್ತೇನೆ. **ಹೇ ವಿಷ್ಣೋ** = ವಿಷ್ಣುವೇ ! **ಯತ್ ಶಿಪಿವಿಷ್ಟಃ ಅಸ್ಮಿ** = ನಾನು ಶಿಪಿವಿಷ್ಟನೆಂದು / ಅಡಗಿಸಿಕೊಂಡ ತೇಜಸ್ಸುಳ್ಳವನೆಂದು ಯಾವುದನ್ನು ; **ಪ್ರ ವವಕ್ಷೇ** = ಹೇಳುತ್ತೀಯೋ; **ಕಿಮ್ ಇತ್ ತೇ ಪರಿಚಕ್ಷ್ಯಮ್ ಭೂತ್** = ಆ ಶಿಪಿವಿಷ್ಟನಾಮವು ನಿನಗೆ ನಿಂದ್ಯವಾಗಿ ಕಾಣುತ್ತದೆಯೇ ? ಇಲ್ಲ.

ನನ್ನ ಒಳ್ಳೆಯ ಸ್ತುತಿಗಳು ನಿನ್ನನ್ನು ಸಂತೋಷಗೊಳಿಸಿ ವೃದ್ಧಿಪಡಿಸಲಿ. ನೀನು ನಮಗೆ ಶ್ರೇಯಸ್ಸನ್ನು ಯಾವಾಗಲೂ ಅನುಗ್ರಹಿಸಿ ಕಾಪಾಡು.

**'ಯಜ್ಞೋ ವೈ ವಿಷ್ಣುಃ' 'ಪಶವಃ ಶಿಪಿಃ'** ಎಂಬ ಶ್ರುತಿಯಂತೆ ''ಎಲೈ ! ಪಶುಸಾಧ್ಯವಾದ ಯಜ್ಞಗಳಿಂದ ಆರಾಧಿಸಲ್ಪಡುವ ವಿಷ್ಣುವೇ ! ಶಬ್ದನಿರ್ವಚನವನ್ನು ತಿಳಿದಿರುವ, ಯಜ್ಞಸ್ವಾಮಿಯಾದ ನಾನು ಆ ನಿನ್ನ ಶಿಪಿವಿಷ್ಟನಾಮವನ್ನು ಪ್ರಶಂಸಿಸುತ್ತೇನೆ. ನೀನು ಮಹಾತಪಸ್ವಿಯು. ಅಜ್ಞಾನಯುಕ್ತವಾಗಿ ಮಲಿನವಾಗಿರುವ ಈ ಲೋಕದಿಂದ ದೂರದಲ್ಲಿ ವಾಸಿಸುತ್ತಿರುವೆ. ನಾನು ತಪಸ್ವಿಯಲ್ಲದಿದ್ದರೂ ಭಕ್ತವತ್ಸಲನಾದ ನಿನ್ನ ಅನುಗ್ರಹ

**ಮಾ ವರ್ಪೋ ಅಸ್ಮದಪಗೂಹ ಏತದ್ಯದನ್ಯರೂಪಃ**

**ಸಮಿಥೇ ಬಭೂಥ [(೫)] ॥ ಅಗ್ನೇ ದಾ ದಾಶುಷೇ**

**ರಯಿಂ ವೀರವಂತಂ ಪರೀಣಸಮ್ ।**

---

ಮಾ । ವರ್ಪಃ । ಅಸ್ಮತ್ । ಅಪೇತಿ । ಗೂಹಃ । ಏತತ್ । ಯತ್ । ಅನ್ಯರೂಪ ಇತ್ಯನ್ಯ-ರೂಪಃ । ಸಮಿಥ ಇತಿ ಸಮ್- ಇಥೇ । ಬಭೂಥ ॥ **ಅಗ್ನೇ** । ದಾಃ । ದಾಶುಷೇ । ರಯಿಮ್ । ವೀರವಂತಮಿತಿ ವೀರ-ವಂತಮ್ । ಪರೀಣಸಮಿತಿ ಪರಿ-ನಸಮ್ ।

---

| ಮಂತ್ರ | ವಿನಿಯೋಗ |
|---|---|
| ಅಗ್ನೇ ದಾ...... ಸೂನುಮತಃ ॥ | ಪಶುಕಾಮನಿಗೆ ವಿಹಿತವಾದ ಇಂದ್ರ-ಪ್ರಾಜಾಪತ್ಯಸಹಿತವಾದ ಆಗ್ನೇಯ ಹವಿರ್ಯಾಗದ ಪುರೋನುವಾಕ್ಯೆ |

---

**ಯತ್** = ಏಕೆಂದರೆ; **ಸಮಿಥೇ** = ಯುದ್ಧಕಾಲದಲ್ಲಿ; **ಅನ್ಯರೂಪಃ** = ಕವಚಾದಿಗಳನ್ನು ಧರಿಸಿ ಬೇರೆಯ ರೂಪವುಳ್ಳವನಾಗಿ; **ಬಭೂಥ** = ಆಗುವೆ;/ಸೂರ್ಯರೂಪನಾಗಿ ಪ್ರಾತಃಕಾಲದಲ್ಲಿ ಸಾಮಾನ್ಯಪ್ರಕಾಶವುಳ್ಳವನು; ಮಧ್ಯಾಹ್ನದಲ್ಲಿ ಅತ್ಯಂತ ತೇಜಸ್ವಿಯಾದವನು, ಹೀಗೆ ಸಮಯಕ್ಕೆ ತಕ್ಕಂತೆ ಬೇರೆ ಬೇರೆ ರೂಪವುಳ್ಳವನು. [ಇದು ಸತ್ಯವೇ] [ಆದುದರಿಂದ] **ಏತತ್ ವರ್ಪಃ** = ಈ ಶ್ರೇಷ್ಠವಾದ ಶಿಪಿವಿಷ್ಟರೂಪವನ್ನೂ /ನಾಮವನ್ನು ; **ಮಾ ಅಸ್ಮತ್ ಅಪಗೂಹಃ** = ನಮ್ಮಿಂದ ಮುಚ್ಚಿಡಬೇಡ. ✦ **ಅಗ್ನೇ** = ಅಗ್ನಿದೇವನೇ !! **ದಾಶುಷೇ** = ನಿನಗೆ ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ; **ರಯಿಮ್** = ಧನವನ್ನೂ ; **ಪರೀಣಸಮ್** = ಅಂದವಾದ ಮೂಗು ಮೊದಲಾದ ಅವಯವಗಳುಳ್ಳ; **ವೀರವಂತಮ್** = ಶೂರರಾದ ಸಹಚರರುಳ್ಳ ಪುತ್ರನನ್ನೂ ; **ದಾಃ** = ಕೊಡು.

---

ದಿಂದ ನಿನ್ನನ್ನು ಸ್ತುತಿಸುತ್ತೇನೆ. ನೀನು ನನಗೆ ಯಾಗಫಲವನ್ನೂ , ಪಶುಗಳನ್ನೂ ಕರುಣಿಸು''.

ವಿಷ್ಣುವೇ! ನಾನು ಶಿಪಿವಿಷ್ಟನೆಂದು ನೀನು ಹೇಳುವುದು ಪ್ರಶಂಸಾರ್ಹವೇ. ಹೀನತೇಜಸ್ಕನೆಂಬ ಅರ್ಥದಲ್ಲಿ ಸಾಮಾನ್ಯಜನರು ಉಪಯೋಗಿಸಬಹುದು. ಆದರೆ ಅದು

**ಶಿಶೀಹಿ ನಃ ಸೂನುಮತಃ ॥ ದಾ ನೋ ಅಗ್ನೇ ಶತಿನೋ ದಾಃ ಸಹಸ್ರಿಣೋ ದುರೋ ನ ವಾಜಗ್ಂ ಶ್ರುತ್ಯಾ ಅಪಾವೃಧಿ ।**

---

ಶಿಶೀಹಿ । ನಃ । ಸೂನುಮತ ಇತಿ ಸೂನು–ಮತಃ ॥ **ದಾಃ** । ನಃ । ಅಗ್ನೇ । ಶತಿನಃ । ದಾಃ । ಸಹಸ್ರಿಣಃ । ದುರಃ । ನ । ವಾಜಮ್ । ಶ್ರುತ್ಯೈ । ಅಪೇತಿ । ವೃಧಿ ॥

---

| ಮಂತ್ರ | ವಿನಿಯೋಗ |
| --- | --- |
| ದಾ ನೋ ....... ದಿದ್ಯುತಃ ॥ | ಆಗ್ನೇಯಯಾಗದ ಯಾಜ್ಯಾನುವಾಕ್ಯೆ |

---

**ಸೂನುಮತಃ** = ಒಳ್ಳೆಯ ಮಕ್ಕಳುಳ್ಳ; **ನಃ** = ನಮ್ಮನ್ನು; **ಶಿಶೀಹಿ** = ಉಜ್ವಲತೇಜಸ್ಸುಳ್ಳವರನ್ನಾಗಿ ಮಾಡು/ಕಾರ್ಯನಿಪುಣರನ್ನಾಗಿಸು. ✦ **ಅಗ್ನೇ** = ಅಗ್ನಿದೇವನೇ! **ನಃ** = ನಮಗೆ; **ದುರಃ ನ** = ಯಾಗಾದಿಕರ್ಮಾನುಷ್ಠಾನಕ್ಕೆ ಬಾಗಿಲಿನಂತಿರುವ; **ಶತಿನಃ** = ನೂರು ಸಂಖ್ಯೆಯ ಪಶುಗಳನ್ನು; **ದಾಃ** = ಕೊಡು. **ಸಹಸ್ರಿಣಃ** = ಸಾವಿರ ಸಂಖ್ಯೆಯ ಪಶುಗಳನ್ನೂ; **ದಾಃ** = ಕೊಡು. **ವಾಜಮ್** = [ಬ್ರಾಹ್ಮಣಭೋಜನಕ್ಕೆ ಬೇಕಾಗುವಷ್ಟು] ಅನ್ನವನ್ನು; **ಶ್ರುತ್ಯೈ** = [ಅನ್ನದಾತನೆಂದು ಲೋಕದಲ್ಲಿ ಕೇಳಿಬರುವುದಕ್ಕಾಗಿ]; **ಅಪಾವೃಧಿ** = ವಿಘ್ನಗಳನ್ನು ಪರಿಹರಿಸಿ ವೃದ್ಧಿಗೊಳಿಸು.

---

ನಿನ್ನ ಸರ್ವಸ್ವರೂಪವಾಗಿರುವಿಕೆಯನ್ನೇ ಹೇಳುತ್ತದೆ. ನೀನು ರಾಕ್ಷಸರೊಡನೆ ಮಾಡುವ ಯುದ್ಧದ ಸಮಯದಲ್ಲಿ ಕವಚಾದಿಗಳನ್ನು ಧರಿಸಿ ಅನ್ಯರೂಪನಾಗಿದ್ದೀಯೆ. ಆದುದರಿಂದ ಬ್ರಾಹ್ಮಣದಲ್ಲಿ ಯಜ್ಞಸ್ವರೂಪನೆಂದೂ ಪಶುಸಾಧ್ಯವಾದ ಯಾಗಗಳಿಂದ ಆರಾಧ್ಯನೆಂದೂ ನಿರ್ವಚನ ಮಾಡಲ್ಪಟ್ಟಿರುವ ನಿನ್ನ ಶ್ರೇಷ್ಠವಾದ ಶಿಪಿವಿಷ್ಟನಾಮವನ್ನು ನಮ್ಮಿಂದ ಮುಚ್ಚಿಡಬೇಡ. ಆ ನಾಮದಿಂದ ನಾವು ನಿನ್ನನ್ನು ಸ್ತುತಿಸುತ್ತೇವೆ.

ಎಲೈ ! ಅಗ್ನಿದೇವನೇ ! ನಿನಗೆ ಹವಿಸ್ಸನ್ನು ಕೊಟ್ಟು ಆರಾಧಿಸುತ್ತಿರುವ

**ಪ್ರಾಚೀ ದ್ಯಾವಾಪೃಥಿವೀ ಬ್ರಹ್ಮಣಾ ಕೃಧಿ ಸುವರ್ಣ**

**ಶುಕ್ರಮುಷಸೋ ವಿ ದಿದ್ಯುತುಃ ||**

**ಅಗ್ನಿರ್ದಾ ದ್ರವಿಣಂ ವೀರಪೇಶಾ**

---

ಪ್ರಾಚೀ ಇತಿ | ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ | ಬ್ರಹ್ಮಣಾ | ಕೃಧಿ | ಸುವಃ | ನ | ಶುಕ್ರಮ್ | ಉಷಸಃ | ವೀತಿ | ದಿದ್ಯುತುಃ || ಅಗ್ನಿಃ | ದಾಃ | ದ್ರವಿಣಮ್ | ವೀರಪೇಶಾ ಇತಿ ವೀರ-ಪೇಶಾಃ |

---

| ಮಂತ್ರ | ವಿನಿಯೋಗ |
|---|---|
| ಅಗ್ನಿರ್ದಾ ........ ಪುರುತ್ರಾ \|\| | ಆಗ್ನೇಯಯಾಗದ ವಿಕಲ್ಪಿತ ಯಾಜ್ಯಾನುವಾಕ್ಯೆ |

---

**ದ್ಯಾವಾಪೃಥಿವೀ** = ದ್ಯುಲೋಕ – ಭೂಲೋಕಗಳನ್ನು ; **ಬ್ರಹ್ಮಣಾ** = ಮಂತ್ರಯುಕ್ತವಾದ [ಕರ್ಮದಿಂದ ಸಂತುಷ್ಟನಾದ ನೀನು] **ಪ್ರಾಚೀ ಕೃಧಿ** = ಯಾಗಾದಿ ಕರ್ಮಾನುಕೂಲಗಳನ್ನಾಗಿ ಮಾಡು; **ಉಷಸಃ** = ಉಷಃಕಾಲಗಳು; **ಸುವಃ ನ** = ಸುಖಪ್ರದವಾದ ಸ್ವರ್ಗದಂತೆ; **ಶುಕ್ರಮ್** = ಪ್ರಕಾಶಮಾನವಾಗಿ; **ವಿ ದಿದ್ಯುತುಃ** = ವಿಶೇಷವಾಗಿ ಶೋಭಿಸಲಿ. ❖ **ವೀರಪೇಶಾಃ** = ಉತ್ತಮಪುತ್ರರನ್ನು ಕೊಡುವ/ರಕ್ಷಿಸುವ/ ವೀರಲಕ್ಷಣಪೂರ್ಣನಾದ; **ಅಗ್ನಿಃ** = ಅಗ್ನಿದೇವನು; **ದ್ರವಿಣಮ್ ದಾಃ** = ಧನವನ್ನು ಕೊಡಲಿ.

---

ಯಜಮಾನನಿಗೆ ಧನಸಮೃದ್ಧಿಯನ್ನು ಕರುಣಿಸು. ಅನುಯಾಯಿಗಳಿಂದ ಕೂಡಿದ ಸರ್ವಾಂಗಸುಂದರರಾದ ಪುತ್ರಪೌತ್ರಾದಿಗಳನ್ನೂ ಕೊಡು. ಇಂತಹ ಉತ್ತಮಸಂತತಿಯುಳ್ಳ ನಮ್ಮನ್ನು ಲೋಕದಲ್ಲಿ ಜ್ವಲಿಸುವವರನ್ನಾಗಿ/ಪ್ರಸಿದ್ಧರನ್ನಾಗಿ ಮಾಡು. ಕಾರ್ಯಸಮರ್ಥರನ್ನಾಗಿ ಮಾಡು.

ಎಲೈ ! ಅಗ್ನಿದೇವನೇ ! ಯಾಗಾನುಷ್ಠಾನಕ್ಕೂ , ಸುಖಕ್ಕೂ ಕಾರಣವಾದ ಪಶುಗಳನ್ನು ನೂರು-ಸಾವಿರ ಸಂಖ್ಯೆಯಲ್ಲಿ ನಮಗೆ ನೀಡು. ಬ್ರಾಹ್ಮಣಭೋಜನಕ್ಕೆ

**ಅಗ್ನಿರ್ ಋಷಿಂ ಯಃ ಸಹಸ್ರಾ ಸನೋತಿ । ಅಗ್ನಿರ್ದಿವಿ**

**ಹವ್ಯಮಾತತನಾಗ್ನೇರ್ಧಾಮಾನಿ ವಿಭೃತಾ ಪುರುತ್ರಾ ॥**

---

ಅಗ್ನಿಃ । ಋಷಿಮ್ । ಯಃ । ಸಹಸ್ರಾ । ಸನೋತಿ ॥ ಅಗ್ನಿಃ । ದಿವಿ । ಹವ್ಯಮ್ । ಆ । ತತಾನ । ಅಗ್ನೇಃ । ಧಾಮಾನಿ । ವಿಭೃತೇತಿ ವಿ-ಭೃತಾ । ಪುರುತ್ರೇತಿ ಪುರು-ತ್ರಾ ॥

---

**ಯಃ ಅಗ್ನಿಃ** = ಯಾವ ಅಗ್ನಿಯು; **ಋಷಿಮ್** = ಋಷಿಸಮಾನಜ್ಞಾನಿಯಾದ ಪುತ್ರನನ್ನು ; **ಸಹಸ್ರಾ ಸನೋತಿ** = ಸಾವಿರಾರು ಪ್ರಕಾರಗಳಿಂದ ಕೊಡುತ್ತಾನೆಯೋ [ಅಂತಹ] **ಅಗ್ನಿಃ** = ಅಗ್ನಿದೇವನು; **ದಿವಿ** = ದೇವಲೋಕದಲ್ಲಿ; **ಹವ್ಯಮ್** = ನಾವು ಕೊಡುವ ಹವಿಸ್ಸುಗಳನ್ನು ; **ಆ ತತಾನ** = ವಿಸ್ತರಿಸಿ ಆಯಾ ದೇವತೆಗಳಿಗೆ ಕೊಡುತ್ತಾನೆ. [ಇಂತಹ] **ಅಗ್ನೇಃ** = ಅಗ್ನಿಯ; **ಪುರುತ್ರಾ** = ಬಹುಪ್ರದೇಶಗಳಲ್ಲಿರುವ; **ಧಾಮಾನಿ** = ಸ್ಥಾನಗಳು; **ವಿಭೃತಾ** = ವಿಶೇಷವಾಗಿ ಧರಿಸಲ್ಪಟ್ಟಿವೆ.

---

ಬೇಕಾದ ಅನ್ನವನ್ನು – ಅಡ್ಡಿಗಳನ್ನು ಪರಿಹರಿಸಿ, ಯಜಮಾನನು ಲೋಕಪ್ರಸಿದ್ಧನಾಗುವಂತೆ ಅಧಿಕವಾಗಿ – ಅನುಗ್ರಹಿಸು. ಮಂತ್ರಯುಕ್ತವಾದ ಯಾಗಾದಿಗಳ ಅನುಷ್ಠಾನಕ್ಕಾಗಿ ದ್ಯುಲೋಕ–ಭೂಲೋಕಗಳೆರಡೂ ಅನುಕೂಲವಾಗುವಂತೆ ಮಾಡು. ನಮ್ಮ ಮನೆಯಲ್ಲಿ ಉಷಃಕಾಲಗಳು ಸ್ವರ್ಗದಂತೆ ಸುಖಯುಕ್ತವಾಗಿ ಪ್ರಕಾಶಮಾನವಾಗಿ ಇರುವಂತೆ ಮಾಡು.

ಅಗ್ನಿಯು ನಮಗೆ ಕಾರ್ಯಶೂರರಾದ ಮಕ್ಕಳನ್ನು ಕೊಟ್ಟು, ಅವರನ್ನು ರಕ್ಷಿಸಲು ಧನವನ್ನೂ ಕೊಡಲಿ. ಅಗ್ನಿಯು ಪುತ್ರರನ್ನು ಋಷಿಸಮಾನರನ್ನಾಗಿ ಮಾಡಲಿ. ಅಗ್ನಿಯು ನಾವು ಕೊಡುವ ಹವಿಸ್ಸುಗಳನ್ನು ದೇವಲೋಕದಲ್ಲಿ ಆಯಾ ದೇವತೆಗಳಿಗೆ ಕೊಟ್ಟು ವಿಸ್ತರಿಸತಕ್ಕವನು. ಇಂತಹ ಅಗ್ನಿಯ ಆಹವನೀಯಾದಿ ಬಹುಸ್ಥಾನಗಳು ವಿಶೇಷವಾಗಿ ಧರಿಸಲ್ಪಟ್ಟಿವೆ. [ಅಗ್ನಿಯು ಹಲವು ಸ್ಥಾನಗಳನ್ನು ಹೊಂದಿರುತ್ತಾನೆ].

## *ಮಾ ನೋ ಮರ್ಧೀ [ಮಾ (೬) ನೋ ಮರ್ಧೀರಾ...]

**ಮಾ । ನಃ । ಮರ್ಧೀಃ ।**

**ಪ್ರತೀಕದ ಮಂತ್ರಪಾಠ :**

**ಮಾ ನೋ ಮರ್ಧೀರಾ ಭರಾ ದದ್ಧಿ ತನ್ನಃ ಪ್ರದಾಶುಷೇ ದಾತವೇ ಭೂರಿ ಯತ್ತೇ ।**

**ನವ್ಯೇ ದೇಷ್ಣೇ ಶಸ್ತೇ ಅಸ್ಮಿನ್ತ ಉಕ್ಥೇ ಪ್ರ ಬ್ರವಾಮ ವಯಮಿಂದ್ರ ಸ್ತುವಂತಃ ॥**

ಮಾ । ನಃ । ಮರ್ಧೀಃ । ಆ । ಭರ । ದದ್ಧಿ । ತತ್ । ನಃ । ಪ್ರೇತಿ । ದಾಶುಷೇ । ದಾತವೇ । ಭೂರಿ । ಯತ್ । ತೇ ॥ ನವ್ಯೇ । ದೇಷ್ಣೇ । ಶಸ್ತೇ । ಅಸ್ಮಿನ್ । ತೇ । ಉಕ್ಥೇ । ಪ್ರೇತಿ । ಬ್ರವಾಮ । ವಯಮ್ । ಇಂದ್ರ । ಸ್ತುವಂತಃ ॥

| **ಮಂತ್ರ** | **ವಿನಿಯೋಗ** |
|---|---|
| **ಮಾ ನೋ..... ಸ್ತುವಂತಃ ॥** | ಈ ಯಾಗದ *ಪ್ರದಾತೃವಾದ ಇಂದ್ರನ ಹವಿಸ್ಸಿನ ಯಾಜ್ಯಾನುವಾಕ್ಯೆ [ಪ್ರತೀಕ] |

✤ **ಇಂದ್ರ** = ಇಂದ್ರದೇವನೇ ! **ಮಾ ನಃ ಮರ್ಧೀಃ** = ನಮ್ಮನ್ನು ಹಿಂಸಿಸಬೇಡ. **ದಾಶುಷೇ** = ನಿನಗೆ ಹವಿಸ್ಸುಗಳನ್ನು ಸಮರ್ಪಿಸುವ ಯಜಮಾನನಿಗೆ; **ದಾತವೇ** = ಕೊಡುವುದಕ್ಕಾಗಿ; **ಯತ್ ಭೂರಿ ತೇ ಧನವಮ್** = ನಿನ್ನ ಅಧಿಕವಾದ ಯಾವ ಧನ ವಿದೆಯೋ; **ತತ್ ನಃ ಪ್ರ ಆ ಭರ** = ಅದನ್ನು ನಮಗೆ ಹೆಚ್ಚಾಗಿ ಕೊಡು. **ದದ್ಧಿ** = ಮತ್ತೆ ಮತ್ತೆ ಕೊಡು. ಇಂದ್ರ = ಇಂದ್ರನೇ ! **ವಯಮ್** = ನಾವು; **ನವ್ಯೇ** = ಹೊಸದಾದ; **ದೇಷ್ಣೇ** = ದಾನಸಮರ್ಥವಾದ; **ಶಸ್ತೇ** = ಪ್ರಶಸ್ತವಾದ; **ತೇ ಉಕ್ಥೇ ಅಸ್ಮಿನ್** = ಋಗ್ವೇದೀಯ ಶಸ್ತ್ರಸಮಾನವಾದ ನಿನ್ನ ಈ ಸ್ತೋತ್ರದಲ್ಲಿ; **ಸ್ತುವಂತಃ** = ನಿನ್ನನ್ನು ಹೊಗಳುತ್ತಾ; **ಪ್ರಬ್ರವಾಮ** = ನಿನ್ನಲ್ಲಿ ನಮ್ಮ ಕಾಮನೆಗಳನ್ನು ಹೇಳಿಕೊಳ್ಳುತ್ತೇವೆ.

* **ತೈ.ಸಂ. 1.7.13.**

* ಈ ಪ್ರದಾತ್ರಿಂದ್ರೇಷ್ಟಿಗೆ **'ಪ್ರದಾತಾರಂ........ ಸವ್ಯಾತ್' 'ಪ್ರದಾತಾ..........ಶಂಯೋಃ'** ಎಂಬ ಯಾಜ್ಯಾ-ಪುರೋನುವಾಕ್ಯೆಯನ್ನು ವಿಕಲ್ಪವಾಗಿ ಸೂತ್ರಗಳಲ್ಲಿ ಹೇಳಿರುತ್ತಾರೆ.

# *ಆ ತೂ ಭರ ||

ಏತಿ | ತು | ಭರ ||

ಆ ತೂ ಭರ ಮಾಕಿರೇತತ್ಪರಿಷ್ಠಾದ್ವಿದ್ಮಾ ಹಿ ತ್ವಾ ವಸುಪತಿಂ ವಸೂನಾಮ್ |
ಇಂದ್ರ ಯತ್ತೇ ಮಾಹಿನಂ ದತ್ರಮಸ್ತ್ಯಸ್ಮಭ್ಯಂ ತದ್ಧರ್ಯಶ್ವ ಪ್ರಯಂಧಿ ||

ಏತಿ | ತು | ಭರ | ಮಾಕಿಃ | ಏತತ್ | ಪರೀತಿ | ಸ್ಥಾತ್ | ವಿದ್ಮ | ಹಿ | ತ್ವಾ | ವಸುಪತಿಮಿತಿ ವಸು– ಪತಿಮ್ | ವಸೂನಾಮ್ || ಇಂದ್ರ | ಯತ್ | ತೇ | ಮಾಹಿನಮ್ | ದತ್ರಮ್ | ಅಸ್ತಿ | ಅಸ್ಮಭ್ಯಮಿತ್ಯಸ್ಮ–ಭ್ಯಮ್ | ತತ್ | ಹರ್ಯಶ್ವೇತಿ ಹರಿ–ಅಶ್ವ | ಪ್ರೇತಿ | ಯಂಧಿ ||

| ಮಂತ್ರ | ವಿನಿಯೋಗ |
|---|---|
| ಆ ತೂ ಭರ....... ಯಂಧಿ \|\| | ಇದೂ ಸಹ ಯಾಜ್ಯಾನುವಾಕ್ಯೆ [ಪ್ರತೀಕ] |

❖ **ಹರ್ಯಶ್ವ** = ಹಸಿರು ಬಣ್ಣದ ಕುದುರೆಗಳುಳ್ಳ ಇಂದ್ರದೇವನೇ ! **ಆ ತು ಭರ** = ನಮಗೆ ಪಶ್ವಾದಿಧನವನ್ನು ಕೊಡು. **ಏತತ್ ಮಾಕಿಃ ಪರಿಷ್ಠಾತ್** = ಇದು ನಮ್ಮನ್ನು ಬಿಟ್ಟು ಬೇರೆಯ ಕಡೆ ಇಲ್ಲದಿರಲಿ. **ತ್ವಾ** = ನಿನ್ನನ್ನು ; **ವಸೂನಾಮ್ ವಸುಪತಿಮ್ ವಿದ್ಮ ಹಿ** = ನಿನ್ನನ್ನು ಶ್ರೀಮಂತರಲ್ಲಿಯೂ ಶ್ರೀಮಂತನೆಂದು ತಿಳಿದಿದ್ದೇವಷ್ಟೆ. **ಇಂದ್ರ** = ಇಂದ್ರನೇ ! **ತೇ** = ನಿನ್ನ ; **ಯತ್** = ಯಾವ; **ಮಾಹಿನಮ್** = ಮಹತ್ತಾದ; **ದತ್ರಮ್ ಅಸ್ತಿ** = ಕೊಡಲು ಯೋಗ್ಯವಾದ ಹಣವುಂಟೋ; **ತತ್ ಅಸ್ಮಭ್ಯಮ್ ಪ್ರಯಂಧಿ** = ಅದನ್ನು ನಮಗೆ ಪ್ರದಾನ ಮಾಡು.

ಇಂದ್ರದೇವನೇ ! ನೀನು ನಮ್ಮನ್ನು ಕೊಲ್ಲಬೇಡ. ನಿನಗೆ ಹವ್ಯವನ್ನು ಸಮರ್ಪಿಸುವ ಯಜಮಾನನಿಗೆ ಕೊಡಲು ನಿನ್ನಲ್ಲಿ ಅಧಿಕವಾದ ಯಾವ ಧನವಿದೆಯೋ ಅದನ್ನು ನಮಗೆ ತಂದುಕೊಡು. ನಾವು ನಿನ್ನನ್ನು ಹೊಸಶಸ್ತ್ರಗಳಿಂದ *ಸ್ತುತಿಸುತ್ತಾ ನಮ್ಮ ಇಷ್ಟಾರ್ಥಗಳನ್ನು ಅರಿಕೆ ಮಾಡಿಕೊಳ್ಳುತ್ತೇವೆ.

ಹರ್ಯಶ್ವನಾದ ಇಂದ್ರದೇವನೇ ! ನಮಗೆ ಪಶ್ವಾದಿಧನವನ್ನು ಕೊಡು. ಇದು ಬೇರೆ ಕಡೆಗೆ ಹೋಗದಿರಲಿ. ನೀನು ಶ್ರೀಮಂತರಲ್ಲಿಯೂ ಶ್ರೀಮಂತನೆಂದು ತಿಳಿದಿದ್ದೇವೆ.

* ತೈ.ಸಂ. 1.7.13.

* ಶಸ್ತ್ರ = ಋಗ್ವೇದದಲ್ಲಿನ ಸ್ತೋತ್ರ

**ಘೃತಂ ನ ಪೂತಂ ತನೂರರೇಪಾಃ ಶುಚಿ ಹಿರಣ್ಯಮ್ ।**

**ತತ್ತೇ ರುಕ್ಮೋ ನ ರೋಚತ ಸ್ವಧಾವಃ ॥ ಉಭೇ**

**ಸುಶ್ಚಂದ್ರ ಸರ್ಪಿಷೋ ದರ್ವೀ ಶ್ರೀಣೀಷ ಆಸನಿ ॥**

---

**ಘೃತಮ್ ।** ನ । ಪೂತಮ್ । ತನೂಃ । ಅರೇಪಾಃ । ಶುಚಿ । ಹಿರಣ್ಯಮ್ ॥ ತತ್ । ತೇ । ರುಕ್ಮಃ । ನ । ರೋಚತ । ಸ್ವಧಾವ ಇತಿ ಸ್ವಧಾ–ವಃ ॥ **ಉಭೇ ಇತಿ ।** ಸುಶ್ಚಂದ್ರೇತಿ ಸು–ಚಂದ್ರ । ಸರ್ಪಿಷಃ । ದರ್ವೀ ಇತಿ । ಶ್ರೀಣೀಷೇ । ಆಸನಿ ॥

---

| ಮಂತ್ರ | ವಿನಿಯೋಗ |
|---|---|
| ಘೃತಂ ನ........ ಸ್ವಧಾವಃ ॥ | ಪಶುಕಾಮನಿಗೆ ವಿಹಿತವಾದ ಪ್ರಾಜಾಪತ್ಯ ಹವಿರ್ಯಾಗದ ಪುರೋನುವಾಕ್ಯೆ. |
| ಉಭೇ .......... ಭರ ॥ | ಮೇಲಿನ ಯಾಗದ ಯಾಜ್ಯಾನುವಾಕ್ಯೆ. |

---

❖ **ಸ್ವಧಾವಃ** = ಅನ್ನವಂತನಾದ ಪ್ರಜಾಪತಿಯೇ ! **ಪೂತಮ್ ಘೃತಮ್ ನ** = ಪರಿಶುದ್ಧವಾದ ತುಪ್ಪದಂತೆ; **ಅರೇಪಾಃ** = ಪಾಪರಹಿತನಾದ; **ತೇ** = ನಿನ್ನ; **ತನೂಃ** = ಶರೀರವು [ಶೋಭಿಸುತ್ತದೆ]. **ಶುಚಿ ಹಿರಣ್ಯಮ್** ನ = ಚೊಕ್ಕ ಚಿನ್ನದಂತೆ ಪ್ರಕಾಶಮಾನವಾಗಿದೆ; **ತತ್** = ಆ [ನಿನ್ನ] ಶರೀರವು; **ರುಕ್ಮಃ ನ** = ಆಭರಣದಂತೆ; **ರೋಚತ** = ಬೆಳಗುತ್ತದೆ. ❖ **ಸುಶ್ಚಂದ್ರ** = ಚಂದ್ರನಂತೆ ಆಹ್ಲಾದಕರನಾದ ಪ್ರಜಾಪತಿದೇವನೇ ! ನೀನು; **ಆಸನಿ** = ಬಾಯಿಯಲ್ಲಿ; **ಸರ್ಪಿಷಃ** = ತುಪ್ಪದ ಸಂಬಂಧವಿರುವ; **ಉಭೇ ದರ್ವೀ** = ಎರಡು ಹೋಮಸಾಧನವಾದ ದರ್ವಿಗಳನ್ನು [ದರ್ವಿಗಳಂತಿರುವ ದವಡೆ] **ಶ್ರೀಣೀಷೇ** = ಸೇವಿಸುತ್ತಿದ್ದೀಯೆ.

---

ಸೇವಿಸುವವರಿಗೆ ಕೊಡಲು ಯೋಗ್ಯವಾದ ಅಧಿಕವಾದ ಯಾರ ಧನವು ನಿನ್ನಲ್ಲಿ ಇದೆಯೋ ಅದನ್ನು ನಮಗೆ ಪ್ರದಾನ ಮಾಡು.

**'ದಧಿ ಮಧು ಘೃತಮಾಪೋ ಧಾನಾ ಭವಂತಿ'** ಎಂದು ವಿಹಿತವಾದ ಪಂಚಹವಿಷ್ಕವಾದ ಪ್ರಾಜಾಪತ್ಯೇಷ್ಟಿಯ ಪುರೋನುವಾಕ್ಯೆಯಿದು.

ಅನ್ನವಂತನಾದ ಪ್ರಜಾಪತಿಯೇ ! ನಿನ್ನ ಶರೀರವು ಸಂಸ್ಕೃತವಾದ ಘೃತದಂತೆ ಪಾಪರಹಿತವಾಗಿದೆ. ಚೊಕ್ಕ ಚಿನ್ನದಂತೆ ಶುದ್ಧವಾಗಿದೆ. ಮೆರಗು ಕೊಟ್ಟಿರುವ ಆಭರಣ

**ಉತೋ ನ ಉತ್ಪುಪೂರ್ಯಾ ಉಕ್ಥೇಷು ಶವಸಸ್ಪತ**

**ಇಷಗ್ಂ ಸ್ತೋತೃಭ್ಯ ಆ ಭರ ॥ ವಾಯೋ ಶತಗ್ಂ**

**ಹರೀಣಾಂ ಯುವಸ್ವ ಪೋಷ್ಯಾಣಾಮ್ ।**

---

ಉತೋ ಇತಿ । ನಃ । ಉದಿತಿ । ಪುಪೂರ್ಯಾಃ । ಉಕ್ಥೇಷು । ಶವಸಃ । ಪತೇ । ಇಷಮ್ । ಸ್ತೋತೃಭ್ಯ ಇತಿ ಸ್ತೋತೃ–ಭ್ಯಃ । ಏತಿ । ಭರ ॥ **ವಾಯೋ ಇತಿ** । ಶತಮ್ । ಹರೀಣಾಮ್ । ಯುವಸ್ವ । ಪೋಷ್ಯಾಣಾಮ್ ॥

---

| **ಮಂತ್ರ** | **ವಿನಿಯೋಗ** |
|---|---|
| **ವಾಯೋ...... ಪಾಜಸಾ ॥** | *ವಾಯವ್ಯಯಾಗದ ಪುರೋನುವಾಕ್ಯೆ. |

---

**ಶವಸಃ ಪತೇ** = ಬಲಕ್ಕೆ ಅಧಿಪತಿಯಾದ ಪ್ರಜಾಪತಿಯೇ ! **ಉತೋ** = ಮತ್ತೆ; **ನಃ** = ನಮ್ಮನ್ನು ; **ಉಕ್ಥೇಷು** = ಋಗ್ವೇದೀಯಶಸ್ತ್ರಗಳಿಂದ ಕೂಡಿದ ಯಜ್ಞಗಳಲ್ಲಿ; **ಉತ್ ಪುಪೂರ್ಯಾಃ** = ಹೆಚ್ಚಾಗಿ ಫಲಗಳಿಂದ ತುಂಬಿಸು. **ಸ್ತೋತೃಭ್ಯಃ** = ನಿನ್ನನ್ನು ಸ್ತುತಿಸುವವರಿಗೆ; **ಇಷಮ್** = ಅನ್ನವನ್ನು ; **ಆ ಭರ** = ತಂದುಕೊಡು; **✢ ವಾಯೋ** = ವಾಯುದೇವನೇ ! **ಪೋಷ್ಯಾಣಾಮ್ ಹರೀಣಾಮ್** = ಪುಷ್ಟಿಯುಕ್ತವಾದ ಕುದುರೆಗಳ; **ಶತಮ್** = ನೂರನ್ನು ;

---

ದಂತೆ ಹೊಳೆಯುತ್ತದೆ. ಇಂತಹ ಶರೀರವುಳ್ಳ ನೀನು ನಮಗೆ ಅನ್ನವನ್ನೂ , ಅನ್ನಸಾಧನವಾದ ಪಶುಗಳನ್ನೂ ಕೊಡು.

ಚಂದ್ರನಂತೆ ಆಹ್ಲಾದಕರನಾದ ಪ್ರಜಾಪತಿಯೇ ! ಯಜ್ಞದಲ್ಲಿ ಸಮರ್ಪಿಸಿದ ಆಜ್ಯ ಹವಿಸ್ಸಿನಿಂದ ಪೂರ್ಣವಾಗಿ ದರ್ವಿಗಳಂತಿರುವ ದವಡೆಗಳನ್ನು ನೀನು ಬಾಯಿಯಲ್ಲಿ ಹೊಂದಿರುತ್ತೀಯೆ. ಘೃತಪೂರ್ಣವಾದ ದವಡೆಗಳಿಂದ ಕೂಡಿರುವೆ. ನೀನು ಬಲಕ್ಕೆ ಒಡೆಯನು. ನಿನ್ನನ್ನು ಯಾಗಗಳಿಂದ ಆರಾಧಿಸುತ್ತಿರುವ ನಿನ್ನ ಸ್ತೋತೃಗಳಿಗೆ ನೀನು ಸಮೃದ್ಧವಾದ ಅನ್ನವನ್ನು ಕೊಡು.

---

* **'ವಾಯುವ್ಯಾಂ ಯುವಾಗೂಂ ನಿರ್ವಪೇತ್'** ಮೊದಲಾದ ವಾಯವ್ಯಯಾಗದಲ್ಲಿ ಲಿಂಗವಿನಿಯುಕ್ತವಾದ ಪುರೋನುವಾಕ್ಯೆ.

**ಉತ ವಾ ತೇ ಸಹಸ್ರಿಣೋ ರಥ ಆಯಾತು**

**ಪಾಜಸಾ ॥ ಪ್ರಯಾಭಿ [ಯಾಭಿಃ (೭) ಯಾಸಿ]**

**ರ್ಯಾಸಿ ದಾಶ್ವಾಗ್ಂಸಮಚ್ಛಾ ನಿಯುದ್ಭಿರ್ವಾ**

**ಯವಿಷ್ಟಯೇ ದುರೋಣೇ ।**

---

ಉತ । ವಾ । ತೇ । ಸಹಸ್ರಿಣಃ । ರಥಃ । ಏತಿ । ಯಾತು । ಪಾಜಸಾ ॥ **ಪ್ರೇತಿ** । ಯಾಭಿಃ । ಯಾಸಿ । ದಾಶ್ವಾಗ್ಂಸಮ್ । ಅಚ್ಛ । ನಿಯುದ್ಭಿರಿತಿ ನಿಯುತ್–ಭಿಃ । ವಾಯೋ । ಇಷ್ಟಯೇ । ದುರೋಣ ಇತಿ ದುಃ–ಓನೇ ॥

---

| ಮಂತ್ರ | ವಿನಿಯೋಗ |
|---|---|
| **ಪ್ರಯಾಭಿಃ ...... ರಾಧಃ ॥** | ವಾಯವ್ಯಯಾಗದ ಯಾಜ್ಯಾನುವಾಕ್ಯೆ. |

---

**ಉತ ವಾ** = ಅಥವಾ; **ಸಹಸ್ರಿಣಃ** = ಸಾವಿರ ಸಂಖ್ಯೆಯ ಕುದುರೆಗಳನ್ನು ; **ಯುವಸ್ವ** = ರಥದಲ್ಲಿಯೋಜಿಸು. **ತೇ** = ಆ ನಿನ್ನ ; **ರಥಃ** = ರಥವು; **ಪಾಜಸಾ** = ಬಲದಿಂದ/ಶೀಘ್ರ ವಾಗಿ; **ಆಯಾತು** = ನಮ್ಮ ಯಾಗಭೂಮಿಗೆ ಬರಲಿ. ✤ **ವಾಯೋ** = ವಾಯು ದೇವನೇ ! **ಯಾಭಿಃ ನಿಯುದ್ಭಿಃ** = ಯಾವ ನಿಯುತ್ತೆಂಬ ಹೆಸರುಳ್ಳ ಕುದುರೆಗಳಿಂದ; **ಇಷ್ಟಯೇ** = ಯಾಗಕ್ಕೋಸ್ಕರ; **ದುರೋಣೇ** = ಯಾಗಶಾಲೆಯಲ್ಲಿ; **ದಾಶ್ವಾಗ್ಂಸಮ್** = ಹವಿಸ್ಸನ್ನು ಕೊಡುವ ಯಜಮಾನನನ್ನು; **ಅಚ್ಛ ಪ್ರಯಾಸಿ** = ಹೊಂದಲು ಪ್ರಯಾಣ ಮಾಡುತ್ತೀಯೋ; [ಆ ಕುದುರೆಗಳು ನಮಗೆ ಅನುಕೂಲವಾಗಿರಲಿ].

---

ವಾಯುದೇವನೇ ! ಪುಷ್ಟವಾದ ನೂರು ಕುದುರೆಗಳನ್ನು ನಿನ್ನ ರಥಕ್ಕೆ ಜೋಡಿಸು ಅಥವಾ ಸಾವಿರ ಕುದುರೆಗಳು ರಥಕ್ಕೆ ಕಟ್ಟಲ್ಪಡಲಿ. ಇಂತಹ ರಥದಲ್ಲಿ ಕುಳಿತು ವೇಗವಾಗಿ ನೀನು ಹವಿಸ್ಸನ್ನು ಸ್ವೀಕರಿಸಲು ನಮ್ಮ ಯಾಗಭೂಮಿಗೆ ಆಗಮಿಸು.

ವಾಯುದೇವನೇ ! ನೀನು ನಿಯುತ್ತೆಂಬ ಹೆಸರುಳ್ಳ ಕುದುರೆಗಳನ್ನು ಹೂಡಿರುವ ರಥದಲ್ಲಿ ಕುಳಿತು ಬರುತ್ತೀಯೆ. ಆ ಕುದುರೆಗಳು ನಮಗೆ ಅನುಕೂಲವಾಗಿ ನಮ್ಮ

ನಿ ನೋ ರಯಿಗ್ಂ ಸುಭೋಜಸಂ ಯುವೇಹ ನಿ ವೀರ

ವದ್ಗವ್ಯಮಶ್ವಿಯಂ ಚ ರಾಧಃ ॥ ರೇವತೀರ್ನಸ್ಸಧ

ಮಾದ ಇಂದ್ರೇ ಸಂತು ತುವಿವಾಜಾಃ । ಕ್ಷುಮಂತೋ

ಯಾಭಿರ್ಮದೇಮ ॥

---

ನೀತಿ । ನಃ । ರಯಿಮ್ । ಸುಭೋಜಸಮಿತಿ ಸು–ಭೋಜಸಮ್ । ಯುವ । ಇಹ । ನೀತಿ । ವೀರವದಿತಿ ವೀರ–ವತ್ । ಗವ್ಯಮ್ । ಅಶ್ವಿಯಮ್ । ಚ । ರಾಧಃ ॥ **ರೇವತೀಃ** । ನಃ । ಸಧಮಾದ ಇತಿ ಸಧ–ಮಾದಃ । ಇಂದ್ರೇ । ಸಂತು । ತುವಿವಾಜಾ ಇತಿ ತುವಿ–ವಾಜಾಃ ॥ ಕ್ಷುಮಂತಃ । ಯಾಭಿಃ । ಮದೇಮ ॥

---

| ಮಂತ್ರ | ವಿನಿಯೋಗ |
|---|---|
| **ರೇವತೀಃ ....... ಮದೇಮ ॥** | ಇಂದ್ರದೇವತಾಕವಾದ ಯಾಗದಲ್ಲಿ ವಿನಿಯೋಗಿಸಬಹುದಾದ ಯಾಜ್ಯಾನುವಾಕ್ಯೆ. |

---

[ನೀನು] **ನಃ** = ನಮಗೆ; **ಸುಭೋಜಸಮ್ ರಯಿಮ್** = ಒಳ್ಳೆಯ ಭೋಜನಕ್ಕೆ ಸಾಕಾಗುವಷ್ಟು ಧನವನ್ನು ; ನಿ **ಯುವ** = ಕೊಡು; **ಇಹ** = ಇಲ್ಲಿ / ಈಗ; **ವೀರವತ್** = ಪುತ್ರಯುಕ್ತವಾದ; **ಗವ್ಯಮ್** = ಪಶು/ಗೋಸಂಬಂಧಿಯಾದ; **ಚ** = ಮತ್ತು; **ಅಶ್ವಿಯಮ್** = ಕುದುರೆಗಳಿಂದ ಕೂಡಿದ, **ರಾಧಃ** = ಸಂಪತ್ತನ್ನು ; ನಿ ಯುವ = ನಮ್ಮಲ್ಲಿ ಕೂಡಿಕೊಂಡಿರುವಂತೆ ಮಾಡು. ✦ **ಯಾಭಿಃ** = ಯಾವ ಮಂತ್ರಯುಕ್ತವಾದ ನೀರುಗಳಿಂದ ಶುದ್ಧರಾಗಿ; **ಕ್ಷುಮಂತಃ** = ಇಂದ್ರನನ್ನು ಸ್ತುತಿಸುತ್ತಾ; **ಮದೇಮ** = ಸಂತೋಷಿಸುತ್ತೇವೆಯೋ; [ಅಂತಹ] **ರೇವತೀಃ** = ಧನಯುಕ್ತವಾದ; **ನಃ ಸಧಮಾದಃ** = ನಮ್ಮೊಡನೆ ಸಂತೋಷದಿಂದ ಕೂಡಿಕೊಂಡಿರುವ; **ತುವಿವಾಜಾಃ** = ಅನ್ನಸಮೃದ್ಧಿಯುಳ್ಳ ನೀರುಗಳು; **ಇಂದ್ರೇ ಸಂತು** = ನಮ್ಮ ಒಡೆಯನಾದ ಇಂದ್ರನಲ್ಲಿ ನಮ್ಮ ಸುಖಕ್ಕಾಗಿ ಕೂಡಿರಲಿ.

---

ಯಾಗಭೂಮಿಗೆ ನಿನ್ನನ್ನು ಕರೆತರಲಿ. ನೀನು ನಮಗೆ ಒಳ್ಳೆಯ ಭೋಜನಕ್ಕೆ ಬೇಕಾದ

**ರೇವಾಗ್ಂ ಇದ್ರೇವತ ಸ್ತೋ ತಾ ಸ್ಯಾತ್ತ್ವಾವತೋ ಮಘೋನಃ। ಪ್ರೇದು ಹರಿವಃ ಶ್ರುತಸ್ಯ ॥೭೧–12॥**

---

**[ದಧಾನೋ ಜಿನೋಷಿ ದೇಭುಃ ಪ್ರ ಹವ್ಯಂ ಬಭೂಥ ಮಾ ಯಾಭಿಶ್ಚತ್ವಾರಿಗ್ಂ ಶಚ್ಚ ।]**

---

**ರೇವಾನ್। ಇತ್। ರೇವತಃ। ಸ್ತೋತಾ। ಸ್ಯಾತ್। ತ್ವಾವತ ಇತಿ ತ್ವ–ವತಃ। ಮಘೋನಃ॥ ಪ್ರೇತಿ। ಇತ್। ಉ। ಹರಿವ ಇತಿ ಹರಿ–ವಃ। ಶ್ರುತಸ್ಯ ॥೧೨॥**

---

| ಮಂತ್ರ | ವಿನಿಯೋಗ |
|---|---|
| ರೇವಾಗ್ಂ .... ಶ್ರುತಸ್ಯ ॥ | ಹಿಂದಿನ ಐಂದ್ರಯಾಗದ ಯಾಜ್ಯಾನುವಾಕ್ಯೆ. |

---

✤ **ಹರಿವಃ** = ಇಂದ್ರನೇ ! **ರೇವಾನ್ ಇತ್** = ಐಶ್ವರ್ಯವಂತನೇ ಆದ ಈ ಯಜಮಾನನು; **ರೇವತಃ** = ಧನವಂತನಾದ; **ತ್ವಾವತಃ** = ನಿನ್ನಂತಹ/ಅಸದೃಶನಾದ; **ಮಘೋನಃ** = ಅನ್ನರೂಪಧನವುಳ್ಳವನಾದ; **ಶ್ರುತಸ್ಯ** = ದೇವತೆಗಳಲ್ಲಿ ಪ್ರಸಿದ್ಧನಾದ ದೇವನ/ನಿನ್ನ ; **ಪ್ರ ಇತ್ ಉ ಸ್ತೋತಾ ಸ್ಯಾತ್** = ಅತ್ಯಂತಸ್ತಾವಕನೇ ಆಗಲಿ.

---

ಧನವನ್ನು ಅನುಗ್ರಹಿಸು. ಒಳ್ಳೆಯ ಮಕ್ಕಳನ್ನೂ , ಗೋವುಗಳಿಂದಲೂ ಕುದುರೆಗಳಿಂದಲೂ ಕೂಡಿರುವ ಸರ್ವ ಸಂಪತ್ತನ್ನೂ ನಮಗೆ ಕೊಡು.

ನೀರುಗಳು ಮಂತ್ರಪೂತವಾದವುಗಳು. ಆ ನೀರಿನಿಂದ ಶುದ್ಧರಾಗಿ ನಾವು ಇಂದ್ರನನ್ನು ಸ್ತುತಿಸುತ್ತಾ ಸಂತೋಷಿಸುತ್ತೇವೆ. ಆ ಜಲದೇವತೆಗಳು ಐಶ್ವರ್ಯವನ್ನೂ , ಧನವನ್ನೂ ಕೊಡುತ್ತಾ ನಮ್ಮೊಡನೆ ಕೂಡಿಕೊಂಡಿರಲಿ. ಅನ್ನಸಮೃದ್ಧಿಯುಳ್ಳ ನೀರುಗಳು ನಮಗೆ ಇಂದ್ರನು ಒಲಿಯುವಂತೆ ಮಾಡಲಿ.

ಹೇ ಇಂದ್ರದೇವನೇ ! ನೀನು ಧನವಂತನು. ಅನ್ನಪ್ರದನು. ನಿನಗೆ ನೀನೇ ಸಮಾನನು. ನಿನ್ನಂತಹವನು ಬೇರೊಬ್ಬನಿಲ್ಲ. ನೀನು ದೇವತೆಗಳಲ್ಲಿ, ತ್ರಿಲೋಕಗಳಲ್ಲಿ

ಪ್ರಸಿದ್ಧನು. ಹವಿಸ್ಸಿನ ರೂಪವಾದ ಧನವನ್ನು ಹೊಂದಿರುವ ಯಜಮಾನನು ನಿನ್ನನ್ನು ಹೆಚ್ಚಾಗಿ ಸ್ತುತಿಸಲಿ. ನಿನ್ನ ಅನುಗ್ರಹದಿಂದ ನಿನ್ನಂತಹವನೇ ಆಗಲಿ. ಅವನು ಧನವನ್ನೂ, ಅನ್ನವನ್ನೂ ಲೋಕಪ್ರಸಿದ್ಧಿಯನ್ನೂ ನಿನ್ನ ಅನುಗ್ರಹದಿಂದ ಪಡೆಯಲಿ.

* * *

ಪ್ರಜಾಪತಿಸ್ತ್ವಾ ಸೃಷ್ಟ್ವಾ ಅಗ್ನಯೇ ಪಥಿಕೃತೇಽಗ್ನಯೇ ಕಾಮಾಯಾಗ್ನಯೇಽನ್ನವತೇ ವೈಶ್ವಾನರಮಾದಿತ್ಯಂ ಚರುಮೈಂದ್ರಂ ಚರುಮಿಂದ್ರಾಯಾನ್ವೃಜವ ಆಗ್ನಾವೈಷ್ಣವಮಸೌ ಸೋಮಾರೌದ್ರಮೈಂದ್ರಮೇಕಾದಶಕಪಾಲಗ್ಂ ಹಿರಣ್ಯಗರ್ಭೋ ದ್ವಾದಶ ||12||

ಪ್ರಜಾಪತಿರಗ್ನಯೇ ಕಾಮಾಯಾಭಿ ಸಂಭವತೋ ಯೋ ವಿದ್ವಿಷಾಣಯೋರಿಂದ್ರೇ ಸನ್ನಹ್ಯೇದಾಗ್ನಾವೈಷ್ಣವಮುಪರಿಷ್ಟಾದ್ವ್ಯಾಸಿ ದಾಶ್ವಾಗ್ಂಸಮೇಕಸಪ್ತತಿಃ ||71||

ಪ್ರಜಾಪತಿಃ ಪ್ರೇದು ಹರಿವಃ ಶ್ರುತಸ್ಯ ||

ಹರಿಃ ಓಂ ||

ಶ್ರೀಕೃಷ್ಣಾರ್ಪಣಮಸ್ತು ||

ಇತಿ ದ್ವಿತೀಯಕಾಂಡೇ ದ್ವಿತೀಯಃ ಪ್ರಶ್ನಃ ||

# ಅನುವಾಕದ ವಿಶೇಷ ವಿಷಯಗಳು

## ಅ) ವಿನಿಯೋಗ ಸಂಗ್ರಹ

**[1]ಹಿರಣ್ಯಾಪ[2] ಪ್ರಜಾ[3] ಸೇತಿ[4] ಚತಸ್ರಃ ಶತಕೃಷ್ಣಲೇ ।**
**ಉದು[5] ಚಿತ್ರಂ[6] ಚರೌ ಸೌರ್ಯೇ[7] ಸ[8]ಪ್ರೇತ್ಯಾಗ್ನೇಯಯಾಗಕೇ ॥**
**[9–10]ಹಿರ ಸಾವಿತ್ರಕೇ ತದ್ವತ್ [11–12]ಬಡಿತ್ಥಾ ಭೂಮಿಗೇ ಚರೌ ।**
**ಸೋಮೇಂದ್ರ [13–16]ಋದೂ ಚತ್ವಾರಃ ಶಿಪಿವಿಷ್ಟೇ [17–19]ವಷಟ್ತ್ರಯಮ್ ।**
**[20–22]ಅಗ್ನೇ ತಿಸ್ರೋ ದಾತೃಯುಕ್ತೇ [23]ಮಾ ನ [24]ಆ ತೂ ಪ್ರದಾತೃಕೇ ॥**
**[25–26]ಘೃತಂ ದಧ್ಯಾದಿಗಣಕೇ ವಾಯೋ [27–28]ವಾಯವ್ಯಕೇ ಕ್ವಚಿತ್ ।**
**ಕ್ವಾಪ್ಯೈಂದ್ರೇ ರೇವತೀ [29–30]ರ್ಲಿಂಗಾದಿತಿ ತ್ರಿಂಶದುದೀರಿತಾಃ ॥**

**ಅನುವಾಕದಲ್ಲಿರುವ ಮಂತ್ರಸಂಖ್ಯೆ – 30**

## ಆ) ಮೀಮಾಂಸಾ

### 1) ಕೃಷ್ಣಲಚರುವಿಗೆ ಯೋಗ್ಯವಾದ ಧರ್ಮ ಯಾವುದು ?[ಜೈ.ಸೂ. : 8.1.]

ಕೃಷ್ಣಲಚರುವಿನಲ್ಲಿ ಆಜ್ಯದ್ರವ್ಯಕವಾದ ಉಪಾಂಶುಯಾಜದ ಧರ್ಮಗಳೇ ? ಅಥವಾ ಓಷಧಿದ್ರವ್ಯಕವಾದ ಆಗ್ನೇಯದ ಧರ್ಮಗಳೇ ? ಇದು ಇಲ್ಲಿನ **ಸಂಶಯ.**

ಇಲ್ಲಿಯ **ಪೂರ್ವಪಕ್ಷ** ಹೀಗಿದೆ : ಕೃಷ್ಣಲವೆಂದರೆ ಚಿನ್ನದ ಬತ್ತ. ಆಜ್ಯ ಮತ್ತು ಹಿರಣ್ಯಗಳೆರಡೂ ತೇಜೋದ್ರವ್ಯಗಳು. ಹೀಗೆ ತೇಜಸ್ವಿತ್ವಸಾಮ್ಯವಿರುವುದರಿಂದ ಕೃಷ್ಣಲ ಚರುವಿಗೆ ಆಜ್ಯಯಾಗಧರ್ಮಗಳೇ ಇರಬೇಕು.

ಕೃಷ್ಣಲದಲ್ಲಿರುವ ಕಾಠಿನ್ಯ, ಅವಿರಲರೂಪತ್ವಾದಿಧರ್ಮಗಳು ಆಜ್ಯದಲ್ಲಿಲ್ಲ. **'ಪ್ರಾಜಾಪತ್ಯಂ ಘೃತೇ ಚರುಂ ನಿರ್ವಪೇತ್ ಶತಕೃಷ್ಣಲಮ್'** ಎಂಬುದಾಗಿ ಓಷಧಿ ದ್ರವ್ಯಗಳಿಗೆ ಹೇಳುವ ಚರುಶಬ್ದವೂ ಹೇಳಲ್ಪಟ್ಟಿದೆ. ಹೀಗಾಗಿ ಓಷಧಿಯಾದ ವ್ರೀಹಿಯ ಯಾಗಧರ್ಮವನ್ನೇ ಕೃಷ್ಣಲಚರುವಿಗೂ ಮಾಡಬೇಕು. ಇದು ಇಲ್ಲಿನ **ಸಿದ್ಧಾಂತ.**

### *ಪ್ರಾಜಾಪತ್ಯ ಕೃಷ್ಣಲಚರುವಿನಲ್ಲಿ ಅವಘಾತವಿದೆಯೇ ?

**[ಜೈ.ಸೂ. : 10.1.]**

ಪ್ರಾಜಾಪತ್ಯ ಕೃಷ್ಣಲಚರುವಿಗಾಗಿ ಕೃಷ್ಣಲಗಳಿಗೆ ಅವಘಾತವಿದೆಯೇ ? ಇದು **ಸಂಶಯ.**

ಕೃಷ್ಣಲವೆಂದರೆ ಚಿನ್ನದ ಬತ್ತ. ಪ್ರಕೃತಿಯಾಗದಲ್ಲಿ ಬತ್ತದ ಹೊಟ್ಟನ್ನು ತೆಗೆಯಲು ಅವಘಾತವಿದೆ. **'ಪ್ರಕೃತಿವತ್ ವಿಕೃತಿಃ ಕರ್ತವ್ಯಾ'** ಎಂಬ ಅತಿದೇಶದಂತೆ

ಕೃಷ್ಣಲಗಳಿಗೂ ಅವಘಾತವು ಪ್ರಾಪ್ತವಾಗುತ್ತದೆ. ಈ ಅವಘಾತದಿಂದ ಹೊಟ್ಟನ್ನು ತೆಗೆಯಲಾಗದಿದ್ದರೂ – ಪಾಕವನ್ನು ಮಾಡಿದರೆ ಯಾವ ದೃಷ್ಟಾರ್ಥವು ಇಲ್ಲದಿದ್ದರೂ ಅದೃಷ್ಟಾರ್ಥವಾಗಿ ಕೃಷ್ಣಲಪಾಕವನ್ನು ಮಾಡಿದಂತೆ – ಅದೃಷ್ಟಾರ್ಥವಾಗಿ ಅವಘಾತವನ್ನು ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

**'ಘೃತೇ ಶ್ರಪಯತಿ'** ಎಂಬ ವಿಶೇಷವಚನದಿಂದ ಪಾಕವು ವಿಹಿತವಾಗಿದೆ. ಆದುದರಿಂದ ದೃಷ್ಟಪ್ರಯೋಜನವಿಲ್ಲದಿದ್ದರೂ ಅದೃಷ್ಟಾರ್ಥವಾಗಿ ಪಾಕವನ್ನು ಮಾಡಬೇಕು. ಅವಘಾತವಿಷಯದಲ್ಲಿ ವಿಶೇಷವಿಧಿಯಿಲ್ಲದಿರುವುದರಿಂದ ಅದನ್ನು ಮಾಡಬೇಕಾಗಿಲ್ಲ. ಇದು ಇಲ್ಲಿನ **ಸಿದ್ಧಾಂತ.**

***ಪಾಕವು ಸಪ್ರಯೋಜನವೇ ?** **[ಜ್ಯೈ.ಸೂ. 10.2.1]**

ಕೃಷ್ಣಲಗಳಿಗೆ ಪಾಕವು ಶ್ರುತಿವಿಹಿತವಾದರೂ ಬೇಯುವಿಕೆಯೆಂಬ ಪ್ರಯೋಜನವು ಇಲ್ಲದಿರುವುದರಿಂದ ಪಾಕವನ್ನೂ ಮಾಡಬೇಕಾಗಿಲ್ಲ. ಇದು ಇಲ್ಲಿನ **ಪೂರ್ವಪಕ್ಷ.**

ವಿಧಿವಚನವಿರುವುದರಿಂದ ಅದೃಷ್ಟಾರ್ಥವಾಗಿ ಪಾಕವನ್ನು ಮಾಡಬೇಕು. ಪಾಕವೆಂದರೆ ಬಿಸಿ ಮಾಡುವುದು ಎಂದು ಅರ್ಥವನ್ನು ಮಾಡಿದರೆ ದೃಷ್ಟಾರ್ಥವೂ ಆಗುತ್ತದೆ. ಇದು ಇಲ್ಲಿನ **ಸಿದ್ಧಾಂತ.**

***ಕೃಷ್ಣಲಗಳಿಗೆ ಉಪಸ್ತರಣ — ಅಭಿಘಾರಣವಿದೆಯೇ ?** **[ಜ್ಯೈ.ಸೂ. 10.2.2]**

**'ಸಕೃದುಪಸ್ತೃಣಾತಿ' 'ದ್ವಿರಾದಧಾತಿ' 'ಸಕೃದಭಿಘಾರಯತಿ'** ಎಂದು ಪ್ರಕೃತಿಯಲ್ಲಿ ವಿಹಿತವಾಗಿರುವ ಉಪಸ್ತರಣಾದಿಗಳು ಈ ವಿಕೃತಿಯಾಗದಲ್ಲಿ ಕೃಷ್ಣಲಗಳಿಗೂ ಪ್ರಾಪ್ತವಾಗುತ್ತವೆ. ಇದು **ಪೂರ್ವಪಕ್ಷ.**

ಇಲ್ಲಿಯ **ಸಿದ್ಧಾಂತ** ಹೀಗಿದೆ : ಪ್ರಕೃತಿಯಾಗದಲ್ಲಿ ಪುರೋಡಾಶದ ಸೂಕ್ಷ್ಮವಾದ ಅಂಶಗಳು ಸ್ರುಕ್ಕಿನಲ್ಲಿ ಅಂಟಿಕೊಳ್ಳದಿರುವಂತೆ ಮಾಡಲು ಉಪಸ್ತರಣ– ಅಭಿಘಾರಣಗಳಿವೆ. ಕೃಷ್ಣಲಗಳು ಅಂಟಿಕೊಳ್ಳದಿರುವುದರಿಂದ ಅವುಗಳನ್ನು ಮಾಡಬೇಕಾಗಿಲ್ಲ.

*** ಕೃಷ್ಣಲಗಳ ಭಕ್ಷಣವಿದೆಯೇ ?** **[ಜ್ಯೈ.ಸೂ. 10.2.3]**

ಪ್ರಕೃತಿಯಾಗದಲ್ಲಿ ಪುರೋಡಾಶದ ಭಕ್ಷಣವಿದೆ. ಹಾಗೆಯೇ ಈ ವಿಕೃತಿಯಾಗದಲ್ಲಿ ಅತಿದೇಶದಿಂದ ಕೃಷ್ಣಲಗಳ ಭಕ್ಷಣವಿದೆಯೇ ? ಇದು ಇಲ್ಲಿನ **ಸಂಶಯ.**

ಪುರೋಡಾಶಭಕ್ಷಣವು ತೃಪ್ತಿಗೆ ಕಾರಣವಾಗಿದೆ. ಹೀಗೆ ಕೃಷ್ಣಲಗಳ ಭಕ್ಷಣದಿಂದ ಪ್ರೀತಿಯೆಂಬ ದೃಷ್ಟಫಲವಿಲ್ಲದಿರುವುದರಿಂದ ಅವುಗಳ ಭಕ್ಷಣವಿಲ್ಲ. ಇದು ಇಲ್ಲಿನ **ಪೂರ್ವಪಕ್ಷ.**

**'ಚಶ್ಚುಷಾಕಾರಂ ಭಕ್ಷಯಂತಿ'** ಮೊದಲಾದ ವಿಶೇಷವಿಧಿಗಳಿರುವುದರಿಂದ

ಪ್ರದಾನದಂತೆ ಭಕ್ಷಣವನ್ನೂ ಮಾಡಬೇಕು. ಇದು ಇಲ್ಲಿನ **ಸಿದ್ಧಾಂತ.**

***ಕೃಷ್ಣಲವನ್ನು ನೀಡಬೇಕೆಂಬ ವಾಕ್ಯದಲ್ಲಿ 'ಏಕಧಾ' ಎಂಬುದರ ಅರ್ಥ ಏನು? [ಜೈ.ಸೂ. 10.2.4]**

ಕೃಷ್ಣಲಭಕ್ಷಣಪ್ರಕರಣದಲ್ಲಿ **'ಏಕಧಾ ಬ್ರಹ್ಮಣ ಉಪಹರತಿ'** ಎಂಬ ವಾಕ್ಯವಿದೆ. **'ಏಕಧಾ'** ಎಂಬ ಶಬ್ದಕ್ಕೆ **'ಒಂದು ಬಾರಿ' 'ಒಟ್ಟಿಗೆ'** ಎಂದು ಅರ್ಥವಿದೆ. **'ಬ್ರಹ್ಮಣೇ ಉಪಹರತಿ'** ಎಂಬ ವಚನದಂತೆ ಬ್ರಹ್ಮನಿಗೆ ಕೃಷ್ಣಲಗಳನ್ನು ಕೊಡುವಾಗ ಎಲ್ಲ ಕೃಷ್ಣಲಗಳನ್ನು ಒಟ್ಟಿಗೇ ಅಥವಾ ಒಂದು ಬಾರಿ ಕೊಡಬೇಕೆಂದು ಅರ್ಥವೇ ? ಅಥವಾ ಎಲ್ಲ ಕೃಷ್ಣಲಗಳನ್ನೂ ಒಟ್ಟಿಗೇ ನೀಡಬೇಕೆಂಬ ಅರ್ಥವೇ ಎಂಬುದು ಇಲ್ಲಿನ **ಸಂಶಯ.**

ಎರಡರ್ಥಗಳಲ್ಲಿ ಯಾವುದಾದರೂ ಒಂದೇ ಅರ್ಥವನ್ನು ತಿಳಿಯಲು ನಿಯಾಮಕವು ಇಲ್ಲದಿರುವುದರಿಂದ ಯಾವುದಾದರೂ ಅರ್ಥವನ್ನು ಇಟ್ಟುಕೊಳ್ಳಬಹುದು. ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿ ನಾಲ್ಕು ಬಾರಿ ನೀಡಬೇಕಾಗಿರುವುದರಿಂದ ಪ್ರಕೃತಿಯಂತೆ ನಾಲ್ಕು ಉಪಹರಣಗಳಿವೆ. ಏಕಧಾ ಎಂಬ ಶಬ್ದಕ್ಕೆ ಒಟ್ಟಿಗೇ ನೀಡಬೇಕು ಎಂಬ ಅರ್ಥವನ್ನು ಅನುಸರಿಸಿದರೆ ಕಾಲವಿಶೇಷಗಳಲ್ಲಿ ನೀಡದಿರುವುದರಿಂದ ಕಾಲವಿಶೇಷಗಳು ಮಾತ್ರ ಬಾಧಿತವಾಗುತ್ತವೆ. 'ಒಮ್ಮೆ ಕೊಡಬೇಕು' ಎಂಬ ಅರ್ಥವನ್ನು ಅನುಸರಿಸಿದರೆ ಮೂರು ಬಾರಿ ನೀಡುವಿಕೆಗೂ, ಕಾಲವಿಶೇಷಗಳಿಗೂ ಬಾಧೆ ಉಂಟಾಗುತ್ತದೆ. ಹೀಗಾಗಿ **'ಏಕಧಾ'** ಶಬ್ದಕ್ಕೆ **'ಸಹ'** ಎಂಬ ಅರ್ಥವನ್ನಿಟ್ಟುಕೊಂಡು **'ಸಹ ಉಪಹರತಿ'** ಎಂದು ಸಾಹಿತ್ಯಪಕ್ಷವನ್ನೇ ಆಶ್ರಯಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

***'ಸರ್ವಂ ಬ್ರಹ್ಮಣೇ ಪರಿಹರತಿ' ಎಂಬಲ್ಲಿ ಸರ್ವಶಬ್ದದ ಅರ್ಥವೇನು ? [ಜೈ.ಸೂ. 10.2.5–6]**

ಕೃಷ್ಣಲಭಕ್ಷಣಪ್ರಕರಣದಲ್ಲಿಯೇ **'ಸರ್ವಂ ಬ್ರಹ್ಮಣೇ ಪರಿಹರತಿ'** ಎಂಬ ವಾಕ್ಯವಿದೆ. ಕೃಷ್ಣಲಗಳೆಲ್ಲವನ್ನೂ ಬ್ರಹ್ಮನಿಗೆ ನೀಡಬೇಕು ಎಂದು ಅರ್ಥ. ಬ್ರಹ್ಮನೊಡನೆ ಉಳಿದ ಋತ್ವಿಜರಿಗೆ ಪ್ರಕೃತಿಯಾಗದಂತೆ ನಾಲ್ಕು ಸಮಯದಲ್ಲಿ ಭಕ್ಷಣವು ಪ್ರಾಪ್ತವಾಗುತ್ತದೆ. ಹೀಗಿರುವಾಗ ಎಲ್ಲವನ್ನೂ ಬ್ರಹ್ಮನಿಗೆ ನೀಡಬೇಕೆಂದರೆ ಬ್ರಹ್ಮನಿಗೆ ನಾಲ್ಕು ಬಾರಿ ನೀಡಬೇಕಾದದ್ದೆಲ್ಲವನ್ನೂ ಒಟ್ಟಿಗೇ ನೀಡಬೇಕೇ ? ಅಥವಾ ಉಳಿದವರಿಗೆ ನೀಡಬೇಕಾದ ಭಾಗವೆಲ್ಲವನ್ನೂ ಸೇರಿಸಿ ಬ್ರಹ್ಮನಿಗೆ ನೀಡಬೇಕೇ ? ಇದು ಇಲ್ಲಿನ **ಸಂಶಯ.**

ಇಲ್ಲಿ ಬ್ರಹ್ಮನಿಗೆ ಅವನಿಗೆ ಭಕ್ಷಣಾರ್ಥವಾಗಿ ಕೊಡುವುದೆಲ್ಲವನ್ನೂ ಒಟ್ಟಿಗೇ ಕೊಡಬೇಕು. ಬೇರೆಯವರ ಭಾಗಕ್ಕೆ ಭಂಗವುಂಟಾಗಬಾರದು. ಇದು ಇಲ್ಲಿನ **ಪೂರ್ವಪಕ್ಷ.**

ಬ್ರಹ್ಮನಿಗೆ ಎಲ್ಲವನ್ನೂ ನೀಡಬೇಕೆಂಬುದು ಅತಿದೇಶದಿಂದಲೇ ಪ್ರಾಪ್ತವಾಗುತ್ತದೆ. ಆದುದರಿಂದ ಬೇರೆಯವರಿಗೆ ಕೊಡಬೇಕಾದುದನ್ನೂ ಬ್ರಹ್ಮನಿಗೇ ನೀಡಬೇಕು.

ಹೀಗಾಗಿ **'ಸರ್ವ'** ಶಬ್ದವು ಉಳಿದವರಿಗೆ ಸಂಬಂಧಿಸಿದ ನಾಲ್ಕು ಭಾಗಗಳನ್ನು ಒಳಗೊಂಡಿರುವುದೆಂಬ ಅರ್ಥವನ್ನು ಬೋಧಿಸುವುದು. ಇದು ಇಲ್ಲಿನ **ಸಿದ್ಧಾಂತ.**

***ಬ್ರಹ್ಮನು ಮಾಡಬೇಕಾದ ಭಕ್ಷಣಕಾಲ ಯಾವುದು ?**

**[ಜೈ.ಸೂ. 10.2.7]**

ಬ್ರಹ್ಮನು ತನಗೆ ಕೊಟ್ಟ ಕೃಷ್ಣಲಗಳನ್ನು ಒಟ್ಟಿಗೇ ಒಂದೇ ಸಾರಿ ಭಕ್ಷಿಸಬೇಕೇ ? ಅಥವಾ ಆಯಾ ಕಾಲಗಳಲ್ಲಿ ಭಕ್ಷಿಸಬೇಕೇ ? ಇದು ಇಲ್ಲಿನ **ಸಂಶಯ.**

ವಿಳಂಬಕ್ಕೆ ಕಾರಣವಿಲ್ಲವಾದುದರಿಂದ ಒಟ್ಟಿಗೇ ಭಕ್ಷಿಸಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಪ್ರಕೃತಿಯಾಗದಲ್ಲಿ ಭಕ್ಷಣವು ಬೇರೆ ಬೇರೆ ಕಾಲದಲ್ಲಿ ವಿಹಿತವಾಗಿದೆ. ಅತಿದೇಶದಂತೆ ಈ ವಿಕೃತಿಯಾಗದಲ್ಲಿಯೂ ಸಹ ಪ್ರಾಪ್ತವಾದ ಕಾಲವನ್ನು ಬಾಧಿಸದೇ ಇರುವುದಕ್ಕಾಗಿ ಒಟ್ಟಿಗೇ ತೆಗೆದುಕೊಂಡು ಆಯಾ ಭಕ್ಷಣಕಾಲಗಳಲ್ಲಿ ಭಕ್ಷಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

**2. ಸೌರ್ಯೇಷ್ಟಿಯಲ್ಲಿ ಫಲ ಮುಂತಾದವುಗಳ ಅತಿದೇಶವಿದೆಯೇ ?**

**[ಜೈ.ಸೂ. 8.1.16]**

**ಫಲಂ ಚ ನಿಯಮಃ ಕರ್ತಾ ಸಂಘಃ ಸೌರ್ಯೇ ನ ವಾಽಗ್ರಿಮಃ ||**

**[ಜೈಮಿನೀಯ ನ್ಯಾಯಮಾಲಾ 8.1.16]**

ಪ್ರಕೃತಿಯಾಗದಲ್ಲಿನ ಸ್ವರ್ಗಾದಿಫಲ, ಯಾವಜ್ಜೀವಾದಿನಿಯಮ, ಸ್ವರ್ಗಕಾಮನಾದ ಯಜಮಾನ, ಆಗ್ನೇಯಾದಿಯಾಗಗಳ ಸಂಘ – ಈ ನಾಲ್ಕಕ್ಕೂ ಸೌರ್ಯಾದಿ ವಿಕೃತೀಷ್ಟಿಯಲ್ಲಿ ಅತಿದೇಶವಿದೆಯೇ ? ಇದು ಇಲ್ಲಿನ **ಸಂಶಯ.**

ಈ ನಾಲ್ಕನ್ನೂ ಪ್ರಯಾಜಾದಿಗಳಂತೆ ಅತಿದೇಶ ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಪ್ರಯಾಜಾದಿಗಳಿಗೆ ವಿನಿಯೋಗಾಕಾಂಕ್ಷೆಯಿದೆ. **'ಸೌರ್ಯಂ ಚರುಂ ನಿರ್ವಪೇತ್'** ಎಂಬ ಪ್ರತ್ಯಕ್ಷವಿಧಿಯೇ ಇರುವುದರಿಂದ ಅದಕ್ಕೆ ಅತಿದೇಶವಿಲ್ಲ. ಪ್ರಧಾನಕರ್ಮಕ್ಕೆ ಅತಿದೇಶವಿಲ್ಲದಿರುವುದರಿಂದ ಅದಕ್ಕೆ ಸಂಬಂಧಿಸಿದ ಫಲಾದಿಗಳಿಗೂ ವಿನಿಯೋಗಾಕಾಂಕ್ಷೆಯಿಲ್ಲದಿರುವುದರಿಂದ ಅವುಗಳಿಗೆ ಅತಿದೇಶವಿಲ್ಲ. ಇದು ಇಲ್ಲಿನ **ಸಿದ್ಧಾಂತ.**

***ಗೋದೋಹನಕ್ಕೆ ಅತಿದೇಶವಿದೆಯೇ ?** **[ಜೈ.ಸೂ. 8.1.17]**

**'ಚಮಸೇನ ಅಪಃ ಪ್ರಣಯೇತ್' 'ಗೋದೋಹನೇನ ಪಶುಕಾಮಸ್ಯ'** **[ಆಪ.ಶ್ರೌ.ಸೂ. 1.16.2]** ಎಂಬ ವಚನದಂತೆ ಗೋದೋಹನಕ್ಕೂ ವಿಕೃತಿಯಾಗದಲ್ಲಿ ಅತಿದೇಶವಿದೆಯೇ ? ಇದು ಇಲ್ಲಿನ **ಸಂಶಯ.**

ಪ್ರಣಯನಸಂಬಂಧವಿರುವುದರಿಂದ ಅತಿದೇಶವುಂಟು. ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ **ಸಿದ್ಧಾಂತವು** ಹೀಗಿದೆ; ಪ್ರಣಯನಕ್ಕೆ ಸಂಬಂಧಿಸಿದಂತೆ ಚಮಸಕ್ಕೆ ಅತಿದೇಶವಿದೆ. ಆದರೆ ಗೋದೋಹನವು ಕ್ರತ್ವಂಗವಲ್ಲ. ಪಶುರೂಪಪುರುಷಾರ್ಥ. ಫಲಕ್ಕೆ ಅತಿದೇಶವಿಲ್ಲವಾದುದರಿಂದ ಗೋದೋಹನಕ್ಕೆ ಅತಿದೇಶವಿಲ್ಲ.

**3) ವಿಕೃತಿಯಾಗದಲ್ಲಿ ಹವಿಸ್ಸ್ಪರ್ಶನವು ಹೇಗೆ ? [ಜೈ.ಸೂ. 8.1.18]**

**'ಚತುರ್ಹೋತ್ರಾ ಪೌರ್ಣಮಾಸ್ಯಾಮಭಿಮೃಶೇತ್' ಪಂಚಹೋತ್ರಾsಮಾವಾಸ್ಯಾಯಾಮ್'' [ಆಪ.ಶ್ರೌ. ಸೂ. 4.8.8]** ಎಂಬ ವಚನವಿದೆ.

**'ಪೃಥಿವೀ ಹೋತಾ'** ಎಂದು ಆರಂಭಗೊಳ್ಳುವುದು ಚತುರ್ಹೋತೃಮಂತ್ರ. **'ಅಗ್ನಿರ್ ಹೋತಾ'** ಎಂದು ಆರಂಭಗೊಳ್ಳುವ ಮಂತ್ರ ಪಂಚಹೋತೃಮಂತ್ರ. ಈ ಮಂತ್ರಗಳಿಂದ ವ್ಯವಸ್ಥಿತವಾಗಿ ಪೌರ್ಣಮಾಸೀ ಮತ್ತು ಅಮಾವಾಸ್ಯೆಗಳಲ್ಲಿ ಹವಿಃಸ್ಪರ್ಶನವು ವಿಹಿತವಾಗಿದೆ. ಪ್ರಕೃತಿಯಂತೆ ವಿಕೃತಿಯಾಗವೂ ಆಗಬೇಕಾಗಿರುವುದರಿಂದ ಸೌರ್ಯಾದಿ ವಿಕೃತೀಷ್ಟಿಗಳಲ್ಲಿಯೂ ಹೀಗೆಯೇ ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಪ್ರಕೃತಿಯಲ್ಲಿ ವ್ಯವಸ್ಥೆಯು ಆರ್ಥಿಕವಾದುದು. ಶಾಬ್ದವಲ್ಲ. ಶಾಬ್ದವಾದುದೇ ಅಂಗವಾಗುತ್ತದೆ. ಅದಕ್ಕೇ ಅತಿದೇಶ. ವ್ಯವಸ್ಥೆಗೆ ಅತಿದೇಶವಿಲ್ಲವಾದುದರಿಂದ ಸೌರ್ಯಾದಿ ಇಷ್ಟಿಯಲ್ಲಿ ಇಚ್ಛೆಯಂತೆ ಹವಿಸ್ಸ್ಪರ್ಶನವನ್ನು ಮಾಡಬಹುದು. ಇದು ಇಲ್ಲಿನ **ಸಿದ್ಧಾಂತ.**

**4) ಸೌರ್ಯವಿಕೃತಿಗೆ ಪ್ರಕೃತಿಯು ಯಾವುದು ? [ಜೈ.ಸೂ. 8.1.19]**

ದರ್ಶ–ಪೂರ್ಣಮಾಸಗಳಲ್ಲಿ ಆಗ್ನೇಯಾದಿ ಆರು ಯಾಗಗಳಿವೆ. ಸೌರ್ಯವಿಕೃತಿಗೆ ಈ ಆರು ಯಾಗಗಳಲ್ಲಿ ಯಾವ ಯಾಗವು ಪ್ರಕೃತಿಯಾಗುತ್ತದೆ ? ಇದು ಇಲ್ಲಿನ **ಸಂಶಯ.**

ವಿಶೇಷನಿಯಮವಿಲ್ಲದಿರುವುದರಿಂದ ಆರರಲ್ಲಿ ಯಾವುದಾದರೂ ಪ್ರಕೃತಿಯಾಗಬಹುದು. ಇದು ಇಲ್ಲಿನ **ಪೂರ್ವಪಕ್ಷ.**

ಆಗ್ನೇಯಯಾಗವೇ ಸೌರ್ಯಯಾಗದ ಪ್ರಕೃತಿ. ಆಗ್ನೇಯಯಾಗಕ್ಕೆ ಅಗ್ನಿಯು ದೇವತೆಯಾದುದರಿಂದ ಒಂದೇ ದೇವತೆಯಿರುವ ಆ ಯಾಗವೇ ಪ್ರಕೃತಿಯೆನಿಸುತ್ತದೆ. ಐಂದ್ರಪಯೋಯಾಗಕ್ಕೆ ಒಂದೇ ದೇವತೆ ಇದ್ದರೂ ಸೌರ್ಯವು ಓಷಧಿದ್ರವ್ಯಕವಾದುದರಿಂದ ಐಂದ್ರಪಯೋಯಾಗದ ವಿಕೃತಿಯಾಗುವುದಿಲ್ಲ. ಇದು ಇಲ್ಲಿನ **ಸಿದ್ಧಾಂತ.**

**5) ವಿಕೃತಿ ಯಾಗದಲ್ಲಿ ಪಾರ್ವಣಹೋಮಗಳಿವೆಯೇ ? [ಜೈ.ಸೂ. 9.2.26]**

ದರ್ಶ–ಪೂರ್ಣಮಾಸಗಳಿಗೆ ಸಂಬಂಧಿಸಿದಂತೆ **'ಸ್ರುವೇಣ ಪಾರ್ವಣೌ**

**ಜುಹೋತಿ'** ಎಂಬ ವಚನವಿದೆ. **[ಬೋ.ಶ್ರೌ.ಸೂ. 1.17]** ಪ್ರಯಾಜಾದಿಗಳಂತಿರುವ ಈ ಹೋಮಗಳು ವಿಕೃತಿಯಾದ ಸೌರ್ಯೇಷ್ಟಿಯಲ್ಲಿಯೂ ಅತಿದೇಶಿಸಲ್ಪಡುತ್ತವೆಯೇ ? ಇದು ಇಲ್ಲಿನ **ಸಂಶಯ.**

ಪ್ರಯಾಜಾದಿಗಳಂತೆಯೇ ಈ ಹೋಮಗಳನ್ನು ವಿಕೃತಿಯಾದ ಸೌರ್ಯೇಷ್ಟಿ ಯಲ್ಲಿಯೂ ಅತಿದೇಶಿಸಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ **ಸಿದ್ಧಾಂತ** ಹೀಗಿದೆ; ಪಾರ್ವಣಶಬ್ದವು ಪೂರ್ಣಮಾಸ, ಅಮಾವಾಸ್ಯೆ ಯಲ್ಲಿನ ಮೂರು ಮೂರು ಯಾಗಗಳನ್ನು ಬೋಧಿಸುತ್ತದೆ. ಆ ರೀತಿ ಅರ್ಥವನ್ನಿಟ್ಟು ಕೊಂಡಾಗ ಮಾತ್ರ ಈ ಎರಡು ಮಂತ್ರಗಳು ಹೊಂದಿಕೊಳ್ಳುತ್ತವೆ. 'ಋಷಭಂ ವಾಜಿನಂ ವಯಮ್ । ಪೂರ್ಣಮಾಸಂ ಯಜಾಮಹೇ । ಈ ಒಂದು ಮಂತ್ರವೂ 'ಅಮಾವಾಸ್ಯಾ ಸುಭಗಾ ಸುಶೇವಾ । [ತೈ.ಬ್ರಾ. 3.7.5] ಎಂಬ ಮಂತ್ರವೂ ಹೊಂದುವುದು. ಸೌರ್ಯಯಾಗವು ಆಗ್ನೇಯಯಾಗದ ವಿಕೃತಿಯಾದರೂ ಮೂರು ಯಾಗಗಳನ್ನೊಳಗೊಂಡ ಕರ್ಮಸಂಘದ ವಿಕೃತಿಯಲ್ಲ. ಆ ಸಂಘಕ್ಕಾಗಿ ಮಾಡುವ ಪಾರ್ವಣಹೋಮಗಳು ಸೌರ್ಯಾದಿವಿಕೃತಿಗಳಲ್ಲಿ ಪ್ರಾಪ್ತವಾಗುವುದಿಲ್ಲ.

### 6) 'ಸೌರ್ಯಂ ಚರುಂ ನಿರ್ವಪೇತ್' ಎಂಬಲ್ಲಿನ ಚರುಶಬ್ದಾರ್ಥವೇನು ? [ಜೈ.ಸೂ. 10.1.19–20]

**'ಸೌರ್ಯಂ ಚರುಂ ನಿರ್ವಪೇತ್'** ಮೊದಲಾದ ವಾಕ್ಯಗಳಲ್ಲಿರುವ ಚರುಶಬ್ದವು ಸ್ಥಾಲೀವಾಚಿಯೇ ಅಥವಾ ಓದನವಾಚಿಯೇ ಎಂಬುದು ಇಲ್ಲಿನ **ಸಂಶಯ.**

ಸಾಮಾನ್ಯ ಜನರಲ್ಲಿಯೂ ಸಹ ಚರುಶಬ್ದಕ್ಕೆ ಪಾತ್ರವಿಶೇಷವೆಂಬ ಅರ್ಥವಿದೆ. ಆದುದರಿಂದ ಚರುಶಬ್ದವು ಪಾತ್ರವಾಚಿ. ಪಾತ್ರವು ಯಾಗಯೋಗ್ಯವಲ್ಲವೆನ್ನುವುದಾದರೆ ಪ್ರಕೃತಿಯಲ್ಲಿ ಪುರೋಡಾಶವನ್ನಿಡುವ ಕಪಾಲಗಳ ಸ್ಥಾನದಲ್ಲಿ ವಿಕೃತಿಯಲ್ಲಿ ಪಾತ್ರದ ವಿಧಿ ಇದು. ಇದು ಇಲ್ಲಿನ **ಪೂರ್ವಪಕ್ಷ.**

**'ಅದಿತ್ಯಾಃ ಪ್ರಾಯಣೀಯಶ್ಚರುಃ'** ಎಂಬ ಯಾಗವಿಧಿಯ ಅರ್ಥವಾದದಲ್ಲಿ **'ಅದಿತಿರೋದನೇನ'** ಎಂಬ ವಾಕ್ಯಶೇಷವಿದೆ. ಹೀಗಾಗಿ ಚರು ಎಂದರೆ ಓದನವೆಂಬ ಅರ್ಥವೇ ಯುಕ್ತ. ***'ಹವ್ಯಪಾಕೇ ಚರುಃ ಪುಮಾನ್'** ಎಂಬುದಾಗಿ ಕೋಶಕಾರರೂ ಹೇಳುತ್ತಾರೆ. ಆದುದರಿಂದ ಚರುಶಬ್ದಕ್ಕೆ ಗಂಜಿಯನ್ನು ಬಸಿಯದೇ ಒಳಗೇ ಪಕ್ವವಾದ ಅನ್ನ ಎಂದು ಅರ್ಥ. **'ಚರುಶಬ್ದಃ ಅನವಸ್ರಾವಿತಾಂತರೂಷ್ಮಪಕ್ವಾನ್ನವಾಚೀ'** ಎಂದು ಇಟ್ಟುಕೊಳ್ಳಬೇಕು. ಲೋಕದಲ್ಲಿ ಪಾತ್ರ ಎಂಬ ಅರ್ಥದಲ್ಲಿ ಪ್ರಯೋಗವು ಅನ್ನ ಸಂಬಂಧದಿಂದ ಬಂದಿರಬಹುದು. ಆದರೆ ಶ್ರೌತಪ್ರಯೋಗವು ಪ್ರಬಲವಾದುದು. ಇದು **ಸಿದ್ಧಾಂತ.**

---

* ಅಮರಕೋಶ. ಬ್ರಹ್ಮವರ್ಗ

## *ಚರುವನ್ನು ಯಾವುದರಲ್ಲಿ ಮಾಡಬೇಕು ? [ಜೈ.ಸೂ. 10.1.21–22]

ಈ ವಿಕೃತೀಷ್ಟಿಗಳಲ್ಲಿ ಚರುವನ್ನು ಪ್ರಕೃತಿಯಾಗದಲ್ಲಿಯಂತೆಯೇ ಕಪಾಲಗಳಲ್ಲಿ ಮಾಡಬೇಕೇ ? ಇಲ್ಲವೇ ? ಎಂಬುದು ಇಲ್ಲಿನ **ಸಂಶಯ.**

ಪ್ರಕೃತಿಯಂತೆಯೇ ವಿಕೃತಿಯ ಅನುಷ್ಠಾನವಿರುವುದರಿಂದ ಕಪಾಲಗಳಲ್ಲಿಯೇ ಮಾಡಬೇಕು. ಇದು **ಪ್ರಥಮ ಪೂರ್ವಪಕ್ಷ.**

ಪುರೋಡಾಶವನ್ನು ಕಪಾಲಗಳಲ್ಲಿ ಬೇಯಿಸಬಹುದು. ಚರುವನ್ನು ನೀರಿನ ಆವಿಯಿಂದ ಬೇಯಿಸಬೇಕಾಗಿರುವುದರಿಂದ ಕೊಪ್ಪರಿಗೆ ಮೊದಲಾದ ಯಾವುದಾದರೂ ಪಾತ್ರೆಯಲ್ಲಿ ಬೇಯಿಸುವುದು ಯೋಗ್ಯ. ಇದು **ದ್ವಿತೀಯ ಪೂರ್ವಪಕ್ಷ.**

**'ಚತುರೋ ಮುಷ್ಟೀನ್ನಿರ್ವಪತಿ'** ಎಂಬ ವಚನದಂತೆ ನಾಲ್ಕು ಮುಷ್ಟಿಯಷ್ಟೇ ನಿರ್ವಾಪವಿರುವುದರಿಂದ ಕೊಪ್ಪರಿಗೆಯಂತಹ ದೊಡ್ಡ ಪಾತ್ರೆ ಬೇಡ. ಅಳತೆಗೆ ತಕ್ಕಂತಹ ತಪ್ಪಲೆಯಲ್ಲಿಯೇ ಮಾಡಬೇಕು. ಇದು ಇಲ್ಲಿನ **ಸಿದ್ಧಾಂತ.**

ಈ ಎರಡು ಅಧಿಕರಣಗಳಲ್ಲಿ ವಿಚಾರ ಮಾಡಿದುದನ್ನು ಸಂಗ್ರಹಿಸಿ ಹೀಗೆ ಹೇಳಿರುತ್ತಾರೆ.

**ಪೇಷಣಂ ಯವನಂ ವಾಪಸ್ತಾಪಶ್ಚೋಪಹಿತಿಃ ಪ್ರಥಾ ।**
**ಮಾರ್ಜನಾಧ್ಯೂಹನಜ್ವಾಲಾಸ್ತಥಾ ವ್ಯುದ್ಧೃತ್ಯ ಸಾದನಮ್ ॥**

ಚರುಯಾಗದಲ್ಲಿ ಈ ಮೇಲಿನವುಗಳನ್ನು ಮಾಡಬೇಕಾಗಿಲ್ಲ. ಅವು ಯಾವುವೆಂದರೆ –

1) **ಪೇಷಣ** = ಅರೆಯುವುದು.
2) **ಯವನ** = ನೀರನ್ನು ಸೇರಿಸುವುದು.
3) **ವಾಪ** = ಹಿಟ್ಟನ್ನು ಪಾತ್ರೆಯಲ್ಲಿ ಹಾಕುವುದು.
4) **ತಾಪ** = ಕಪಾಲಗಳನ್ನು ಬಿಸಿ ಮಾಡುವುದು.
5) **ಉಪಹಿತಿ** = ಕೆಂಡದ ಮೇಲೆ ಕಪಾಲಗಳನ್ನಿಡುವುದು.
6) **ಪ್ರಥಾ** = ಕಪಾಲಗಳಲ್ಲಿ ಹಿಟ್ಟನ್ನು ಹರಡುವುದು.
7) **ಮಾರ್ಜನ** = ನೀರನ್ನು ಪ್ರೋಕ್ಷಿಸಿ ಮೃದು ಮಾಡುವುದು.
8) **ಅಧ್ಯೂಹನ** = ಭಸ್ಮ ಮತ್ತು ಕೆಂಡಗಳಿಂದ ಪುರೋಡಾಶವನ್ನು ಮುಚ್ಚುವುದು.
9) **ಜ್ವಾಲಾ** = ದರ್ಭೆಗಳಿಂದ ಮೇಲೆ ಜ್ವಲನವನ್ನು ಮಾಡುವುದು.
10) **ವ್ಯುದ್ಧೃತ್ಯ ಸಾದನಮ್** = ಕಪಾಲಗಳಿಂದ ಪುರೋಡಾಶವನ್ನು ತೆಗೆದುಕೊಂಡು ವೇದಿಯ ಒಳಗಡೆ ಆಸಾದನೆ ಮಾಡುವುದು.

ಹಿಂದಿನ ಅಧಿಕರಣಗಳಿಂದಲೇ ಈ ವಿಷಯುವು ಸಿದ್ಧವಾಗುವುದಾದರೂ ಸೂತ್ರಕಾರರು ಪುನಃ ಪ್ರತ್ಯೇಕ ಸೂತ್ರಗಳಿಂದ ಏಕೆ ವಿಚಾರ ಮಾಡಿರುತ್ತಾರೆ ಎಂದರೆ ಸಾಮಾನ್ಯ ಬುದ್ಧಿವಂತರಿಗಾಗಿ ಸೂತ್ರಕಾರರು ಹೇಳಿರುತ್ತಾರೆ.

## 7) ಸೌರ್ಯಚರುವಿನ ಯಾಗದಲ್ಲಿ ದೇವತಾನಿರ್ದೇಶ ಹೇಗೆ ?

ಸೌರ್ಯಚರು ಮುಂತಾದ ವಿಕೃತಿಯಾಗದಲ್ಲಿ ನಿರ್ವಾಪಾದಿಗಳಲ್ಲಿ ದೇವತಾ ನಿರ್ದೇಶ ಮಾಡುವಾಗ ಸೂರ್ಯ ಮುಂತಾದ ಶಬ್ದವನ್ನೇ ಉಪಯೋಗಿಸಬೇಕೇ ? ಅಥವಾ ಸೂರ್ಯ ಎಂಬ ಅರ್ಥವನ್ನು ಕೊಡುವ ಆದಿತ್ಯ ಮುಂತಾದ ಶಬ್ದಗಳನ್ನು ಉಪಯೋಗಿಸಬಹುದೇ ? ಇದು ಇಲ್ಲಿನ **ಸಂಶಯ.**

ಪರ್ಯಾಯಶಬ್ದಗಳನ್ನು ಹೇಳಬಹುದು. ಯಾಜ್ಯಾ-ಪುರೋನುವಾಕ್ಯಗಳಲ್ಲಿ ವಿಧಿಗತವಾದ ಶಬ್ದವನ್ನೇ ಹೇಳಬೇಕೆಂಬುದಿದ್ದರೂ ಬೇರೆಯ ಕಡೆಗಳಲ್ಲಿ ನಿಯಮವಿಲ್ಲ. ಇದು ಇಲ್ಲಿನ **ಪೂರ್ವಪಕ್ಷ.**

ಪ್ರಕೃತಿಯಾಗದಲ್ಲಿ ವಿಧಿಗತವಾದ ಶಬ್ದಗಳೇ ಇವೆ. ಆದುದರಿಂದ ವಿಕೃತಿಯಲ್ಲಿಯೂ ವಿಧಿಗತವಾದ ಶಬ್ದಗಳನ್ನೇ ಉಪಯೋಗಿಸಬೇಕು. ಹೀಗಾಗಿ ಸೌರ್ಯಚರು ಯಾಗದಲ್ಲಿ **'ಸೂರ್ಯಾಯ ಜುಷ್ಟಂ ನಿರ್ವಪಾಮಿ'** ಎಂದೇ ನಿರ್ವಾಪವನ್ನು ಮಾಡಬೇಕು*.

## 8) ವಿಕೃತಿಯಯಾಗದಲ್ಲಿ ಆರಂಭಣೇಷ್ಟಿಯು ಇದೆಯೇ ?

ದರ್ಶ-ಪೂರ್ಣಮಾಸೇಷ್ಟಿಗಳಲ್ಲಿ ಮೊದಲನೆಯ ಪ್ರಯೋಗದಲ್ಲಿ ಮಾಡುವ ಆರಂಭಣೇಷ್ಟಿಯನ್ನು ಸೌರ್ಯಾದಿವಿಕೃತಿಗಳಲ್ಲಿ ಮಾಡಬೇಕೇ ? ಇಲ್ಲವೇ ? ಇದು ಇಲ್ಲಿನ **ಸಂಶಯ.**

ದರ್ಶ-ಪೂರ್ಣಮಾಸಗಳ ಪ್ರಥಮಪ್ರಯೋಗದಲ್ಲಿ ಮಾತ್ರ ಆರಂಭಣೇ-ಯೇಷ್ಟಿಯ ಅನುಷ್ಠಾನವಿರುತ್ತದೆ. **'ಯಾವಜ್ಜೀವಂ ದರ್ಶಪೂರ್ಣಮಾಸಾಭ್ಯಾಂ ಯಜೇತ'** ಎಂಬ ವಚನದಂತೆ ಜೀವನಪರ್ಯಂತ ಮಾಡುವ ಇತರ ಪ್ರಯೋಗಗಳಿಲ್ಲ. ಮೊದಲನೆಯ ಪ್ರಯೋಗದ ಪ್ರಸಂಗದಿಂದ ಆದ ಸಂಸ್ಕಾರವು ಅನುಸ್ಯೂತವಾಗಿ ಇರುತ್ತದೆ. ಸೌರ್ಯಾದಿ ವಿಕೃತೀಷ್ಟಿಗಳೂ ಯಾವಜ್ಜೀವಪ್ರಯೋಗಗಳ ಮಧ್ಯದಲ್ಲಿಯೇ ಬರುವುದರಿಂದ ಆ ಸಂಸ್ಕಾರವು ಅವುಗಳಿಗೂ ಉಪಕಾರಕವಾಗುತ್ತದೆ. ಹೀಗಾಗಿ ಪುನಃ ಆರಂಭಣೇಯೇಷ್ಟಿಯನ್ನು ವಿಕೃತಿಯಾಗದಲ್ಲಿ ಮಾಡಬೇಕಾಗಿಲ್ಲ. ಇದು ಇಲ್ಲಿನ **ಪೂರ್ವಪಕ್ಷ.**

---

* ವೇದದಲ್ಲಿ ಕೆಲವು ಕಡೆಗಳಲ್ಲಿ ಇದಕ್ಕೆ ಅಪವಾದವಿದೆ. **'ಸೌರ್ಯಂ ಚರುಂ ನಿರ್ವಪೇತ್'** ಎಂಬ ಈ ವಿಧಿಯ ವಾಕ್ಯಶೇಷದಲ್ಲಿ **'ಅಮುಮೇವಾದಿತ್ಯಮ್'** ಎಂದು ಆದಿತ್ಯ ಶಬ್ದ ಪ್ರಯೋಗವಿದೆ. ಆದರೆ ಇಲ್ಲಿ ಸಾಮಾನ್ಯನಿಯಮವನ್ನು ಹೇಳಲಾಗಿದೆ.

**'ದರ್ಶಪೂರ್ಣಮಾಸಾವಾರಭಮಾಣಃ'** ಎಂದು ಆರಂಭಣೀಯೇಷ್ಟಿಯಲ್ಲಿ ಹೇಳಿರುವುದರಿಂದ ಅದು ಕ್ರತ್ವರ್ಥವಾಯಿತು. ಸೌರ್ಯಾದಿಗಳು ಬೇರೆಯ ಕ್ರತುಗಳು. ಯಾವಜ್ಜೀವಕಾಲವು ಕರ್ತೃಧರ್ಮ. ಕರ್ತೃವಿಗೆ ಅತಿದೇಶವಿಲ್ಲ. ಆದುದರಿಂದ ಸೌರ್ಯಾದಿ ವಿಕೃತಿಗಳಲ್ಲಿಯೂ ಸಹ ಆರಂಭಣೀಯೇಷ್ಟಿಯನ್ನು ಅನುಷ್ಠಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

## 9) ಸೋಮೇಂದ್ರಚರುವು ಸಾಮಾನ್ಯಪ್ರಾಯಶ್ಚಿತ್ತವೇ ?

**[ಜೈ.ಸೂ. 3.4.31–32]**

ಸೋಮೇಂದ್ರಚರುವನ್ನು ನಿರ್ವಾಪ ಮಾಡಬೇಕೆಂಬ ಪ್ರಾಯಶ್ಚಿತ್ತವಿಧಿಯು ಸಾಮಾನ್ಯವಾದುದೇ ? ಅಥವಾ ವಮನವಿಷಯಕ್ಕೆ ಮಾತ್ರವೇ ? ಇದು ಇಲ್ಲಿನ **ಸಂಶಯ.**

**'ಸೋಮೇಂದ್ರಂ ಚರುಂ ನಿರ್ವಪೇಚ್ಛ್ಯಾಮಾಕಂ ಸೋಮವಾಮಿನಃ'** ಎಂಬ ಶ್ರುತಿವಚನದಂತೆ ಸೋಮವಮನ ಮಾಡಿದವನಿಗೆ ಸೋಮೇಂದ್ರಚರುನಿರ್ವಾಪವನ್ನು ಪ್ರಾಯಶ್ಚಿತ್ತರೂಪವಾಗಿ ಹೇಳಲಾಗಿದೆ. 'ಸೋಮವಮನ ಮಾಡಿದವನಿಗೆ ಇಂದ್ರಿಯ, ಸೋಮಪೀಥಹಾನಿಯಾಗುತ್ತದೆ' ಎಂದು ದೋಷವನ್ನು ಹೇಳಿ ವಿಧಾನ ಮಾಡಿರುವ ಈ ಇಷ್ಟಿಯು ಲೌಕಿಕ ಮತ್ತು ವೈದಿಕಕರ್ಮಗಳಲ್ಲಿನ ವಮನಸಾಮಾನ್ಯಕ್ಕೇ ಪ್ರಾಯಶ್ಚಿತ್ತ. ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ **ಸಿದ್ಧಾಂತವು** ಹೀಗಿದೆ : ಲೋಕದಲ್ಲಿ ವಮನದಿಂದ ಧಾತುಸಾಮ್ಯವನ್ನು ಮಾಡುವುದಕ್ಕಾಗಿಯೇ ಸೋಮರಸವನ್ನು ಕೊಡುತ್ತಾರೆ. ಸೋಮರಸವು ದೋಷಹೇತು ವಲ್ಲ. ವೇದದಲ್ಲಿ ಜೀರ್ಣ ಮಾಡಿಕೊಳ್ಳಲು ಸೋಮರಸಪಾನವನ್ನು ಮಾಡಬೇಕೆಂದಿದೆ. ಹೀಗಾಗಿ ವಮನದ ಪ್ರಾಯಶ್ಚಿತ್ತವಾದ ಈ ಸೋಮೇಂದ್ರಚರುನಿರ್ವಾಪವು ಯಾಗದಲ್ಲಿ ಸೋಮರಸಪಾನ ಮಾಡಿ ವಮನವಾದಾಗ ಮಾತ್ರ ಮಾಡಬೇಕಾದುದು. ಅದು ಸಾಮಾನ್ಯಪ್ರಾಯಶ್ಚಿತ್ತವಲ್ಲ. ಇದು ಇಲ್ಲಿನ **ಸಿದ್ಧಾಂತ.**

## *ಋತ್ವಿಜರ ವಮನಕ್ಕೂ ಪ್ರಾಯಶ್ಚಿತ್ತವಿದೆಯೇ ? [ಜೈ.ಸೂ. 3.4.33]

ಋತ್ವಿಜರು ಸೋಮವಮನ ಮಾಡಿದರೆ ಪ್ರಾಯಶ್ಚಿತ್ತವಿದೆಯೇ ? ಇದು ಇಲ್ಲಿನ **ಸಂಶಯ.**

ಸಾಮಾನ್ಯವಾಗಿ ಹೇಳಿರುವುದರಿಂದ ಋತ್ವಿಜರ ವಮನಕ್ಕೂ ಪ್ರಾಯಶ್ಚಿತ್ತವುಂಟು. ಇದು ಇಲ್ಲಿನ **ಪೂರ್ವಪಕ್ಷ.**

ಯಾಗಕರ್ತೃವು ಯಜಮಾನನೇ ಆಗಿರುವುದರಿಂದ ಯಜಮಾನನು ಸೋಮವಮನ ಮಾಡಿದರೆ ಮಾತ್ರ ಈ ಪ್ರಾಯಶ್ಚಿತ್ತೇಷ್ಟಿಯನ್ನು ಅನುಷ್ಠಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

**10) ಸಂಸೃಷ್ಟಹವಿಸ್ಸಿನಲ್ಲಿಯಾವುದರ ಧರ್ಮವಿರಬೇಕು ?**

**[ಜೈ.ಸೂ. 8.1.22]**

ಚಿತ್ರಾಯಾಗದಲ್ಲಿ **'ದಧಿ ಮಧು ಘೃತಮಾಪೋ ಧಾನಾಸ್ತತ್ಸಂಸೃಷ್ಟಂ ಪ್ರಾಜಾಪತ್ಯಮ್'** ಎಂದು ಅನೇಕ ಹವಿಸ್ಸುಗಳು ಸಂಸೃಷ್ಟವಾಗಿವೆ. ಈ ಯಾಗದಲ್ಲಿ ಪಯಸ್ಸು ಅಥವಾ ಆಜ್ಯ ಈ ಎರಡರಲ್ಲಿ ಯಾವುದರ ಧರ್ಮವಿರಬೇಕು ? ಇದು ಇಲ್ಲಿನ **ಸಂಶಯ.**

ಈ ಸಂಸೃಷ್ಟಹವಿಸ್ಸಿನಲ್ಲಿ ಐಂದ್ರಪಯೋಯಾಗದ ಧರ್ಮಗಳೇ ಆಗಬೇಕು. ಮಧು ಹಾಗೂ ಉದಕದಲ್ಲಿ ದ್ರವತ್ವಸಾಮ್ಯವಿರುವುದರಿಂದ ಪಯೋಯಾಗದ ಧರ್ಮವೇ ಯೋಗ್ಯ. ಇದು ಇಲ್ಲಿನ **ಪೂರ್ವಪಕ್ಷ.**

ಸಂಸೃಷ್ಟಹವಿಸ್ಸಿನಲ್ಲಿ ಆಜ್ಯವೂ ಸೇರಿದೆ. ಆಜ್ಯದಲ್ಲಿಯೂ ಅಗ್ನಿಯ ಸಂಪರ್ಕದಿಂದ ದ್ರವತ್ವವು ಉಂಟಾಗುವುದು. ಪಯೋಧರ್ಮವಾದ ದೋಹನಾದಿಗಳನ್ನು ಈ ಮಧು, ಉದಕ, ಆಜ್ಯಗಳಲ್ಲಿ ಮಾಡಲು ಸಾಧ್ಯವಿಲ್ಲ. ಆದುದರಿಂದ ಈ ಸಂಸೃಷ್ಟಹವಿಸ್ಸುಗಳಲ್ಲಿ ಉಪಾಂಶುಯಾಜಯಾಗದ ಆಜ್ಯಧರ್ಮಗಳನ್ನೇ ಮಾಡಬೇಕು. ಇದು ಇಲ್ಲಿನ **ಸಿದ್ಧಾಂತ.**

## ಇ) ಛಂದಸ್ಸು

| | ಮಂತ್ರ | ಛಂದಸ್ಸಿನ ಹೆಸರು |
|---|---|---|
| 1) | ಹಿರಣ್ಯಗರ್ಭಃ....... ವಿಧೇಮ ॥ | ತ್ರಿಷ್ಟುಪ್ |
| 2) | ಆಪೋ ಹ....... ವಿಧೇಮ ॥ | ತ್ರಿಷ್ಟುಪ್ |
| 3) | ಪ್ರಜಾಪತೇ......... ರಯೀಣಾಮ್ ॥ | ತ್ರಿಷ್ಟುಪ್ |
| 4) | ಸ ವೇವ........... ಆಽಭವತ್ ॥ | ಜಗತೀ |
| 5) | ಉದು ತ್ಯಂ......... ಸೂರ್ಯಮ್ ॥ | ಗಾಯತ್ರೀ |
| 6) | ಚಿತ್ರಂ .......... ತಸ್ಥುಷಶ್ಚ ॥ | ತ್ರಿಷ್ಟುಪ್ |
| 7) | ಸಪ್ರತ್ನವನ್ನವೀಯಸಾ........ ಭಾನುನಾ ॥ | ಗಾಯತ್ರೀ |
| 8) | ನಿ ಕಾವ್ಯಾ........ ವಿಶ್ವಾ ॥ | ತ್ರಿಷ್ಟುಪ್ |

9) ಹಿರಣ್ಯಪಾಣಿಮ್ ......... ಪದವ್ ॥ ಗಾಯತ್ರೀ

10) ವಾಮಮದ್ಯ........ ಸ್ಯಾಮ ॥ ತ್ರಿಷ್ಟುಪ್

11) ಬಡಿತ್ಥಾ.......... ಮಹಿನಿ ॥ ಅನುಷ್ಟುಪ್

12) ಸ್ತೋಮಾಸಸ್ತ್ವಾ....... ಅರ್ಜುನಿ ॥ ಅನುಷ್ಟುಪ್

13) ಋದೂದರೇಣ......... ಅಚ್ಛ ॥ ತ್ರಿಷ್ಟುಪ್

14) ಆಪಾಂತ........... ದೇಭುಃ ॥ ತ್ರಿಷ್ಟುಪ್

15) ಪ್ರ ಸುವಾನಃ.......... ದೃಗ್ಂಹ ॥ ತ್ರಿಷ್ಟುಪ್

16) ಸಬಾಧಸ್ತೇ ............. ತುರ್ಯಾಮ್ ॥ ತ್ರಿಷ್ಟುಪ್

17) ವಷಟ್ತೇ .......... ಸದಾ ನಃ ॥ ತ್ರಿಷ್ಟುಪ್

18) ಪ್ರ ತತ್ತೇ........ ಪರಾಕೇ ॥ ತ್ರಿಷ್ಟುಪ್

19) ಕಿಮಿತ್ತೇ......... ಬಭೂಥ ॥ ತ್ರಿಷ್ಟುಪ್

20) ಅಗ್ನೇ ದಾ.......... ಸೂನುಮತಃ ॥ ಗಾಯತ್ರೀ

21) ದಾ ನೋ..... ದಿದ್ಯುತುಃ ॥ ಜಗತೀ

22) ಅಗ್ನಿರ್ದಾ......... ಪುರುತ್ರಾ ॥ ತ್ರಿಷ್ಟುಪ್

23) ಮಾ ನೋ........ ಸ್ತುವಂತಃ ॥ ತ್ರಿಷ್ಟುಪ್

24) ಆ ತೂ ಭರ....... ಪ್ರಿಯಂಧಿ ॥ ತ್ರಿಷ್ಟುಪ್

25) ಘೃತಂ ನ....... ಸ್ವಧಾವಃ ॥ ಪಂಚಪದಾ ಅಕ್ಷರಪಂಕ್ತಿ

26) ಉಭೇ..... ಭರ ॥ ಪಂಚಪದಾ ಪಂಕ್ತಿ

27) ವಾಯೋ........ ಪಾಜಸಾ ॥ ಉಷ್ಣಿಕ್

28) ಪ್ರ ಯಾಭಿಃ....... ರಾಧಃ ॥ ತ್ರಿಷ್ಟುಪ್

29) ರೇವತೀರ್ನಃ....... ಮದೇಮ ॥ ಗಾಯತ್ರೀ

20) ರೇವಾಗ್ಂ......... ಶ್ರುತಸ್ಯ ॥ ಗಾಯತ್ರೀ

* * *





## ಕೃಷ್ಣ ಯಜುರ್ವೇದ ಕನ್ನಡ ಪ್ರಕಾಶನ

**ಸಂಪುಟ – 1**

(ವೇದಗಳ ಪರಿಚಯ, ಕೃಷ್ಣ ಯಜುರ್ವೇದ ಪರಿಚಯ,
ಯಜ್ಞಗಳ ಪರಿಚಯ)

**ಸಂಪುಟ – 2**

ತೈತ್ತಿರೀಯ ಸಂಹಿತೆ
(ಪ್ರಥಮ ಕಾಂಡ 1 – 2 ಪ್ರಪಾಠಕಗಳು)

**ಸಂಪುಟ – 3**

ತೈತ್ತಿರೀಯ ಸಂಹಿತೆ
(ಪ್ರಥಮ ಕಾಂಡ 3 – 4 – 5 ಪ್ರಪಾಠಕಗಳು)

**ಸಂಪುಟ – 4**

ತೈತ್ತಿರೀಯ ಸಂಹಿತೆ
(ಪ್ರಥಮ ಕಾಂಡ 6 – 7 –8 ಪ್ರಪಾಠಕಗಳು)

**ಸಂಪುಟ – 5**

ತೈತ್ತಿರೀಯ ಸಂಹಿತೆ
(ದ್ವಿತೀಯ ಕಾಂಡ 1 – 2 ಪ್ರಪಾಠಕಗಳು)

**ಸಂಪುಟ – 6**

ತೈತ್ತಿರೀಯ ಸಂಹಿತೆ
(ದ್ವಿತೀಯ ಕಾಂಡ 3 – 4 ಪ್ರಪಾಠಕಗಳು)

*ಪ್ರತಿಗಳಿಗೆ :*

**ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ**

31, ಪಂಪಮಹಾಕವಿ ರಸ್ತೆ, ಬೆಂಗಳೂರು–560 004.
ದೂರವಾಣಿ : 26677852

ಪರಿಮಳ ಮುದ್ರಣಾಲಯ, ಶ್ರೀನಗರ, ಬೆಂಗಳೂರು–50. ✆ : 26525516

ತೈತ್ತಿರೀಯ ಸಂಹಿತಾ

ಸಂಪುಟ – ೬

